# ಮಹಿಳೆ, ಕಾನೂನು ಮತ್ತು ನ್ಯಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
ಕೆ.ಎಸ್. ಗೀತಾ

ಮಾರ್ಗದರ್ಶಕರು
ಡಾ. ಎಚ್.ಎಸ್.ಶ್ರೀಮತಿ
ಪ್ರಾಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ






ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಮೇ ೨೦೦೩

# ಮಹಿಳೆ, ಕಾನೂನು ಮತ್ತು ನ್ಯಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
**ಕೆ.ಎಸ್. ಗೀತಾ**

ಮಾರ್ಗದರ್ಶಕರು
**ಡಾ. ಎಚ್.ಎಸ್.ಶ್ರೀಮತಿ**
ಪ್ರಾಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ





ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಮೇ ೨೦೦೩

## ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀಮತಿ ಕೆ.ಎಸ್.ಗೀತಾ ಅವರು ಮಹಿಳೆ, ಕಾನೂನು ಮತ್ತು ನ್ಯಾಯ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಚ್.ಎಸ್.ಶ್ರೀಮತಿ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30.4.03.
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

ಮಹಿಳೆ, ಕಾನೂನು ಮತ್ತು ನ್ಯಾಯ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ಡಾ.ಎಚ್.ಎಸ್.ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರು ವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ

ಕೆ.ಎಸ್. ಗೀತಾ

ಸಂಶೋಧಕರು

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ಏಪ್ರಿಲ್ 30, 2003

ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಪ್ರಸ್ತಾವನೆ

## ಭಾರತದಲ್ಲಿ ಮಹಿಳೆಯರ ಸ್ಥಾನಮಾನ

ಒಂದು ದೇಶದಲ್ಲಿ ಮಹಿಳೆಗಿರುವ ಸ್ಥಾನಮಾನ ಆ ದೇಶದ ಆಧುನಿಕತೆಯ ಅಳತೆಗೋಲು ಎನ್ನಬಹುದು. ಮಹಿಳೆಯ ಸ್ಥಾನಮಾನ ಉತ್ತಮವಾಗಿರದ ಸಮಾಜದ ಸಾಂಸ್ಕೃತಿಕ ಮಟ್ಟ ಉನ್ನತವಾದುದಾಗಿರಲು ಸಾಧ್ಯವಿಲ್ಲ. ಒಂದು ಸಮಾಜದಲ್ಲಿ ಮಹಿಳೆಯ ಸ್ಥಾನಮಾನ ನಿರ್ಧಾರವಾಗುವುದು ಆ ಸಮಾಜದಲ್ಲಿ ತನ್ನನ್ನು ತಾನು ಅಭಿವ್ಯಕ್ತಿಗೊಳಿಸಿಕೊಳ್ಳಲು ಅವಳಿಗಿರುವ ಸಮಾನ ಅವಕಾಶಗಳಿಂದ- ಸಮಾನ ಶೈಕ್ಷಣಿಕ ಅವಕಾಶಗಳು, ಸಮಾನ ಉದ್ಯೋಗಾವಕಾಶಗಳು ಹಾಗೂ ಸಮಾನ ಪರಿಗಣನೆಯ ಅವಕಾಶಗಳಿಂದ.

ಚರಿತ್ರೆಯುದ್ದಕ್ಕೂ, ಜಗತ್ತಿನಾದ್ಯಂತ ಎಲ್ಲ ಸಂಸ್ಕೃತಿಗಳಲ್ಲಿಯೂ ಮಹಿಳೆಯರು ತುಳಿತಕ್ಕೆ ಹಾಗೂ ಪುರುಷರ ದಬ್ಬಾಳಿಕೆಗೆ ಒಳಗಾಗುತ್ತಲೇ ಬಂದಿದ್ದಾರೆ. ಇದನ್ನು ಯಾರೂ ಅಲ್ಲಗೆಳೆಯಲಾರರು. ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅವರು ಪುರುಷರನ್ನು ಅವಲಂಬಿಸಬೇಕಾಗಿತ್ತು. ಹೀಗಾಗಿ ಅವರಿಗೆ ಎಲ್ಲ ರಂಗಗಳಲ್ಲಿಯೂ ದೊರೆತದ್ದು ಪುರುಷರಿಗೆ ಅಧೀನವಾದ ಸ್ಥಾನಮಾನ ಮಾತ್ರ. ಆಸ್ತಿಯ ನೆಲೆಗೂ ಈ ತಾರತಮ್ಯ ವಿಸ್ತರಿಸಿತ್ತು. ವಂಶ ಮುಂದಿವರಿಯುತಿದ್ದುದು ಗಂಡು ಸಂತಾನದಿಂದ ಹಾಗೂ ಆಸ್ತಿ ಪ್ರಾಪ್ತವಾಗುತ್ತಿದ್ದುದು ಸಹ ಪುರುಷ ಪೀಳಿಗೆಯ ಮೂಲಕ. ಮಹಿಳೆಯ ಈ ಆರ್ಥಿಕ ಸ್ವಾತಂತ್ರ್ಯಹರಣ ಹಾಗೂ ಸಮಾಜದಲ್ಲಿ ರೂಢಿಗತವಾಗಿದ್ದ ಪುರುಷ ಪ್ರಧಾನ ವ್ಯವಸ್ಥೆ ಅವಳ ಶೋಷಣೆಗೆ ಮುಖ್ಯ ಕಾರಣಗಳಾಗಿದ್ದವು. ಈ ಕಾರಣಗಳಿಂದಾಗಿಯೇ ಭಾರತಕ್ಕೆ ಸ್ವಾತಂತ್ರ್ಯ ಬಂದು ಐದು ದಶಕಗಳೇ ಕಳೆದಿದ್ದರೂ ಮಹಿಳೆಯರನ್ನು ಹಿಂದುಳಿದ ವರ್ಗಗಳಿಗೆ ಸೇರಿದ ಅತಿದೊಡ್ಡ ಏಕೈಕ ಗುಂಪು ಎಂದು ಪರಿಗಣಿಸಲಾಗುತ್ತದೆ.

ಮಹಿಳೆಯರ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ವೇದ ಯುಗವನ್ನು ಸುವರ್ಣಯುಗವೆಂದು ಗುರುತಿಸಲಾಗುತ್ತದೆ. ಆ ಅವಧಿಯಲ್ಲಿ ಮಹಿಳೆಯರಿಗೆ ಸಾಕಷ್ಟು ಸ್ವಾತಂತ್ರ್ಯವಿತ್ತಲ್ಲದೆ ಪುರುಷರೊಂದಿಗೆ ಸಮಾನತೆಯನ್ನು ಹೊಂದಿದ್ದರು; ಮಹಿಳೆಯರು ಗುರುಕುಲಗಳಲ್ಲಿ ಪುರುಷರೊಂದಿಗೆ ವೇದಾಧ್ಯಯನ ನಡೆಸುವ ಅವಕಾಶವನ್ನು ಹೊಂದಿದ್ದರು; ಗಾರ್ಗಿ ಮೈತ್ರೇಯಿಯರಂಥ ಬ್ರಹ್ಮವಾದಿನಿಯರು ವೇದಗಳ ಹಾಗೂ ಅಧ್ಯಾತ್ಮಿಕ ತಾತ್ವಿಕ ಚರ್ಚೆಗಳಲ್ಲಿ ತೊಡಗುತ್ತಿದ್ದರು; ಹೆಣ್ಣುಮಕ್ಕಳಿಗೆ ತಮ್ಮ ಆಯ್ಕೆಯ ವರನನ್ನು ವಿವಾಹವಾಗಲು ಅವಕಾಶವಿತ್ತು; ಕುಟುಂಬದ ಆಸ್ತಿಗೆ ಪತಿಪತ್ನಿಯರಿಬ್ಬರೂ ಒಡೆಯರಾಗಿರು ತ್ತದ್ದಲ್ಲದೆ, ಮಗಳು,

ವಿವಾಹಿತೆಯಾಗಿರಲಿ ಅಥವಾ ಆಗಿಲ್ಲದಿರಲಿ, ತನ್ನ ಮೃತ ತಂದೆಯ ಆಸ್ತಿಗೆ ವಾರಸುದಾರಳಾಗಿರುತ್ತಿದ್ದಳು. ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಪುರುಷನೊಂದಿಗೆ ಸಮಾನಳಾಗಿ ಪಾಲ್ಗೊಳ್ಳುತ್ತಿದ್ದಳು. ದ್ವಿಪತ್ನಿತ್ವದ ಪ್ರಕರಣಗಳು ಅತ್ಯಂತ ವಿರಳವಾಗಿದ್ದು, ಆಳುವ ವರ್ಗಕ್ಕಷ್ಟೇ ಸೀಮಿತವಾಗಿತ್ತು- ಇದು ವೇದಕಾಲೀನ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಕಟ್ಟಿಕೊಡಲಾಗಿರುವ ಚಿತ್ರ.

ವೇದಗಳ ಕಾಲದಲ್ಲಿ ಮಹಿಳೆಯರಿಗಿದ್ದ ಈ ಸಮಾನ ಸ್ಥಾನಮಾನ ಸ್ಮೃತಿಗಳ ಕಾಲಕ್ಕಾಗಲೇ ಕ್ಷೀಣಿಸುತ್ತ ಬಂದಿತು. ಅವಳ ಕಾರ್ಯಕ್ಷೇತ್ರ ಅವಳ ಕುಟುಂಬಕ್ಕೆ ಸೀಮಿತಗೊಂಡಿತು. ಮನು ತನ್ನ ಸ್ಮೃತಿಯಲ್ಲಿ ಮಹಿಳೆಗೆ ಅತ್ಯಂತ ಗೌರವ ಸ್ಥಾನಮಾನವನ್ನು ನೀಡಿದ್ದರೂ ಅವಳ ಜೀವನದ ಎಲ್ಲ ಹಂತಗಳಲ್ಲಿಯೂ (ಕುಮಾರಿ, ಪತ್ನಿ ಹಾಗೂ ತಾಯಿಯಾಗಿ) ಅವಳು ಪುರುಷಾಧೀನಳು; ಗಂಡನನ್ನು ಸೇವಿಸುವುದರಿಂದಲೇ ಅವಳು ಮೋಕ್ಷವನ್ನು ಪಡೆಯುತ್ತಾಳೆ, ಅದಕ್ಕಾಗಿ ಅವಳು ಯಜ್ಞಯಾಗಾದಿಗಳನ್ನು ಮಾಡುವ ಅಗತ್ಯವೇ ಇಲ್ಲ ಎಂಬುದಾಗಿ ಹೇಳಿದ್ದಾನೆ. ಆಸ್ತಿಗೆ ಸಂಬಂಧಿಸಿದಂತೆ ವಿವಾಹದ ನಂತರ ಅವಳ ವ್ಯಕ್ತಿತ್ವ ಅವಳ ಗಂಡನ ವ್ಯಕ್ತಿತ್ವದಲ್ಲಿ ಸೇರಿ ಹೋಗುತ್ತದಾದ್ದರಿಂದ ಅವಳಿಗೆ ಪ್ರತ್ಯೇಕ ಅಸ್ತಿತ್ವವೇ ಇರುವುದಿಲ್ಲ. ಅವಳಿಗೆ ಆಸ್ತಿಯಲ್ಲಿ ಪ್ರತ್ಯೇಕ ಹಕ್ಕಿನ ಅಗತ್ಯವಿಲ್ಲ. ಪತಿಯ ಮರಣಾನಂತರ ಅವಳಿಗೆ ಆಸ್ತಿಯಲ್ಲಿ ಸೀಮಿತ ಹಕ್ಕು ಪ್ರಾಪ್ತವಾಗುತ್ತದೆ. ಸ್ತ್ರೀಧನದ ಮೇಲೆ ಮಾತ್ರ ಅವಳು ಸಂಪೂರ್ಣ ಹಕ್ಕು ಹೊಂದಿರುತ್ತಾಳೆ ಎಂದೂ ನಿರೂಪಿಸಿದ್ದಾನೆ. ಇದು ಅ ಕಾಲದ ಮಹಿಳೆಯ ಸ್ಥಾನಮಾನದ ಅಧಿಕೃತ ದಾಖಲೆ ಎಂದೇ ಪರಿಗಣಿಸಬಹುದು. ಸ್ಮೃತಿಗಳ ಕಾಲದಲ್ಲಿ ಮಹಿಳೆ ಸಮಾಜದಲ್ಲಿ ಪ್ರತ್ಯೇಕ ವ್ಯಕ್ತಿತ್ವ ವನ್ನೂ ಸ್ಥಾನಮಾನವನ್ನೂ ಕಳೆದುಕೊಂಡಳು. ಅವಳ ಅಸ್ತಿತ್ವ ಹಾಗೂ ಸಂತೋಷ ಅವಳ ಪತಿಯನ್ನೇ ಅವಲಂಬಿಸಿತ್ತು. ಪತಿ ಕುಡುಕನಾಗಿರಲಿ, ಕ್ರೂರಿಯಾಗಿರಲಿ, ವ್ಯಭಿಚಾರಿಯಾಗಿಲಿ, ಲಂಪಟನಾಗಿರಲಿ ಪತ್ನಿ ಮಾತ್ರ ಅವನಿಗೆ ನಿಷ್ಠೆಯಿಂದ, ವಿಧೇಯಳಾಗಿ ಇರಬೇಕು. ಗಂಡನಿಗಾಗಿ ಮಕ್ಕಳಿಗಾಗಿ ತನ್ನ ಸುಖ ಸಂತೋಷಗಳನ್ನು ತ್ಯಾಗ ಮಾಡಬೇಕು ಎಂದು ನಿರೀಕ್ಷಿಸಲಾಯಿತು. ಬಾಲ್ಯವಿವಾಹ, ಅನಕ್ಷರತೆ, ಬಹುಪತ್ನಿತ್ವಗಳ ಜೊತೆಗೆ ಅವಳ ಜೀವನವನ್ನು ಮನೆಯ ನಾಲ್ಕು ಗೋಡೆಗಳ ನಡುವೆ ಸೀಮಿತಗೊಳಿಸಿದುದು ಸಮಾಜದಲ್ಲಿ ಅವಳ ಸ್ಥಾನಮಾನ ಕೆಳಗಿಳಿಯಲು ಕಾರಣವಾದುವು.

ಸಾಮಾಜಿಕ, ಆರ್ಥಿಕ ಜೀವನದಿಂದ ವಂಚಿತಳಾದ ಮಹಿಳೆಗೆ ಶಿಕ್ಷಣ ಪಡೆಯುವ ಸ್ವಾತಂತ್ರ್ಯವೂ ಇರಲಿಲ್ಲವಾದ್ದರಿಂದ, ಪರದಾ, ಬಾಲ್ಯವಿವಾಹ, ಹೆಣ್ಣು ಭ್ರೂಣಹತ್ಯೆ, ವರದಕ್ಷಿಣೆ, ಸತಿ ಪದ್ಧತಿಗಳಂಥ ಸಾಮಾಜಿಕ ಪಿಡುಗುಗಳಿಗೆ ಒಳಗಾಗಬೇಕಾಯಿತು. ಈ ಎಲ್ಲ ಪಿಡುಗುಗಳೂ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದ್ದವು. ಬ್ರಿಟಿಷರು ಭಾರತಕ್ಕೆ ಬಂದು ಆಡಳಿತದ ಸೂತ್ರವನ್ನು ತಮ್ಮ ಕೈಗೆ ತೆಗೆದುಕೊಳ್ಳುವ ಸಮಯದಲ್ಲಿ ಭಾರತೀಯ ಮಹಿಳೆಯ ಸ್ಥಾನಮಾನ ಈ ಮಟ್ಟದಲ್ಲಿತ್ತು.

ಹಿಂದೂ ಸಮಾಜದ ಮನೋಭಾವ, ದೃಷ್ಟಿಕೋನ, ಜೀವನ ಶೈಲಿ ಎಲ್ಲವೂ ತೀವ್ರ ಬದಲಾವಣೆಯನ್ನು ಕಂಡುದು ಬ್ರಿಟಿಷ ಆಗಮನಾನಂತರ. ಭಾರತೀಯ ಮಹಿಳೆಯರ ಸ್ಥಾನಮಾನ ಅತ್ಯಂತ ಹೀನಾಯವಾದ ಸ್ಥಿತಿಯಲ್ಲಿದೆ. ಅದರಲ್ಲೂ ಹಿಂದೂ ಮಹಿಳೆಯರ ವಿರುದ್ಧ ಆಚರಣೆಯಲ್ಲಿರುವ ಅನಾಗರಿಕ ಪದ್ಧತಿಗಳು ಭಾರತೀಯರ ನೈತಿಕ ಕೆಳಮಟ್ಟದ ದ್ಯೋತಕಗಳಾಗಿವೆ. ಆದ್ದರಿಂದ ಹಿಂದೂ ಮಹಿಳೆಯರಿಗೆ ಬ್ರಿಟಿಷರ ರಕ್ಷಣೆಯ ಅಗತ್ಯವಿದೆ ಎಂದು ವಾದಿಸುವ ಮೂಲಕ ಜೈಮ್ಸ್‌ಮಿಲ್‌ನಂತಹ ಬ್ರಿಟಿಷ್ ಚರಿತ್ರಕಾರರು ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯನ್ನು ಸಮರ್ಥಿಸಿಕೊಂಡರು.

ಆದರೆ ಇದಕ್ಕೆ ಪ್ರತಿಯಾಗಿ ಮಹಿಳೆಯರ ಸ್ವಾತಂತ್ರ್ಯದ ಮೇಲೆ ನಿರ್ಬಂಧಗಳನ್ನು ಹೇರುವುದು ಪ್ರಾರಂಭವಾದುದು ಭಾರತಕ್ಕೆ ಅನ್ಯ ಆಕ್ರಮಣಕಾರರ ಪ್ರವೇಶದ ನಂತರ, ಅದರಲ್ಲೂ ಮುಸ್ಲಿಂ ಆಕ್ರಮಣಕಾರರ ನಂತರ. ಮುಸ್ಲಿಂ ಆಕ್ರಮಣಕಾರರಿಂದ ಮಹಿಳೆಯ ಸುರಕ್ಷತೆಯ ಬಗೆಗೆ ಉಂಟಾದ ಭಯ ಮತ್ತು ಈ ಭಯದ ಪರಿಣಾಮವಾಗಿ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಪರಿಣಾಮವಾಗಿ ತಲೆದೋರಿದ ಸಾಮಾಜಿಕ ಪಿಡುಗುಗಳು ಮಹಿಳೆಯರ ಅಂಥ ಸ್ಥಿತಿಗೆ ಕಾರಣ ಎಂಬ ವಾದವನ್ನು ಮಂಡಿಸಲಾಯಿತು.

ಸಮಕಾಲೀನ ಮಹಿಳಾವಾದೀ ಚಿಂತಕರು ಈ ಚರಿತ್ರೆ ರಾಷ್ಟ್ರೀಯತಾವಾದಿಗಳ ಹಾಗೂ ಬ್ರಿಟಿಷ್ ಆಳ್ವಿಕೆಯನ್ನು ಸಮರ್ಥಿಸಿಕೊಳ್ಳುವವರ ನಡುವಿನ ಪರಸ್ಪರ ಪ್ರತಿಕ್ರಿಯೆಗಳಿಂದಾಗಿ ಉಂಟಾದುದು ಎಂದು ಅಭಿಪ್ರಾಯಪಡುತ್ತಾರೆ. ಉಮಾ ಚಕ್ರವರ್ತಿ ಮತ್ತು ಕುಂಕುಮ್‌ರಾಯ್‌ರಥ ಮಹಿಳಾವಾದಿಗಳು, ಮೇಲಿನ ಈ ಎರಡೂ ಕಾರಣಗಳನ್ನು ವಿವಿಧ ಹಂತಗಳಲ್ಲಿ ವಿಶ್ಲೇಷಿಸುತ್ತಾರೆ.

ಮೊದಲನೆಯದಾಗಿ ರಾಷ್ಟ್ರೀಯತಾವಾದಿ ಚರಿತ್ರಕಾರರು ಮುಖ್ಯವಾಗಿ ಅವಲಂಬಿಸಿದ್ದು, ಬ್ರಾಹ್ಮಣ ಸಮಾಜದ ವಿವರಗಳನ್ನು. ಆದ್ದರಿಂದ ಇದು ಅಂದಿನ ಸಮಾಜದ ಪೂರ್ಣಚಿತ್ರಣವನಲ್ಲ. ಎರಡನೆಯದಾಗಿ ಅವರು ಆಧರಿಸಿದ ವೇದ ಗ್ರಂಥಗಳು ಭೌಗೋಳಿಕವಾಗಿ ಕೆಲವು ಭಾಗಗಳಿಗೆ ಸೀಮಿತವಾಗಿದ್ದವು. ಪ್ರಾರಂಭಿಕ ಶಾಸ್ತ್ರಗ್ರಂಥಗಳು ಈ ಖಂಡದ ವಾಯುವ್ಯ ಪ್ರದೇಶಕ್ಕೆ ಸೀಮಿತಗೊಂಡಿದ್ದರೆ ಆ ನಂತರ ಶಾಸ್ತ್ರ ಗ್ರಂಥಗಳು ಮಧ್ಯ ಗಂಗಾ ಕಣಿವೆಗೆ ಮತ್ತು ಮನುಸ್ಮೃತಿ ವಿಂಧ್ಯಪರ್ವತಗಳ ಉತ್ತರಕ್ಕಿರುವ ಭಾರತಕ್ಕೆ ಸೀಮಿತಗೊಂಡಿದ್ದವು. ಆದ್ದರಿಂದ ವೇದಶಾಸ್ತ್ರ ಗ್ರಂಥಗಳನ್ನು ಆಧರಿಸಿ, ೧೯ನೇ ಶತಮಾನದ ಚರಿತ್ರಕಾರರು ಇಡೀ ಭಾರತಕ್ಕೆ ಅದನ್ನು ಅನ್ವಯಿಸಿ ವೇದಕಾಲೀನ ಭಾರತದ ಚಿತ್ರವನ್ನು ಕಟ್ಟಿಕೊಟ್ಟರು. ಆದರೆ ವೇದಗಳಲ್ಲಿ ಚಿತ್ರಿಸಲಾಗಿರುವ ಸಾಮಾಜಿಕ ಸ್ಥಿತಿಗತಿಯನ್ನು ಇಡೀ ಭಾರತಕ್ಕೆ ಅನ್ವಯಿಸುವುದು ಸರಿಯಲ್ಲ. ಏಕೆಂದರೆ ಭಾರತ ಒಂದು ಅಖಂಡ ರಾಷ್ಟ್ರವಾಗಿ ರೂಪುಗೊಂಡುದುದೇ ೧೯ನೇ ಶತಮಾನದಲ್ಲಿ, ಬ್ರಿಟಿಷರ ವಿರುದ್ಧ ನಡೆದ ಹೋರಾಟದಲ್ಲಿ. ಆದ್ದರಿಂದ ಈ ರೀತಿಯ ಭಾರತ ಚಿತ್ರಣ ಸರಿಯಾದುದಲ್ಲ.

ಎಂದು ಇವರ ವಾದ. ಮೂರನೆಯದಾಗಿ, ಬ್ರಾಹ್ಮಣ ಸಮುದಾಯದ ಸಮಾಜ ಚಿತ್ರಣವನ್ನೇ ಗಮನಿಸಿ, ದರೂ, ಮಹಿಳೆಯರ ಸ್ಥಿತಿಗತಿ, ಮುಸ್ಲಿಮರು ಒಂದು ಧಾರ್ಮಿಕ ಸಮುದಾಯವಾಗಿ ನೆಲೆಯೂರುವುದಕ್ಕೆ ಮುನ್ನವೆ ಕೆಳಮಟ್ಟಕ್ಕೆ ಇಳಿದಿತ್ತು ಎಂಬುದನ್ನು ರುಜುವಾತುಪಡಿಸಲು ಅನೇಕ ಪುರಾವೆಗಳಿವೆ ಎನ್ನುವುದು ಇವರ ವಾದ.

ಏನೇ ಆದರೂ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಅವರಲ್ಲಿ ವ್ಯಕ್ತವಾದ ಮತ್ತು ೧೯ನೇ ಶತಮಾನದ ಸಮಾಜ ಸುಧಾರಕರಲ್ಲಿ ವ್ಯಕ್ತವಾದ ಕಾಳಜಿ ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿದ್ದ, ಸಾಮಾಜಿಕವಾಗಿ ಆರ್ಥಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮಹಿಳೆಯ ಸ್ಥಾನಮಾನ ಅತ್ಯಂತ ಕೆಳಮಟ್ಟಕ್ಕಿಳಿಯಲು ಕಾರಣವಾಗಿದ್ದ ಸಾಮಾಜಿಕ ಪಿಡುಗುಗಳ ನಿರ್ಮೂಲನೆಗೆ ಪ್ರೇರಕ ಶಕ್ತಿಯಾಯಿತು. ಇದರೊಡನೆ ನಿಧಾನವಾಗಿಯಾದರೂ ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ಮಹಿಳೆಯರಲ್ಲಿ ತಮ್ಮ ಹಕ್ಕುಗಳ ಬಗ್ಗೆ ಮೂಡುತ್ತಿದ್ದ ಅರಿವೂ ಇದಕ್ಕೆ ಪೂರಕ ಶಕ್ತಿಯಾಗಿ ಒದಗಿತು.

ಈ ಹಿನ್ನೆಲೆಯಲ್ಲಿ ಬ್ರಿಟಿಷ್ ಚಿಂತನಕಾರರು ಹಾಗೂ ಆಡಳಿತಗಾರರು ಭಾರತದಲ್ಲಿ ಮಹಿಳೆಗಿರುವ ಸ್ಥಾನಮಾನವನ್ನು ನಿರ್ಧರಿಸಲು ಯೂರೋಪಿಯನ್ ಮಾನದಂಡಗಳನ್ನೇ ಅನ್ವಯಿಸಿದರು. ೧೯ನೇ ಶತಮಾನದ ಪ್ರಾರಂಭದಲ್ಲಿ ಸಮಾಜ ಸುಧಾರಕರು ಹಿಂದೂ ಸಮಾಜದಲ್ಲಿ ತೀರಾ ಕೆಳಗಿಳಿದ ಮಹಿಳೆಯ ಸ್ಥಾನಮಾನವನ್ನು ಸುಧಾರಿಸಲು ಮಹಿಳಾ ಚಳವಳಿಯ ನಾಯಕತ್ವವಹಿಸಲು ಮುಂದೆ ಬಂದರು.

ಬ್ರಿಟಿಷರ ಹಾಗೂ ಸಮಾಜ ಸುಧಾರಕರ ಪ್ರಯತ್ನದಿಂದಾಗಿ, ಭಾರತೀಯ ಮಹಿಳೆಯರಿಗೆ ಶಿಕ್ಷಣದ ಬಾಗಿಲು ತೆರೆದುಕೊಂಡಿತು. ಹಾಗೂ ಖಾಸಗೀ ಜೀವನದಿಂದ ಸಾರ್ವಜನಿಕ ಜೀವನಕ್ಕೆ ಮಹಿಳೆಯರು ಪ್ರವೇಶಿಸುವುದಕ್ಕೆ ಪಾಶ್ಚಾತ್ಯೀಕರಣ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾಯಿತು. ಪ್ರಮುಖ ಹಿಂದೂ ಕುಟುಂಬಗಳ ಹೆಣ್ಣು ಮಕ್ಕಳು ಸಂಪ್ರದಾಯಬದ್ಧ ಜೀವನ ಕ್ರಮದಿಂದ ಹೊರಬಂದು ತಮಗೆ ದೊರೆತ ಹೊಸ ಅವಕಾಶಗಳನ್ನು ಬಳಸಿಕೊಳ್ಳಲಾರಂಭಿಸಿದರು. ರಾಜಕಾರಣಿಗಳು ಹಾಗೂ ಸಮಾಜ ಸುಧಾರಕರು, ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸುವಂತೆ, ಸಮಾಜ ಸುಧಾರಣಾ ಚಳವಳಿಗಳನ್ನು ಸಂಘಟಿಸುವಂತೆ ಮತ್ತು ಸಾರ್ವಜನಿಕ ಜೀವನದಲ್ಲಿ ತೀರ್ಮಾನ ಕೈಗೊಳ್ಳುವ ಪಾತ್ರವಹಿಸುವಂತೆ ಮಹಿಳೆಯರಿಗೆ ಪ್ರೋತ್ಸಾಹ ನೀಡಿದರು. ಭಾರತದಲ್ಲಿನ ಮಹಿಳಾ ಚಳವಳಿಯನ್ನು ಮಹಾತ್ಮಾಗಾಂಧಿ ಅವರ ರಾಷ್ಟ್ರೀಯ ರಾಜಕಾರಣದ ಅವಿಭಾಜ್ಯ ಅಂಗ ಎಂದೇ ಹೇಳಬೇಕು. ಮಹಾತ್ಮಾಗಾಂಧಿ ಅವರಿಗೆ ರಾಷ್ಟ್ರೀಯ ಚಳವಳಿ ಕೇವಲ ರಾಜಕೀಯ ಚಳವಳಿಯಾಗದೆ ಸಮಾಜವನ್ನು ಪುನರ್ರಚಿಸುವ, ಪುನಶ್ಚೇತನಗೊಳಿಸುವ ಸಾಧನವೂ ಆಗಿತ್ತು. ಭಾರತೀಯ ಸಮಾಜದಲ್ಲಿ ಮಹಿಳೆಯರಿಗಿರುವ ಸ್ಥಾನಮಾನವನ್ನು ಹಾಗೂ ಅವರು ವಹಿಸುವ ಪಾತ್ರವನ್ನು ಉತ್ತಮಗೊಳಿಸಲು ಮಹಾತ್ಮಾಗಾಂಧಿ ಅವರಿಗೆ ಅತ್ಯಂತ

ಕಾಳಜಿಯಿತ್ತು. ಈ ಕಾಳಜಿಯೇ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಲು ಮಹಿಳೆಯರಿಗೆ ಪ್ರಚೋದನೆಯಾಯಿತು. ಹೀಗಾಗಿ ಪುರುಷರಂತೆಯೇ ಅನೇಕ ಮಹಿಳೆಯರ ರಾಜಕೀಯ ಜೀವನವೂ ಮಹಾತ್ಮಾಗಾಂಧಿ ಅವರೊಡನೆ ಇದ್ದ ಪ್ರತ್ಯಕ್ಷ ಅಥವಾ ಪರೋಕ್ಷ ಸಂಪರ್ಕದೊಂದಿಗೆ ಪ್ರಾರಂಭವಾಗುತ್ತದೆ.

ಮಹಿಳೆಯರು ರಾಷ್ಟ್ರೀಯ ಚಳವಳಿಗೆ ಧುಮುಕಿ ಅನೇಕ ಸಭೆಗಳಲ್ಲಿ ಭಾಗವಹಿಸಿ ಮುಕ್ತ ವಾತಾವರಣಕ್ಕೆ ತೆರೆದುಕೊಂಡುದುದರ ಫಲವಾಗಿ, ೧೯೨೦ರ ಸುಮಾರಿನಲ್ಲಿ ಮಹಿಳಾ ಹಕ್ಕುಗಳ ಬಗ್ಗೆ ಎರಡು ವಿಭಿನ್ನ ವಿಚಾರಧಾರೆಗಳು ಹೊರಹೊಮ್ಮಿದವು. ಮೊದಲನೆಯದಾಗಿ ಮಹಿಳೆಯರು ತಾಯಿಯರಾಗಿ ಸಾಮಾಜಿಕವಾಗಿ ಪ್ರಮುಖ ಪಾತ್ರವಹಿಸುವುದರಿಂದ ಮಹಿಳೆಯರ ಹಕ್ಕುಗಳನ್ನು ಗುರುತಿಸಬೇಕು. ಎರಡನೆಯದಾಗಿ, ಮಹಿಳೆಯರಿಗೂ ಪುರುಷರಿಗಿರುವಂಥದೇ ಅಗತ್ಯಗಳು, ಆಸೆಗಳು ಮತ್ತು ಸಾಮರ್ಥ್ಯಗಳಿರುವುದರಿಂದ ಅವರಿಗಿರುವ ಹಕ್ಕುಗಳು ಮಹಿಳೆಯರಿಗೂ ಇರಬೇಕು ಎಂಬುದು. ೧೯೩೦ರ ದಂಡಿ ಸತ್ಯಾಗ್ರಹ ಹಾಗೂ ೧೯೪೨ರ ಕ್ವಿಟ್ ಇಂಡಿಯಾ ಚಳವಳಿಗಳಲ್ಲಿ ಮಹಿಳೆಯ ಭಾಗವಹಿಸುವಿಕೆ ಭಾರತೀಯ ಮಹಿಳೆಯರ ಬೇಡಿಕೆಗಳನ್ನು ಕಡೆಗಣಿಸಲಾಗದಂತೆ ಮಾಡಿದ ಪ್ರಮುಖ ಶಕ್ತಿಯಾಯಿತು. ಹೊಸ ಸಂವಿಧಾನದ ರಚನೆಯಾಗುವುದಕ್ಕೆ ಮುನ್ನ ಭಾರತೀಯ ಮಹಿಳೆಯ ವಿಚಾರಗಳನ್ನು ಸಂವಿಧಾನ ಶಿಲ್ಪಿಗಳಿಗೆ ಮನದಟ್ಟು ಮಾಡಿಕೊಡಲು ಇದ್ದ ಎಲ್ಲ ಅವಕಾಶಗಳನ್ನು ಮಹಿಳೆಯರು ಬಳಸಿಕೊಂಡರು. ೧೯೩೦ ರಿಂದ ೧೯೪೭ರವರೆಗೆ ಅಖಿಲ ಭಾರತ ಮಹಿಳಾ ಸಮ್ಮೇಳನದ ವಾರ್ಷಿಕ ಸಮ್ಮೇಳನಗಳ ಅಧ್ಯಕ್ಷತೆವಹಿಸಿದ್ದ ಸರೋಜಿನಿ ನಾಯ್ಡು, ಮುತ್ತುಲಕ್ಷ್ಮಿರೆಡ್ಡಿ, ಶ್ರೀಮತಿ ಕೆ.ರೇ. ಲೇಡಿ ಉದಯಗೌರಿ ರಮಣ್ ಭಾಯ್ ನಿಲಕಂಠ, ಲೇಡಿ ಅಬ್ದುಲ್‌ಖಾದಿರ್ ರಸ್ತುವರ್ಮೆದ ಫಾರಾದೊಂಜಿ, ಮಹಾರಾಣಿ ಸೇತು ಪಾರ್ವತಿ ಬಾಯಿ, ಮಾರ್ಗರೆಟ್ ಕಸಿನ್ಸ್, ರಾಜಕುಮಾರಿ ಅಮೃತ್‌ಕೌರ್, ರಾಣಿ ರುಕ್ಮೀಣಿಬಾಯಿ ರಾಜವಾಡೆ, ಬೇಗಂ ಹಮಿದ್ ಅಲಿ, ರಾಮೇಶ್ವರಿ ನೆಹರು, ವಿಜಯಲಕ್ಷ್ಮಿ ಪಂಡಿತ್, ಕಮಲಾದೇವಿ ಚಟ್ಟೋಪಾಧ್ಯಾಯ, ಹಂಸಮೆಹತ, ಲೇಡಿ ಅನಸೂಯಾಬಾಯಿ ಕಾಳೆ ಇವರುಗಳು ಮಹಿಳೆಯರ ಸಮಾನ ಹಕ್ಕುಗಳು, ಶಿಕ್ಷಣ ಸೌಲಭ್ಯ ಹಾಗೂ ಅವರ ಕಲ್ಯಾಣಕ್ಕಾಗಿ ಸಂಘಟನೆಗಳ ಮೂಲಕ ಅವಿರತವಾಗಿ ಶ್ರಮಿಸಿದವರು. ಅವರ ಪ್ರಯತ್ನದ ಫಲವಾಗಿ ಹಾಗೂ ಸಮಾಜ ಸುಧಾರಕರು ಹಾಗೂ ಸಂವಿಧಾನ ಶಿಲ್ಪಿಗಳ ದೂರದರ್ಶಿತ್ವದ ಪರಿಣಾಮವಾಗಿ ಮಹಿಳೆಗೆ ಸ್ವತಂತ್ರ ಭಾರತದ ಸಂವಿಧಾನದಲ್ಲಿ ಎಲ್ಲ ರಂಗಗಳಲ್ಲೂ ಪುರುಷರೊಡನೆ ಸಮಾನ ಸ್ಥಾನಮಾನ ನೀಡಲಾಯಿತು.

ಭಾರತದ ಸಂವಿಧಾನದಲ್ಲಿ ಸ್ತ್ರೀಪುರುಷರಿಗೆ ಸಮಾನತೆಯನ್ನು ನೀಡಲಾಗಿದ್ದರೂ ಮಹಿಳೆಯ ಸ್ಥಾನಮಾನ ವಾಸ್ತವಿಕವಾಗಿ ಯಾವುದೇ ರೀತಿಯಲ್ಲಿಯೂ ಬದಲಾಗಿಲ್ಲ. ಭಾರತದ ಸಂವಿಧಾನದ ಅನುಚ್ಛೇದಗಳ ನ್ಯಾಯಿಕ ವ್ಯಾಖ್ಯಾನಗಳನ್ನು ಗಮನಿಸಿದಾಗ, ಸ್ತ್ರೀಪುರುಷ ಸಮಾನತೆ ಎಂಬುದು ವಾಸ್ತವವಾಗಿ ನೀಡಲಾದ

ಸಮಾನತೆಯಾಗದೇ ಕೇವಲ ಕಾನೂನಿನಲ್ಲಿ ಕೊಡಮಾಡಿರುವ ಸಮಾನತೆಯಾಗಿ ಅಷ್ಟೇ ಉಳಿದಿದೆ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಸ್ವಲ್ಪಮಟ್ಟಿಗೆ ನಮ್ಮ ಕಾನೂನು ವ್ಯವಸ್ಥೆ. ಸ್ತ್ರೀಪುರುಷ ಸಮಾನತೆ ಕೇವಲ ಔಪಚಾರಿಕ ಸಮಾನತೆ(formal equality)ಯಾಗದೆ ವಾಸ್ತವಿಕ ಸಮಾನತೆಯಾಗುವಂತೆ ಕಾನೂನುಗಳನ್ನು ಅನುಷ್ಠಾನಗೊಳಿಸುವಲ್ಲಿ ಕೆಲವು ತೀರ್ಪುಗಳು ಸಹಾಯಕವಾಗಿದ್ದರೊ, ಅವುಗಳ ಸಂಖ್ಯೆ ಬಹುಕಡಿಮೆ. ಇದಕ್ಕೆ ಕಾರಣ 'ಸಮಾನತೆ' ಮತ್ತು 'ಸ್ತ್ರೀಪುರುಷರ ನಡುವಿನ ವ್ಯತ್ಯಾಸ'ಗಳನ್ನು ಸರಿಯಾದ ರೀತಿಯಲ್ಲಿ ವ್ಯಾಖ್ಯಾನಿಸದಿರುವುದು.

ಕಾನೂನು ಒಂದೇ ರೂಢಿಗತವಾದ ಮತ್ತು ತಾರತಮ್ಯ ತೋರಿಸುವಂಥ ಆಚರಣೆಗಳನ್ನು ಸಂಪೂರ್ಣವಾಗಿ ಬದಲಿಸಲಾರದು. ಆದರೆ ತಾರತಮ್ಯ ರಹಿತ ತತ್ತ್ವವನ್ನು ಒಪ್ಪಿಕೊಳ್ಳುವಂಥ ಮನೋಭಾವವನ್ನು ಮೂಡಿಸುವ ಒಂದು ಸಾಧನವಾಗಬಲ್ಲದು. ಈ ಬದಲಾವಣೆ ತೀರ ನಿಧಾನಗತಿಯದಾದರೂ, ಕಾನೂನಿನ ಈ ಪ್ರಭಾವವನ್ನು ನಾವು ಅಲ್ಲಗಳೆಯುವಂತಿಲ್ಲ.

ಚಾರಿತ್ರಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರಣಗಳಿಗಾಗಿ ಮಹಿಳೆಯ ಸ್ಥಾನಮಾನದಲ್ಲಿ ಉಂಟಾದ ಅಸಮಾನತೆಯೇ ಈ ಎಲ್ಲ ಕ್ಷೇತ್ರಗಳಲ್ಲಿ ಸ್ತ್ರೀಪುರುಷರ ನಡುವಿನ ತಾರತಮ್ಯಕ್ಕೆ ಕಾರಣವಾಯಿತು. ಇದೇ ದೃಷ್ಟಿಕೋನ ರಚನೆಯಾದ ಕಾನೂನುಗಳಲ್ಲಿಯೂ ಪ್ರತಿಬಿಂಬಿತವಾಗಿದೆ. ಸಮಾಜದಲ್ಲಿರುವ ಈ ತಾರತಮ್ಯವನ್ನು ಹೋಗಲಾಡಿಸಲು ಸಮಾಜ ಸುಧಾರಣಾ ಕಾನೂನುಗಳು ಸ್ವಲ್ಪಮಟ್ಟಿಗೆ ನೆರವಾದರೂ, ಕಾನೂನುಗಳ ರಚನೆಯ ಹಂತದಲ್ಲಿಯೇ ಅಂತರ್ಗತವಾಗಿರುವ ಅಸಮಾನತೆ ಆ ನೆಲೆಯಲ್ಲಿಯೂ ಮಹಿಳೆಯನ್ನು ಶೋಷಣೆಗೊಳಪಡಿಸುವ ಸಾಧನವಾಗಿ ಬಿಡುತ್ತದೆ.

ಸ್ತ್ರೀಪುರುಷ ತಾರತಮ್ಯ ಎಂದಾಗ ಅದು ಯಾವಾಗಲೂ ಸ್ತ್ರೀಯರಿಗೆ ವಿರುದ್ಧವಾದ ತಾರತಮ್ಯವೇ ಆಗಿರುತ್ತದೆ. ಕುಟುಂಬ, ಧರ್ಮ, ಮಾಧ್ಯಮ ಹಾಗೂ ಕಾನೂನು ಇವು ನಾಲ್ಕು ಸಮಾಜ ಹಾಗೂ ವ್ಯವಸ್ಥೆಯ ನಾಲ್ಕು ಕಂಬಗಳು. ಈ ನಾಲ್ಕು ವ್ಯವಸ್ಥೆಗಳೂ ಪುರುಷ ಪ್ರಧಾನವಾದವು. ಕುಟುಂಬ ಸಮಾಜದ ಮೂಲಭೂತ ಘಟಕವಾಗಿದ್ದು ಪುರುಷ ಪ್ರಾಧಾನ್ಯದ ಸಮಗ್ರ ಸ್ವರೂಪ ಗರಿಷ್ಠಮಟ್ಟದಲ್ಲಿ ವ್ಯಕ್ತವಾಗುವುದು ಇಲ್ಲಿಯೇ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನೇ ಕುಟುಂಬದ ಮುಖ್ಯಸ್ಥ. ಕುಟುಂಬದೊಳಗೆ ಮಹಿಳೆಯ ಲೈಂಗಿಕತೆ, ದುಡಿಮೆ ಅಥವಾ ಉತ್ಪಾದನೆ, ಸಂತಾನೋತ್ಪತ್ತಿ, ಓಡಾಟ ಎಲ್ಲವೂ ಪುರುಷನ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಪುರುಷ ಉತ್ತಮ ಹಾಗೂ ಪ್ರಧಾನ, ಮಹಿಳೆ ಕೀಳು ಮತ್ತು ಅಪ್ರಧಾನ ಎಂಬಂಥ ಪುರುಷ ಪ್ರಧಾನ ಮುಂದಿನ ಪೀಳಿಗೆ ರೂಪುಗೊಳ್ಳುವುದು ಕುಟುಂಬದಲ್ಲಿಯೇ. ಶ್ರೇಣಿ ವ್ಯವಸ್ಥೆ, ಪುರುಷಾಧೀನತೆ, ತಾರತಮ್ಯ ಇವುಗಳ ಮೊದಲ ಪಾಠಶಾಲೆಯೂ ಕುಟುಂಬವೇ. ಹೆಣ್ಣು ಮಗುವಿನ ಜನನವಾದ ಸಂದರ್ಭದಲ್ಲಿ, ಹೆಣ್ಣು ಮಕ್ಕಳನ್ನು ಹೊರತುಪಡಿಸಿ

ಪೌಷ್ಠಿಕ ಆಹಾರವನ್ನು ಗಂಡುಮಕ್ಕಳಿಗೆ ಎತ್ತಿಟ್ಟುಕೊಡುವ, ಮನೆಗೆಲಸಗಳನ್ನು ಹೆಣ್ಣುಮಕ್ಕಳೇ ಮಾಡಬೇಕೆನ್ನುವ ಮತ್ತು ಹೆಣ್ಣುಮಕ್ಕಳನ್ನು ಶಿಕ್ಷಣದಿಂದ ವಂಚಿತರನ್ನಾಗಿಸುವ ಮನೋಭಾವ ವ್ಯಕ್ತವಾಗುವದೂ ಮೊದಲು ಕುಟಂಬದಲ್ಲಿಯೇ. ಹೀಗಾಗಿ ಬಾಲಕರು ಸಣ್ಣ ವಯಸ್ಸಿನಿಂದಲೇ ತಮ್ಮನ್ನು ತಾವು ಸಮರ್ಥಿಸಿಕೊಳ್ಳಲು, ದಬ್ಬಾಳಿಕೆ ನಡೆಸಲು ಕಲಿತರೆ ಬಾಲಕಿಯರು ಅಷ್ಟೇ ಸಣ್ಣ ವಯಸ್ಸಿನಿಂದಲೇ ದಬ್ಬಾಳಿಕೆಗೆ ಒಳಗಾಗುವುದನ್ನು, ಎರಡನೇ ಸ್ಥಾನವನ್ನು ಒಪ್ಪಿಕೊಳ್ಳಲು ಕಲಿಯುತ್ತಾರೆ. ಸುಶಿಕ್ಷಿತ ಕುಟುಂಬಗಳೂ ಇದಕ್ಕೆ ಹೊರತಲ್ಲ. ಹೀಗೆ ಕುಟುಂಬಗಳು ಶ್ರೇಣಿ ವ್ಯವಸ್ಥೆಯನ್ನು ಸೃಜಿಸುವಲ್ಲಿ ಮತ್ತು ಪುರುಷ ಪ್ರಧಾನ ವ್ಯವಸ್ಥೆಯನ್ನು ಮುಂದುವರಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಈಗ ವರ್ಗವ್ಯವಸ್ಥೆ ಹಾಗೂ ಪುರುಷ ಪ್ರಾಧಾನ್ಯವನ್ನು ಪ್ರಚಲಿತಗೊಳಿಸುವಲ್ಲಿ ಮಾಧ್ಯಮ ಮೇಲ್ವರ್ಗದ ಹಾಗೂ ಮೇಲ್ಜಾತಿಯ ಪುರುಷರಿಗೆ ಉತ್ತಮ ಪರಿಕರವಾಗಿದೆ. ಚಲನಚಿತ್ರಗಳು, ನಿಯತಕಾಲಿಕೆಗಳು, ದೂರದರ್ಶನ, ರೇಡಿಯೋ ಇವೆಲ್ಲವೂ ಮಹಿಳೆಯರನ್ನು ಪುರುಷ ರೂಪಿತ ಸ್ತ್ರೀಪಾತ್ರಗಳನ್ನಾಗಿಸಿ ವಿಕೃತಗೊಳಿಸಿಯೇ ಚಿತ್ರಿಸುತ್ತವೆ. ಮಹಿಳೆಯರ ಮೇಲಿನ ಕ್ರೌರ್ಯವನ್ನು ತಮ್ಮ ಲಾಭಕ್ಕಾಗಿ ರೋಚಕವನ್ನಾಗಿಸಿ ಚಿತ್ರಿಸಲಾಗುತ್ತಿದೆ. ಜಾಹೀರಾತುಗಳು ಮಹಿಳೆಯರನ್ನು ಬಳಸಿಕೊಳ್ಳುತ್ತಿವೆ.

ನಮ್ಮ ಆರ್ಥಿಕ ವ್ಯವಸ್ಥೆಯೂ ಪುರುಷ ಪ್ರಧಾನವಾದದ್ದು. ಇಂದಿನ ನಮ್ಮ ಸಮಾಜದಲ್ಲಿ ಆರ್ಥಿಕ ಸಂಸ್ಥೆಯ ನಿಯಂತ್ರಣ ಹೊಂದಿರುವುದು ಪುರುಷರು. ಆಸ್ತಿಯ ಮಾಲೀಕರು ಪುರುಷರು, ಆರ್ಥಿಕ ಚಟುವಟಿಕೆಗಳನ್ನು ನಿರ್ದೇಶಿಸುತ್ತಿರುವುದು ಪುರುಷರು ಹಾಗೂ ವಿವಿಧ ಉತ್ಪಾದನಾ ಚಟುವಟಿಕೆಗಳ ಮೌಲ್ಯನಿರ್ಧರಣೆ ಮಾಡುತ್ತಿರುವುದು ಪುರುಷರು. ಉತ್ಪಾದನಾ ಕ್ಷೇತ್ರಕ್ಕೆ ಮಹಿಳೆಯ ಕೊಡುಗೆ ಅಲ್ಪವಾದರೂ ನಗಣ್ಯವಲ್ಲ. ಏಕೆಂದರೆ ಈ ಕೊಡುಗೆ ಅವರ ಸಹಜ ಕರ್ತವ್ಯಗಳೆಂಬುದಾಗಿ ಪರಿಗಣಿಸಿ ಬಿಡುವ ಕುಟುಂಬ ನಿರ್ವಹಣೆ, ಮಕ್ಕಳ ಲಾಲನೆ ಪಾಲನೆ ಇವುಗಳ ಜೊತೆಗೆ ಎಂಬುದನ್ನು ಮರೆಯುವಂತಿಲ್ಲ. ಆದರೆ ಈ ಸಹಜ ಕರ್ತವ್ಯಗಳನ್ನು ದುಡಿಮೆಯ ಲೆಕ್ಕಕ್ಕೆ ಸೇರಿಸುವುದೇ ಇಲ್ಲ.

ಜನಸಂಖ್ಯೆಯ ಸುಮಾರು ಅರ್ಧದಷ್ಟು ಎಂದರೆ ಪುರುಷರಿಗೆ ಸರಿಸುಮಾರು ಸಮನಾದ ಜನಸಂಖ್ಯೆಯಿರುವ ನಮ್ಮ ದೇಶದಲ್ಲಿ, ಗ್ರಾಮಮಟ್ಟದಿಂದ ಸಂಸತ್ತಿನವರೆಗೆ, ಆಡಳಿತ ನಡೆಸುವವರು ಪುರುಷರು. ದೇಶದ ಭವಿಷ್ಯ ನಿರ್ಧರಿಸುವವರು ಪುರುಷರು. ಸ್ತ್ರೀ ಪ್ರಾತಿನಿಧ್ಯ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆ. ಸಿರಿಮಾವೋ ಭಂಡಾರನಾಯಿಕೆ, ಇಂದಿರಾಗಾಂಧಿ, ಬೆನೆಜಿರ್ ಭುಟ್ಟೋ ಮುಂತಾದ ಕೆಲವು ಮಹಿಳೆಯರು ಅವರವರ ದೇಶದ ರಾಜಕೀಯದಲ್ಲಿ ಅತ್ಯುನ್ನತ ಸ್ಥಾನ ತಲುಪಿದ್ದರೂ, ಅದು ಅವರಿಗೆ ಸಾಧ್ಯವಾದದ್ದು ಅತ್ಯಂತ ಪ್ರಭಾವೀ ಪುರುಷ ರಾಜಕಾರಣಿಗಳ ಸಾನ್ನಿಧ್ಯ ಹಾಗೂ ಬಂಧುತ್ವದಿಂದಾಗಿ ಮತ್ತು ಅವರು ಕೆಲಸ ನಿರ್ವಹಿಸಿದುದೂ ಅವರು ಹಾಕಿಕೊಟ್ಟ ತತ್ತ್ವಗಳ ಚೌಕಟ್ಟಿನೊಳಗೆ ಎಂಬುದನ್ನು ನಾವು ಮರೆಯುವಂತಿಲ್ಲ.

ಕಲಿಕೆ ಮತ್ತು ಶಿಕ್ಷಣ ಇವೆರಡೂ ಔಪಚಾರಿಕ ಸಾಂಸ್ಥಿಕ ಸ್ವರೂಪವನ್ನು ಪಡೆದ ನಂತರ ಜ್ಞಾನದ ಎಲ್ಲ ಕ್ಷೇತ್ರಗಳ ಮೇಲೂ ಪುರುಷರು ನಿಯಂತ್ರಣ ಹೊಂದಿದರು. ಉತ್ಪಾದನೆ ಹಾಗೂ ಜ್ಞಾನದ ಮೇಲೆ ಪುರುಷರು ಹೊಂದಿದ್ದ ಈ ನಿಯಂತ್ರಣ ಪುರುಷ ಪ್ರಾಧಾನ್ಯತೆ ಉಳಿಯಲು ಹಾಗೂ ಮುಂದುವರಿಯಲು ಕಾರಣವಾದಂತೆಯೇ ಸ್ತ್ರೀ ಪುರುಷ ತಾರತಮ್ಯಗಳಿಗೂ ಕಾರಣವಾಯಿತು.

ಇತಿಹಾಸದ ವಿವಿಧ ಹಂತಗಳಲ್ಲಿ ವಿವಿಧ ಕಾರಣಗಳಿಗಾಗಿ ಸ್ತ್ರೀಪುರುಷರ ನಡುವೆ ಉಂಟಾದ ಈ ತಾರತಮ್ಯ ಮಹಿಳೆಯರ ಹಿಂದಿನ ಹಾಗೂ ಇಂದಿನ ಅಧೀನ ಸ್ಥಾನಮಾನಕ್ಕೆ ಕಾರಣವಾಯಿತು. 'ಆಳುವವನು-ಆಳಿಸಿಕೊಳ್ಳುವವಳು', 'ಆದೇಶಿಸುವವನು-ಆದೇಶಕ್ಕೊಳಪಡುವವಳು', 'ನಿಯಂತ್ರಕ-ನಿಯಂತ್ರಣಕ್ಕೊಳಪಡುವವಳು' ಈ ಪರಿಕಲ್ಪನೆ ಸಮಾಜದಿಂದ, ಅಷ್ಟೇಕೆ ಅಧೀನ ಸ್ಥಾನಮಾನ ಪಡೆದು ಆಳಿಸಿಕೊಳ್ಳುವ, ಆದೇಶಕ್ಕೊಳಪಡುವ ಹಾಗೂ ನಿಯಂತ್ರಣಕ್ಕೊಳಪಡುವ ಮಹಿಳೆಯರಿಂದಲೂ ಸ್ವತಃ ಒಪ್ಪಿಗೆ ಪಡೆಯಿತು. ಸ್ಥಾನಮಾನ ಮಾನಗಳಲ್ಲಿದ್ದ ಈ ವ್ಯತ್ಯಾಸವೇ ಅವಳ ಸಾಮಾಜಿಕ ಸಾಂಸ್ಕೃತಿಕ ಹಾಗೂ ಆರ್ಥಿಕ ಶೋಷಣೆಗೆ ಮತ್ತು ಅವಳ ಮೇಲೆ ನಡೆಸುವ ಹಿಂಸೆಗೆ ಕಾರಣವಾಯಿತು. ಏಕೆಂದರೆ ಪುರುಷರ ಕೈಯಲ್ಲಿ, ಹಿಂಸೆ ಅವಳನ್ನು ತಲೆಯೆತ್ತದಂತೆ ಮಾಡುವ, ಆರ್ಥಿಕವಾಗಿ ಶೋಷಿಸುವ ಅಸ್ತ್ರವಾಯಿತು.

ವಿವಾಹ, ವಿಚ್ಛೇದನೆ, ವಾರಸುದಾರಿಕೆಗಳಿಗೆ ಸಂಬಂಧಿಸಿದಂತೆ ವ್ಯಕ್ತಿಗಿರುವ ಹಕ್ಕಗಳನ್ನು ಗುರುತಿಸುವುದು ಅವನು ಯಾವ ಧರ್ಮಕ್ಕೆ ಸೇರಿದ್ದಾನೆ ಎಂಬುದರ ಮೇಲೆಯೇ. ಎಲ್ಲ ಧರ್ಮಗಳೂ ಪುರುಷ ಪ್ರಧಾನವಾದದ್ದೇ. ಎಲ್ಲ ಮುಖ್ಯ ಧರ್ಮಗಳ ಸಂಸ್ಥಾಪಕರೂ, ವ್ಯಾಖ್ಯಾನಕಾರರೂ ಮೇಲ್ವರ್ಗದ ಅಥವಾ ಮೇಲ್ಜಾತಿಗೆ ಸೇರಿದ ಪುರುಷರೇ ಆಗಿದ್ದಾರೆ. ನೈತಿಕತೆ(Morality) ನೀತಿನಿಯಮಗಳು(ethics) ನಡತೆ (Conduct) ಹಾಗೂ ಕಾನೂನು ಮುಂತಾದವುಗಳನ್ನು ರೂಪಿಸುವುದು ಹಾಗೂ ನಿರ್ಧರಿಸುವುದೂ ಪುರುಷವರ್ಗವೇ. ಸ್ತ್ರೀ ಪುರುಷರ ಕರ್ತವ್ಯಗಳನ್ನು ಹಾಗೂ ಹಕ್ಕುಗಳನ್ನು, ಅವರ ನಡುವೆ ಇರಬೇಕಾದ ಸಂಬಂಧಗಳನ್ನು ನಿರ್ಧರಿಸುವುದು ಸಹ ಅವರೇ. ರಾಜ್ಯದ ಕಾರ್ಯನೀತಿಯ ನಿರ್ಧಾರಕರು ಹಾಗೂ ಆಡಳಿತ ನಿಯಂತ್ರಕರೂ ಸಹ ಪುರುಷರೆ. ಅನೇಕ ಸಮಾಜಗಳಲ್ಲಿ ಧರ್ಮ ಹಾಗೂ ಧರ್ಮಗುರುಗಳು ಇಂಥ ವ್ಯಕ್ತಿಗಳ ಮೇಲೆ ಪ್ರಭಾವ ಬೀರುತ್ತಾರಲ್ಲದೆ ಎಲ್ಲದರ ಚಾಲಕ ಶಕ್ತಿಯೂ ಆಗಿರುತ್ತಾರೆ. ಪುರುಷನಿಗೊಂದು ನೀತಿ ಮಹಿಳೆಯರಿಗೊಂದು ನೀತಿಯೆಂಬಂಥ ದ್ವಿವಿಧ ಮಾನದಂಡದ ನೀತಿ ಸಂಹಿತೆಯನ್ನು ಹುಟ್ಟು ಹಾಕಲು, 'ದಾರಿತಪ್ಪಿದ ಮಹಿಳೆ'ಯನ್ನು ಕ್ರೂರವಾಗಿ ನಡೆಸಿಕೊಳ್ಳಲು ಹಾಗೂ ನ್ಯಾಯಸಮ್ಮತವಲ್ಲದಂಥ ಸಂಬಂಧಗಳಿಗೆ ಧರ್ಮಶಾಸ್ತ್ರದ ಸಮರ್ಥನೆ ನೀಡಲು ಧರ್ಮಗಳೂ ಕಾರಣವಾಗಿರುವುದು ಸೂಕ್ಷ್ಮ ವಿಶ್ಲೇಷಣೆಯಿಂದ ಸ್ಪಷ್ಟವಾಗಿರುವ ಅಂಶ.

ಧರ್ಮಶಾಸ್ತ್ರಗಳು ವಿಧಿಸಿದ ವಿಧಿ ನಿಷೇಧಗಳ ಮೇಲೆಯೇ ಆಯಾ ಸಮಾಜದ ಕಾನೂನುಗಳು ರಚನೆಯಾಗಿವೆ. ಇದರಿಂದಾಗಿಯೇ ಬಹುಪಾಲು ಎಲ್ಲ ದೇಶಗಳ ಕಾನೂನುಗಳೂ ಪುರುಷ ಪ್ರಧಾನ ಹಾಗೂ ಬೂರ್ಷ್ವಾ(ಪುರುಷ ಹಾಗೂ ಆರ್ಥಿಕವಾಗಿ ಸಬಲರಾದ ವರ್ಗಕ್ಕೆ ಅನುಕೂಲಕರವಾದ) ಕಾನೂನು ಗಳಾಗಿವೆ. ಹಾಗಾಗಿ ಕುಟುಂಬ, ವಿವಾಹ ಮತ್ತು ವಾರಸುದಾರಿಕೆಗೆ ಸಂಬಂಧಿಸಿದ ಕಾನೂನುಗಳೆಲ್ಲವೂ ಆಸ್ತಿಯ ಮೇಲೆ ಪುರುಷನಿಗಿರುವ ನಿಯಂತ್ರಣದ ಹಿನ್ನೆಲೆಯಲ್ಲಿ ರೂಪುಗೊಂಡವುಗಳಾಗಿವೆ. ದಕ್ಷಿಣ ಏಷಿಯಾದ ಎಲ್ಲ ಕಾನೂನು ಪದ್ಧತಿಗಳೂ ಪುರುಷನನ್ನು ಕುಟುಂಬದ ಮುಖ್ಯಸ್ಥನೆಂದು, ಮಕ್ಕಳ ಸಹಜ ಪೋಷಕನೆಂದು, ಆಸ್ತಿಯ ವಾರಸುದಾರನೆಂದು ಪರಿಗಣಿಸುತ್ತವೆ. ಇದೇ ವ್ಯವಸ್ಥೆಯಲ್ಲಿ ರೂಪುಗೊಂಡ ನ್ಯಾಯಶಾಸ್ತ್ರ, ನ್ಯಾಯಾಧೀಶರು ಹಾಗೂ ವಕೀಲರ ಮನೋಭಾವ ಹಾಗೂ ಕಾನೂನಿನ ವ್ಯಾಖ್ಯೆ ಸಹ ಪುರುಷ ಪ್ರಧಾನವಾದದ್ದೇ ಆಗಿದೆ.

ಸಂವಿಧಾನದಲ್ಲಿ ಸ್ತ್ರೀಪುರುಷ ಸಮಾನತೆಯ ತತ್ತ್ವವನ್ನು ಅಳವಡಿಸಿಕೊಂಡರೂ ವಾಸ್ತವದಲ್ಲಿ ಮಹಿಳೆಯರಿಗೆ ನ್ಯಾಯ ದೊರೆಯದಿರಲು ಕಾರಣ ಸಂವಿಧಾನದ ನಂತರ ಜಾರಿಗೊಂಡಿರುವ ಬಹುಪಾಲು ಎಲ್ಲ ಕಾನೂನುಗಳೂ ಅಂತರ್ಗತ ಸ್ತ್ರೀಪುರುಷ ಅಸಮಾನತೆಯಿಂದ ಕೂಡಿರುವುದಲ್ಲದೆ, ಅವುಗಳ ವ್ಯಾಖ್ಯಾನ ಹಾಗೂ ಅನುಷ್ಠಾನಗಳಲ್ಲಿ ಕೂಡ ಪುರುಷ ಪ್ರಧಾನ ಚಿಂತನೆಯೇ ಕೆಲಸಮಾಡಿರುವುದರಿಂದ. ಹೊರಬಿದ್ದ ತೀರ್ಪುಗಳಲ್ಲಿಯೂ ಸಹ ಈ ಅಸಮಾನತೆಯನ್ನು ಕಾಣಬಹುದು. ಅಲ್ಲದೆ, ಕಾನೂನನ್ನು ಅಕ್ಷರಶಃ ಅನ್ವಯಿಸಿ, ಕಾನೂನಿನ ಪ್ರಕಾರವೇ ನ್ಯಾಯ ಪ್ರದಾನ ಮಾಡಿದ್ದರೂ, ದೀರ್ಘಕಾಲದಿಂದಲೂ ಸಮಾನ ಅವಕಾಶಗಳಿಂದ ವಂಚಿತಳಾಗಿ ಪುರುಷನೊಂದಿಗೆ ಸಮಾನತೆಯನ್ನು ಹಂಚಿಕೊಂಡಿಲ್ಲದ ಮಹಿಳೆಯ ದೃಷ್ಟಿಯಿಂದ ಅಂಥ ನ್ಯಾಯ ವಾಸ್ತವಿಕ ನ್ಯಾಯವಾಗದೆ, ಔಪಚಾರಿಕ ನ್ಯಾಯವಷ್ಟೇ ಆಗಿ ಉಳಿಯುವ ಅಪಾಯವಿದೆ. ಏಕೆಂದರೆ ಕಾನೂನಿನ ದೃಷ್ಟಿಯಲ್ಲಿ ಸಮಾನತೆ ಎಂದರೆ, ಕೇವಲ ಔಪಚಾರಿಕ ಸಮಾನತೆ- ಕಾನೂನನ್ನು ಎಲ್ಲರಿಗೂ ಸಮಾನವಾಗಿ ಅನ್ವಯಿಸುವುದು, ಆದರೆ ವಾಸ್ತವಿಕ ಸಮಾನತೆ ಇದಕ್ಕಿಂತ ಹೆಚ್ಚಾಗಿ ಕಾನೂನು ಬೀರುವ ವಾಸ್ತವಿಕ ಪ್ರಭಾವ ಮತ್ತು ಅದರಿಂದಾಗುವ ಪರಿಣಾಮಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಸಂವಿಧಾನದ ಉಪಬಂಧಗಳನ್ನು ಹಾಗೂ ಅವುಗಳ ಅಡಿಯಲ್ಲಿ ಹೊರಬಿದ್ದ ತೀರ್ಪುಗಳನ್ನು ವಿಶ್ಲೇಷಿಸಬೇಕಾಗುತ್ತದೆ.

ವಿವಾಹ, ವಿಚ್ಛೇದನೆ, ದತ್ತಕ, ಆಸ್ತಿ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಯಾವ ವೈಯಕ್ತಿಕ ಕಾನೂನುಗಳೂ ಸ್ತ್ರೀಯರಿಗೆ ಪುರುಷರೊಂದಿಗೆ ಸಮಾನ ಹಕ್ಕುಗಳನ್ನು ನೀಡಿಲ್ಲ. ಎಲ್ಲ ಧರ್ಮೀಯರಿಗೂ ಅನ್ವಯವಾಗುವ ವರದಕ್ಷಿಣೆ ಹಾಗೂ ಅತ್ಯಾಚಾರಕ್ಕೆ ಸಂಬಂಧಪಟ್ಟ ಕ್ರಿಮಿನಲ್ ಕಾನೂನುಗಳಲ್ಲಿ

ಅಂತರ್ಗವಾಗಿರುವ ಪುರುಷ ಪ್ರಧಾನ ಚಿಂತನೆಗಳೂ ಅವುಗಳ ಅನ್ವಯ ಅನುಷ್ಠಾನಗಳಲ್ಲಿ ಸ್ತ್ರೀಪುರುಷ ತಾರತಮ್ಯಕ್ಕೆ ಕಾರಣವಾಗಿವೆ. ಇವೆಲ್ಲವುಗಳ ಫಲವೆಂದರೆ, ಸ್ತ್ರೀಪುರುಷ ತಾರತಮ್ಯವನ್ನು ಹೋಗಲಾಡಿಸಿ ಮಹಿಳೆಯರಿಗೆ ನ್ಯಾಯದೊರಕಿಸಿಕೊಡಬೇಕೆಂಬ, ಕಾನೂನುಗಳೇ ಅವಳ ಶೋಷಣೆಗೆ ಕಾರಣವಾಗುತ್ತಿರುವುದು ಸತ್ಯವಾದರೂ ವಿಪರ್ಯಾಸ.

ಸ್ತ್ರೀಪುರುಷರ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸಿ ಸ್ತ್ರೀಯರಿಗೆ ಪುರುಷರೊಂದಿಗೆ ಸಮಾನತೆಯನ್ನು ನೀಡಲು ಕಾರಣವಾಗುವ ಮತ್ತೊಂದು ಪ್ರಮುಖ ಅಂಶವೆಂದರೆ, ಆರ್ಥಿಕ ಸ್ವಾತಂತ್ರ್ಯ. ಆದರೆ ಸಂವಿಧಾನ ಜಾರಿಗೆ ಬಂದ ನಂತರ ಜಾರಿಯಾದ ಆಸ್ತಿ ಕಾನೂನಿನಲ್ಲಿಯೂ ಸ್ತ್ರೀಯರಿಗೆ ಸಮಾನ ಹಕ್ಕುಗಳನ್ನು ನೀಡಲಾಗಿಲ್ಲ.

ಸಮಾನತೆಯ ತತ್ತ್ವಗಳನ್ನು ಅಳವಡಿಸಿಕೊಂಡ ಸಂವಿಧಾನ ಜಾರಿಯಾದ ನಂತರ ಬಂದ ಎಲ್ಲ ಕಾನೂನುಗಳೂ ಸ್ತ್ರೀಪುರುಷ ತಾರತಮ್ಯದಿಂದಲೇ ಕೂಡಿವೆ. ಈ ಕಾನೂನುಗಳನ್ನು ಅನ್ವಯಿಸುವ ವ್ಯಾಖ್ಯಾನಿಸುವ ಹಂತದಲ್ಲಿಯೂ ಸಹ ನುಸುಳುವ ಈ ಪುರುಷ ಪ್ರಧಾನ ಚಿಂತನೆಯಿಂದಾಗಿ ಮಹಿಳೆಯರಿಗೆ ಅನೇಕ ಬಾರಿ ನ್ಯಾಯ ದೊರೆಯುವುದಿಲ್ಲ, ದೊರೆತರೂ ಅದು ವಾಸ್ತವಿಕ ನ್ಯಾಯವಾಗಿರುವುದಿಲ್ಲ.

ಎಲ್ಲ ಕಾನೂನುಗಳ ಅಂತಿಮ ಉದ್ದೇಶ ನ್ಯಾಯದೊರಕಿಸಿಕೊಡುವುದೇ ಆಗಿದೆ. ದೇಶದ ಎಲ್ಲ ಕಾನೂನುಗಳ ರಚನೆಯ ಹಿಂದಿರುವ ಉದ್ದೇಶವೂ ನ್ಯಾಯದೊರಕಿಸಿಕೊಡುವುದೇ ಅಥವಾ ದೊರಕಿಸಿ ಕೊಡಬೇಕು ಎಂಬುದೇ ಆಗಿರುತ್ತದೆ. ಆದ್ದರಿಂದ ಕಾನೂನುಗಳನ್ನು ಅನ್ವಯಿಸಿ ಸರಿತಪ್ಪುಗಳ ನಿರ್ಣಯವನ್ನು ಸ್ಥಾನಗಳನ್ನೆ ನ್ಯಾಯ ನೀಡುವ ಆಲಯಗಳು ಎನ್ನುತ್ತೇವೆ. ನ್ಯಾಯವನ್ನು ಎತ್ತಿಹಿಡಿಯುವುದು ಕಾನೂನಿನ ಕರ್ತವ್ಯವಾಗಿದೆ ಎಂಬುದರಿಂದ ಹೀಗೆ ಹೇಳುತ್ತೇವೆ. ಆದರೆ ಅನೇಕ ಬಾರಿ, ಮೇಲೆ ಹೇಳಿದಂತೆ ಕಾನೂನು ರಚನೆಯಲ್ಲಿಯೇ ಅನ್ಯಾಯ ಅಂತರ್ಗತವಾಗಿರುತ್ತದೆ. ಆದರೂ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಆ ಕಾನೂನು ಊರ್ಜಿವಾಗಿರುತ್ತದೆ. ಆದ್ದರಿಂದ 'ಕಾನೂನು' ಏನನ್ನು ವಿಧಿಸುತ್ತದೆ ಅದೇ 'ನ್ಯಾಯ' ಎನ್ನಲಾಗದು. ಹಾಗೆಂದು ಕಾನೂನು ಮತ್ತು ನ್ಯಾಯವನ್ನು ಸಂಪೂರ್ಣವಾಗಿ ಬೇರೆ ಮಾಡಲೂ ಆಗದು.

ಮನುಷ್ಯನಿಂದ ಮನುಷ್ಯನಿಗೆ ಲೆಕ್ಕವಿಲ್ಲದಷ್ಟು ಅನ್ಯಾಯಗಳು ಆಗುತ್ತಲೇ ಇವೆ ಎಂಬುದಕ್ಕಾಗಿ ಇಂದಿನ ನಾಗರಿಕ ಸಮಾಜಗಳು 'ನ್ಯಾಯ' ಒದಗಿಸಲು ಒಟ್ಟಾರೆಯಾಗಿ ಪ್ರಯತ್ನಿಸುತ್ತಿವೆ. ಸಮಾಜಗಳು, ಸಂಬಂಧಗಳು, ಸಂಕೀರ್ಣವಾಗುತ್ತ ಹೋದಂತೆ, ಈ ಸಮಸ್ಯೆ ಬೃಹದಾಕಾರವಾಗಿ ಬೆಳೆಯುತ್ತಿದೆ. ಅನ್ಯಾಯ ಹೆಚ್ಚಾದಷ್ಟೂ ನ್ಯಾಯಕ್ಕಾಗಿ ಹುಡುಕಾಟ, ಹೋರಾಟ ತೀವ್ರವಾಗುತ್ತದೆ.

ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ನ್ಯಾಯಾಂಗಕ್ಕೆ ಅತ್ಯುನ್ನತ ಸ್ಥಾನವಿದೆ. ಇದಕ್ಕೆ ಕಾರಣ ಅದು ಶ್ರೀಸಾಮಾನ್ಯರಿಗೂ 'ನ್ಯಾಯ' ದೊರಕಿಸಿಕೊಡುವ ಒಂದು ವ್ಯವಸ್ಥೆ ಎಂಬುದು. ಈ ನ್ಯಾಯಾಂಗ

'ಪ್ರಭುತ್ವ' ಎಂದರೆ ಸರ್ಕಾರವು ಜಾರಿಗೊಳಿಸುವ ಕಾನೂನುಗಳನ್ನು ಅನುಸರಿಸಿ ನ್ಯಾಯವಿತರಣೆ ಮಾಡುತ್ತದೆ. ಎಂದರೆ, 'ನ್ಯಾಯ' ಎಂಬ ಪರಿಕಲ್ಪನೆಯ ಅಮೂರ್ತತೆಯನ್ನು ಹಾಗೂ ಅದಕ್ಕಿರುವ ವ್ಯಾಖ್ಯಾನಗಳನ್ನು ಸೀಮಿತಗೊಳಿಸಿ 'ನ್ಯಾಯ' ಕಾನೂನಿಗನುಗುಣವಾಗಿ ಇರಬೇಕು ಮತ್ತು ಇರುತ್ತದೆ ಎಂಬುದನ್ನು ಒಪ್ಪಿಕೊಂಡು, ನ್ಯಾಯ ಮತ್ತು ಕಾನೂನುಗಳಿಗೆ ಸಂಬಂಧಕಲ್ಪಿಸಬೇಕಾಗುತ್ತದೆ. ಮತ್ತು 'ನ್ಯಾಯ'ದ ಅನ್ವೇಷಣೆ ಕಾನೂನಿನ ಮೂಲ ಉದ್ದೇಶವಾಗಿರುತ್ತದೆ. ಹೀಗಾಗಿ ಕಾನೂನು ಕ್ರಮದ ಪೂರ್ಣ ಉದ್ದೇಶವೇ ನ್ಯಾಯಯುತವಾದ ತೀರ್ಮಾನಕ್ಕೆ ಬರುವುದು. ಆಯಾ ಸಮಯದಲ್ಲಿರುವ ಕಾನೂನುಗಳಿಗೆ ಅನುಸಾರವಾಗಿ ವ್ಯಕ್ತಿಗಳ ನಡುವೆ ಹಾಗೂ ವ್ಯಕ್ತಿ ಮತ್ತು ಸರ್ಕಾರದ ನಡುವೆ ಉಂಟಾಗುವ ವಿವಾದಗಳನ್ನು ನ್ಯಾಯಯುತವಾಗಿ ಬಗೆಹರಿಸುವುದು ನ್ಯಾಯಾಂಗ, ಎಂದರೆ ನ್ಯಾಯಾಧೀಶರು ನ್ಯಾಯಾಲಯಗಳಲ್ಲಿ ಪರ ವಿರುದ್ಧ ಸಾಕ್ಷಿಗಳ ಉತ್ತರಗಳನ್ನು ಆಲಿಸಿ, ಸಾಕ್ಷ್ಯಗಳನ್ನು ಪರಿಶೀಲಿಸಿ ಭಯಮುಕ್ತರಾಗಿ ನಿಷ್ಪಕ್ಷಪಾತವಾಗಿ ತೀರ್ಮಾನ ನೀಡಬೇಕು. ಕೆಲವು ಸಂದರ್ಭಗಳಲ್ಲಿ ಎರಡು ಪಕ್ಷಕಾರರೂ ತಮ್ಮ ಪರವಾಗಿ ಆಗುವ ತೀರ್ಮಾನವೇ ನ್ಯಾಯಯುತವಾದದ್ದು ಎಂದು ಅನೇಕ ಬಾರಿ ಭಾವಿಸುವುದರಿಂದ, ನ್ಯಾಯಾಧೀಶರ ತೀರ್ಪು ಹೊರಬಿದ್ದ ನಂತರವೂ ಅದು ಒಬ್ಬ ಪಕ್ಷಕಾರನ ದೃಷ್ಟಿಯಿಂದ 'ಅನ್ಯಾಯದ' ತೀರ್ಮಾನವಾಗಿರಲು ಸಾಧ್ಯ ಅಲ್ಲದೆ, ಸಮಾಜ ಒಪ್ಪಿರುವ 'ನ್ಯಾಯ'ದ ಮಾನದಂಡದಿಂದಲೂ 'ಅನ್ಯಾಯದ' ತೀರ್ಪು ಆಗಿರಲು ಸಾಕು. ಹೀಗೆ ನ್ಯಾಯ ಸಾಧಿಸಬೇಕು ಎಂಬ ಗುರಿಯಲ್ಲಿಯೇ ವೈಫಲ್ಯದ ಸಾಧ್ಯತೆ ಅಂತರ್ಗತವಾಗಿರುತ್ತದೆ. ಕಾನೂನಿನ ಮೂಲಕ ನ್ಯಾಯ ದೊರಕಿಸಿಕೊಡಬೇಕೆನ್ನುವ ಪ್ರಯತ್ನಕ್ಕೆ ತೊಡಕುಗಳು ಅನೇಕ. ಅವುಗಳಲ್ಲಿ ಮುಖ್ಯವಾದುವೆಂದರೆ, ಕಾನೂನು ರಚನೆಯಲ್ಲಿನ ದೋಷ; ಕಾನೂನಿನ ಅನ್ವಯ ಹಾಗೂ ವ್ಯಾಖ್ಯಾನದಲ್ಲಿ ದೋಷ; ಕಾನೂನು ರಚನೆಯ ಹಿಂದಿನ ಉದ್ದೇಶವನ್ನು ಪರಿಗಣಿಸದೆಯೇ ಕಾನೂನನ್ನು ಅಕ್ಷರಶಃ ಅನ್ವಯಿಸುವ ದೋಷ. ಆದ್ದರಿಂದ ಬದಲಿಸಲಾಗದ ಅಧಿಕೃತ ತೀರ್ಮಾನ ನ್ಯಾಯಯುತವಾದುದು ಆಗಿಲ್ಲದಿರಬಹುದು. ಹಾಗೆಯೇ ಒಂದು ಕಾನೂನನ್ನು ಕ್ರಮಬದ್ಧವಾದ ರೀತಿಯಲ್ಲಿ ಹೊರಡಿಸಿದ್ದರೂ, ಅದು ಅಧಿಕೃತವಾಗಿದ್ದರೂ ಅದು ನ್ಯಾಯಯುತವಾದದ್ದು ಆಗಿಲ್ಲದಿರಬಹುದು. ಈ ದೃಷ್ಟಿಯಿಂದ ನ್ಯಾಯ ಎಂದರೆ ಯಾವುದು, ನಮ್ಮ ಧರ್ಮಶಾಸ್ತ್ರಜ್ಞರ ಹಾಗೂ ಪಾಶ್ಚಾತ್ಯ ದಾರ್ಶನಿಕರ ನ್ಯಾಯದ ಪರಿಕಲ್ಪನೆ ಏನಿತ್ತು, ನ್ಯಾಯ ಹಾಗೂ ಕಾನೂನುಗಳ ಸಂಬಂಧ ಹೇಗಿರಬೇಕು ಎಂಬುದರ ತಿಳಿವಳಿಕೆ ಮೇಲಿನ ಅಂಶಗಳ ವಿಶ್ಲೇಷಣೆಗೆ ಅಗತ್ಯವಾಗುತ್ತದೆ.

## ಅಧ್ಯಯನದ ಉದ್ದೇಶ

ಕಾನೂನು ಮತ್ತು ನ್ಯಾಯದ ಪರಿಕಲ್ಪನೆಗಳ ನಡುವಿನ ಸಂಬಂಧ ಹಾಗೂ ವ್ಯತ್ಯಾಸಗಳನ್ನು ಗುರುತಿಸುವುದು.

ಸಂವಿಧಾನದ ಉಪಬಂಧಗಳ ಜಾರಿಯಲ್ಲಿ ಹೊರಡಿದ್ದ ತೀರ್ಪುಗಳ ಹಿನ್ನೆಲೆಯಲ್ಲಿ ವಾಸ್ತವಿಕ ಹಾಗೂ ಔಪಚಾರಿಕ ಸಮಾನತೆಯ ಪರಿಕಲ್ಪನೆಯನ್ನು ವಿಶ್ಲೇಷಿಸುವುದು. ಪುರುಷ ಪ್ರಧಾನ ಚಿಂತನೆಯ ಸಮಾಜದಿಂದ ರಚನೆಯಾದ ಕಾನೂನುಗಳಲ್ಲಿ ಅಂತರ್ಗವಾಗಿರುವ ಅಸಮಾನತೆಯನ್ನು ಹಾಗೂ ಅವರಿಂದಾಗುವ ಅನ್ಯಾಯವನ್ನು ಗುರುತಿಸುವುದು.

ಕಾನೂನುಗಳ ವ್ಯಾಖ್ಯಾನ ಹಾಗೂ ನ್ಯಾಯ ನೀಡಿಕೆಯ ಹಂತದಲ್ಲಿ ಮೇಲುಗೈಯಾಗುವ ಪುರುಷ ಪ್ರಧಾನ ಚಿಂತನೆಯಿಂದ ಕಾನೂನಿನ ಆಶಯ ಹಿನ್ನೆಲೆಗೆ ಸರಿದು ಕಾನೂನಿನ ಅಕ್ಷರಶಃ ವ್ಯಾಖ್ಯಾನದಿಂದಾಗಿ ಮಹಿಳೆಗೆ ಎಷ್ಟು ಹಂತಗಳಲ್ಲಿ ಅನ್ಯಾಯವಾಗುತ್ತಿದೆ ಎಂಬುದನ್ನು ತೀರ್ಪು ಹೊಂದಿದ್ದ ಪ್ರಕರಣಗಳನ್ನಾಧರಿಸಿ ಅಧ್ಯಯನ ಮಾಡುವುದು.

**ಸಂಶೋಧನಾ ಚೌಕಟ್ಟು**

ಮಾಹಿತಿಯ ನಿರೂಪಣೆ ಮತ್ತು ವಿಶ್ಲೇಷಣೆಯನ್ನು ಮೂಲ ಕಾನೂನುಗಳ ಅಧ್ಯಯನ ಹಾಗು ತೀರ್ಪು ಹೊರಬಿದ್ದ ಪ್ರಕರಣಗಳ ವಿಶ್ಲೇಷಣೆಯ ಮೂಲಕ ಮಾಡಲಾಗಿದೆ. ನಮ್ಮ ಸಂವಿಧಾನ ಸ್ತ್ರೀಪುರುಷರಿಗೆ ಸಮಾನತೆಯನ್ನು ನೀಡಿದರೂ ಅನಂತರ ಬಂದ ಕಾನೂನುಗಳು

೧. ರಚನೆಯ ಹಂತ

೨. ವ್ಯಾಖ್ಯಾನದ ಹಂತ ಹಾಗೂ

೩. ನ್ಯಾಯ ನೀಡಿಕೆಯ ಸಂದರ್ಭದಲ್ಲಿ ಕಾನೂನನ್ನು ಅನ್ವಯಗೊಳಿಸುವ ಹಂತ. ಈ ಮೂರು ಹಂತಗಳಲ್ಲಿ ಸಮಾನತೆಯನ್ನು ನೀಡುವಲ್ಲಿ ಅನೇಕ ಸಂದರ್ಭಗಳಲ್ಲಿ ವಿಫಲಗೊಂಡಿವೆ.

ನ್ಯಾಯ ದೊರೆತಿದೆಯೆಂದು ಭಾವಿಸಲಾದ ಕೆಲವು ಪ್ರಕರಣಗಳಲ್ಲಿಯೂ ಸಹ ದೊರೆತ ನ್ಯಾಯ ವಾಸ್ತವಿಕ ನ್ಯಾಯವಾಗದೆ ಔಪಚಾರಿಕ ನ್ಯಾಯವಾಗಿದೆ. ನ್ಯಾಯನೀಡಿಕೆ ಈ ಅಪಾಯದಿಂದಲೂ ಮುಕ್ತವಾಗಿರಬೇಕಾಗುತ್ತದೆ. ಈ ಅಧ್ಯಯನದಿಂದ ಹೊರಬರುವ ಅಂಶಗಳು ಮಹಿಳೆಯರಿಗೆ ವಾಸ್ತವಿಕ ನ್ಯಾಯವನ್ನು ದೊರಕಿಸುವ ನಿಟ್ಟನಲ್ಲಿ ಪ್ರಯತ್ನಿಸುವವರಿಗೆ ಮಾರ್ಗದರ್ಶಿಯಾಗಬಲ್ಲುದು.

**ಅಧ್ಯಯನದ ವ್ಯಾಪ್ತಿ**

ಪ್ರಮುಖ ಉದ್ದೇಶಗಳನ್ನು ಈ ಮುಂದಿನ ವಿಧಾನದಲ್ಲಿ ಅಧ್ಯಯನವನ್ನು ಕೈಗೊಳ್ಳುವ ಮೂಲಕ ಸಾಧಿಸಲಾಗುತ್ತದೆ. ಈ ಉದ್ದೇಶಗಳಿಗೆ ಅನುಸಾರವಾಗಿ ಪ್ರತ್ಯೇಕ ಅಧ್ಯಾಯಗಳನ್ನಾಗಿ ಮಹಾಪ್ರಬಂಧವನ್ನು ವಿನ್ಯಾಸಗೊಳಿಸಲಾಗುತ್ತದೆ. ಮೊದಲನೆಯ ಅಧ್ಯಾಯದಲ್ಲಿ ಕಾನೂನು ಮತ್ತು ನ್ಯಾಯದ ಪರಿಕಲ್ಪನೆಗಳ ನಡುವಿನ ಸಂಬಂಧ ಹಾಗೂ ವ್ಯತ್ಯಾಸಗಳನ್ನು ಗುರುತಿಸುವುದು.

ನಮ್ಮ ಸಮಾಜ ವ್ಯವಸ್ಥೆಯಲ್ಲಿ 'ನ್ಯಾಯ' ಮತ್ತು 'ಕಾನೂನು' ಬೇರ್ಪಡಿಸಲಾಗದಂಥ ಎರಡು ಪರಿಕಲ್ಪನೆಗಳು. 'ನ್ಯಾಯ' ಎಂಬುದು ಸಮಾಜ ತಲುಪಲೆತ್ನಿಸುವ ಪರಮೋತ್ಕೃಷ್ಟ ಮೌಲ್ಯ. ನಮ್ಮ ಶಾಸ್ತ್ರಗಳಲ್ಲಿ ನ್ಯಾಯವನ್ನು ಧರ್ಮದೊಂದಿಗೆ ಮೇಳೈಸಿ ನೋಡಿದ್ದಾರೆ. ಇದೇ ಇಡೀ ವಿಶ್ವದ ಅಡಿಗಲ್ಲು ಎಂದೂ ಹೇಳಿದ್ದಾರೆ. ಹಾಗಾಗಿ ನ್ಯಾಯದ ಪರಿಕಲ್ಪನೆ ಕಾನೂನಿನ ಪರಿಕಲ್ಪನೆಗಿಂತ ಹಳೆಯದು. 'ಕಾನೂನಿ'ನ ಮೂಲಕ ಸಾಧಿಸಲೆಳಸುವುದು 'ನ್ಯಾಯ'ವನ್ನು. ಆದರೆ 'ನ್ಯಾಯ' ದಪರಿಕಲ್ಪನೆ ಅಮೂರ್ತವಾದುದು ಮತ್ತು ಅದು ಕಾನೂನು, ಹಕ್ಕು, ಸ್ವಾತಂತ್ರ್ಯ, ಸಮಾನತೆ, ಶಿಕ್ಷೆ ಮುಂತಾದ ಪರಿಕಲ್ಪನೆಗಳಿಂದ ಅವ್ಯತವಾದದ್ದು. ಈ ಪರಿಕಲ್ಪನೆಗಳು ಪರಸ್ಪರ ಸಂಬಂಧಹೊಂದಿದ್ದು, ಒಂದರಿಂದ ಒಂದನ್ನು ಬೇರ್ಪಡಿಸಲಾಗದಂತೆ ಬೆಸೆದುಕೊಂಡಿವೆ. ಈ ಎಲ್ಲ ಪರಿಕಲ್ಪನೆಗಳೂ ಮೂಲತಃ ನೈತಿಕ ಪರಿಕಲ್ಪನೆಗಳೇ ಆಗಿವೆ. ಆದ್ದರಿಂದ ಈ ಎರಡು ಪರಿಕಲ್ಪನೆಗಳಿಗೂ ಮೂಲ ಧರ್ಮ. ಇದುವರೆಗೆ ಬಂದಿರುವ ಧರ್ಮದ ವ್ಯಾಖ್ಯಾನವೆಲ್ಲವೂ ಪರ್ಯವಸಾನಗೊಳ್ಳುವುದೂ ನ್ಯಾಯದ ಪರಿಕಲ್ಪನೆಯಲ್ಲಿ. ಆದ್ದರಿಂದ ಸಹಜ ನ್ಯಾಯಕ್ಕೆ ಧರ್ಮವೇ ಅಡಿಪಾಯ. ನ್ಯಾಯವೇ ಕಾನೂನಿನ ಧರ್ಮಸಮ್ಮತ ಗುರಿ. ಸಮಾನತೆ-ನ್ಯಾಯ ದೇಗುಲದ ಒಂದು ಕಂಬವಾದರೆ ನ್ಯಾಯಪರತೆ ಅದರ ಮತ್ತೊಂದು ಕಂಬ. ನಿಷ್ಪಕ್ಷಪಾತತೆ ಈ ನ್ಯಾಯಪರತೆಯ ಅಡಿಗಲ್ಲು. ನ್ಯಾಯ ಎಂಬುದು ಸಾಧಿಸಬೇಕಾದ ಒಂದು ಅದರ್ಶ ಧ್ಯೇಯ. ಅದನ್ನು ಸಾಧಿಸುವುದು ಕಷ್ಟವಾದರೂ ಅದು ಧ್ರುವ ತಾರೆಯಂತೆ ನಮಗೆ ದಿಕ್ಕು ತೋರಬಹುದು. ಇದಕ್ಕೆ ನೆರವಾಗುವುದು ಪ್ರಸ್ತುತ ಸಮಾಜದಲ್ಲಿ ಜಾರಿಯಲ್ಲಿರುವ ಕಾನೂನುಗಳು. ಜಾರಿಯಲ್ಲಿರುವ ಈ ಕಾನೂನುಗಳು ಜನತೆಗೆ 'ನ್ಯಾಯ'ವನ್ನು ಈ ಅರ್ಥದಲ್ಲಿ ದೊರಕಿಸುತ್ತಿದೆಯೇ ಎಂಬುದು ಈಗಿನ ಪ್ರಶ್ನೆ. ಈ ಪ್ರಶ್ನೆಗೆ ಉತ್ತರ ಹುಡುಕಲು ಹೊರಡುವ ಮೊದಲು 'ನ್ಯಾಯ'ದ ಪರಿಕಲ್ಪನೆಯ ಅಧ್ಯಯನ ಅಗತ್ಯವಾಗುತ್ತದೆ. ಮೊದಲನೆಯ ಅಧ್ಯಾಯ 'ನ್ಯಾಯಪರಿಕಲ್ಪನೆ'ಯಲ್ಲಿ ಇಂಥ ಅಧ್ಯಯನವನ್ನು ಕೈಗೊಳ್ಳಲಾಗುತ್ತದೆ.

ಎರಡನೆಯ ಅಧ್ಯಾಯದಲ್ಲಿ ಸಂವಿಧಾನದ ಉಪಬಂಧಗಳ ಜಾರಿಯಲ್ಲಿ ಹೊರಬಿದ್ದ ತೀರ್ಪುಗಳ ಹಿನ್ನೆಲೆಯಲ್ಲಿ ವಾಸ್ತವಿಕ ಹಾಗೂ ಔಪಚಾರಿಕ ಸಮಾನತೆಯ ಪರಿಕಲ್ಪನೆಯನ್ನು ವಿಶ್ಲೇಷಿಸುವುದು.

ನಮ್ಮ ಸಂವಿಧಾನದಲ್ಲಿ ಸ್ತ್ರೀಪುರುಷ ಸಮಾನತೆಯ ತತ್ವವನ್ನು ಅಳವಡಿಸಿಕೊಳ್ಳುವ ಮೂಲಕ ಮಹಿಳೆಯ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪ್ರಗತಿಗೆ ಅವಕಾಶ ಮಾಡಿಕೊಡಲಾಗಿದೆ. ಸಂವಿಧಾನದ ೧೪,೧೫ ಮತ್ತು ೧೬ನೇ ಅನುಚ್ಛೇದಗಳಲ್ಲಿ ಅಡಕವಾಗಿರುವ ಮೂಲಭೂತ ಹಕ್ಕುಗಳು ಮಹಿಳೆಗೆ ಕಾನೂನಿನ ದೃಷ್ಟಿಯಲ್ಲಿ ಸಮಾನತೆ, ಪುರುಷರೊಂದಿಗೆ ಸಮಾನತೆ ಹಾಗೂ ಸಾರ್ವಜನಿಕ ಉದ್ಯೋಗವೂ ಒಳಗೊಂಡಂತೆ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಸಮಾನ ಅವಕಾಶಗಳನ್ನು ನೀಡುತ್ತದೆ.

ಆದರೆ ಸಂವಿಧಾನದ ಮೂಲಕ ನೀಡಲಾಗಿರುವ ಈ ಸಮಾನತೆ ಕೇವಲ ಔಪಚಾರಿಕ ಸಮಾನತೆಯಾಗಿದೆ ಎಂಬುದು ಈಗಿನ ಸಮಾಜದಲ್ಲಿ ಮಹಿಳೆ ಒಳಗಾಗುತ್ತಿರುವ ಶೋಷಣೆಯನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಕಾನೂನಿನ ಕಣ್ಣಿನಲ್ಲಿ ಸ್ತ್ರೀಪುರುಷರ ನಡುವೆ ಸಮಾನತೆಯಿದ್ದರೂ ವಾಸ್ತವದಲ್ಲಿ ಸ್ತ್ರೀಪುರುಷರ ಸಮಾನತೆ ಒಂದು ಮರೀಚಿಕೆಯಾಗಿಯೇ ಉಳಿದಿದೆ. ಇದಕ್ಕೆ ಕಾರಣವೂ ನಮ್ಮ ಕಾನೂನು ವ್ಯವಸ್ಥೆಯಲ್ಲಿಯೇ ಇದೆ. ಏಕೆಂದರೆ ಕಾನೂನಿನ ದೃಷ್ಟಿಯಲ್ಲಿ ಸಮಾನತೆ ಎಂದರೆ ಕೇವಲ ಔಪಚಾರಿಕ ಸಮಾನತೆ- ಕಾನೂನನ್ನು ಸಮಾನವಾಗಿ ಅನ್ವಯಿಸುವುದು. ಆದರೆ ವಾಸ್ತವಿಕ ಸಮಾನತೆ ಇದಕ್ಕಿಂತ ಹೆಚ್ಚಾಗಿ ಕಾನೂನು ಬೀರುವ ವಾಸ್ತವಿಕ ಪ್ರಭಾವ ಮತ್ತು ಅದರಿಂದಾಗುವ ಪರಿಣಾಮ ಇವುಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಸಂವಿಧಾನದ ಉಪಬಂಧಗಳನ್ನು ಹಾಗೂ ಅವುಗಳ ಅಡಿಯಲ್ಲಿ ಹೊರಬಿದ್ದ ತೀರ್ಪುಗಳನ್ನು ವಿಶ್ಲೇಷಿಸಲಾಗುತ್ತದೆ.

ಮೂರನೆಯ ಅಧ್ಯಾಯದಲ್ಲಿ ವಿವಾಹ, ವಿಚ್ಛೇದನೆ, ದತ್ತಕ, ಆಸ್ತಿ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಆಯಾ ಧರ್ಮದವರಿಗೆ ಸಂಬಂಧಿಸಿದಂತೆ ಅನ್ವಯವಾಗುವ ವೈಯಕ್ತಿಕ ಕಾನೂನುಗಳಲ್ಲಿ, ಹಾಗೂ ಮಹಿಳೆಯನ್ನು ಇಂದು ಅತಿಹೆಚ್ಚಿನ ಶೋಷಣೆಗೆ ಒಳಪಡಿಸುತ್ತಿರುವ ವರದಕ್ಷಿಣೆ ಹಾಗೂ ಅವಳ ಮೇಲೆ ಎಸಗಲಾಗುತ್ತಿರುವ ಅತ್ಯಂತ ಹೇಯ ಅಪರಾಧವಾದ ಅತ್ಯಾಚಾರ ಕಾನೂನುಗಳಲ್ಲಿ ಅಂತರ್ಗತ ವಾಗಿರುವ ಪುರುಷ ಪ್ರಧಾನ ಚಿಂತನೆಗಳನ್ನು ಅವು ಮಹಿಳೆಯರಿಗೆ ಪ್ರತಿಕೂಲವಾಗಿ ಪರಿಣಮಿಸುವ ಸಾಧ್ಯತೆಗಳನ್ನು ವಿಶ್ಲೇಷಿಸಲಾಗಿದೆ. ವೈಯಕ್ತಿಕ ಕಾನೂನುಗಳ ಅಡಿಯಲ್ಲಿನ ಯಾವುದೇ ಪ್ರಕರಣ ಸಿವಿಲ್ ಕಾನೂನಿನ ವ್ಯಾಪ್ತಿಗೆ ಸೇರಿದರೆ ವರದಕ್ಷಿಣೆ ಹಾಗೂ ಅತ್ಯಾಚಾರಕ್ಕೆ ಸಂಬಂಧಿಸಿದ ಪ್ರಕರಣಗಳು ಕ್ರಿಮಿನಲ್ (ಅಪರಾಧಿಕ) ಅಪರಾಧಗಳೆನಿಸಿಕೊಳ್ಳುತ್ತವೆ. ಅಲ್ಲದೆ ಈ ಎರಡು ಅಪರಾಧಗಳನ್ನು ಹೊರತುಪಡಿಸಿದಂತೆ ಕೌಟುಂಬಿಕ ವ್ಯಾಜ್ಯಗಳೆಲ್ಲ ಕುಟುಂಬ ನ್ಯಾಯಾಲಯಗಳ ವ್ಯಾಪ್ತಿಗೆ ಒಳಪಡುತ್ತವೆ. ಹಾಗಾಗಿ, ಸಾಕ್ಷ್ಯ, ವಿಚಾರಣೆ, ತನಿಖೆ, ಶಿಕ್ಷೆ ಎಲ್ಲದರಲ್ಲೂ ಸಿವಿಲ್ ಹಾಗೂ ಕ್ರಿಮಿನಲ್ ಪ್ರಕರಣಗಳ ನಡುವೆ ವ್ಯತ್ಯಾಸವಿರು ವುದರಿಂದ ಇವೆರಡನ್ನೂ ಒಂದೇ ಅಧ್ಯಾಯದ ಅಡಿಯಲ್ಲಿ ಪ್ರತ್ಯೇಕ ಉಪ ಅಧ್ಯಾಯಗಳನ್ನಾಗಿ ವಿಂಗಡಿಸಿ ವಿಶ್ಲೇಷಿಸಲಾಗುತ್ತದೆ.

ನಾಲ್ಕನೆಯ ಅಧ್ಯಾಯದಲ್ಲಿ ಮಹಿಳೆಯ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಅವಳಿಗಿರುವ ಆರ್ಥಿಕ ಸ್ವಾವಲಂಬನೆ ಬಹುಮುಖ್ಯ ಪಾತ್ರವಹಿಸುತ್ತದೆ. ಆದರೆ ಅವಳಿಗೆ ಆಸ್ತಿ ಹಾಗೂ ಕೃಷಿ ಭೂಮಿಯಲ್ಲಿ ಸೀಮಿತ ಹಕ್ಕು ನೀಡುವ ಮೂಲಕ ಮಹಿಳೆಯನ್ನು ನಿಯಂತ್ರಣಕ್ಕೊಳಪಡಿಸುವ ಹಾಗೂ ಶೋಷಣೆಯನ್ನು ವಿರೋಧಿಸುವ ಸಾಮರ್ಥ್ಯವನ್ನು ಇಲ್ಲವಾಗಿಸುವ ಪುರುಷ ಪ್ರಧಾನ ಚಿಂತನೆಗಳನ್ನು ವಿಶ್ಲೇಷಿಸಲಾಗುತ್ತದೆ. ಎಲ್ಲ ಅಧ್ಯಾಯಗಳಲ್ಲಿಯೂ ಜಾರಿಯಲ್ಲಿರುವ ಕಾನೂನುಗಳ ರಚನೆಯ

ಹಂತದಲ್ಲಿಯೇ ಅವುಗಳಲ್ಲಿ ಸೇರಿಹೋಗಿರುವ ಪುರುಷ ಪ್ರಧಾನ ಚಿಂತನೆಯ ಬಗೆಯನ್ನು ವಿಶ್ಲೇಷಣೆ ಮಾಡುವ ಮೂಲಕ ಯಾವ ಯಾವ ಸ್ತರಗಳಲ್ಲಿ ಮಹಿಳೆ ಶೋಷಣೆಗೆ ಒಳಗಾಗುತ್ತಿದ್ದಾಳೆ ಎಂಬುದನ್ನು ವಿವರಿಸಲಾಗುತ್ತದೆ.

ಐದನೆಯ ಅಧ್ಯಾಯದಲ್ಲಿ ಮೇಲಿನ ಕಾನೂನುಗಳ ಮೇರೆಗೆ ತೀರ್ಪು ನೀಡುವಾಗ ನ್ಯಾಯಾಧೀಶರ ಪುರುಷ ಪ್ರಧಾನ ಚಿಂತನೆಗಳ ಜೊತೆಯಲ್ಲಿಯೇ ಮಹಿಳೆಯರನ್ನು ನ್ಯಾಯವಂಚಿತಳನ್ನಾಗಿಸುವ, ಕಾನೂನು ರಚನೆಯಲ್ಲಿನ ತಾರತಮ್ಯಗಳನ್ನು ಹಾಗೂ ಲೋಪದೋಷಗಳನ್ನು, ಮತ್ತು ತನಿಖಾ ಕ್ರಮದ ಲೋಪಗಳನ್ನು ಎತ್ತಿ ತೋರಿಸುವ ತೀರ್ಪುಗಳನ್ನು ವಿಶ್ಲೇಷಣೆ ಮಾಡುವ ಮೂಲಕ ಅಧ್ಯಯನ ಮಾಡಲಾಗುತ್ತದೆ ಐದನೆಯ ಅಧ್ಯಾಯ ಮೊದಲ ನಾಲ್ಕು ಅಧ್ಯಾಯಗಳಲ್ಲಿ ನಿರೂಪಿಸಲಾದ ಮೂಲ ಕಾನೂನುಗಳ ಮುಂದುವರಿದ ವಿಶ್ಲೇಷಣೆಯಾಗುತ್ತದೆ.

**ಅಧ್ಯಯನದ ಅವಶ್ಯಕತೆ ಮತ್ತು ಪ್ರಾಮುಖ್ಯತೆ**

ಇದುವರೆಗೆ ರಚನೆಯಾಗಿರುವ ಕಾನೂನುಗಳಲ್ಲಿ ಪುರುಷಪ್ರಧಾನ ಚಿಂತನೆಯ ಪ್ರಭಾವವಿರುವುದು, ಅವು ಹೇಗೆ ಮಹಿಳೆಯರಿಗೆ ಪ್ರತಿಕೂಲವಾಗಿದೆ ಎಂಬುದನ್ನು ಅಧ್ಯಯನ ಮಾಡಿದಾಗ ಸ್ಪಷ್ಟವಾಗಿ ತಿಳಿಯುತ್ತದೆ. ೧೯೭೪ರಲ್ಲಿ ರಚನೆಯಾದ 'ಭಾರತದಲ್ಲಿನ ಮಹಿಳೆಯ ಸ್ಥಾಮಾನ ಅಧ್ಯಯನ ಸಮಿತಿ' ಕೂಲಂಕುಷವಾಗಿ ಅಧ್ಯಯನ ಮಾಡಿ, ಪೂರಕ ಅಂಕಿ ಅಂಶಗಳ ಸಹಿತಿ 'ಸಮಾನತೆಯತ್ತ' ಎಂಬ ವರದಿಯನ್ನು ಸಲ್ಲಿಸಿದೆ. ಮಹಿಳಾ ಸಂಘಟನೆಗಳು ಅಗಿಂದಾಗ್ಗೆ ಇಂಥ ಪ್ರತಿಕೂಲ ಸಂಬಂಧಗಳ ವಿರುದ್ಧ ಪ್ರತಿಭಟಿಸಿದುದರ ಹಾಗೂ ಅಗಿಂದಾಗ್ಗೆ ಕಾನೂನು ಅಯೋಗಗಳು ಮಾಡಿದ ಶಿಫಾರಸ್ಸುಗಳ ಪರಿಣಾಮವಾಗಿ ಕಾನೂನುಗಳಿಗೆ ಕೆಲವೊಂದು ತಿದ್ದುಪಡಿಗಳನ್ನು ಮಾಡಲಾಗಿದೆ.

ಸಂವಿಧಾನ ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ಕೊಟ್ಟಿದ್ದರೂ, ವ್ಯಕ್ತಿಯ ಜೀವನದಲ್ಲಿ ಅತ್ಯಂತ ಮಹತ್ವದ ವಿಷಯಗಳಿಗೆ ಎಂದರೆ, ವಿವಾಹ ವಿಚ್ಛೇದನೆ, ದತ್ತಕ, ಜೀವನಾಂಶ, ಆಸ್ತಿ ಹಕ್ಕು ಮುಂತಾದವುಗಳಿಗೆ ಸಂಬಂಧಿಸಿದಂತೆ ಆಯಾ ಧರ್ಮಕ್ಕೆ ಪ್ರತ್ಯೇಕವಾದ ವೈಯಕ್ತಿಕ ಕಾನೂನುಗಳು ಅನ್ವಯಿಸುವುದರಿಂದ ಮತ್ತು ಈ ಎಲ್ಲ ವೈಯಕ್ತಿಕ ಕಾನೂನುಗಳೂ ಮಹಿಳೆಗೆ ಎರಡನೇ ಸ್ಥಾನವನ್ನೇ ಕೊಟ್ಟಿರುವುದುರಿಂದ ಇಲ್ಲಿ ಸಮಾನತೆ ಒಂದು ಭ್ರಮೆಯಾಗಿ, ಸಾಧಿಸಲಾಗದ ಕಲ್ಪನೆಯಾಗಿ ಉಳಿದಿದ್ದರೆ, ಇವುಗಳ ಜೊತೆಗೆ ಮಹಿಳೆ ಇನ್ನೊಂದು ಹಂತದಲ್ಲಿ ಅನ್ಯಾಯಕ್ಕೆ ಗುರಿಯಾಗುತ್ತಿದ್ದಾಳೆ. ಅದೇ ಈ ಕಾನೂನುಗಳನ್ನು ಅನ್ವಯಿಸಿ ತೀರ್ಪನ್ನು ನೀಡುವ ಹಂತ.

ಕಾನೂನು ನೀಡುವ ಎಲ್ಲ ಹಕ್ಕುಗಳೂ ಮಹಿಳೆಯರಿಗೆ ದೊರಕುವಂತೆ ಮಾಡಿ, ಅವರ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಅನೇಕ ಮಹಿಳಾ ಸಂಘಟನೆಗಳು ಶ್ರಮಿಸುತ್ತಿವೆ. ಆರ್ಥಿಕ ತೊಂದರೆಗಳಿಂದ ಕಾನೂನಿನ

ಮೊರೆಹೋಗಲಾರದ ಮಹಿಳೆಯರಿಗೆ ಉಚಿತ ಕಾನೂನಿನ ನೆರವನ್ನು ದೊರಕಿಸಿಕೊಡುವುದು, ಸಾರ್ವಜನಿಕ ಸುನಾವಣೆಗಳನ್ನು ಏರ್ಪಡಿಸುವ ಮೂಲಕ ಪ್ರಕರಣಗಳು ಶೀಘ್ರವಾಗಿ ಇತ್ಯಾರ್ಥಗೊಳ್ಳುವಂತೆ ಮಾಡುವುದು, ಸಂಬಂಧಪಟ್ಟ ಇಲಾಖೆಗಳನ್ನು ಎಂದರೆ ಪೋಲೀಸ್ ಇಲಾಖೆ, ಅಭಿಯೋಜನಾ ಇಲಾಖೆ ಹಾಗೂ ನ್ಯಾಯಾಂಗ ಇವು ಮೂರನ್ನೂ ಒಂದೇ ವೇದಿಕೆಗೆ ತಂದು, ವಿಳಂಬದ ಕಾರಣಗಳನ್ನು ಹಾಗೂ ನ್ಯೂನತೆಗಳನ್ನು ನಿವಾರಿಸುವ ದಿಕ್ಕಿನಲ್ಲಿ ಪ್ರಯತ್ನ ಮಾಡುವುದು ಈ ಮುಂತಾದ ಅತ್ಯಂತ ಮಹತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ. ಇಂಥ ಪ್ರಯತ್ನಗಳು ಖಂಡಿತವಾಗಿಯೂ ಸ್ವಾಗತಾರ್ಹವಾದವುಗಳು. ಆದರೆ ನ್ಯಾಯಾಲಯ ನೀಡಿರುವ ತೀರ್ಪುಗಳು ಎಷ್ಟರಮಟ್ಟಿಗೆ ಮಹಿಳೆಯರಿಗೆ ನ್ಯಾಯ ದೊರಕಿಸಿಕೊಟ್ಟಿವೆ ಎಂಬುದರ ಬಗ್ಗೆ ಗಂಭೀರ ಚಿಂತನೆ ನಡೆಸುವ ಪ್ರಯತ್ನವನ್ನು ಮಾಡಿಲ್ಲ. ನ್ಯಾಯಾಸ್ಥಾನದಲ್ಲಿ ಕುಳಿತು ತೀರ್ಪು ನೀಡುವ ನ್ಯಾಯಧೀಶರನ್ನು ನ್ಯಾಯದ ಪ್ರತಿರೂಪವೆಂದು ಭಾವಿಸಲಾಗುತ್ತದೆ. ಹಾಗೆಂದೇ ಅವರನ್ನು 'ನ್ಯಾಯಮೂರ್ತಿ' ಎಂದು ಸಂಬೋಧಿಸಲಾಗುತ್ತದೆ. ನ್ಯಾಯ ದೊರೆಯುತ್ತದೆಂಬ ಆಸೆಯಿಂದ ಜನ ನ್ಯಾಯಾಲಯದ ಮೊರೆ ಹೋಗುತ್ತಾರೆ. ಆದರೆ ಅಲ್ಲಿ ನ್ಯಾಯ ದೊರೆಯದಿದ್ದರೆ ಅವರಿಗೆ ಅಶಾಭಂಗವಾಗುತ್ತದೆ. ನ್ಯಾಯಾಧೀಶರು ತೀರ್ಪು ನೀಡುವುದು ಜಾರಿಯಲ್ಲಿರುವ ಕಾನೂನುಗಳನ್ನು ಅನುಸರಿಸಿ. ಕಾನೂನುಗಳನ್ನು ಯಥವತ್ತಾಗಿ ಅನ್ವಯಿಸಿದಾಗ ನ್ಯಾಯ ದೊರೆತರೆ ಸರಿ. ನ್ಯಾಯ ದೊರೆಯದಿದ್ದರೆ ಆಗ ಕಾನೂನಿನ ಸೀಮಿತಾರ್ಥವನ್ನು ಮೀರಿ ನ್ಯಾಯ ದೊರಕಿಸಿಕೊಡುವಲ್ಲಿ ನ್ಯಾಯಧೀಶರ ಪಾತ್ರವೇನು? ನ್ಯಾಯಾಧೀಶರು ಕಾನೂನಿನ ಪ್ರಕಾರವೇ ನ್ಯಾಯಪ್ರಧಾನ ಮಾಡಬೇಕೆಂಬುದರಲ್ಲಿ ಸಂಶಯವಿಲ್ಲ. ಆದರೆ ಕಾನೂನು ರೂಪಣದಲ್ಲಿ ಪ್ರತಿಯೊಬ್ಬ ನ್ಯಾಯಾಧೀಶರಿಗೂ ಅವರದೇ ಆದ ಪಾಲಿದೆ ಎಂಬುದನ್ನು ಮರೆಯಬಾರದು. ನ್ಯಾಯಾಧೀಶರು ನ್ಯಾಯ ನೀಡುವಾಗ, ಪ್ರಕರಣವನ್ನು ಇತ್ಯರ್ಥ ಗೊಳಿಸುವಾಗ ಕಾನೂನು ರಚನೆಯ ಹಿಂದಿರುವ ಉದ್ದೇಶ ಹಾಗೂ ಆಶಯಗಳನ್ನು ಗಮನದಲ್ಲಿರಿಸಿ ಕೊಂಡು ಕಾನೂನಿನಲ್ಲಿರುವ ಪದಗಳು ಹಾಗೂ ವಾಕ್ಯಗಳ ವ್ಯಾಖ್ಯಾನ ಮಾಡಬೇಕಾಗುತ್ತದೆ. ಆದರೆ ಇದನ್ನು ಪರಿಗಣಿಸದೆಯೇ ಶಬ್ದಶಃ ಅರ್ಥಕ್ಕೆ ಜೋತುಬಿದ್ದು ವ್ಯಾಖ್ಯಾನಿಸಿದರೆ, ಕಾನೂನಿನ ಆಶಯ ವಿಫಲವಾಗುತ್ತದೆ. ಈ ಹಿನ್ನೆಲೆಯಲ್ಲಿ ಹೊರಬಿದ್ದ ತೀರ್ಪುಗಳ ವಿಶ್ಲೇಷಣೆಯ ಅಗತ್ಯವಿದೆ. ಚಿಂತನೆಯ ಅಗತ್ಯವಿದೆ. ಆದರೆ ಇಂಥ ಚಿಂತನೆಗೆ ಅಗತ್ಯವಾದ ಸೂಕ್ತ ಮಾಹಿತಿಗಳ ಸಂಗ್ರಹಣೆ ಹಾಗೂ ವಿಶ್ಲೇಷಣೆಗಳಿಗೆ ಪ್ರಯತ್ನಗಳು ನಡೆದಿಲ್ಲ. ಪ್ರಸ್ತುತ ಅಧ್ಯಯನ ಸಂಪೂರ್ಣವಾದಾಗ ಇಂಥ ಸಮಯೋಚಿತ ಚಿಂತನೆಗೆ ಅಗತ್ಯವಾದ ಎಲ್ಲ ಪರಿಕರಗಳೂ ಸಿದ್ಧವಾಗಿದ್ದು ಮಹಿಳಾಪರ ಚಿಂತನೆಗೆ ಹೊಸ ಆಯಾಮ ಲಭಿಸುತ್ತದೆ. ಮಹಿಳೆಯರಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ನೀಡಲಾಗುವ ತೀರ್ಪು ವಾಸ್ತವಿಕ ನ್ಯಾಯವನ್ನು ಒದಗಿಸಿ ಕಾನೂನಿನ ಮೂಲಭೂತ ಆಶಯವನ್ನು ಪೂರೈಸುವಂತಿರಬೇಕು ಎಂಬ ಸಾಮಾಜಿಕ ಪ್ರಜ್ಞೆ,

ನ್ಯಾಯ ನೀಡಿಕೆಯ ಎಲ್ಲ ಹಂತಗಳಲ್ಲಿ ಬೆಳೆದು ಬಂದಾಗ ಮಹಿಳೆಯರ ಸ್ಥಿತಿಗತಿ ಉತ್ತಮಗೊಳ್ಳುವುದರಲ್ಲಿ ಅನುಮಾನವಿಲ್ಲ. ಇಂಥ ವಿಶ್ಲೇಷಣಾತ್ಮಕ ಪ್ರಜ್ಞೆಯನ್ನು ಬೆಳೆಸುವ ದಿಕ್ಕಿನಲ್ಲಿ ನನ್ನ ಸಂಶೋಧನೆ ಮಹತ್ವದ್ದಾಗುತ್ತದೆ.

## ಅಧ್ಯಯನ ವಿಧಾನ

ಪ್ರತಿಯೊಂದು ಕಾನೂನಿನ ರಚನೆಯ ಹಿಂದೆಯೂ ಒಂದು ಸ್ಪಷ್ಟವಾದ ಉದ್ದೇಶವಿರುತ್ತದೆ. ಈ ಉದ್ದೇಶವನ್ನು ಮತ್ತು ಆಶಯವನ್ನು ಕಾರ್ಯಗತಗೊಳಿಸುವ ಜವಾಬ್ದಾರಿ ನ್ಯಾಯಾಧೀಶರದು. ಆದರೆ ಕಾನೂನನ್ನು ಅನ್ವಯಿಸುವ ಸಂದರ್ಭದಲ್ಲಿ ವಾಚ್ಯಾರ್ಥಕ್ಕೆ ಒತ್ತು ನೀಡಿ ಆಶಯವನ್ನು ಕಡೆಗಣಿಸಿದಲ್ಲಿ 'ನ್ಯಾಯ ದೊರೆಯುವುದಿಲ್ಲ' ಮಹಿಳೆಯರ ಕಾನೂನು ಸಮಸ್ಯೆಗಳನ್ನು ವಿವೇಚಿಸುವಾಗ ಈ ಕಾರಣದಿಂದಾಗಿ ನ್ಯಾಯ ದೊರೆಯದಿರುವ ಸಂದರ್ಭಗಳಿವೆಯೇ, ಇದು ಎಷ್ಟು ವ್ಯಾಪಕವಾಗಿದೆ, ಯಾವ ಪ್ರಕರಣಗಳಲ್ಲಿ ಇದು ಸಾಮಾನ್ಯವಾಗಿದೆ, ಇದರಿಂದಾಗುವ ಪರಿಣಾಮಗಳೇನು, ಇದನ್ನು ಪರಿಹರಿಸುವ ಬಗೆ ಹೇಗೆ - ಮುಂತಾದ ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆಯುವ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ನಡೆಸಲಾಗುತ್ತದೆ. ಇಲ್ಲಿ ಎದುರಾಗುತ್ತಿರುವ ಪ್ರಶ್ನೆಗಳು ಮೂರು

೧. ಕಾನೂನು ರಚನೆಯ ಹಂತದಲ್ಲಿಯೇ ಲೋಪದೋಷಗಳಿವೆಯೇ? ಇದ್ದಲ್ಲಿ, ಇವು ಮಹಿಳಾ ಹಕ್ಕು ನೀಡಿಕೆಗೆ ಮಾರಕವಾಗಿವೆಯೇ?

೨. ಮಹಿಳೆಯರಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳಲ್ಲಿ ಮಹಿಳೆಯರಿಗೆ ನ್ಯಾಯ ದೊರೆತಿದೆಯೇ?

೩. ತೀರ್ಪು ನೀಡಿಕೆಯಲ್ಲಿ ಕಾನೂನಿನ ವಾಚ್ಯಾರ್ಥ(letter of law) ಮತ್ತು ಆಶಯಗಳ(spirit of law) ನಡುವೆ ಸಂಘರ್ಷಗಳುಂಟಾದ ಸಂದರ್ಭಗಳಿವೆಯೇ?

ಮೇಲಿನ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನದಲ್ಲಿ ಮಹಿಳೆಯರ ಹಕ್ಕುಗಳ ಹಾಗೂ ಅವರಿಗಿರುವ ಸಮಾನಾವಕಾಶದ ಪರಿಕಲ್ಪನೆ, ಕಾನೂನು ರಚನಕಾರರ ಪುರುಷಪ್ರಧಾನ ದೃಷ್ಟಿಕೋನ ಹಾಗೂ ಅದರ ಹಿಂದೆ ಕೆಲಸ ಮಾಡಿರುವ ಸಾಮಾಜಿಕ ಚಿಂತನೆ ಇವುಗಳನ್ನು ಅಧ್ಯಯನ ಮಾಡಲಾಗುತ್ತದೆ. ಜೊತೆಗೆ ಕಾನೂನು ಮತ್ತು ನ್ಯಾಯದ ಪರಿಕಲ್ಪನೆಯ ವಿಸ್ತೃತ ವಿಶ್ಲೇಷಣೆಯನ್ನೂ ಮಾಡಲಾಗುತ್ತದೆ.

೧. ಭಾರತದ ಸಂವಿಧಾನ ಹಾಗೂ ಸಂಬಂಧಪಟ್ಟ ಮೂಲ ಅಧಿನಿಯಮಗಳು ಅಧ್ಯಯನದ ಮೊದಲ ಆಕರಗಳು. ಕಾನೂನು ರಚನೆಯ ಹಂತದಲ್ಲಿಯೇ ನುಸುಳಿರುವ ಪುರುಷ ಪ್ರಧಾನ ಚಿಂತನೆಗಳನ್ನು,

ಅವುಗಳ ಕೂಲಂಕುಷ ವಿಶ್ಲೇಷಣೆ ಹಾಗೂ ಇವುಗಳಿಗೆ ಬರೆದಿರುವ ವ್ಯಾಖ್ಯಾನಗಳನ್ನಾಧರಿಸಿ ಅಧ್ಯಯನ ಮಾಡಲಾಗುತ್ತದೆ.

೨. ಕಾನೂನು ರಚನೆಯಲ್ಲಿರುವ ಲೋಪದೋಷಗಳು ತಿಳಿದು ಬರುವುದು ಅವುಗಳನ್ನು ಅನ್ವಯಿಸುವ ಹಂತದಲ್ಲಿ. ಹೀಗಾಗಿ ಇದಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ವರದಿಯಾಗಿರುವ ಪ್ರಕರಣಗಳ ಸಮೀಕ್ಷೆ ಮತ್ತು ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುತ್ತದೆ.

೩. ಸರ್ವೋಚ್ಚ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳಲ್ಲಿ ಮಹಿಳೆಯರ ಪರವಾಗಿ ವಿಷಯಗೊಂಡ ಅಧೀನ ನ್ಯಾಯಾಲಯಗಳ ತೀರ್ಪುಗಳ, ತೀರ್ಪುಗಳು ಮತ್ತು ಕಾನೂನಿನ ಅನ್ವಯದ ಮೂಲಕ ವಾಸ್ತವಿಕ ನ್ಯಾಯವೊದಗಿಸಲು ನೆರವಾದ ತೀರ್ಪುಗಳನ್ನು ಅಧ್ಯಯನ ಮಾಡುವ ಮೂಲಕ ತೀರ್ಪುನೀಡಿಕೆಯ ಹಂತದಲ್ಲಿ ಮಹಿಳೆಗೆ ಆಗುತ್ತಿರುವ ಅನ್ಯಾಯವನ್ನು ವಿಶ್ಲೇಷಿಸಲಾಗುತ್ತದೆ. ಇದು ಈ ಅಧ್ಯಯನದ ಮುಖ್ಯ ಉದ್ದೇಶ.

**ಮಾಹಿತಿ ಸಂಗ್ರಹಣೆ**

ಸಂಶೋಧನೆಗೆ ಅಗತ್ಯವಾದ ಪ್ರಕರಣಗಳ ಬಗ್ಗೆ ಮಾಹಿತಿಯನ್ನು

೧. ಅ. ಲಾ ರಿಪೋರ್ಟರ್‌ಗಳು

ಆ. ಕಾನೂನು ಪತ್ರಿಕೆಗಳು

ಇ. ಕ್ರಿಮಿನಲ್ ಲಾ ಜರ್ನಲ್‌ಗಳು

ಈ. ವಿಚ್ಛೇದನೆ ಹಾಗೂ ವೈವಾಹಿಕ ಪ್ರಕರಣಗಳ ಡೈಜೆಸ್ಟ್

ಉ. ಈ ಬಗ್ಗೆ ಪ್ರಕಟವಾಗಿರುವ ಗಂಭೀರ ಲೇಖನಗಳು

ಮುಂತಾದವುಗಳ ಮೂಲಕ ಸಂಗ್ರಹಿಸಲಾಗಿದೆ.

ಅಧ್ಯಾಯ ೧

# ನ್ಯಾಯದ ಪರಿಕಲ್ಪನೆ

- ಲಿಖಿತ ಕಾನೂನುಗಳ ಸ್ವರೂಪ
- ನ್ಯಾಯ ನೀಡಿಕೆಯ ತತ್ತ್ವಗಳು

# ನ್ಯಾಯದ ಪರಿಕಲ್ಪನೆ

'ನ್ಯಾಯ' ಎಂಬ ಪರಿಕಲ್ಪನೆ ಅಮೂರ್ತವಾದುದು ಮತ್ತು ಅದು ಕಾನೂನು, ಹಕ್ಕು, ಸ್ವಾತಂತ್ರ್ಯ, ಸಮಾನತೆ, ಶಿಕ್ಷೆ ಮುಂತಾದ ಪರಿಕಲ್ಪನೆಗಳಿಂದ ಆವೃತವಾದದ್ದು. ಈ ಪರಿಕಲ್ಪನೆಗಳು ಪರಸ್ಪರ ಸಂಬಂಧ ಹೊಂದಿದ್ದು, ಒಂದರಿಂದ ಒಂದನ್ನು ಬೇರ್ಪಡಿಸಲಾಗದಂತೆ ಬೆಸೆದುಕೊಂಡಿವೆ. ಈ ಎಲ್ಲ ಪರಿಕಲ್ಪನೆಗಳೂ ಮೂಲತಃ ನೈತಿಕ ಪರಿಕಲ್ಪನೆಗಳೇ ಆಗಿವೆ.

ಮನುಷ್ಯನ ವೈಯಕ್ತಿಕ ಸ್ವಾಭಾವಿಕ ವರ್ತನೆಯನ್ನು ನಿಯಂತ್ರಿಸುವ ತತ್ವಗಳು ಸ್ವಾಭಾವಿಕ ನ್ಯಾಯ ಎನಿಸಿಕೊಂಡರೆ, ಒಂದು ಸಾಮಾಜಿಕ ಸಂಸ್ಥೆಯ ಸದಸ್ಯನಾಗಿ ಅವನಿಗೆ ಮಾರ್ಗದರ್ಶನ ನೀಡುವ ತತ್ವಗಳು ಸಿವಿಲ್ ಕಾನೂನುಗಳು ಎನಿಸಿಕೊಳ್ಳುತ್ತವೆ. 'ಸ್ವಾಭಾವಿಕ ನ್ಯಾಯ' ಎಂಬುದೂ ಅಮೂರ್ತವಾದ ಪರಿಕಲ್ಪನೆಯೇ. ಇದು ಸ್ವಾಭಾವಿಕವಾಗಿ ಯಾವುದು ಸರಿಯಾದುದೋ ಅದಕ್ಕೆ ಸಂಬಂಧಿಸುತ್ತದೆ. ಹಾಗಾಗಿ ಸ್ವಾಭಾವಿಕ ಕಾನೂನು, ಸ್ವಾಭಾವಿಕ ಧರ್ಮ ಹಾಗೂ ಸ್ವಾಭಾವಿಕ ನ್ಯಾಯದ ಈ ಪರಿಕಲ್ಪನೆಗಳೆಲ್ಲ ಪರಸ್ಪರ ಪೂರಕವಾದದ್ದು.

ಮನುಷ್ಯನಿಗೆ ಸಂಬಂಧಿಸಿದಂತೆ 'ಸ್ವಾಭಾವಿಕ ಕಾನೂನು ಎಂದರೆ, ಸಹಜ ಪರಿಸರದಲ್ಲಿ ಮನುಷ್ಯ ವರ್ತಿಸುವ ರೀತಿಗೆ ಸಂಬಂಧಿಸುತ್ತದೆ. ಹಾಗೂ ವಿಚಾರ ಶಕ್ತಿಯುಳ್ಳ ಮನುಷ್ಯನ ಸ್ವಭಾವಕ್ಕೆ ಸಂಬಂಧಿಸುತ್ತದೆ. ಈ ಕಾನೂನುಗಳ ಭದ್ರಬುನಾದಿಯೇ ನೈತಿಕತೆ. ಅವು ಮನುಷ್ಯ ವರ್ತಿಸುವ ಹಾಗೂ ವರ್ತಿಸಬೇಕಾದ ರೀತಿಗಳೆರಡನ್ನೂ ತಿಳಿಸುತ್ತವೆ. ಅವು ತಮ್ಮಷ್ಟಕ್ಕೇ ಮೌಲಿಕವಾದವುಗಳು. ಎಂದರೆ, ಮೌಲ್ಯಗಳು ಅವುಗಳಲ್ಲಿ ಅಂತರ್ಗತವಾಗಿರುತ್ತವೆ. ಮತ್ತು ಇವು ಯಾವುದೇ ಬಾಹ್ಯ ಮಾನದಂಡದ ಅಳತೆಗೆ ಸಿಗುವಂಥವಲ್ಲ, ಏಕೆಂದರೆ ಅವುಗಳ ಮಾನದಂಡ ಮೌಲಿಕವಾದದ್ದು, ಉತ್ಕೃಷ್ಟವಾದದ್ದು ಹಾಗೂ ಸ್ವತಂತ್ರವಾದದ್ದು.

ಸ್ವಾಭಾವಿಕ ಹಕ್ಕುಗಳಿಗೆ ಸಂಬಂಧಿಸಿದ ಸ್ವಾಭಾವಿಕ ನ್ಯಾಯ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಎಲ್ಲೆಡೆ ಅನ್ವಯಿಸುವಂಥ ಸಾರ್ವಕಾಲಿಕ ನ್ಯಾಯವಾಗಿರುತ್ತದೆ. ಅವು ಸ್ಥಳದಿಂದ ಸ್ಥಳಕ್ಕೆ, ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುವುದಿಲ್ಲ. ಅವು ಎಲ್ಲ ಕಾಲದಲ್ಲಿಯೂ ಇರುವಂಥದ್ದು. ಅವುಗಳ ಮೂಲ ಇಡೀ ಮನುಕುಲಕ್ಕೆ ವ್ಯಾಪಿಸುವಂಥ ಮನುಷ್ಯನ ಮೂಲ ಸ್ವಭಾವದಲ್ಲಿದೆ. ಹಾಗಾಗಿ ಅವು ಅನನ್ಯವಾದದ್ದು.

ಸಾಪೇಕ್ಷವಾದುದಲ್ಲ. ಸ್ವಾಭಾವಿಕ ಹಕ್ಕುಗಳಿಗೆ ಸ್ವಾಭಾವಿಕ ನ್ಯಾಯವೇ ಮೂಲ. ಸ್ವಾಭಾವಿಕ ಹಕ್ಕುಗಳೂ ಸಹ ಮೌಲಿಕವಾದದ್ದು, ನೈತಿಕವಾದದ್ದು ಹಾಗೂ ನ್ಯಾಯಸಮ್ಮತವಾದದ್ದು. ಅವು ಸ್ವಸಮರ್ಥನೀಯ ಹಾಗೂ ಉತ್ಕೃಷ್ಟ. ಎಲ್ಲ ಸಿವಿಲ್ ಹಕ್ಕುಗಳ ಗುರಿ ಈ ಗುಣಗಳನ್ನು ಹೊಂದಿರುವುದೇ ಆಗಿರುತ್ತದೆ. ಒಂದು ಸಮಾಜ ನ್ಯಾಯಯುತವಾದ ಸಮಾಜವಾಗಬೇಕಾದರೆ ಅದು ಸ್ವಾಭಾವಿಕ ಕಾನೂನುಗಳನ್ನು ಹೊಂದಿರಬೇಕು. ಅಥವಾ ಸ್ವಾಭಾವಿಕ ಕಾನೂನುಗಳಿಗೆ ಹತ್ತಿರವಾದ ಕಾನೂನುಗಳನ್ನಾದರೂ ಹೊಂದಿರಬೇಕು. ಆದ್ದರಿಂದ ವೈಚಾರಿಕತೆ ಹಾಗು ನೈತಿಕತೆಯಿಂದ ಹೊರಹೊಮ್ಮದ ಕಾನೂನು ಕಾನೂನೇ ಆಗುವುದಿಲ್ಲ. ಸ್ವಾಭಾವಿಕ ಕಾನೂನು ವ್ಯಕ್ತಿಗಳ ನಡುವೆ ಏಕರೂಪತೆಯನ್ನು ಕಾಪಾಡುವ ತತ್ತ್ವಗಳನ್ನು ಒಳಗೊಂಡಿರುತ್ತದೆ. ಹಾಗು ವೈಚಾರಿಕತೆಗೆ ಒಪ್ಪುವ ಅವರ ಸ್ವಭಾವದಿಂದ ಅವರು ಮಾರ್ಗದರ್ಶನವನ್ನು ಪಡೆಯುತ್ತಾರೆ.

ಪ್ರಸ್ತುತದಲ್ಲಿ, ನ್ಯಾಯದ ಪರಿಕಲ್ಪನೆ ಇಂಥ ವ್ಯಕ್ತಿಗಳಿಂದ ರಚನೆಯಾದ ಒಂದು ಸಮಾಜದ ಸಂದರ್ಭದಲ್ಲಿ, ನಮ್ಮ ವಿಶ್ಲೇಷಣೆಯ ವಸ್ತುವಾಗುತ್ತದೆ. ಏಕೆಂದರೆ ಸಮಾಜ ಎಂಬುದು ಕೇವಲ ವ್ಯಕ್ತಿಗಳ ಗುಂಪಲ್ಲ. ಅದು ಮೌಲ್ಯಗಳ, ನಿಯಮಗಳ, ಆದರ್ಶಗಳ ಸ್ವಭಾವ ಹಾಗೂ ನಂಬಿಕೆಗಳ ಮೊತ್ತವೂ ಆಗಿರುತ್ತದೆ.

ಹಿಂದೂ ಧರ್ಮ ಶಾಸ್ತ್ರಜ್ಞರು ಇವೆಲ್ಲವನ್ನೂ ಒಳಗೊಂಡು ನೈತಿಕ ನೆಲೆಗಟ್ಟಿನ ಮೇಲೆ ನಿಂತ ತತ್ತ್ವವನ್ನೇ 'ಧರ್ಮ' ಎಂದರು. ವೇದಗಳು, ಪುರಾಣಗಳು, ಸ್ಮೃತಿ ಮತ್ತು ಇತರ ಪ್ರಾಚೀನ ಧರ್ಮಗ್ರಂಥಗಳು 'ಧರ್ಮ'ದ ಬಗ್ಗೆ ವ್ಯಾಖ್ಯಾನ ನೀಡಿವೆ. ಮಹಾಭಾರತದಲ್ಲಿ ಧರ್ಮದ ಬಗ್ಗೆ ಚರ್ಚೆ ಇದೆ. ಯುಧಿಷ್ಠಿರ ಭೀಷ್ಮನನ್ನು ಧರ್ಮದ ಅರ್ಥ ಮತ್ತು ವ್ಯಾಪ್ತಿಯ ಬಗ್ಗೆ ಪ್ರಶ್ನಿಸುತ್ತಾನೆ. ಇದಕ್ಕೆ ಭೀಷ್ಮ ಹೇಳುತ್ತಾನೆ. "ಧರ್ಮವನ್ನು ಪರಿಭಾಷಿಸುವುದು ಬಹುಕಷ್ಟ. ಮಾನವ ಜೀವಿಗಳ ಉದ್ಧಾರಕ್ಕೆ ಸಹಾಯಕವಾಗುವುದನ್ನೇ ಧರ್ಮ ಎಂದು ವಿವರಿಸಬಹುದು. ಆದ್ದರಿಂದ ಮಾನವರ ಕಲ್ಯಾಣಕ್ಕೆ ಕಾರಣವಾಗುವುದು ಖಂಡಿತವಾಗಿ ಧರ್ಮ. ಮತ್ತು ಯಾವುದು ಅಳಿಯದೇ ಉಳಿಯುತ್ತದೆಯೋ ಅದೇ ಧರ್ಮ."[೧] ಇದು ಧರ್ಮದ ಅತ್ಯುತ್ಕೃಷ್ಟ ವ್ಯಾಖ್ಯಾನ. ಇದನ್ನೇ ಪಾಶ್ಚಾತ್ಯರು Natural Law(ಸಹಜ/ಸ್ವಾಭಾವಿಕ ನ್ಯಾಯ) ಎಂದದ್ದು.

'ಸಹಜ ನ್ಯಾಯ'ವೂ 'ಧರ್ಮ'ದಂತೆಯೇ ಅಮೂರ್ತವಾದದ್ದು. ಇದು ಮನುಷ್ಯನು ಸಮಾಜದಲ್ಲಿ ವರ್ತಿಸಬೇಕಾದ ರೀತಿ. ಈ ರೀತಿಯ ಬುನಾದಿ ನೈತಿಕತೆ, ವ್ಯಕ್ತಿ ವರ್ತಿಸುವ ರೀತಿ ಹಾಗೂ ವರ್ತಿಸಬೇಕಾದ ರೀತಿ ಎರಡೂ 'ಸಹಜ ನ್ಯಾಯ'ದಲ್ಲಿ ವ್ಯಕ್ತವಾಗುತ್ತದೆ. ಮೌಲಿಕತೆ ಅದರಲ್ಲಿ ಅಂತರ್ಗತವಾಗಿರುತ್ತದೆ. ಅವುಗಳ ಮೌಲಿಕತೆಯನ್ನು ಅಳೆಯಲು ಯಾವುದೇ ಬಾಹ್ಯ ಸಾಧನದ ಅಥವಾ ಬಾಹ್ಯ ಮಾನದಂಡದ ಅಗತ್ಯವಿಲ್ಲ.

ಹ್ಯೂಮನ ಪ್ರಕಾರ "ನ್ಯಾಯ ಎಂಬುದು ಸಮಾಜವನ್ನು ಬಂಧಿಸುವ ಸೂತ್ರ. ನ್ಯಾಯವಿಲ್ಲದೆ ಮಾನವ ಜೀವಿಗಳು ಒಟ್ಟುಗೂಡಿ ಇರುವುದು ಸಾಧ್ಯವಿಲ್ಲ."[3]

ಗ್ರೀಕರ ಪ್ರಕಾರ "ಇನ್ನೊಂದು ಜೀವಿಯ ಒಳಿತೇ ನ್ಯಾಯ. ಏಕೆಂದರೆ, ಇತರ ವ್ಯಕ್ತಿಗಳು ಇಲ್ಲದ ಕಡೆ ಮತ್ತು ಒಳಿತು ಮತ್ತು ಕೆಡಕುಗಳ ಪ್ರಶ್ನೆ ಇರದ ಕಡೆ ನ್ಯಾಯದ ಪ್ರಶ್ನೆ ಉಂಟಾಗುವುದೇ ಇಲ್ಲ."

ಪ್ಲೇಟೋ "ಮನುಷ್ಯನ ಆತ್ಮ ಮೂರು ಗುಣಗಳ ನೆಲೆ ಎನ್ನುತ್ತಾನೆ. ಅವೆಂದರೆ, ವಿವೇಚನೆ(reason), ಉತ್ಸಾಹ(spirit) ಮತ್ತು ಅಪೇಕ್ಷೆ(Appetite). ಅವನು ಇಡೀ ಸಮಾಜವನ್ನು ಇದರ ಆಧಾರದ ಮೇಲೆ ಮೂರು ವರ್ಗಗಳನ್ನಾಗಿ ವಿಭಜಿಸುತ್ತಾನೆ. ಎಂದರೆ ಆಳುವ ವರ್ಗ, ಸೈನಿಕ ವರ್ಗ ಹಾಗೂ ಉತ್ಪಾದಕ ವರ್ಗ. ಅವರವರ ವೃತ್ತಿವೈಶಿಷ್ಟ್ಯ ಇಂಥ ವರ್ಗೀಕರಣಕ್ಕೆ ಆಧಾರ. ವಿವೇಚನೆ ಪ್ರಧಾನವಾಗಿರುವವರನ್ನು ಹೆಚ್ಚು ವಿಚಾರವಂತ ಹಾಗೂ ಪ್ರಜ್ಞಾವಂತ ವರ್ಗವೆಂದೂ, ಚೈತನ್ಯ ಅಥವಾ ಉತ್ಸಾಹ ಪ್ರಧಾನವಾಗಿ ಹೊಂದಿರುವವರನ್ನು ಉತ್ಸಾಹೀ ಹಾಗೂ ವೀರಶೌರ್ಯವಂತ ವರ್ಗವೆಂದೂ, ಅಪೇಕ್ಷೆ ಅಥವಾ ಹಸಿವೆ ಪ್ರಧಾನವಾಗಿರುವವರನ್ನು ಅಪೇಕ್ಷೆಯಿಂದ ಕೂಡಿದ ವರ್ಗವೆಂದೂ ಪರಿಗಣಿಸಲಾಗಿದೆ. ವ್ಯಕ್ತಿಗೆ ಹುಟ್ಟಿನಿಂದಲೇ ಬರುವ ಸ್ವಭಾವ ಮತ್ತು ಸಾಮರ್ಥ್ಯಗಳು ಸಮಾಜದಲ್ಲಿ ಅವನ ಸ್ಥಾನವನ್ನು ನಿರ್ಧರಿಸುತ್ತವೆ.

ಪ್ಲೇಟೋನ ನ್ಯಾಯದ ಪರಿಕಲ್ಪನೆ ಎರಡು ಅಂಶಗಳನ್ನು ಒಳಗೊಂಡಿದೆ. ಒಂದು ಸಾಮಾಜಿಕ ನ್ಯಾಯ ಇನ್ನೊಂದು ವೈಯಕ್ತಿಕ ನ್ಯಾಯ. ಪ್ರತಿಯೊಂದು ವರ್ಗವೂ ಇನ್ನೊಂದು ವರ್ಗದ ಕೆಲಸದಲ್ಲಿ ಹಸ್ತಕ್ಷೇಪ ಮಾಡದೆ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದಾಗ ಸಾಮಾಜಿಕ ನ್ಯಾಯ ಸಾಧಿತವಾಗುತ್ತದೆ. ಆಗ ಸಮಾಜದಲ್ಲಿ ಸಾಮರಸ್ಯ ಹಾಗೂ ಶಾಂತಿ ನೆಲೆಸುತ್ತದೆ. ಈ ಮೂರು ವರ್ಗಗಳ ನಡುವೆ ಸಂಪೂರ್ಣ ಸಮತೋಲನವಿದ್ದಾಗ ಉತ್ಕೃಷ್ಟ ಗುಣ ಹೊರಹೊಮ್ಮುತ್ತದೆ. ಈ ಗುಣವೇ ನ್ಯಾಯ. ಆದ್ದರಿಂದ ಸಾಮಾಜಿಕ ನ್ಯಾಯ ಎನ್ನುವುದು ಈ ಮೂರೂ ವರ್ಗಗಳ ಜಂಟಿ ಪ್ರಯತ್ನದ ಫಲ.

ಸಾಮಾಜಿಕ ನ್ಯಾಯವಿದ್ದ ಕಡೆ ವೈಯಕ್ತಿಕ ನ್ಯಾಯವಿದೆ ಎಂದು ಪೂರ್ವಭಾವನೆ ಮಾಡಲಾಗುತ್ತದೆ. ನ್ಯಾಯವನ್ನು ಸಾಧಿಸುವಲ್ಲಿ ಪ್ರತಿ ವರ್ಗವೂ ಸಹಾಯಕವಾಗುವಂತೆ, ವರ್ಗದ ಪ್ರತಿ ಸದಸ್ಯನೂ ತನಗೆ ತಾನೇ ವೈಯಕ್ತಿಕ ನ್ಯಾಯವನ್ನು ಸಾಧಿಸುತ್ತಾನೆ. ವ್ಯಕ್ತಿಯ ಆತ್ಮದಲ್ಲಿ ವಿವೇಚನೆ ಚೇತನ ಹಾಗೂ ಅಪೇಕ್ಷಗಳೆಂಬ ಮುರು ಗುಣಗಳಿವೆ ಎನ್ನುತ್ತಾನೆ ಪ್ಲೇಟೋ. ಈ ಮೂರೂ ಗುಣಗಳ ನಡುವೆ ಸಮತೋಲನವನ್ನು ಹಾಗೂ ಸಾಮರಸ್ಯವನ್ನು ಸಾಧಿಸಿದಾಗ ವ್ಯಕ್ತಿ ಗುಣವಂತನಾಗುತ್ತಾನೆ. ಗುಣವಂತ ನಾಗಿರುವುದೇ 'ನ್ಯಾಯ'. ಆದ್ದರಿಂದ ಸಾಮಾಜಿಕ ನ್ಯಾಯ ಹಾಗೂ ವೈಯಕ್ತಿಕ ನ್ಯಾಯಗಳು ಪರಸ್ಪರ ಪೂರಕವಾದದ್ದು ಎನ್ನುತ್ತಾನೆ. ಪ್ರಸಿದ್ಧ ನ್ಯಾಯ ಶಾಸ್ತ್ರಜ್ಞ ಜಸ್ಟಿನಿಯಸ್ ಪ್ರಕಾರ "ಪ್ರತಿಯೊಬ್ಬ ವ್ಯಕ್ತಿಗೂ

ಸಲ್ಲಬೇಕಾದುದನ್ನು ಸಲ್ಲಿಸುವ ಪ್ರಾಮಾಣಿಕವಾದ ಮತ್ತು ನಿರಂತರವಾದ ಸಂಕಲ್ಪವೇ ನ್ಯಾಯ.” ಆದ್ದರಿಂದ ನ್ಯಾಯಯುತವಾದ ಸಮಾಜದಲ್ಲಿ, ಒಬ್ಬ ವ್ಯಕ್ತಿ, ಗುಂಪು ಅಥವಾ ಸಮೂಹಕ್ಕೆ ಸಲ್ಲಬೇಕಾದುದನ್ನು ಸಲ್ಲಿಸಬೇಕು. ಒಬ್ಬ ವ್ಯಕ್ತಿಯ ಬಾಹ್ಯ ಹಾಗೂ ಆಂತರಿಕ ಸಮಗ್ರ ಸಾಮರ್ಥ್ಯ ವ್ಯಕ್ತಗೊಳ್ಳಲು ಮುಕ್ತ ಅವಕಾಶ ದೊರೆತು, ಯಾವುದೇ ಅಡ್ಡಿ ಅಡಚಣೆಗಳಿಲ್ಲದೆ ಅವನ ಶ್ರಮದ ಪ್ರತಿಫಲವನ್ನು ಅನುಭವಿಸಲು ಅವನಿಗೆ ಸಾಧ್ಯವಾಗುವುದಾದರೆ ವ್ಯಕ್ತಿಗೆ ನ್ಯಾಯ ದೊರೆತಂತೆ. ಒಂದು ಸಮೂಹದ ಸಾಂಸ್ಕೃತಿಕ ಜೀವನವನ್ನು, ಯಾವುದೇ ಅಧಿಕಾರಶಾಹೀ ವ್ಯಕ್ತಿಗಳ ದಮನಕ್ಕೆ ಒಳಗಾಗದೆ, ಅದರ ಸದಸ್ಯರು ಅನಾವರಣಗೊಳಿಸುವುದು ಸಾಧ್ಯವಾಗುವುದಾದರೆ, ಸಮೂಹಕ್ಕೆ ನ್ಯಾಯದೊರೆತಂತೆ. ಒಂದು ಗುಂಪು, ಅದರ ಸಾಮೂಹಿಕ ವ್ಯಕ್ತಿತ್ವದಲ್ಲಿ ದುರ್ಬಲವಾಗಿದ್ದು, ದಮನಕ್ಕೊಳಗಾಗಿದ್ದರೆ ಅಥವಾ ದನಿಯಿಲ್ಲದುದಾಗಿದ್ದರೆ, ಸಮಾನತೆಯನ್ನು ಉಳಿಸುವ ಪ್ರಬಲ ಕ್ರಮಗಳ ಮೂಲಕ ಸಮುದಾಯದಲ್ಲಿ ವಾಸ್ತವಿಕ ಸಮಾನತೆಯನ್ನು ಮೂಡಿಸುವುದು ಅತ್ಯಗತ್ಯ. ಹತಾಶೆಯನ್ನುಂಟು ಮಾಡುವಂಥ ಅಸಮಾನತೆಯನ್ನು ಹೋಗಲಾಡಿಸಲು ಹಾಗೂ ಸಾಂಸ್ಕೃತಿಕ ಸಮಗ್ರತೆಯನ್ನು ಸಂರಕ್ಷಿಸಲು ಇಂಥ ಧನಾತ್ಮಕ ಕ್ರಮಗಳನ್ನು ರಾಷ್ಟ್ರ ಕೈಗೊಳ್ಳ ಬೇಕಾಗುತ್ತದೆ.

ರಾಬರ್ಟ್ ಇಂಗರ್ ಸಾಲನ ಪ್ರಕಾರ, “ಸ್ವಾತಂತ್ರ್ಯ ಹಾಗೂ ನ್ಯಾಯದ ಬುನಾದಿಯ ಮೇಲೆ ನಿರ್ಮಾಣವಾಗದ ಯಾವುದೇ ಸರ್ಕಾರವೂ ಉಳಿಯಬಾರದು.”[೩]

ಭಾರತೀಯ ಧರ್ಮ ಶಾಸ್ತ್ರದ ಪ್ರಕಾರ, ವ್ಯಕ್ತಿಯ ಹಾಗೂ ಸಮಾಜದ ಉಳಿವಿಗೆ ಉದ್ಧಾರಕ್ಕೆ ಅಗತ್ಯವಿರುವ (ನ್ಯಾಯಸಮ್ಮತವಾದ) ಸರಿಯಾದ ಎಲ್ಲ ಬಗೆಯ ವರ್ತನೆ ಧರ್ಮವೆನಿಸುತ್ತದೆ.

‘ಧರ್ಮ’ ಎಂಬ ಪದ ಎಷ್ಟು ವ್ಯಾಪಕವಾದುದೆಂದರೆ ಅದನ್ನು ಬಳಸಿದ ಸಂದರ್ಭದಿಂದ ಅದು ನಿರ್ದಿಷ್ಟ ಅರ್ಥವನ್ನು ಪಡೆಯುತ್ತದೆ. ಉದಾಹರಣೆಗೆ ಒಬ್ಬನ ಸಂಪತ್ತನ್ನು ಸಾರ್ವಜನಿಕ ಉದ್ದೇಶಕ್ಕಾಗಿ ನೀಡಿದ ಸಂದರ್ಭದಲ್ಲಿ ‘ಧರ್ಮ’ ಎಂಬುದು ‘ದಾನ’ ಎಂಬರ್ಥವನ್ನು ಪಡೆಯುತ್ತದೆ. ಒಂದು ನಿರ್ದಿಷ್ಟ ಪ್ರಕರಣದಲ್ಲಿ ‘ಧರ್ಮ’ ಅರ್ಜಿದಾರನ ಕಡೆಗಿದೆ ಎಂದಾಗ ‘ನ್ಯಾಯ’ ಅವನ ಕಡೆಗಿದೆ ಎಂಬ ಅರ್ಥ ಉಂಟಾಗುತ್ತದೆ. ರಾಜ್ಯಕ್ಕೆ ಅಥವಾ ರಾಷ್ಟ್ರಕ್ಕೆ ಸಂಬಂಧಿಸಿದಂತೆ ‘ಧರ್ಮ’ ಎಂಬುದು ‘ಕಾನೂನು’ ಎಂಬರ್ಥ ಪಡೆಯುತ್ತದೆ. ಈ ಅರ್ಥದಲ್ಲಿ ಕಾನೂನು ಮತ್ತು ಧರ್ಮ ಬೇರ್ಪಡಿಸಲಾಗದ ಪರಿಕಲ್ಪನೆಗಳು. ‘ಕಾನೂನು’ ನಿಂತಿರುವುದೇ ‘ಧರ್ಮ’ದ ಪರಿಕಲ್ಪನೆಯ ಮೇಲೆ. ‘ಅಧರ್ಮ’ ಎನಿಸಿಕೊಳ್ಳುವ ಕಾನೂನು ನ್ಯಾಯ ಒದಗಿಸಲಾರದು.

ವೈಯಕ್ತಿಕ ಹಕ್ಕುಗಳನ್ನು ಹಾಗೂ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಲು ಕಾನೂನು ಅತ್ಯಂತ ಬಲಿಷ್ಠ ಮಾಧ್ಯಮ ಎಂಬುದನ್ನು ನಮ್ಮ ಹಿಂದಿನ ನ್ಯಾಯಶಾಸ್ತ್ರಜ್ಞರು ಮನಗಂಡಿದ್ದರು. ಉಪನಿಷತ್ತಿನಲ್ಲಿ

ಕಾನೂನಿಗೆ ನೀಡಿದ್ದ ಅತ್ಯಂತ ಪ್ರಾಚೀನ ಹಾಗೂ ಬಹುಶಃ ಮೊತ್ತ ಮೊದಲನೆಯ ಪರಿಭಾಷೆ ಇಂದಿನ ಆಧುನಿಕ ನ್ಯಾಯ ಶಾಸ್ತ್ರದ ಪರಿಭಾಷೆಯ ಎಲ್ಲ ಅಂಶಗನ್ನು ಒಳಗೊಂಡ ಸಮಗ್ರ ಪರಿಭಾಷೆಯಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಕಾನೂನನ್ನು ಹೀಗೆ ಪರಿಭಾಷಿಸಲಾಗಿದೆ.(ಇಂಗ್ಲಿಷ್ ಭಾಷಾಂತರ)

Law is the king of kings
Nothing is snperor to Law
The Law aided by the power of the king
Enables the weak to pravail over strong

ಇದರ ಬಗ್ಗೆ ಬರೆಯುತ್ತಾ ಡಾ.ಎಸ್.ರಾಧಾಕೃಷ್ಣನ್ ಅವರು-

"Even kings are subordinate to Dharma, to the rule of law"[೪]

ಸಹಜ ನ್ಯಾಯಕ್ಕೆ ಧರ್ಮವೇ ಅಡಿಪಾಯ. ಅಲ್ಲಿ ಸಹಜ ಸಮಾನತೆ ತಾನೇ ತಾನಾಗಿ ಮೆರೆಯುತ್ತದೆ. ಆದರೆ ಒಂದು ಸಮಾಜದ ಚೌಕಟ್ಟಿನಲ್ಲಿ ಮನುಷ್ಯ ಜೀವಿಗಳಿಗೆ ಹೊಂದುವಂಥ ಕಾನೂನುಗಳನ್ನು ಹೊಂದಿರುವುದು ಅನಿವಾರ್ಯ. ಈ ಕಾನೂನುಗಳು ಸ್ವಾಭಾವಿಕ ನ್ಯಾಯದ ಅನೇಕ ಗುಣಗಳನ್ನು ಹೊಂದಿಲ್ಲದೇ ಇರುವ ಸಾಧ್ಯತೆಗಳಿವೆ. ಇವೇ ಇತ್ಯಾತ್ಮಕ ಕಾನೂನು(Positive Law) ಅಥವಾ ಸಿವಿಲ್ ಕಾನೂನುಗಳು.

ನಮ್ಮ ಧರ್ಮ ಶಾಸ್ತ್ರಗಳು- ಪಾಶ್ಚಾತ್ಯ ರಾಜ್ಯಗಳಲ್ಲಿರುವಂತೆ ಅರಸರಿಗೆ ಶಾಸನರಚನಾಧಿಕಾರವನ್ನು ನೀಡಿರಲಿಲ್ಲ. ಧರ್ಮಶಾಸ್ತ್ರಗಳಲ್ಲಿ ನಿರೂಪಿತವಾಗಿದ್ದವುಗಳೇ ಕಾನೂನುಗಳಾಗಿದ್ದವು. ವೇದಗಳು ಧರ್ಮದ ಮೂಲ. ವೇದಗಳಲ್ಲಿ ಕಾನೂನುಗಳು ನೇರವಾಗಿ ನಿರೂಪಿತವಾಗಿಲ್ಲದಿದ್ದರೂ ನಂತರದ ಸ್ಮೃತಿಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾದ ಎಲ್ಲ ಕಾನೂನುಗಳಿಗೂ ವೇದಗಳಲ್ಲಿ ವಿಧಿಸಿದ್ದ ವಿಧಿನಿಷೇಧಗಳೇ ಆಧಾರ ವಾಗಿದ್ದವು ಎಂದರೆ ತಪ್ಪಲ್ಲ. ಉದಾಹರಣೆಗೆ ವೇದಗಳಲ್ಲಿನ 'ಸತ್ಯಂ ವದ"(ಸತ್ಯವನ್ನು ಹೇಳು) 'ನಾನೃತಂ ವದೇತ್ "(ಅಸತ್ಯವನ್ನು ಎಂದಿಗೂ ಹೇಳಬೇಡ) ಎಂಬವು ಸ್ಮೃತಿಗಳಲ್ಲಿ ಕಾನೂನಿನ ರೂಪ ತಳೆದವು. ಪಾಶ್ಚಾತ್ಯ ನ್ಯಾಯಶಾಸ್ತ್ರದ ಪ್ರಕಾರ ಕಾನೂನು ಅಜ್ಞಾರ್ಥಕವಾದುದು(imperative command) ಇದನ್ನು ಪ್ರಭುತ್ವ/ರಾಜ ಜಾರಿಗೊಳಿಸುತ್ತಾನೆ. ಕಾನೂನನ್ನು ಜಾರಿಗೊಳಿಸಲು ಇರುವ ಅತ್ಯುನ್ನತ ಅಧಿಕಾರವನ್ನೇ 'Sanction' ಎಂದಿರುವುದು. ನ್ಯಾಯಶಾಸ್ತ್ರಜ್ಞ ಆಸ್ಟಿನ್‌ನ ಪ್ರಕಾರ "ಕಾನೂನು ಎಂಬುದು, ರಾಷ್ಟ್ರ ತನ್ನ ಪ್ರಜೆಗಳಿಗಾಗಿ ಹೊರಡಿಸಿದ ಸಾಮಾನ್ಯ ಆಜ್ಞೆಗಳನ್ನು ಒಳಗೊಂಡಿರುತ್ತದೆ. ಅದನ್ನು ಅಗತ್ಯಬಿದ್ದಲ್ಲಿ ರಾಷ್ಟ್ರದ ಬಲ ಪ್ರಯೋಗಿಸಿ ಜಾರಿಗೆ ತರಲಾಗುತ್ತದೆ".

ಪ್ರತಿಯೊಂದು ಸಂಘಟಿತ ಸಮುದಾಯ ಅಥವಾ ಸಮಾಜದಲ್ಲಿಯೂ ಅದರ ಆಡಳಿತ ಯಂತ್ರ ತನ್ನ ಪ್ರಜೆಗಳನ್ನು ನಿಯಂತ್ರಸುವ ದೃಷ್ಟಿಯಿಂದ, ಶಾಂತಿ ವ್ಯವಸ್ಥೆಯನ್ನು ಸ್ಥಾಪಿಸುವುದಕ್ಕೋಸ್ಕರ ಆಜ್ಞಾರ್ಥಕ

ಕಾನೂನುಗಳನ್ನು(imperative laws) ರಚಿಸುತ್ತದೆ. ಕಾನೂನಿನ ಮೂಲಕ ಒದಗಿಸುವ ನ್ಯಾಯವನ್ನು legal justice ಎನ್ನಬಹುದು. Hobbes ಎಂಬ ನ್ಯಾಯ ಶಾಸ್ತ್ರಜ್ಞ "No law can be unjust" ಎಂದು ಘೋಷಿಸಿದ್ದಾನೆ. ಆಸ್ಟಿನ್ ಎಂಬ ನ್ಯಾಯಶಾಸ್ತ್ರಜ್ಞ ಇನ್ನೂ ಮುಂದುವರಿದು "No positive law can be legally unjust" ಎಂದಿದ್ದಾನೆ. ನ್ಯಾಯ ಅಥವಾ ಅನ್ಯಾಯ, ಈ ಅರ್ಥದಲ್ಲಿ ಹೋಲಿಸುವ ನಿರ್ದಿಷ್ಟ ಮಾನದಂಡಕ್ಕನುಗುಣವಾಗಿ ವ್ಯತ್ಯಾಸಗೊಳ್ಳುತ್ತದೆ. ಖ್ಯಾತ ನ್ಯಾಯಶಾಸ್ತ್ರಜ್ಞ ಸಾಲ್ಮಂಡ್‌ನ ಪ್ರಕಾರ "The Law is, without doubt, a remedy for great evils, yet it brings with it evils of its own"

ಆದರೆ ಇಂಥ(ಆಜ್ಞಾರ್ಥಕ) ಕಾನೂನುಗಳು ಇಲ್ಲದಿದ್ದಾಗಲೂ, ಸಮಾಜದ ಜನರ ಅಭಿಪ್ರಾಯಗಳಿಂದ ರೂಪಿತವಾದ ಮತ್ತು ಜನರಿಗೆ ಒಪ್ಪಿಗೆಯಾದ ನೈತಿಕತೆಯ ನಿಯಮಗಳು ಜಾರಿಯಲ್ಲಿರುತ್ತದೆ. ಇದನ್ನು ಉಲ್ಲಂಘಿಸಿದರೆ ಜನತೆಯ ಹಾಗೂ ಸಮಾಜದ ಆಕ್ರೋಶಕ್ಕೆ ಹಾಗೂ ವಾಗ್ದಂಡನೆಗೆ ಗುರಿಯಾಗುವ ಸಂಭವವೂ ಇರುತ್ತದೆ. ಇದನ್ನೆ ಸಮಾಜ ತನ್ನ ಸದಸ್ಯರ ಮೇಲೆ ವಿಧಿಸುವ ರೀತಿ ನಿಯಮಗಳು. ಈ ದೃಷ್ಟಿಯಿಂದ ಯಾವುದೇ ಸಮಾಜದಲ್ಲಿ, ಜನತೆಯ ಅಭಿಪ್ರಾಯದಲ್ಲಿ ಮಾನ್ಯತೆ ಪಡೆದ ನೈತಿಕತೆಯ ನಿಯಮಗಳು ಹಾಗೂ ರಾಜ್ಯ ರಚಿಸಿದ ನಾಗರಿಕ ಕಾನೂನುಗಳು(civil Laws) ಇವೆರಡೂ ಒಂದೇ ಉದ್ದೇಶ ಸಾಧಿಸುವುದಕ್ಕಾಗಿ ಒಟ್ಟಿಗೇ, ಸಮಾನಾಂತರವಾಗಿ ಜಾರಿಯಲ್ಲಿರುತ್ತದೆ. ರಾಜ್ಯಕೃತ ಕಾನೂನುಗಳನ್ನು ಪಾಲಿಸುವಂತೆ ಮಾಡುವ ಅಧಿಕಾರ ರಾಜ್ಯಕ್ಕೆ ಇರುತ್ತದೆ. Hobbes ಹೇಳುವಂತೆ "It is men and arms that make the force and power of the law."

ಈ ನಾಗರಿಕ ಕಾನೂನುಗಳು ಸಾಪೇಕ್ಷವಾದವುಗಳು. ಅವು ಸಾರ್ವತ್ರಿಕವಲ್ಲ. ಒಂದು ನಿರ್ದಿಷ್ಟ ಸಮಾಜದಲ್ಲಿ ನಿರ್ದಿಷ್ಟ ರೀತಿಯ ಕಾನೂನು ನಿರ್ದಿಷ್ಟ ಕಾಲದಲ್ಲಿ ಜಾರಿಯಲ್ಲಿರುತ್ತವೆ. ಒಂದು ಸಮಾಜದಲ್ಲಿ ಅತ್ಯಂತ ಪರಿಣಾಮಕಾರಿಯಾಗುವ ಕಾನೂನು ಮತ್ತೊಂದು ಸಮಾಜದಲ್ಲಿ ಅಪ್ರಸ್ತುತ ವಾಗಬಹುದು. ಆದ್ದರಿಂದ ಈ ಇತ್ಯಾತ್ಮಕ ಕಾನೂನುಗಳು ಒಂದು ನಿರ್ದಿಷ್ಟ ಸಾಮಾಜಿಕ ಚೌಕಟ್ಟಿನಲ್ಲಿ ಅರ್ಥ ಪಡೆದುಕೊಳ್ಳುತ್ತವೆ. ಈ ಕಾನೂನುಗಳ ವಿಶಿಷ್ಟ ಲಕ್ಷಣವೆಂದರೆ, ಅವುಗಳು ಯಾವಾಗಲೂ ಸರಿಯಾದದ್ದು ಹಾಗೂ ನ್ಯಾಯಯುತವಾದದ್ದು ಅಗಿರುತ್ತದೆ ಎಂದು ಅವುಗಳನ್ನು ಪರಿಭಾವಿಸುವುದು. ಕಾನೂನು ಜಾರಿಗೊಳಿಸಿದುದರ ಪರಿಣಾಮದಿಂದ ಎಂದರೆ ಕೊನೆಯ ಫಲಿತಾಂಶ ಏನಾಯಿತು ಎಂಬುದರಿಂದ ಒಂದು ಕಾನೂನು ಸಮರ್ಥನೀಯವಾಗುತ್ತದೆ(they are Justified by their end results). ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಯಾವುದೇ ಕಾನೂನು ಸಹ ಯಾವುದು ಸ್ವಾಭಾವಿಕ ನ್ಯಾಯವೋ ಅದಕ್ಕೆ ವಿರುದ್ಧವಾದುದಾಗಿರಬಾರದು. ಸಾಮಾಜಿಕ ಕಾನೂನು, ಸಿವಿಲ್ ಕಾನೂನು ಇನ್ನಾವುದೇ ಕಾನೂನಿಗೂ ಸಹ ಸ್ವಾಭಾವಿಕ ಕಾನೂನಿನ ಅಡಿಪಾಯವಿರಬೇಕು. ಆದ್ದರಿಂದ, ಸಮಾಜದ ಚೌಕಟ್ಟಿನಲ್ಲಿ ರಚಿತವಾದ

ಕಾನೂನುಗಳು ಸಹಜ ಕಾನೂನುಗಳ ಮೂಲಕ ನೋಡಿದಾಗಲೂ ಸಮರ್ಥನೀಯ ವಾಗಿರಬೇಕು. ಏಕೆಂದರೆ ಸಹಜ ಕಾನೂನುಗಳು ತಮ್ಮಷ್ಟಕ್ಕೆ ನ್ಯಾಯಯುತವಾದದ್ದು, ನೈತಿಕವಾದದ್ದು ಹಾಗೂ ಸರಿಯಾದದ್ದೂ ಆಗಿರುತ್ತವೆ. ಆದ್ದರಿಂದ ಸಿವಿಲ್ ಕಾನೂನು ಎಷ್ಟೇ ದೋಷರಹಿತವಾಗಿದ್ದು ಸಮಾಜಕ್ಕೆ ಉಪಕಾರಿಯಾಗಿದ್ದರೂ, ಅಂಥ ಕಾನೂನಿನಿಂದ ಸಮಾಜದ ಒಬ್ಬ ವ್ಯಕ್ತಿ ಉಪಯೋಗ ಪಡೆಯಲು ಸಾಧ್ಯವಿಲ್ಲ ಎಂದಾಗ ಅಂಥ ಕಾನೂನನ್ನು ಕೈಬಿಡಬೇಕಾಗುತ್ತದೆ. ಹಾಗೆಯೇ, ಒಂದು ಕಾನೂನು ಸಮಾಜವಿರೋಧಿಯಾಗದೆ ಇದ್ದು, ಒಬ್ಬ ವ್ಯಕ್ತಿಗೆ ಉಪಯೋಗವಾಗುತ್ತದೆ ಎಂದಾಗಲೂ ಅಂಥ ಕಾನೂನನ್ನು ಸಮಾಜ ಹೊಂದಿರುವುದು ಸ್ವಾಭಾವಿಕ ನ್ಯಾಯದ ದೃಷ್ಟಿಯಿಂದ ಸಮರ್ಥನೀಯವಾಗುತ್ತದೆ." ಎಂದರೆ ಸ್ವಾಭಾವಿಕ ನ್ಯಾಯದ ಹಿಂದಿರುವ ನೈತಿಕತೆ, ನ್ಯಾಯಸಮ್ಮತತೆ, ಸಿವಿಲ್ ಕಾನೂನುಗಳಿಗೂ ಅಡಿಪಾಯವಾಗಿರಬೇಕು. ಆದ್ದರಿಂದ ಸಿವಿಲ್ ಕಾನೂನುಗಳು ಸ್ವಾಭಾವಿಕ ನ್ಯಾಯಕ್ಕೆ ಎಲ್ಲಿಯೂ ವಿರೋಧವಾಗಿರಬಾರದು. ಅಷ್ಟೇ ಅಲ್ಲ ಪೂರಕವಾಗಿರಬೇಕು. ನೈತಿಕತೆ ಮತ್ತು ನ್ಯಾಯಪ್ರಜ್ಞೆ ಇಲ್ಲದ ನಾಗರಿಕ ಸಮಾಜಗಳಲ್ಲಿ ಬೆಳೆದ ಸಂಸ್ಕೃತಿ ಮನುಷ್ಯನನ್ನು ಭ್ರಷ್ಟನನ್ನಾಗಿಸುತ್ತದೆ ಮತ್ತು ಅವನ ಅಂತಃ ಸತ್ವವನ್ನೇ ನಾಶಮಾಡಿಬಿಡುತ್ತದೆ" ಎನ್ನುತ್ತಾನೆ ರೂಸೋ.

ಆದ್ದರಿಂದ ಕಾನೂನುಗಳು ಎಂದರೆ ಸಮಾಜದ ವ್ಯಕ್ತಿಗಳಿಗೆ ನ್ಯಾಯದೊರಕಿಸಿಕೊಡುವುದಕ್ಕಾಗಿ, ರೂಪಿಸಿ ಮನ್ನಣೆ ನೀಡಿರುವ ಮತ್ತು ನ್ಯಾಯಪರಿಪಾಲನೆಯಲ್ಲಿ ಅನ್ವಯಿಸುವ ತತ್ತ್ವಗಳ ಒಂದು ಗುಂಪು. ನ್ಯಾಯವನ್ನು ರಾಜಕೀಯ ಆದರ್ಶಗಳಿಂದ ಬೇರ್ಪಡಿಸಬೇಕು. ಅದು ಸ್ವಾತಂತ್ರ್ಯವಲ್ಲ, ಸಮಾನತೆಯಲ್ಲ, ಭ್ರಾತೃತ್ವ ಭಾವವಲ್ಲ.

ನ್ಯಾಯ ಸ್ವಾತಂತ್ರ್ಯವಲ್ಲ- ಏಕೆಂದರೆ, ಸ್ವಾತಂತ್ರ್ಯ ಎಂಬುದು ಯಾರು ನಿರ್ಧಾರ ಕೈಗೊಳ್ಳಬೇಕು ಎಂಬುದಕ್ಕೆ ಸಂಬಂಧಿಸಿದರೆ, ನ್ಯಾಯ ಎಂಬುದು ಹೇಗೆ ನಿರ್ಧಾರ ಕೈಗೊಳ್ಳಬೇಕು, ಅದಕ್ಕಿರಬೇಕಾದ ಮಾನಿಸಿಕ ಚೌಕಟ್ಟು ಎಂಥದ್ದು, ಅದರ ಪ್ರತಿಫಲ ಏನು ಎಂಬುದಕ್ಕೆ ಸಂಬಂಧಿಸುತ್ತದೆ.

ನ್ಯಾಯ ಸಮಾನತೆಯಲ್ಲ- ಸಮಾನತೆಯೆಂಬುದು ಕೊನೆಯ ಪ್ರತಿಫಲ. ಸಮಾನತೆ ಎಂಬುದು ಅದನ್ನು ಹೇಗೆ ಸಾಧಿಸಲಾಯಿತು ಎಂಬುದಲ್ಲ. ಎಲ್ಲರನ್ನೂ ಸಮಾನತೆಯಿಂದ ಕಾಣಬೇಕು ಎಂಬ ತತ್ವ. ಆದರೆ ನ್ಯಾಯದಲ್ಲಿ ಪ್ರತಿಯೊಬ್ಬನ ಪ್ರಕರಣವನ್ನೂ ಪ್ರತ್ಯೇಕವಾಗಿ ಪರಿಗಣಿಸಲಾಗುತ್ತದೆ. ದೋಷಿಯನ್ನು ಶಿಕ್ಷಿಸಿ ನಿರ್ದೋಷಿಯನ್ನು ಬಿಡುಗಡೆ ಮಾಡಿದಾಗ ಒಬ್ಬನನ್ನು ಒಂದು ರೀತಿ ಇನ್ನೊಬ್ಬನನ್ನು ಇನ್ನೊಂದು ರೀತಿ ಪರಿಗಣಿಸಲಾಗಿರುತ್ತದೆ.

ನ್ಯಾಯ ಭ್ರಾತೃತ್ವ ಭಾವವೂ ಅಲ್ಲ - ಏಕೆಂದರೆ ಭ್ರಾತೃತ್ವ ಎಂಬುದು ಒಬ್ಬ ಇನ್ನೊಬ್ಬನಿಗಾಗಿ ಮಿಡಿಯುವ ಆರ್ದ್ರಗುಣ(warm virtue). ಆದರೆ ನ್ಯಾಯ ಒಂದು ಶೀತಲ ಗುಣ(cold virtue) ಯಾವುದೇ ಭಾವವೂ ಇಲ್ಲದೆ ತನ್ನನ್ನು ಅನಾವರಣಗೊಳಿಸಿಕೊಳ್ಳುವಂಥದು.

ಒಬ್ಬ ವ್ಯಕ್ತಿಯ ಹಕ್ಕುಗಳು ಮತ್ತು ಹಿತಾಸಕ್ತಿಗಳಿಗೆ ಅಪಾಯ ಉಂಟಾದಾಗಲೇ ಸಮಾಜದ ಏಕತೆ ಹಾಗೂ ಒಗ್ಗಟ್ಟಿಗೆ ಧಕ್ಕೆ ಬರುವುದು. ಆಗಲೇ ನ್ಯಾಯದ ಪ್ರಶ್ನೆ ಉಂಟಾಗುವುದು. ಎಂದರೆ 'ಅನ್ಯಾಯ' ಉಂಟಾಗುವ ಸಂಭವವಿದ್ದಾಗ ಅಥವಾ ಉಂಟಾದಾಗ ಮನುಷ್ಯ ತಿರುಗಿ ಬೀಳುತ್ತಾನೆ.

`ನ್ಯಾಯ`ದ ಧನಾತ್ಮಕ ಗುಣವನ್ನಷ್ಟೆ(possitive virtue) ನೋಡಿದಾಗ ನ್ಯಾಯ ಎಂಬುದು ನೀರಸವಾದುದು, ಆಳವಿಲ್ಲದುದು ಅಥವಾ ಚೇತನವಿಲ್ಲದುದೂ ಆಗಿ ಕಾಣುತ್ತದೆ. ಆದ್ದರಿಂದ 'ನ್ಯಾಯ' ಎಂದರೇನು ಎಂಬುದನ್ನು ಯಾವ ಸಂದರ್ಭಗಳಲ್ಲಿ ಅನ್ಯಾಯಕ್ಕೆ ವಿರೋಧ ವ್ಯಕ್ತವಾಗುತ್ತದೆ ಎಂಬುದರ ವಿಶ್ಲೇಷಣೆಯಿಂದ ಕಂಡುಕೊಳ್ಳಬಹುದು. ನ್ಯಾಯ ಎಂಬುದು ಯಾವುದೇ ಪ್ರತಿಕ್ರಿಯೆಯನ್ನು ಉದ್ದೀಪಿಸದ ಶೀತಲ ಗುಣವಾದರೆ ಅನ್ಯಾಯ ಎಂಬುದು ರಕ್ತವನ್ನು ಕುದಿಯುವಂತೆ ಮಾಡುವ ಗುಣವುಳ್ಳದ್ದು. ನ್ಯಾಯ-ಅನ್ಯಾಯ ಎಂದಾಗ ಉಂಟಾಗುವ ಈ ಭಾವ ತೀವ್ರತೆಯ ನಡುವಿನ ವ್ಯತ್ಯಾಸ ನ್ಯಾಯದ ಪರಿಕಲ್ಪನೆ ಮೂಡಿಸುವಲ್ಲಿ ಬಹಳ ಮುಖ್ಯವಾದ ಪಾತ್ರವಹಿಸುತ್ತದೆ.

ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಈ ನ್ಯಾಯ-ಅನ್ಯಾಯಗಳ ವಿಶ್ಲೇಷಣೆಯಾಗುವುದು, ನಿರ್ಧಾರವಾಗುವುದು, ಆ ಚೌಕಟ್ಟಿನೊಳಗಿಂದಲೇ ಬಂದ ಪ್ರತಿನಿಧಿಗಳಿಂದ ರೂಪಿತವಾದ ಕಾನೂನುಗಳಿಂದ. "ಮನುಷ್ಯನ ಮನಸ್ಸಿನಲ್ಲಿ ಅಚ್ಚಾದ ನೈತಿಕ ವಿಶ್ಲೇಷಣೆಯಿಂದ ಸ್ವಾಭಾವಿಕ ನ್ಯಾಯ ತೆರೆದುಕೊಳ್ಳಬೇಕು ಮತ್ತು ಮನುಷ್ಯನ ಎಲ್ಲ ಪ್ರಯತ್ನಗಳೂ ಅದಕ್ಕೆ ಹೊಂದಾಣಿಕೆಯಾಗುವಂತೆ ಇರುವುದರತ್ತ ನಿರ್ದೇಶಿತವಾಗಿರಬೇಕು." ಆದರೆ ಸ್ವಾಭಾವಿಕ ನ್ಯಾಯದ ಕೆಲವೊಂದ ಭಾಗಗಳನ್ನು ವ್ಯಕ್ತಿಗಳ ವಿವೇಚನೆಗೆ ಬಿಡಲಾಗದು ಎಂದಾಗ ಆ ಬಗ್ಗೆ ರಾಷ್ಟ್ರ ನಿರ್ದಿಷ್ಟ ಕಾನೂನುಗಳನ್ನು ರಚಿಸುತ್ತದೆ ಮತ್ತು ಪ್ರತಿಯೊಬ್ಬನೂ ಆ ಕಾನೂನುಗಳಿಗೆ ಅನುಸಾರವಾಗಿ ನಡೆದುಕೊಳ್ಳಬೇಕೆಂದು ಕಡ್ಡಾಯಗೊಳಿಸುತ್ತದೆ. ಈ ಕಾನೂನಿಗನುಸಾರವಾಗಿ ನೀಡುವ ನ್ಯಾಯವನ್ನೇ ಕಾನೂನು ರೀತ್ಯಾ ದೊರೆಯುವ ನ್ಯಾಯ ಎನ್ನುವುದು. ನ್ಯಾಯ ಪರಿಪಾಲನೆಯಲ್ಲಿ ನಿರ್ದಿಷ್ಟ ನಾಡಿನಲ್ಲಿ ಅನ್ವಯವಾಗುವುದು ಅಲ್ಲಿ ರಚಿತವಾದ ಇಂಥ ಕಾನೂನುಗಳು. ಈ ಕಾನೂನುಗಳನ್ನು ಜಾರಿಗೊಳಿಸುವುದು ನ್ಯಾಯಾಲಯಗಳು. ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ಸಾಮಾನ್ಯ ಜನತೆಗೆ ಕಾನೂನಿನ ಪ್ರಕಾರ ನ್ಯಾಯದೊರಕಿಸಿಕೊಡಲಾಗುತ್ತದೆ ಎಂಬ ಕಾರಣಕ್ಕೆ ನ್ಯಾಯಾಂಗಕ್ಕೆ ಅತ್ಯುನ್ನತ ಸ್ಥಾನವನ್ನು ನೀಡಲಾಗಿದೆ. 'ನ್ಯಾಯ' ಎಂಬ ಪರಿಕಲ್ಪನೆಯ ಅಮೂರ್ತತೆಯನ್ನು 'ನ್ಯಾಯ' ಎಂಬುದು ನಾಡಿನ ಕಾನೂನಿಗನುಸಾರವಾಗಿ ಇರಬೇಕು ಎಂದು ಹೇಳುವ ಮೂಲಕ ಕಡಿಮೆ ಮಾಡಲಾಗಿದೆ. ಇದರಿಂದ ನ್ಯಾಯವನ್ನು ಕಾನೂನಿನ ಮೂಲಕವೇ ಪಡೆಯಬೇಕಾದುದು ಕಡ್ಡಾಯವಾಗುತ್ತದೆ. ಆದ್ದರಿಂದಲೇ 'ನ್ಯಾಯದ ಶೋಧನೆ' ಕಾನೂನಿನ ಪರಮೋತ್ಕೃಷ್ಟ ಉದ್ದೇಶವಾಗುತ್ತದೆ. ಆದ್ದರಿಂದ ಕಾನೂನಿನ ಪ್ರಕಾರ ನ್ಯಾಯಪರಿಪಾಲನೆ ಎಂದರೆ, ನಿಗಧಿಪಡಿಸಿದ ನಿಯಮಗಳಿಗನುಸಾರವಾಗಿ ತೀರ್ಪು ನೀಡುವುದು. ಈ

ಕಾನೂನುಗಳು, ಕಾನೂನುಗಳಾಗಿ ಮಾನ್ಯತೆ ಪಡೆಯುವುದು ನ್ಯಾಯಾಲಯಗಳು ಇವನ್ನು ಪಾಲಿಸಿವೆ ಅಥವಾ ಮನ್ನಣೆ ನೀಡಿವೆ ಎಂಬುದರಿಂದಲ್ಲ, ನ್ಯಾಯಾಲಯಗಳು ಇವಕ್ಕೆ ಮನ್ನಣೆ ನೀಡುವುದಕ್ಕೆ ಮುಂಚೆಯೇ ಅವು ಕಾನೂನುಗಳಾಗಿದ್ದವು. ಇವು ಶಾಸನಾತ್ಮಕ ಕಾನೂನುಗಳು-statute law. ಆದರೆ ಇದನ್ನು ಹೊರತುಪಡಿಸಿಯೂ, ಆತ್ಮಸಾಕ್ಷಿಗೆ ಹಾಗೂ ಸ್ವಾಭಾವಿಕ ನ್ಯಾಯಕ್ಕೆ ಅನುಗುಣವಾಗಿ ನೀಡುವ ತೀರ್ಪು `ನ್ಯಾಯ` ಎನಿಸಿಕೊಳ್ಳುತ್ತದೆ. ಯಾವುದೇ ವಿಷಯದ ಬಗ್ಗೆ ರಚಿಸಲಾದ ಕಟ್ಟುನಿಟ್ಟಾದ ನಿಯಮಗಳು ಇರುವಂಥ ವ್ಯವಸ್ಥೆಯಲ್ಲಿಯೂ ಸಹ ಇಂಥ ನ್ಯಾಯಕ ವಿವೇಚನೆಗೆ ಅವಕಾಶವಿದ್ದೇ ಇರುತ್ತದೆ. ನ್ಯಾಯಿಕ ವಿವೇಚನೆಯಿಲ್ಲದೆ ನ್ಯಾಯಪರಿಪಾಲನೆ ಮಾಡುವುದು ಯಾವುದೇ ವ್ಯವಸ್ಥೆಯಲ್ಲಿಯೂ ಅಸಾಧ್ಯ. ಏಕೆಂದರೆ ಕೆಲವೊಮ್ಮೆ ಶಾಸನಾನ್ಮಕ ಕಾನೂನನ್ನು ಕಟ್ಟುನಿಟ್ಟಾಗಿ ಅನ್ವಯಿಸಿ ತೀರ್ಪು ನೀಡಿದಾಗ ಅನ್ಯಾಯವಾಗುವ ಸಂಭವವಿರುತ್ತದೆ.[೬] ಆದ್ದರಿಂದ ಕಾನೂನಿನ ಮೂಲ ಉದ್ದೇಶವನ್ನು ಸಾಧಿಸುವುದಕ್ಕಾಗಿ ಬಳಸುವ ನ್ಯಾಯಿಕ ವಿವೇಚನೆ ನ್ಯಾಯ ಪರಿಪಾಲನೆಯಲ್ಲಿ ಯಾವಾಗಲೂ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಆಯಾ ಪ್ರಕರಣದ ವಿವರಗಳನ್ನಾಧರಿಸಿ, ಕಾನೂನಿನ ಕಟ್ಟುನಿಟ್ಟಾದ ವ್ಯಾಖ್ಯಾನವನ್ನೂ ಮೀರಿ, ಆ ಸಂದಭರದಲ್ಲಿ ವಿವೇಚನೆಯನ್ನು, ಧರ್ಮವನ್ನು, ನೈತಿಕತೆಯನ್ನು ಆಧರಿಸಿ ನೀಡುವ ತೀರ್ಪು ಗಳೂ ಕಾನೂನುಗಳ ಉದ್ದೇಶವನ್ನು ಸಾಧಿಸುವಲ್ಲಿ ನೆರವಾಗುತ್ತವೆ.[೭] ಇವನ್ನು ನ್ಯಾಯಾಧೀಶಕೃತ ಕಾನೂನುಗಳು ಎನ್ನಬಹುದು. ಕಾನೂನಿನ ಅನ್ವಯ ನೀಡಿದ ತೀರ್ಪು ಮತ್ತು ನ್ಯಾಯಿಕ ವಿವೇಚನೆಯ ಪ್ರಕಾರ ನೀಡಿದ ತೀರ್ಪುಗಳ ನಡುವೆ ಸಂಘರ್ಷ ಉಂಟಾಗದಿದ್ದಲ್ಲಿ ನ್ಯಾಯಪರಿಪಾಲನೆ ಸುಗಮವಾಗುತ್ತದೆ. ಇವೆರಡರಲ್ಲಿ ಯಾವುದು ಮುಖ್ಯ ಎಂಬುದು ಆಯಾ ಪ್ರಕರಣದ ವಿವರಗಳನ್ನು ಅವಲಂಬಿಸಿರುತ್ತದೆ.

ನ್ಯಾಯಿಕ ವಿವೇಚನೆಯ ಸಂದರ್ಭ ಉಂಟಾಗುವುದು ಲಿಖಿತ ಕಾನೂನನ್ನು ವ್ಯಾಖ್ಯಾನಿಸಿ ಅದನ್ನು ನಿರ್ದಿಷ್ಟ ಪ್ರಕರಣಕ್ಕೆ ಅನ್ವಯಿಸುವ ಸಂದರ್ಭದಲ್ಲಿ. ಆದರೆ ಭಾರತೀಯ ಸಂದರ್ಭದಲ್ಲಿ ಕಾನೂನಿಗೆ ಲಿಖಿತ ರೂಪ ಕೊಡುವುದಕ್ಕೆ ಮುನ್ನ ಜಾರಿಯಲ್ಲಿದ್ದುದು ನಮ್ಮ ಧರ್ಮಗ್ರಂಥಗಳಲ್ಲಿ ನಿರೂಪಿತವಾದ ಕಾನೂನುಗಳು ಹಾಗೂ ಸಮುದಾಯಗಳಲ್ಲಿ ಒಪ್ಪಿತವಾದ ಆಚರಣೆಯಲ್ಲಿದ್ದ ಮತ್ತು ರೂಢಿಯಲ್ಲಿದ್ದ ಸಾಂಪ್ರದಾಯಿಕ ಕಾನೂನುಗಳು.(Customary law)

ಕಾನೂನು ನೀಡುವ ನ್ಯಾಯ ಹಾಗೂ ನ್ಯಾಯ ನೀಡಿಕೆಯಲ್ಲಿ ನ್ಯಾಯಿಕ ವಿವೇಚನೆಯ ಪಾತ್ರವನ್ನು ವಿವರವಾಗಿ ವಿಶ್ಲೇಷಿಸುವುದಕ್ಕೆ ಮುನ್ನ, ಕಾನೂನು ಈಗಿರುವ ರೂಪ ಪಡೆಯುವುದಕ್ಕೆ ಕಾರಣವಾದ ಅದರ ಮೂಲವನ್ನು ಸಂಕ್ಷಿಪ್ತವಾಗಿಯಾದರೂ ತಿಳಿದುಕೊಳ್ಳುವುದು ಅತ್ಯಗತ್ಯ.

ಭಾರತದ ಧಾರ್ಮಿಕ ಇತಿಹಾಸ ಎಷ್ಟು ಪ್ರಾಚೀನವಾದುದೋ ನಮ್ಮ ಕಾನೂನಿನ ಇತಿಹಾಸವೂ ಅಷ್ಟೇ ಪ್ರಾಚೀನವಾದುದು. ಏಕೆಂದರೆ ಭಾರತದಲ್ಲಿ ಕಾನೂನನ್ನು ಧರ್ಮದಿಂದ ಬೇರ್ಪಡಿಸಲಾಗುವುದಿಲ್ಲ. ನಮ್ಮ

ಧರ್ಮಕ್ಕೆ ಮೂಲವಾದ ವೇದಗಳಲ್ಲಿ ಪುರಾಣಗಳು ಸ್ಮೃತಿ ಮತ್ತು ಇತರ ಪ್ರಾಚೀನ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಹಿಂದೂ ನ್ಯಾಯಶಾಸ್ತ್ರ ಅಥವಾ ಕಾನೂನು ಪದ್ಧತಿ ಪ್ರತಿಪಾದಿತವಾಗಿದೆ ಎನ್ನಬಹುದು. ಹಿಂದೆ ಹೇಳಿದಂತೆ ಧರ್ಮಕ್ಕೆ ಮೂಲ ಎನ್ನಲಾಗುವ ವೇದಗಳಲ್ಲಿ ಕಾನೂನುಗಳು ನೇರವಾಗಿ ನಿರೂಪಿತವಾಗಿಲ್ಲದಿದ್ದರೂ, ನಂತರದ ಸ್ಮೃತಿಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾದ ಎಲ್ಲ ಕಾನೂನುಗಳಿಗೂ ವೇದಗಳಲ್ಲಿ ವಿಧಿಸಿದ್ದ ವಿಧಿ ನಿಷೇಧಗಳೇ ಆಧಾರವಾಗಿದ್ದವು. ಉದಾಹರಣೆಗೆ ವೇದಗಳಲ್ಲಿನ "ಸತ್ಯಂ ವದ"(ಸತ್ಯವನ್ನು ಹೇಳು) "ನಾನೃತಂ ವದೇತ್" (ಅಸತ್ಯವನ್ನು ಎಂದಿಗೂ ಹೇಳಬೇಡ) ಎಂಬುವು ನಂತರ ಬಂದ ಸ್ಮೃತಿಗಳಲ್ಲಿ ಕಾನೂನಿನ ರೂಪ ತಳೆದವು. ಸುಳ್ಳು ಸಾಕ್ಷ್ಯ ನೀಡುವ ವಾದಿ ಪ್ರತಿವಾದಿ ಹಾಗೂ ಸಾಕಿಗಳನ್ನು ಶಿಕ್ಷಿಸಲು ಸ್ಮೃತಿಗಳಲ್ಲಿ ಸ್ಪಷ್ಟ ಉಪಬಂಧಗಳಿವೆ. ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ವೇದಗಳಲ್ಲಿ ವಿಧಿಸಲಾದ ಕೆಲವು ಸಕಾರಾತ್ಮಕ ಹಾಗೂ ನಕಾರಾತ್ಮಕ ವಿಧಿಗಳಿಂದ ಸ್ಮೃತಿಗಳು ಹಾಗೂ ಧರ್ಮಶಾಸ್ತ್ರ ಗ್ರಂಥಗಳು ಮಾರ್ಗದರ್ಶನ ಪಡೆದವು. ಆದ್ದರಿಂದ ಕಾನೂನುಗಳ ಮೂಲವನ್ನು ವೇದಗಳಿಗೆ ಕೊಂಡೊಯ್ಯಬಹುದಾದರೂ, ಆಧುನಿಕ ಸಿವಿಲ್ ಹಾಗೂ ಅಪರಾಧಿಕ ಕಾನೂನುಗಳಿಗೆ ಹೋಲಿಸಬಹುದಾದ ಕಾನೂನು ಸಾಹಿತ್ಯ(ವ್ಯವಹಾರ ಕಾನೂನು) ನಮಗೆ ದೊರೆಯುವುದು ಸ್ಮೃತಿಗಳಲ್ಲಿ. ಆದರೆ ಈ ವ್ಯವಹಾರ ಧರ್ಮ-ಸ್ಮೃತಿಗಳಲ್ಲಿ ನಿರೂಪಿತವಾದ ಧರ್ಮದ ಒಂದು ಭಾಗ ಮಾತ್ರ.

ಹಿಂದೂ ಧರ್ಮಶಾಸ್ತ್ರ ಗ್ರಂಥಗಳು ಧಾರ್ಮಿಕ ನೈತಿಕ ಕಾನೂನುಗಳನ್ನಷ್ಟೇ ಅಲ್ಲದೆ ರಾಜಧರ್ಮವನ್ನು ಹೇಳುವ ಮೂಲಕ ಸಿವಿಲ್ ಮತ್ತು ಅಪರಾಧಿಕ ಕಾನೂನಿನ ಧರ್ಮ ಸೂಕ್ಷ್ಮಗಳನ್ನು ನಿರೂಪಿಸಿವೆ.

ಪ್ರಾಚೀನ ಭಾರತದ ಅನೇಕ ಭಾಗಗಳಲ್ಲಿ ಸ್ಮೃತಿಗಳನ್ನು ಅಧಿಕೃತ ಕಾನೂನುಗಳೆಂದು ಗುರುತಿಸುತ್ತಿದ್ದರು. ರಾಜನ ಅಸ್ಥಾನದ ಪ್ರಕಾಂಡ ಪಂಡಿತರು ಇಲ್ಲವೇ ಧರ್ಮಶಾಸ್ತ್ರರಿಂದ ಇವು ರಚಿತವಾಗುತ್ತಿದ್ದವು. ಸ್ಮೃತಿಗಳಲ್ಲಿ ಸಂಕ್ಷಿಪ್ತವಾಗಿ ಇಲ್ಲವೇ ಸೂತ್ರ ರೂಪದಲ್ಲಿರುತ್ತಿದ್ದ ಕಾನೂನನ್ನು ಅದಕ್ಕಾಗಿಯೇ ಇರುತ್ತಿದ್ದ ಪಂಡಿತರು ವಿಸ್ತರಿಸಿ ವಿವರಣೆ ನೀಡುತ್ತಿದ್ದರು. ಇಂಥ ಪ್ರಯತ್ನಗಳ ಫಲವಾಗಿ ಮೀಮಾಂಸೆಗಳು (ವ್ಯಾಖ್ಯಾನಗಳು) ರಚನೆಗೊಂಡವು.

ಸ್ಮೃತಿಗಳ ಕ್ರೋಢೀಕರಣ ಹಾಗೂ ಮೀಮಾಂಸೆಗಳ ರಚನೆಯಿಂದಾಗಿ ಶಾಸ್ತ್ರಗಂಥಗಳಲ್ಲಿದ್ದ ಕಾನೂನು ಗಳನ್ನು ಬದಲಾಗುತ್ತಿದ್ದ ಸಾಮಾಜಿಕ ಅಗತ್ಯಗಳಿಗೆ ಸ್ಪಂದಿಸಿ ವ್ಯಾಖ್ಯಾನಿಸಲು ನ್ಯಾಯ ಶಾಸ್ತ್ರಜ್ಞರಿಗೆ ಸಾಧ್ಯವಾಯಿತು. ಖ್ಯಾತ ನ್ಯಾಯ ಶಾಸ್ತ್ರಜ್ಞರು ಸ್ಮೃತಿಗಳಿಗೆ ವ್ಯಾಖ್ಯಾನ ಬರೆಯುವ ಮೂಲಕ ಸ್ಮೃತಿಗಳಲ್ಲಿ ನಿರೂಪಿತವಾಗಿದ್ದ ಕಾನೂನುಗಳಿಗೆ ಸ್ಪಷ್ಟ ರೂಪ ಹಾಗೂ ಅರ್ಥ ದೊರೆಯಿತು. ಇದರಿಂದ ಅವುಗಳನ್ನು ಅನ್ವಯಿಸುವುದು ಸುಲಭವಾಯಿತು. ಸ್ಮೃತಿಗಳಲ್ಲಿ ನಿರೂಪಿತವಾಗಿರುವ ವ್ಯವಹಾರ ಕಾನೂನುಗಳಿಗೆ ಮತ್ತು ವಿವಾಹ, ದತ್ತಕ, ಪಾಲುದಾರಿಕೆ ಅಥವಾ ವಾರಸುದಾರಿಕೆಯಂಥ ಸಿವಿಲ್ ಸ್ವರೂಪದ

ಕಾನೂನುಗಳಿಗೆ ಆಗ ಆಚರಣೆಯಲ್ಲಿದ್ದ ಸಂಪ್ರದಾಯಗಳು ಹಾಗೂ ರೂಢಿಗಳು ಆಧಾರವಾಗಿದ್ದವು ಎಂದು "ಹಿಂದೂ ಲಾ ಅಂಡ್ ಯೂಸೇಜ್ " ಎಂಬ ಬೃಹತ್ ಗ್ರಂಥವನ್ನು ಬರೆದ ಮೈನ್ ಅವರು ಅಭಿಪ್ರಾಯ ಪಡುತ್ತಾರೆ. ಹಿಂದೂ ನ್ಯಾಯ ಶಾಸ್ತ್ರಜ್ಞರು ಸ್ಮೃತಿಗಳಲ್ಲಿ ನಿರೂಪಿತವಾಗಿದ್ದ ಕಾನೂನುಗಳನ್ನು ವ್ಯಾಖ್ಯಾನಿಸಿದುದಷ್ಟೇ ಅಲ್ಲದೆ ಅದನ್ನು ಅಗತ್ಯಕ್ಕೆ ತಕ್ಕಂತೆ ಮಾರ್ಪಾಟು ಮಾಡಿದರು. ಇಲ್ಲವೇ ಅವುಗಳ ಅನ್ವಯವನ್ನು ವಿಸ್ತೃತಗೊಳಿಸಿದರು.

ಅದುವರೆಗೆ ಆಚರಣೆಯಲ್ಲಿದ್ದ ಧರ್ಮಶಾಸ್ತ್ರದ ನಿಯಮಗಳನ್ನು ಒಂದೆಡೆ ಕ್ರೋಢಿಕರಿಸುವುದು ತೀರಾ ಅಗತ್ಯವಾಗಿದ್ದಂಥ ಸಮಯದಲ್ಲಿ ಬಂದ ಮನುಸ್ಮೃತಿ(೨೦೦ ಕ್ರಿ.ಪೂ) ಅದುವರೆಗೆ ಧರ್ಮಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾಗಿದ್ದ ಎಲ್ಲ ನಿಯಮಗಳನ್ನೂ ಒಳಗೊಂಡು ಸಮಗ್ರ ಸಂಕಲನವಾಗಿತ್ತು. ಇದರಲ್ಲಿ ಬಳಸಲಾದ ಸರಳವಾದ ಭಾಷೆ ಹಾಗೂ ಸಮಗ್ರತೆ ಹಾಗೂ ಇದರಲ್ಲಿನ ಸ್ಪಷ್ಟತೆಗಳಿಂದಾಗಿ, ಇಂದಿಗೂ ಇದನ್ನು ಹಿಂದೂ ನ್ಯಾಯಶಾಸ್ತ್ರದ ಅಧಿಕೃತ ಮೂಲವೆಂದೇ ಪರಿಗಣಿಸಲಾಗುತ್ತದೆ.

ಆ ನಂತರದ ಸ್ಮೃತಿಗಳಲ್ಲಿ ಯಾಜ್ಞಾವಲ್ಕ್ಯ, ಸ್ಮೃತಿ, ನಾರದ ಸ್ಮೃತಿ, ಬೃಹಸ್ಪತಿ ಸ್ಮೃತಿ, ಕಾತ್ಯಾಯನ ಸ್ಮೃತಿಗಳು ಮುಖ್ಯವಾದವುಗಳು. ಸ್ಮೃತಿಗಳು ಸಮಾಜಕ್ಕೆ ಅಗತ್ಯವಿದ್ದ ಎಲ್ಲ ಶಾಖೆಗಳ ಬಗೆಗಿನ ಕಾನೂನನ್ನು ಒಳಗೊಂಡಿದ್ದವು.

ಸ್ಮೃತಿಗಳು ಹಾಗೂ ಧರ್ಮಶಾಸ್ತ್ರಗಳಲ್ಲದೆ, ಕೌಟಿಲ್ಯನ ಅರ್ಥಶಾಸ್ತ್ರ, ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ನಂತರದ ಶುಕ್ರ ನೀತಿಸಾರ ಇವುಗಳೂ ಸಹ ನಿಸ್ಸಂದೇಹವಾಗಿ ಪ್ರಾಚೀನ ಕಾನೂನು ವ್ಯವಸ್ಥೆಯ ಮುಖ್ಯ ಮೂಲಾಧಾರ ಗ್ರಂಥಗಳಾಗಿವೆ. ಕೌಟಿಲ್ಯನ ಅರ್ಥಶಾಸ್ತ್ರ, ಧರ್ಮಶಾಸ್ತ್ರವಲ್ಲದಿದ್ದರೂ ರಾಜ್ಯ ತಂತ್ರವನ್ನರುಹುವ ಉತ್ಕೃಷ್ಟ ಕೃತಿ. ಇದು ಭಾರತೀಯ ಸಂವಿಧಾನದ ಚರಿತ್ರೆ ಹಾಗೂ ಕಾನೂನಿನ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುತ್ತದೆ.

ಮನುಸ್ಮೃತಿಗೆ ಹೋಲಿಸಿದರೆ ಯಾಜ್ಞಾವಲ್ಕ್ಯ ಸ್ಮೃತಿ ಹೆಚ್ಚು ಸಂಕ್ಷಿಪ್ತವಾದುದು ಹಾಗೂ ವೈಜ್ಞಾನಿಕವಾದುದು ಎನ್ನಲಾಗಿದೆ. ಮಹಿಳೆಯರ ವಾರಸುದಾರಿಕೆ ಹಕ್ಕು ಹಾಗೂ ಆಸ್ತಿಯನ್ನು ಹೊಂದುವ ಹಕ್ಕುಗಳ ಬಗ್ಗೆ ಮನುವಿಗಿಂತ ಯಾಜ್ಞಾವಲ್ಕ್ಯ ಉದಾರವಾಗಿದ್ದಾನೆ. "ಮಿತಾಕ್ಷರ" ಎಂಬುದು ವಿಜ್ಞಾನೇಶ್ವರ ಇದಕ್ಕೆ ಬರೆದ ಭಾಷ್ಯ. ವಿಜ್ಞಾನೇಶ್ವರನ ಈ ಭಾಷ್ಯ, ಹಿಂದೂ ಕಾನೂನಿನ ಅಧಿಕೃತ ಆಕರ ಗ್ರಂಥವೆಂದು ಸ್ವೀಕೃತವಾಗಿದೆ. ಉತ್ತರಾಧಿಕಾರ, ಸ್ತ್ರೀಧನ ಈ ಕೆಲವು ವಿಷಯಗಳ ಬಗ್ಗೆ(ತಿದ್ದುಪಡಿಯಾಗಿರುವುದನ್ನು ಬಿಟ್ಟರೆ) ಭಾರತದಾದ್ಯಂತ ಜಾರಿಯಲ್ಲಿರುವ ಹಿಂದುಗಳ ವೈಯಕ್ತಿಕ ಕಾನೂನಿಗೆ ಮಿತಾಕ್ಷರ ಆಧಾರ ಗ್ರಂಥವಾಗಿದೆ.

ಬೃಹಸ್ಮತಿ, ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಗಳನ್ನು ಸ್ಪಷ್ಟವಾಗಿ ಬೇರ್ಪಡಿಸಿದ ಮೊತ್ತಮೊದಲ ನ್ಯಾಯಶಾಸ್ತ್ರಜ್ಞ. ಯಾವುದೇ ಪ್ರಕರಣದಲ್ಲಿ ಕಾನೂನನ್ನು ಅಕ್ಷರಶಃ ಅನ್ವಯಿಸದೆ, ಪ್ರತಿ ಪ್ರಕರಣದ ವಾಸ್ತವಾಂಶಗಳು ಮತ್ತು ಸನ್ನಿವೇಶಗಳಿಗೆ ಗಮನ ನೀಡಿ ತೀರ್ಮಾನಿಸಬೇಕು ಎಂದಿದ್ದಾನೆ. ಈ ದೃಷ್ಟಿಯಿಂದ ಇದು ನಮಗೆ ಮುಖ್ಯವಾಗುತ್ತದೆ.

ಕಾತ್ಯಾಯನ ಸ್ಮೃತಿ - ಸ್ಮೃತಿಗಳಲ್ಲಿ ಈಚಿನದು ಮತ್ತು ಅತ್ಯಂತ ಮೌಲಿಕವಾದುದು. ಇದರಲ್ಲಿ ವಿಧಿಸಲಾಗಿರುವ ಕಾನೂನಿನ ನಿಯಮಗಳು ಆಧುನಿಕ ಕಾನೂನಿನ ನಿಯಮಗಳೊಂದಿಗೆ ಅಚ್ಚರಿಯೆನಿಸುವಷ್ಟು ಹೋಲುತ್ತದೆ. "ಸ್ತ್ರೀಧನದ ಬಗ್ಗೆ ಜಾರಿಯಿರುವ ನಿಯಮಗಳನ್ನು ವಿವರಿಸುವುದಕ್ಕಾಗಿ ಇವನು ೩೭ ಶ್ಲೋಕಗಳನ್ನು ಮೀಸಲಿಟ್ಟಿದ್ದಾನೆ ಹಾಗೂ ಪತಿಗೆ ತನ್ನ ಪತ್ನಿ ಅಥವಾ ಪುತ್ರನ ಮೇಲೆ ಒಡೆತನವಿಲ್ಲ ಎನ್ನುವ ಮೂಲಕ ವಸಿಷ್ಠ, ಯಾಜ್ಞವಲ್ಕ್ಯ ಮತ್ತು ಇತರ ಮುನಿಗಳಿಂದ ಭಿನ್ನವಾಗುತ್ತಾನೆ" ಎಂದು ಪಿ.ವಿ.ಕಾಣೆಯವರು ಕಾತ್ಯಾಯನ ಸ್ಮೃತಿಯ ಮುಖ್ಯ ಅಂಶಗಳನ್ನು ನಿರೂಪಿಸುವಾಗ ಅಭಿಪ್ರಾಯ ಪಡುತ್ತಾರೆ.(ಕಾತ್ಯಾಯನ-ಪಿ.ವಿ.ಕಾಣೆ)

ಸ್ಮೃತಿಗಳು ಸಮಾಜಕ್ಕೆ ಅಗತ್ಯವಿದ್ದ ಕಾನೂನಿನ ಎಲ್ಲ ಶಾಖೆಗಳನ್ನು ಒಳಗೊಂಡಿದ್ದವು. ಮನುಸ್ಮೃತಿಯೇ ಮೊದಲಾದ ಸ್ಮೃತಿಗಳು ಕ್ರೋಡೀಕರಣವಾದ ನಂತರ ಅಗತ್ಯವಾದದ್ದು ಅವುಗಳ ವ್ಯಾಖ್ಯಾನ. ಇಂಥ ವ್ಯಾಖ್ಯಾನಗಳ ಉದ್ದೇಶಗಳೆಂದರೆ ಮೊದಲನೆಯದಾಗಿ ಸ್ಮೃತಿಗಳಲ್ಲಿದ್ದ ವಿರುದ್ಧಾರ್ಥಕವಾದ ಕ್ಲಿಷ್ಟವಾದ ಹಾಗೂ ಅಸ್ಪಷ್ಟವಾದ ಉಪಬಂಧಗಳನ್ನು ಅರ್ಥೈಸುವುದು. ಎರಡನೆಯದಾಗಿ, ದಾಖಲೆಗಳನ್ನಿಡುವಂಥ ನ್ಯಾಯಲಯ ವ್ಯವಸ್ಥೆ ಇಲ್ಲದಿದ್ದುದರಿಂದ ಹಾಗೂ ಪೂರ್ವ ನಿದರ್ಶನಗಳಾಗಿ ಹಾಗೂ ತಿದ್ದುಪಡಿ ಮಾಡಲು ಮಾರ್ಗದರ್ಶನ ಪ್ರಕರಣಗಳಾಗಿ ಬಳಸಬಹುದಾದ ರೀತಿಯಲ್ಲಿ ನಿರ್ಣೀತ ಪ್ರಕರಣಗಳನ್ನು ದಾಖಲು ಮಾಡುವ ವ್ಯವಸ್ಥೆ ಇಲ್ಲದಿದ್ದುದರಿಂದ ನ್ಯಾಯಾಲಯಗಳು ನೀಡಿದ ವ್ಯಾಖ್ಯಾನಗಳನ್ನು ಅಥವಾ ಸಮಾಜ ಒಪ್ಪಿದ ಆಚರಣೆ ಮತ್ತು ರೂಢಿಗಳನ್ನು ಪ್ರಸ್ತುತ ಕಾನೂನು ವ್ಯವಸ್ಥೆಯಲ್ಲಿಯೇ ಅಳವಡಿಸಿ ಕೊಳ್ಳುವುದು ಅಗತ್ಯವಾಗಿತ್ತು. ಈ ಕಾರ್ಯವನ್ನು ನಮ್ಮ ಮೀಮಾಂಸಕಾರರು ಯಶಸ್ವಿಯಾಗಿ ಮಾಡಿದರೆನ್ನ ಬಹುದು. ಇದರ ಫಲವಾಗಿ ಧರ್ಮಶಾಸ್ತ್ರಗಳು ಹಾಗೂ ಸ್ಮೃತಿಗಳು ಮೂಲ ಕಾನೂನುಗಳಾದರೆ ಮೀಮಾಂಸೆಗಳು ಆ ಕಾಲದಲ್ಲಿ ಜಾರಿಯಲ್ಲಿದ್ದ ಸಮಗ್ರ ಕಾನೂನನ್ನು ವಿಸ್ತೃತವಾಗಿ ಒಳಗೊಂಡಿದ್ದವು ಎನ್ನಬಹುದು. ಹೀಗೆ ಮೀಮಾಂಸಕರನ್ನು ನಮ್ಮ ಹಿಂದೂ ಕಾನೂನು ವ್ಯವಸ್ಥೆಯ ಶಿಲ್ಪಿಗಳು ಎನ್ನಬಹುದು. ಸ್ಮೃತಿಗಳ ಸೀಮಿತಾರ್ಥವುಳ್ಳ ಉಪಬಂಧಗಳಿಗೆ ಅವರು ವಿಸ್ತೃತಾರ್ಥ ನೀಡಿದರು. ಈ ದೃಷ್ಟಿಯಿಂದ ಕಾನೂನಿನ ಬೆಳವಣಿಗೆಗೆ ಅವರ ಕೊಡುಗೆ ಅಪಾರವಾದುದು.

ಭಾರತದೇಶದ ವಿಸ್ತಾರತೆಯಿಂದಾಗಿ ಈ ವ್ಯಾಖ್ಯಾನಗಳು ಪ್ರದೇಶದಿಂದ ಪ್ರದೇಶಕ್ಕೆ, ಆಯಾ ಪ್ರದೇಶದ ಆಚರಣೆಗಳು ಹಾಗೂ ರೂಢಿಗಳನ್ನು ಅಳವಡಿಸಿಕೊಂಡು, ಭಿನ್ನವಾದರೂ, ಎರಡು ಮುಖ್ಯ ಮೀಮಾಂಸೆಗಳಿಂದಾಗಿ ಎರಡು ವಿಭಾಗಗಳಾಗಿ ಕಾನೂನು ಬೆಳೆಯಿತು.

೧. ಮಿತಾಕ್ಷರ ಪದ್ಧತಿ - ಇದರ ಪ್ರತಿಪಾದಕ ವಿಜ್ಞಾನೇಶ್ವರ

೨. ದಾಯಭಾಗ ಪದ್ಧತಿ - ಇದರ ಪ್ರತಿಪಾದಕ ಜೀಮೂತವಾಹನ

ಸ್ಮೃತಿಕಾರರು ಮತ್ತು ಮೀಮಾಂಸಕಾರರಿಂದಾಗಿ ಎಂದೂ ಜಡವಾಗಿಲ್ಲದಿದ್ದ ಕಾನೂನು ಕ್ಷೇತ್ರ, ವಿದೇಶೀ ಆಕ್ರಮಣಕಾರರ ಕಾಲದಲ್ಲಿ ತಟಸ್ಥವಾಯಿತು. ಆದರೆ ಮತ್ತೆ ಬ್ರಿಟಿಷರ ಆಡಳಿತದ ಕಾಲದಲ್ಲಿ ನ್ಯಾಯಿಕ ವ್ಯಾಖ್ಯಾನದಿಂದ ಭಾಗಶಃ ಮತ್ತು ಶಾಸನ ರಚನೆಯ ಪ್ರಕ್ರಿಯೆಯಿಂದ ಭಾಗಶಃ ಹಿಂದೂ ಕಾನೂನು ಮತ್ತೆ ಬೆಳವಣಿಗೆ ಕಂಡಿತು.

ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ, ಭಾರತದಲ್ಲಿ ನ್ಯಾಯಾಂಗವ್ಯವಸ್ಥೆಯ ಅಧಿಕಾರವನ್ನು ಹಾಗೂ ಜವಾಬ್ದಾರಿಗಳನ್ನು ವಹಿಸಿಕೊಂಡ ಬ್ರಿಟಿಷರು ಭಾರತೀಯರಿಗೆ ಅವರವರ ಧರ್ಮಗಳಲ್ಲಿ ಪ್ರಚಲಿತವಿರುವ ವೈಯಕ್ತಿಕ ಕಾನೂನುಗಳ ಅನುಸಾರವೇ ನ್ಯಾಯಪರಿಪಾಲನೆ ಮಾಡುವ ನೀತಿಯನ್ನು ಅನುಸರಿಸಿದರು. ಹಿಂದೂಗಳಿಗೆ ಸಂಬಂಧಿಸಿದಂತೆ, ವಿವಾಹ, ದತ್ತಕ ವಾರಸುದಾರಿಕೆ ಮತ್ತು ಔರಸಹಕ್ಕುಗಳ ವಿಷಯಗಳಿಗೆ ಸಂಬಂಧಿಸಿದ ದಾವೆಗಳಲ್ಲಿ ಹಿಂದೂ ಗ್ರಂಥಸ್ಥ ಕಾನೂನನ್ನು ಅನ್ವಯಿಸುವ ಜವಾಬ್ದಾರಿಯನ್ನು ಆಗಿನ ಬ್ರಿಟಿಷ್ ಭಾರತೀಯ ನ್ಯಾಯಾಲಯಗಳು ವಹಿಸಿಕೊಂಡವು. ಈ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕಾಗಿ ಹಿಂದೂ ಕಾನೂನನ್ನು ವ್ಯಾಖ್ಯಾನಿಸಬಲ್ಲಂಥ ಹಾಗೂ ತಮ್ಮ ಮುಂದೆ ಬರುವ ವಿವಾದಗಳ ಬಗ್ಗೆ ಸಲಹೆ ನೀಡಬಲ್ಲಂಥ ಹಿಂದೂ ಪಂಡಿತರನ್ನು ಬ್ರಿಟಿಷರು ನೇಮಿಸಿಕೊಂಡರು. ಜೊತೆಗೆ ಕಾನೂನು ಸಿದ್ಧಾಂತಗಳನ್ನು ಸಂಗ್ರಹಿಸುವ, ಕ್ರೋಡೀಕರಿಸುವ ಹಾಗೂ ಕಾನೂನುಗ್ರಂಥಗಳನ್ನು ಭಾಷಾಂತರಿಸುವ ಕಾರ್ಯವನ್ನು ಕೈಗೊಂಡರು. ಇವೇ ಮುಂದೆ ಬ್ರಿಟಿಷ್ - ಭಾರತೀಯ ಕಾನೂನು ವ್ಯವಸ್ಥೆಯ ಆಕರ ಗ್ರಂಥಗಳಾದವು. ೧೯ನೇ ಶತಮಾನದ ಮಧ್ಯಭಾಗದ ವೇಳೆಗೆ ಹಿಂದೂ ಪಂಡಿತರ ಸ್ಥಾನವನ್ನು ಈ ಗ್ರಂಥಗಳು ತುಂಬಿದುವೆನ್ನಬಹುದು. ಆ ನಂತರ ಗ್ರಂಥಗಳಲ್ಲಿ ನಿರೂಪಿತವಾಗಿರುವ ಕಾನೂನುಗಳನ್ನೇ ಬಹುಪಾಲು ಸಂದರ್ಭಗಳಲ್ಲಿ ಅನ್ವಯಿಸಲಾಗುತ್ತಿತ್ತು. ಹೀಗಾಗಿ ಚಾಲ್ತಿಯಲ್ಲಿದ್ದ ರೂಢಿಗತ ಕಾನೂನುಗಳನ್ನು ಅನ್ವಯಿಸುವುದು ಕಡಿಮೆಯಾಯಿತು. ಹಿಂದೂ ಕಾನೂನುಗಳನ್ನು ಅನ್ವಯಿಸಿ ಮಾಡಿದ ಬ್ರಿಟಿಷ್ ನ್ಯಾಯಪರಿಪಾಲನೆಯ ಇತಿಹಾಸ ಎಂದರೆ ರೂಢಿಗತ ಕಾನೂನುಗಳ ಅನ್ವಯ ಅವನತಿ ಹೊಂದಿದುದರ ಇತಿಹಾಸ ಎಂದೇ ಹೇಳಬಹುದು.

ಹಿಂದೂ ಕಾನೂನಿಗೆ ೧. ಸ್ಮೃತಿಗಳು ಅಥವಾ ಧರ್ಮಶಾಸ್ತ್ರಗ್ರಂಥಗಳು, ೨. ಸಂಹಿತೆ ಮತ್ತು ಭಾಷ್ಯೆಗಳು, ೩. ಆಚರಣೆಗಳು ಮೂಲ ಆಕರವಾದಂತೆಯೇ ಹಿಂದೂ ಕಾನೂನನ್ನು ಮಾರ್ಪಡಿಸುವ ರದ್ದುಗೊಳಿಸುವ ಶಾಸನಗಳೂ ಹಿಂದೂ ಕಾನೂನಿನ ಆಧುನಿಕ ಆಕರಗಳೆನಿಸಿಕೊಂಡಿವೆ. ಇವೆಲ್ಲವೂ ಹಿಂದೂ ಕಾನೂನನ್ನು ಪ್ರಗತಿ ಪರವನ್ನಾಗಿ ಮಾಡುವಲ್ಲಿ ಮುಖ್ಯಪಾತ್ರ ವಹಿಸಿದವು. ಇವುಗಳಲ್ಲಿ ಮುಖ್ಯವಾದವುಗಳೆಂದರೆ

೧. ಜಾತಿ ಅಸಾಮರ್ಥ್ಯಗಳ ನಿವಾರಣಾ ಅಧಿನಿಯಮ, ೧೮೫೦.

೨. ಹಿಂದೂ ವಿಧವಾ ಪುನರ್ವಿವಾಹ ಅಧಿನಿಯಮ.

೩. ವಿಶೇಷ ವಿವಾಹ ಅಧಿನಿಯಮ ೧೮೭೨.

೪. ಹಿಂದೂ ವಿವಾಹಿತ ಮಹಿಳೆಯರಿಗೆ ಪ್ರತ್ಯೇಕ ನಿವಾಸ ಮತ್ತು ಜೀವನಾಂಶಕ್ಕೆ ಹಕ್ಕು ಅಧಿನಿಯಮ.

೫. ಹಿಂದೂ ಮಹಿಳೆಯರ ಆಸ್ತಿ ಹಕ್ಕು ಅಧಿನಿಯಮ.

ಈ ಎಲ್ಲ ಕಾನೂನುಗಳೂ ಸಮಾಜ ಸುಧಾರಣೆಯ ಮತ್ತು ಹಿಂದೂ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವ ಉದ್ದೇಶವನ್ನು ಹೊಂದಿದ್ದವು.

## ಲಿಖಿತ ಕಾನೂನುಗಳ ಸ್ವರೂಪ

ನ್ಯಾಯಾಲಯಗಳು ಸ್ಥಾಪನೆಯಾಗುವವರೆಗೆ ಮತ್ತು ಪ್ರಚಲಿತ ಕಾನೂನುಗಳನ್ನು ಕ್ರೋಢೀಕರಿಸಿ ಅವುಗಳಿಗೆ ಗ್ರಂಥ ರೂಪ ಕೊಡುವವರೆಗೆ ರೂಢಿಗತ ನಿಯಮ(customary rules) ಗಳನ್ನೇ ಆಧರಿಸಲಾಗುತ್ತಿತ್ತು. ಇದನ್ನು ಬಹು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದುದರಿಂದ ನ್ಯಾಯಿಕ ವಿವೇಚನೆಯನ್ನು ಬಳಸಿ 'ನ್ಯಾಯದಾನ' ಮಾಡಬೇಕಾಗುತ್ತಿದ್ದ ಸಂದರ್ಭಗಳು ಕಡಿಮೆ. ಆದರೆ ನ್ಯಾಯಿಕ ವಿವೇಚನೆಯನ್ನು ಬಳಸುತ್ತಿದ್ದ ಸಂದರ್ಭಗಳೇ ಇರುತ್ತಿರಲಿಲ್ಲ ಎಂದೂ ಹೇಳಲಾಗದು. ಕ್ರೋಢೀಕೃತ ಕಾನೂನುಗಳು ಜಾರಿಗೆ ಬಂದ ನಂತರ ನ್ಯಾಯಿಕ ವಿವೇಚನೆಯನ್ನು ಬಳಸುವ ಸಂದರ್ಭಗಳು "ಪೂರ್ವ ನಿದರ್ಶನ"ಗಳಿಂದಾಗಿ (precedent) ಮತ್ತಷ್ಟು ಸೀಮಿತಗೊಂಡವು. ಲಿಖಿತ ಕಾನೂನಿನ ಪ್ರಯೋಜನಗಳು ಮೂರು ಬಗೆಯದು.

### ನಿಖರವಾದ ಲಿಖಿತ ಕಾನೂನುಗಳು

೧. ನ್ಯಾಯ ಪರಿಪಾಲನೆಗೆ ಗಣನೀಯ ಪ್ರಮಾಣದಲ್ಲಿ ಏಕರೂಪತೆಯನ್ನು ಹಾಗೂ ಖಚಿತತೆಯನ್ನು ನೀಡುತ್ತದೆ. ಯಾವುದೇ ವಿಷಯದ ಬಗ್ಗೆ ರಾಜ್ಯದಲ್ಲಿ ಪ್ರಚಲಿತವಿರುವ ಕಾನೂನು ಏನು ಮತ್ತು ಆ ಕಾನೂನನ್ನು ಆಧರಿಸಿ ಒಂದು ನಿರ್ದಿಷ್ಟ ಪ್ರಕರಣದಲ್ಲಿ ನ್ಯಾಯಾಲಯ ಏನು ತೀರ್ಪು ನೀಡುತ್ತದೆ ಎಂಬುದನ್ನು ಜನತೆ ತಿಳಿದಿರಬೇಕು. ಇದು ತೀರ್ಪು ನ್ಯಾಯಯುತವಾಗಿರಬೇಕು ಎಂಬುವರಷ್ಟೇ

ಮುಖ್ಯವಾಗುತ್ತದೆ. ಕಾನೂನು ಏಕರೂಪವಾಗಿದ್ದಾಗ ಮಾತ್ರ ಇದು ಸಾಧ್ಯವಾಗುತ್ತದೆ. ನಿಶ್ಚಿತವಾದ ನಿಖರ ತತ್ತ್ವಗಳು ಮತ್ತು ನಿಯಮಗಳಿಂದ ಮಾತ್ರವೇ ಕಾನೂನಿಗೆ ಏಕರೂಪತೆಯನ್ನು ತರುವುದು ಸಾಧ್ಯವಾಗುವುದು. ಯಾವುದೇ ನಾಗರಿಕ ಸಮಾಜದಲ್ಲಿಯೂ ನ್ಯಾಯನೀಡಿಕೆಯಲ್ಲಿ ನಿರತವಾಗಿರುವ ನ್ಯಾಯಧೀಶರಾಗಲೀ ಮ್ಯಾಜಿಸ್ಟ್ರೇಟರಾಗಲೀ ನಿಗದಿತ ಕಾನೂನು ತತ್ವಗಳಿಂದ ಮುಕ್ತವಾಗಿ ನ್ಯಾಯದಾನ ಮಾಡುವುದಿಲ್ಲ. ನಾಗರಿಕತೆ ಸಂಕೀರ್ಣವಾದಷ್ಟು ಅದು ಹೆಚ್ಚು ಹೆಚ್ಚು ಕಾನೂನಿನ ನಿಯಂತ್ರಣಕ್ಕೊಳ ಪಡುವುದು ಅಗತ್ಯವಾಗುತ್ತದೆ.

೨. ಸಾರ್ವಜನಿಕವಾಗಿ ಘೋಷಿಸಲಾಗಿರುವ ತತ್ತ್ವಗಳನ್ನು ಹಾಗೂ ನಿಯಮಗಳನ್ನು ಅನ್ವಯಿಸಬೇಕಾಗು ವುದರಿಂದ, ನ್ಯಾಯ ನೀಡಿಕೆಯ ಹೊಣೆ ಹೊತ್ತವರು, ಕಾನೂನನ್ನು ತಮ್ಮ ಅನುಚಿತ ಉದ್ದೇಶ ಸಾಧನೆಗೆ ಅನುವಾಗುವಂತೆ ತಮ್ಮ ವಿವೇಚನಾಧಿಕಾರವನ್ನು ಬಳಸದಂತೆ ಗಣನೀಯವಾಗಿ ತಡೆಯುತ್ತದೆ.

ಕಾನೂನು ನಿಷ್ಪಕ್ಷಪಾತಿ. ಕಾನೂನು ಸಾಮಾನಾನ್ವಯ ಉಳ್ಳದ್ದು. ಕಾನೂನು ಯಾರೇ ಒಬ್ಬ ನಿರ್ದಿಷ್ಟ ವ್ಯಕ್ತಿ ಅಥವಾ ನಿರ್ದಿಷ್ಟ ಪ್ರಕರಣವನ್ನು ದೃಷ್ಟಿಯಲ್ಲಿರಿಸಿಕೊಂಡು ರಚನೆಯಾಗುವುದಿಲ್ಲ. ಆದ್ದರಿಂದ ವ್ಯಕ್ತಿಯನ್ನು ಆಧರಿಸಿ ಅಥವಾ ನಿರ್ದಿಷ್ಟ ಪ್ರಕರಣದಲ್ಲಿನ ವಿಶಿಷ್ಟ ಸಂದರ್ಭಗಳನ್ನು ಅನುಸರಿಸಿ ಕಾನೂನಿನ ಮಾರ್ಗ ಪಲ್ಲಟಗೊಳ್ಳುವುದಿಲ್ಲ. ಕಾನೂನು ಹಾಕಿಕೊಡುವ ತತ್ತ್ವಗಳಿಂದ ತೀರ್ಪು ನೀಡುವಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿದರೂ ಸಾರ್ವಜನಿಕರ ಗಮನಕ್ಕೆ ಬರುತ್ತದೆ. ಇದು ಲಿಖಿತ ನಿಖರ ಕಾನೂನಿಗಿರುವ ಒಂದು ಲಕ್ಷಣ. ಆದರೆ ಅಲ್ಲಿ ನ್ಯಾಯಿಕ ವಿವೇಚನೆಗೆ ಆಸ್ಪದವಿರುತ್ತದಾದರೂ, ಅದು ನ್ಯಾಯಾಧೀಶರ ವೈಯಕ್ತಿಕ ಅಭಿಪ್ರಾಯವಾಗದಂತೆ ಸಮಾಜದ ಸಮಷ್ಟಿ ಪ್ರಜ್ಞೆ ತಡೆಹಾಕುತ್ತದೆ.

೩. ಕಾನೂನಿಗೆ ವಿವೇಚನೆಯಿಲ್ಲ ಎಂಬುದನ್ನು ಬಿಟ್ಟರೆ, ನ್ಯಾಯಪರಿಪಾಲನೆಯನ್ನು, ವೈಯಕ್ತಿಕ ತೀರ್ಪು ಗಳಿಂದ ಉಂಟಾಗಬಹುದಾದ ತಪ್ಪುಗಳಿಂದ ರಕ್ಷಿಸುತ್ತದೆ. ಕಾನೂನು ಒಂದು ಸಮುದಾಯದ ಅಭಿಪ್ರಾಯ ಹಾಗೂ ಸಮುದಾಯದ ಅಂತಃ ಪ್ರಜ್ಞೆಯ ಸಮಷ್ಟಿ ಅಭಿವ್ಯಕ್ತಿ. ನ್ಯಾಯಿಕ ಪರಿಹಾರಕ್ಕಾಗಿ ನ್ಯಾಯಾಲಯಕ್ಕೆ ಮೊರೆಹೋಗುವ ಸಮಸ್ಯೆಗಳು ಸಾಮಾನ್ಯವಾಗಿ ಕ್ಲಿಷ್ಟವಾದುದೂ ಜಟಿಲವಾದುವೂ ಆಗಿರುತ್ತವೆ. ಎಲ್ಲ ಸಂದರ್ಭಗಳಲ್ಲೂ ಸ್ವಾಭಾವಿಕ ನ್ಯಾಯದ ತತ್ತ್ವಗಳು ಸ್ಪಷ್ಟವಾಗಿರುವುದಿಲ್ಲ. ಹಾಗಾಗಿ ನ್ಯಾಯ ನೀಡಿಕೆಯಲ್ಲಿ ಅವುಗಳ ನೆರವು ದೊರೆಯುವುದಿಲ್ಲ. ಇದರಿಂದಾಗಿ, ಇಂಥ ಸಂದರ್ಭಗಳಲ್ಲಿ ಸಮುದಾಯದ ಸಮಷ್ಟಿ ಪ್ರಜ್ಞೆಯ ಅಭಿವ್ಯಕ್ತಿಯಾಗಿರುವ ಕಾನೂನಿಗೇ ಮೊರೆಹೋಗ ಬೇಕಾಗುತ್ತದೆ. ಎಲ್ಲ ಸಂದರ್ಭಗಳಲ್ಲೂ ಕಾನೂನು ಸರಿಯಾದ ಮಾರ್ಗದರ್ಶನವನ್ನು ನೀಡುತ್ತದೆ ಎಂದು ಹೇಳಲಾಗದಿದ್ದರೂ, ದೂರಗಾಮೀ ದೃಷ್ಟಿಯಿಂದ ಕಾನೂನು, ನ್ಯಾಯ ನೀಡಿಕೆಯಲ್ಲಿ ತೊಡಗಿರುವವರಿಗಿಂತ ಹೆಚ್ಚು ಪ್ರಜ್ಞಾವಂತವಾಗಿರುತ್ತದೆ.

"ಉತ್ತಮ ಕಾನೂನು, ಕಾನೂನಿಗಿಂತ ಪ್ರಜ್ಞಾವಂತರಾಗುವ ಪ್ರಯತ್ನಕ್ಕೆ ತಡೆಹಾಕುತ್ತದೆ" ಎಂದಿದ್ದಾನೆ ಅರಿಸ್ಟಾಟಲ್. ಇವು ಗೊತ್ತುಪಡಿಸಿದ ನಿಗದಿತ ನಿಖರ ಲಿಖಿತ ಕಾನೂನುಗಳಿಂದಾಗುವ ಪ್ರಯೋಜನಗಳು. ಕಾನೂನಿನ ಮುಖ್ಯ ಲಕ್ಷಣವೆಂದರೆ ಸಾಮಾನ್ಯ ಅನ್ವಯ. ಸಾಮಾನ್ಯ ಅನ್ವಯದ ತತ್ತ್ವವನ್ನಾಧರಿಸಿ ಕಾನೂನು-ಸಮಸ್ಯೆಗಳಿಗೆ ಒದಗಿಸುತ್ತದೆ ನಿಜ. ಆದರೆ ನಿಖರ ಲಿಖಿತ ಕಾನೂನಿಗೆ ತನ್ನದೇ ಆದ ನ್ಯೂನತೆಗಳೂ ಇವೆ. ಹಾಗಾಗಿ ನಿಗದಿತ ಕಾನೂನು ತತ್ತ್ವಗಳಿಂದಾಗಿ ತೆರುವ ಬೆಲೆ ಅನೇಕ ಬಾರಿ ದುಬಾರಿಯಾಗಿರುತ್ತದೆ. ಲಿಖಿತ ಕಾನೂನಿನ ದೋಷಗಳೆದಂರೆ-

೧. ಅದಕ್ಕಿರುವ ಸಾಪೇಕ್ಷ ನಿಷ್ಠುರತೆ. ಕಾನೂನಿನ ಸಾಮಾನ್ಯ ತತ್ತ್ವವನ್ನು ಅನೇಕ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಬರುವ ಅತ್ಯಗತ್ಯ ಅಂಶಗಳನ್ನು ಗಮನಿಸಿ,(ಗೌಣ ಅಂಶಗಳನ್ನು ಬಿಟ್ಟು) ಅವುಗಳನ್ನು ಕೇಂದ್ರವಾಗಿರಿಸಿಕೊಂಡು ರೂಪಿಸಲಾಗಿರುತ್ತದೆ. ಹೀಗೆ ರೂಪಿತವಾದ ಒಂದು ತತ್ತ್ವವನ್ನು ಅಥವಾ ನಿಯಮವನ್ನು ಒಂದು ನಿರ್ದಿಷ್ಟ ಪ್ರಕರಣಕ್ಕೆ ಅನ್ವಯಿಸುವಾಗ ಸಾಮಾನ್ಯ ನಿಯಮವನ್ನು ರಚಿಸುವ ಸಂದರ್ಭದಲ್ಲಿ ಕಡೆಗಣಿಸಲಾಗಿದ್ದ ಅಂಶವೇ ಆ ನಿರ್ದಿಷ್ಟ ಪ್ರಕರಣದ ಮುಖ್ಯ ಅಂಶವಾಗಿರುವ ಸಾಧ್ಯತೆ ಇರುತ್ತದೆ. ಅಂಥ ಸಂದರ್ಭದಲ್ಲಿ, ಅದನ್ನು ಪರಿಗಣಿಸಲು ಕಾನೂನಿನಲ್ಲಿ ಅವಕಾಶವಿಲ್ಲದಿದ್ದರೆ, ಪರಿಣಾಮ ದೋಷಪೂರ್ಣವಾದುದೂ ಅನ್ಯಾಯವಾದದೂ ಆಗುತ್ತದೆ. ಬೇರೆ ಯಾವುದೇ ಕ್ಷೇತ್ರದಲ್ಲಿ, ಆಯಾ ಸಂದರ್ಭಕ್ಕೆ ಅಥವಾ ಪ್ರಕರಣಕ್ಕೆ ಅನ್ವಯಿಸಲಾಗುವ ತತ್ತ್ವಕ್ಕೆ/ನಿಯಮಕ್ಕೆ ಮಣಿತ(F lexibility) ಇರುತ್ತದೆ. ಇಂಥ ಮಣಿತಕ್ಕೆ ಅವಕಾಶವಿಲ್ಲದಿರುವ ಒಂದೇ ಕ್ಷೇತ್ರವೆಂದರೆ ಕಾನೂನು. ಮನುಷ್ಯ ವ್ಯವಹಾರಗಳು ಅದೆಷ್ಟು ಅಸಂಖ್ಯಾತವೆಂದರೆ, ಪ್ರತಿಯೊಂದು ಸಂದರ್ಭಕ್ಕೂ ನ್ಯಾಯಯುತ ವೆನಿಸುವ ಸಾಮಾನ್ಯ ತತ್ತ್ವಗಳನ್ನು ರೂಪಿಸುವುದು ಅಸಾಧ್ಯವಾದ ಮಾತು. ಹೀಗಾಗಿ ಕಾನೂನು ಸತ್ಯಕ್ಕೆ ಮಾರ್ಗದರ್ಶಿಯಾಗುವ ಬದಲು, ದೋಷಕ್ಕೆ/ಅನ್ಯಾಯಕ್ಕೆ ಕಾರಣವಾಗುವ ಸಂದರ್ಭಗಳು ಉಂಟಾಗುತ್ತದೆ.

"summum jur est summa injuria" ಇದು ಸಾರ್ವಜನಿಕ ಮಾನ್ಯತೆ ಪಡೆದಿರುವ ಕಾನೂನು ಸೂತ್ರ. ಸತ್ಯವನ್ನಾಧರಿಸಿದ ಕೆಲವು ಕಾನೂನು ತತ್ತ್ವಗಳನ್ನು ಅನ್ಯಾಯವಾಗದಂತೆ ಯಾವುದೇ ರೀತಿ ಯಲ್ಲಿ ವ್ಯಾಖ್ಯಾನಿಸಿಯೂ ಅನ್ವಯಿಸಬಹುದು. ಆದರೆ ನೀತಿಯ(equity) ಹತೋಟಿಗೆ ಒಳಪಡದ ಕಾನೂನುನಿಷ್ಠೆ ನ್ಯಾಯವೆನಿಸಿಕೊಳ್ಳುವುದಿಲ್ಲ. ಅನ್ಯಾಯವೆನಿಸಿಕೊಳ್ಳುತ್ತದೆ. ಕಾನೂನಿನ ತತ್ತ್ವಗಳನ್ನು ಸಾಮಾನ್ಯವಾಗಿ ಅನ್ವಯಿಸಬಹುದಾದಷ್ಟು, ಗೌಣ ಅಂಶಗಳನ್ನು ಪರಿಗಣಿಸದಿರುವ ಸಾಧ್ಯತೆಗಳು ಕಡಿಮೆಯಾಗಿರುತ್ತದೆ. ಹೀಗಾಗಿ ಅನ್ಯಾಯವಾಗುವ ಸಾಧ್ಯತೆಗಳು ಅಷ್ಟರಮಟ್ಟಿಗೆ ಕಡಿಮೆಯಾಗಿರುತ್ತವೆ.

೨. ನಿಷ್ಠುರತೆಗೆ ಸದೃಶವಾದ ಇನ್ನೊಂದು ನ್ಯೂನತೆಯೆಂದರೆ, ಸಾಂಪ್ರದಾಯಿಕತೆ-conservatism. ಮೊದಲನೆಯದರಲ್ಲಿ ಕೆಲವು ವಿಶೇಷ ಹಾಗೂ ಅನಿರೀಕ್ಷಿತ ಪ್ರಕರಣಗಳಿಗೆ ಸಂಬಂಧಿಸಿದಂತೆ ಕಾನೂನಿನ

ಲಿಖಿತ ನಿಯಮಗಳು ಮಣಿಯದಿರುವುದರಿಂದ ಕಾನೂನು ವಿಫಲಗೊಳ್ಳುತ್ತದೆ. ಎರಡನೆಯದರಲ್ಲಿ, ಕಾನೂನು ಸಾಂಪ್ರದಾಯಿಕತೆಯಿಂದಾಗಿ, ಬದಲಾಗುವ ಸಂದರ್ಭಗಳಿಗೆ ಹಾಗೂ ನ್ಯಾಯದ ಪರಿಕಲ್ಪನೆಗಳಿಗೆ ಹೊಂದಿಕೊಳ್ಳಲಾಗದೆ ಇರುವುದರಿಂದ ವಿಫಲವಾಗುತ್ತದೆ. ಹಿಂದಿನ ಕಾನೂನುಗಳನ್ನು ಇಂದಿಗೆ ಅನ್ವಯಿಸುವುದರಿಂದ ಅಸಂಗತಗಳಿಗೆ ಎಡೆಕೊಡುವ ಸಾಧ್ಯತೆಗಳಿರುತ್ತವೆ. ಸ್ವಭಾವತಃ ನಿಶ್ಚಲವಾಗಿರುವ, ಕಾನೂನು, ಜೀವಂತವಾಗಿ ಪ್ರಸ್ತುತವಾಗಬೇಕಾದರೆ ಸನ್ನಿವೇಶಗಳಿಗೆ ತಕ್ಕಂತೆ ಅನ್ವಯವಾಗಬೇಕು. ಇದಕ್ಕೆ ಕಾನೂನನ್ನು ಪ್ರಜ್ಞಾಪೂರ್ವಕವಾಗಿ ಬೆಳೆಸುವ ಪ್ರಯತ್ನವಾಗಬೇಕು. ಯಾವುದೇ ಕಾನೂನಿನ ಗುಣಮಟ್ಟ ನಿರ್ಧರಿತವಾಗುವುದು, ಒಂದು ಕಾನೂನು ಎಷ್ಟು ಪ್ರಸ್ತುತವಾಗಿದೆ ಮತ್ತು ಹಾಗೆ ಪ್ರಸ್ತುತ ವಾಗಲು ಅದು ಬಳಸಿಕೊಳ್ಳುವ ಮಾರ್ಗ ಯಾವುದು ಎಂಬುದರ ಮೇಲೆ. ನ್ಯಾಯಾಧೀಶರ ಪಾತ್ರ ಇದಕ್ಕೆ ಸಂಬಂಧಿಸಿದಂತೆ ಬಹು ಮುಖ್ಯವಾದುದು. ಕಾನೂನನ್ನು ವಿಮರ್ಶೆಯ ನಿಕಷಕ್ಕೆ ಒಳಪಡಿಸಿ ಅಗತ್ಯವಾದಂತೆ ತಿದ್ದುಪಡಿ ಮಾಡುವುದು ಕಾನೂನನ್ನು ಕಾಲಕ್ಕೆ ತಕ್ಕಂತೆ ಸಿದ್ಧಗೊಳಿಸುವ ಒಂದು ಮಾರ್ಗ. ಆದರೂ ಈ ದೋಷವನ್ನು ಸಂಪೂರ್ಣವಾಗಿ ತೊಡೆದು ಹಾಕುದಕ್ಕೆ ಸಾಧ್ಯವಾಗುವುದಿಲ್ಲ.

೩. ಲಿಖಿತ ಕಾನೂನಿನ ಮತ್ತೊಂದು ದೋಷವೆಂದರೆ ಔಪಚಾರಿಕತೆ(Formalism)- ಕಾನೂನಿನ ತಾಂತ್ರಿಕತೆಗೆ ಹೆಚ್ಚಿನ ಮಹತ್ವ ನೀಡುವುದು. ಅನುಚಿತ ಅನಗತ್ಯ ಕ್ಲಿಷ್ಟತೆ, ಕಬ್ಬಿಣದ ಕಡಲೆಯಂಥ ಭಾಷೆ ಮತ್ತು ವಾಕ್ಯರಚನೆ. ಇದು ಪರಿಹಾರ್ಯ ದೋಷ.

ಈ ಎಲ್ಲ ದೋಷಗಳನ್ನು ನ್ಯಾಯಿಕ ವಿವೇಚನೆ ಹೋಗಲಾಡಿಸಬಲ್ಲುದು. ಜಾರಿಯಲ್ಲಿರುವ ಕಾನೂನು/ ನಿಯಮಗಳಿಂದ ನ್ಯಾಯಿಕ ವಿವೇಚನೆ ಮಾರ್ಗದರ್ಶನ ಪಡೆಯಬೇಕು. ಇದರ ಜೊತೆಗೆ ನ್ಯಾಯಾಧೀಶರ ಅನುಭವ ಮತ್ತು ಜ್ಞಾನ ಸತ್ಯದ ಆವಿಷ್ಕಾರದಲ್ಲಿ ನೆರವಾಗಬೇಕು.

ಒಂದು ಕಾನೂನು 'ಕಾನೂನು' ಎನ್ನಿಸಕೊಳ್ಳುವುದು ಅದನ್ನು ಸರ್ಕಾರ(ಪ್ರಭುತ್ವ) ತನ್ನ ಅಧಿಕಾರದ ಬಲದಿಂದ ಜಾರಿಗೊಳಿಸಬಹುದು ಎಂಬ ಕಾರಣದಿಂದ. ಕಾನೂನು ಕ್ರೋಡೀಕೃತಗೊಂಡ ವ್ಯವಸ್ಥಿತ ರೂಪವನ್ನು ಪಡೆಯುವುದಕ್ಕೆ ಮುಂಚೆ 'ಪ್ರಭುತ್ವ'ದ ಉತ್ಪನ್ನ(product) ಆಗಿರಲಿಲ್ಲ ಮತ್ತು ಪ್ರಭುತ್ವದ ಆದೇಶವೂ ಆಗಿರಲಿಲ್ಲ. ಕಾನೂನಿನ ಮೂಲವಿದ್ದದ್ದು ಅಂದಂದಿನ ಆಚರಣೆ, ಧರ್ಮ ಮತ್ತು ಜನಾಭಿಪ್ರಾಯಗಳಲ್ಲಿ. ಕಾನೂನು ಪ್ರಭುತ್ವ ಅಥವಾ ರಾಜಕೀಯ ಶಕ್ತಿಯಿಂದ ಸ್ವತಂತ್ರವಾದುದಾಗಿತ್ತು. ಇದು ಇಂದಿನ ರೂಪ ಪಡೆದಿರುವುದು ಸಾಕಷ್ಟು ಇತ್ತೀಚೆಗೆ.

ಕಾನೂನು-ಒಂದು ದೃಷ್ಟಿಯಿಂದ, ರಾಜ್ಯ ತನ್ನ ಪ್ರಜೆಗಳಿಗಾಗಿ ಹೊರಡಿಸಿದ ಆಜ್ಞಾರ್ಥಕ ನಿಯಮಗಳಾದರೆ (Commands), ಇನ್ನೊಂದು ದೃಷ್ಟಿಯಿಂದ ರಾಜ್ಯ ತನ್ನ ಅತ್ಯವಶ್ಯ ಕರ್ತವ್ಯವಾದ ನ್ಯಾಯ ಪರಿಪಾಲನೆಯಲ್ಲಿ

ಮನ್ನಣೆ ನೀಡುವ ಮತ್ತು ಜಾರಿಮಾಡುವ ಸರಿತಪ್ಪುಗಳ ತತ್ತ್ವಗಳು. ಆದ್ದರಿಂದ ಕಾನೂನು ಎಂಬುದು ಬರೀ 'ಹಕ್ಕು' ಅಲ್ಲ, ಬರೀ 'ಬಲ' ಅಲ್ಲ, ಇವೆರಡರ ಸರಿಯಾದ ಮಿಳಿತ.

ಕಾನೂನನ್ನು ಸೃಜಿಸಿರುವುದು 'ನ್ಯಾಯ'ದ ಅಭಿವ್ಯಕ್ತಿಗಾಗಿ ಮತ್ತು ಅದನ್ನು ಪಡೆಯುವುದಕ್ಕಾಗಿ. ಆದ್ದರಿಂದ ಕಾನೂನು ಮತ್ತು ನ್ಯಾಯ ಅತ್ಯಂತ ನಿಕಟ ಸಂಬಂಧವುಳ್ಳಂಥ ಎರಡು ಪರಿಕಲ್ಪನೆಗಳು. ಕಾನೂನನ್ನು ಜಾರಿಗೊಳಿಸುವ ನ್ಯಾಯಾಲಯಗಳೇ ನ್ಯಾಯವನ್ನು ನೀಡುವ ನ್ಯಾಯಾಲಯಗಳು ಮತ್ತು ನ್ಯಾಯ ಪರಿಪಾಲನೆ ಎಂದರೆ ಕಾನೂನನ್ನು ಜಾರಿಗೊಳಿಸುವುದು ಎಂದರ್ಥ. ಸರಿ, ತಪ್ಪು, ಕರ್ತವ್ಯ ಈ ಪರಿಕಲ್ಪನೆಗಳು ನೈತಿಕತೆಯ ಪರಿಕಲ್ಪನೆಗಳಾಗಿರುವಂತೆಯೇ ಕಾನೂನಿನ ಪರಿಕಲ್ಪನೆಗಳೂ ಆಗಿವೆ. ಅವುಗಳಲ್ಲಿ ನ್ಯಾಯದ ನಿಯಮಗಳಂತೆಯೇ ಕಾನೂನಿನ ನಿಯಮಗಳೂ ಅಂತರ್ಗತವಾಗಿವೆ.

ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಗಳು ಮಾನವ ಸಮಾಜದ ಒಟ್ಟಾರೆ ಹಿತಾಸಕ್ತಿಯೊಂದಿಗೆ ಹೊಂದಿಕೊಳ್ಳುವಂತಿದ್ದರೆ, ತನ್ನ ಇಚ್ಛೆಯನ್ನು ಪೂರೈಸಿಕೊಳ್ಳಲು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಮತ್ತು ತನ್ನ ಗುರಿಯನ್ನು ಸಾಧಿಸಿಕೊಳ್ಳಲು, ಇತರ ವ್ಯಕ್ತಿಗಳು ಅದೇ ಉದ್ದೇಶದಿಂದ ಕೈಗೊಳ್ಳುವ ಚಟುವಟಿಕೆಗಳಿಗೆ ಅಡ್ಡಿಬರದಿದ್ದರೆ ನ್ಯಾಯಿಕ ನಿಯಮಗಳ ಅಗತ್ಯವೇ ಉಂಟಾಗುವುದಿಲ್ಲ. ಆದರೆ ವಸ್ತುಸ್ಥಿತಿ ಹಾಗಿಲ್ಲ. ನ್ಯಾಯಾಲಯದಲ್ಲಿ ನಿರ್ಣಯಕ್ಕಾಗಿ ಬರುವ ಪ್ರಶ್ನೆಗಳಲ್ಲಿ ಎರಡು ಬಗೆ. ಒಂದು-ಕಾನೂನು ಪ್ರಶ್ನೆಗಳು; ಎರಡು-ವಾಸ್ತವಾಂಶ ಪ್ರಶ್ನೆಗಳು.

**ಕಾನೂನಿಗೆ ಸಂಬಂಧಿಸಿದ ಪ್ರಶ್ನೆಗಳು**

ಕಾನೂನಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ನಿರ್ಣಯಿಸುವಾಗ ಮೂರು ಅಂಶಗಳನ್ನು ಗಮನಿಸುವ ಸಂದರ್ಭ ಉಂಟಾಗುತ್ತದೆ.

೧. ಕಾನೂನಿನ ನಿಯಮಕ್ಕನುಸಾರವಾಗಿ ನ್ಯಾಯಾಲಯ ಉತ್ತರಿಸಲು ಬದ್ಧವಾಗಿರುವಂಥ ಪ್ರಶ್ನೆ- ಇಲ್ಲಿ ವಿಷಯದ ನೈಜತೆ(truth of the matter) ಮತ್ತು ನ್ಯಾಯ(Justice of the matter)ಕ್ಕೆ ಅನುಸಾರವಾಗಿ ಸರಿ ಎನಿಸುವಂತೆ ಪರಿಗಣಿಸಲು ಅವಕಾಶವಿರುವುದಿಲ್ಲ.

೨. ಕಾನೂನು ಏನಿದೆ ಎಂಬ ಪ್ರಶ್ನೆ- ಇಂಥ ಪ್ರಶ್ನೆ ಉಂಟಾಗುವುದು ಕಾನೂನಿನಲ್ಲಿರುವ ಅಸ್ಪಷ್ಟತೆಯಿಂದ ಇದನ್ನು ಬಗೆಹರಿಸುವುದು ಕಾನೂನಿನ ವ್ಯಾಖ್ಯಾನ.

೩. ನ್ಯಾಯದರ್ಶಿಮಂಡಲಿ(Jury)ಯ ವ್ಯಾಪ್ತಿಗೆ ಬರದ ಆದರೆ ನ್ಯಾಯಧೀಶರ(Judge) ವ್ಯಾಪ್ತಿಗೆ ಬರುವ ಯಾವುದೇ ಪ್ರಶ್ನೆ, ಉದಾಹರಣೆಗೆ - ಒಂದು ದಸ್ತಾವೇಜಿನ ವ್ಯಾಖ್ಯಾನ ಸಾಮಾನ್ಯವಾಗಿ ಇದು ವಾಸ್ತವಾಂಶಕ್ಕೆ ಸಂಬಂಧಿಸಿದ ಪ್ರಶ್ನೆಯಾದರೂ ನ್ಯಾಯಧೀಶರ ತೀರ್ಮಾನದ ವ್ಯಾಪ್ತಿಗೆ ಒಳಪಡುತ್ತದೆ.

ವಾಸ್ತವಾಂಶಕ್ಕೆ ಸಂಬಂಧಿಸಿದ ಪ್ರಶ್ನೆಗಳು

೧. ಕಾನೂನಿನ ನಿಯಮದ ಮೂಲಕ ಪೂರ್ವನಿರ್ಧರಿತವಾಗದ ಯಾವುದೇ ಪ್ರಶ್ನೆ.

೨. ಕಾನೂನು ಏನು ಎಂಬುದನ್ನು ಹೊರತುಪಡಿಸಿದ ಪ್ರಶ್ನೆ.

೩. ನ್ಯಾಯಾಧೀಶರಿಗೆ ಬದಲಾಗಿ ನ್ಯಾಯದರ್ಶಿಮಂಡಲಿ(Jury) ಉತ್ತರಿಸಬೇಕಾದ ಪ್ರಶ್ನೆ.

ಕಾನೂನಿನ ಪ್ರಶ್ನೆಯಲ್ಲದ ಎಲ್ಲ ಪ್ರಶ್ನೆಗಳೂ ವಾಸ್ತವಾಂಶದ ಪ್ರಶ್ನೆಗಳಾಗುವುದಿಲ್ಲ. ವಾಸ್ತವಾಂಶದ ಪ್ರಶ್ನೆ(question of fact) ಎಂಬುದು ನ್ಯಾಯಿಕ ವಿವೇಚನೆಗಿಂತ ಭಿನ್ನವಾದುದು. ನ್ಯಾಯಿಕ ವಿವೇಚನೆ ಎಂಬುದು- ಯಾವುದು ಸರಿ, ನ್ಯಾಯ, ನೀತಿಸಮ್ಮತ ಅಥವಾ ಸಮಂಜಸ(reasonable) ಎಂಬ ಬಗೆಗಿನ ಎಲ್ಲ ಪ್ರಶ್ನೆಗಳನ್ನೂ ಒಳಗೊಳ್ಳುತ್ತದೆ. 'ಇದು ಹೇಗಿದೆ' ಎಂಬ ವಾಸ್ತವಾಂಶವನ್ನಲ್ಲ 'ಇದು ಹೇಗಿರಬೇಕಿತ್ತು' ಎಂಬುದನ್ನು(what ought to be). ಇವುಗಳನ್ನಾಧರಿಸಿ, ನ್ಯಾಯಾಲಯದ ಮುಂದೆ ಬರುವ ಎಲ್ಲ ವಿಷಯಗಳನ್ನೂ ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು.

೧. ಕಾನೂನಿಗೆ ಸಂಬಂಧಿಸಿದ ವಿಷಯಗಳು ಮತ್ತು ಪ್ರಶ್ನೆಗಳು- ಅಧಿಕೃತ ಕಾನೂನಿನ ತತ್ತ್ವಗಳನ್ನಾಧರಿಸಿ ನಿರ್ಧರಿಸುವಂಥವುಗಳು.

೨. ನ್ಯಾಯಿಕ ವಿವೇಚನೆಯ ವಿಷಯಗಳು ಮತ್ತು ಪ್ರಶ್ನೆಗಳು - ಕಾನೂನಿನ ಮೂಲಕ ನಿರ್ಧರಿಸಬಹುದಾದುದನ್ನುಳಿದು ಯಾವುದು ನ್ಯಾಯ(Just), ಸರಿ(right), ನೀತಿಸಮ್ಮತ(equitable) ಮತ್ತು ಯುಕ್ತವಾದುದು ಎಂದು ನಿರ್ಧರಿಸಬೇಕಾದವುಗಳು.

೩. ವಾಸ್ತವಾಂಶ ವಿಷಯಗಳು ಮತ್ತು ಪ್ರಶ್ನೆಗಳು- ಮೇಲಿನ ಎರಡು ವರ್ಗಗಳಲ್ಲಿ ಸೇರಿಲ್ಲದ ಇತರ ಎಲ್ಲ ಪ್ರಶ್ನೆಗಳು.

ನ್ಯಾಯಾಲಯದ ಕರ್ತವ್ಯ

ಮೊದಲನೆಯ ರೀತಿಯ ವಿಷಯಗಳಲ್ಲಿ- ಅನ್ವಯವಾಗುವ ಕಾನೂನಿನ ನಿಯಮವನ್ನು ಕಂಡುಹಿಡಿಯುವುದು ಮತ್ತು ಅದರಂತೆ ವಿಷಯವನ್ನು ನಿರ್ಧರಿಸುವುದು.

ಎರಡನೆ ವರ್ಗದ ವಿಷಯಗಳಲ್ಲಿ- ಪ್ರಕರಣಕ್ಕೆ ಸಂಬಂಧಿಸಿದಂತೆ ಸರಿ ಯಾವುದು, ನ್ಯಾಯವಾದುದು ಯಾವುದು ಎಂಬುದನ್ನು ಕಂಡುಹಿಡಿಯುವುದಕ್ಕಾಗಿ ಅದರ ನೈತಿಕ ನಿರ್ಧರಣಾ ಶಕ್ತಿಯನ್ನು ಚಲಾಯಿಸುವುದು.

ಮೂರನೇ ವರ್ಗದ ವಿಷಯಗಳಲ್ಲಿ- ತನಗೆ ಸಲ್ಲಿಸಲಾಗಿರುವ ಸಾಕ್ಷ್ಯಗಳಿಂದ ನಿಜವನ್ನು ಕಂಡುಹಿಡಿಯಲು ತನ್ನ ಬೌದ್ಧಿಕ ನಿರ್ಧರಣಾ ಸಾಮರ್ಥ್ಯವನ್ನು ಬಳಸುವುದು.

ನ್ಯಾಯಾಲಯ ಈ ರೀತಿಯಲ್ಲಿ ಕರ್ತವ್ಯ ನಿರ್ವಹಿಸಿದಾಗ legal Justice ನಿಜವಾದ ಅರ್ಥದಲ್ಲಿ Justice ಎನಿಸಿಕೊಳ್ಳುತ್ತದೆ.

### ನ್ಯಾಯನೀಡಿಕೆಯ ತತ್ತ್ವಗಳು

ಕ್ರೋಡೀಕೃತ ಲಿಖಿತ ಕಾನೂನುಗಳು ಜಾರಿಗೆ ಬರುವ ಮುನ್ನ ಸ್ಮೃತಿಗಳು ಮತ್ತು ಸಂಹಿತೆಗಳಲ್ಲಿ ಹೇಳಿಲ್ಲದ ಮತ್ತು ಆನಂತರ ಕ್ರೋಡೀಕೃತ ಹಿಂದೂ ಕಾನೂನಿನಲ್ಲಿ ಸ್ಪಷ್ಟವಾಗಿ ಉಪಬಂಧ ಕಲ್ಪಿಸಿಲ್ಲದ ವಿಷಯದ ಸಂದರ್ಭದಲ್ಲಿ, ನ್ಯಾಯ, ನೀತಿ(ಧರ್ಮತತ್ತ್ವ), ಸದ್ವಿವೇಚನೆ(Justice, Equilty and good conscience) ಇವುಗಳ ತತ್ತ್ವಗಳನ್ನು ಅನ್ವಯಿಸಿ ನ್ಯಾಯಪರಿಪಾಲನೆ ಮಾಡಲಾಗುತ್ತಿತ್ತು. ಹಾಗಾಗಿ ನ್ಯಾಯ, ಧರ್ಮತತ್ತ್ವ ಹಾಗೂ ಸದ್ವಿವೇಚನೆಗಳನ್ನು ಕಾನೂನಿನ ಮೂಲ ಆಕರವನ್ನಾಗಿ ಪರಿಗಣಿಸಲಾಗುತ್ತದೆ.

ಯಾವ ವಿಷಯದ ಬಗ್ಗೆ ಲಿಖಿತ ಕಾನೂನು ಇರಲಿಲ್ಲವೋ ಅಂಥ ವಿಷಯದ ಇತ್ಯರ್ಥದಲ್ಲಿ ಮತ್ತು ಎರಡು ಸ್ಮೃತಿಗಳಲ್ಲಿ ವ್ಯತ್ಯಾಸ ಇದ್ದಂಥ ಸಂದರ್ಭಗಳಲ್ಲಿ 'ನ್ಯಾಯ'(Equity and reason)ವನ್ನು ಆಧರಿಸಿ ತೀರ್ಪು ನೀಡುವುದಕ್ಕೆ ಮನ್ನಣೆ ಇತ್ತು.

ನಾರದ ಮತ್ತು ಬೃಹಸ್ಪತಿ ಈ ಕೊನೆಯ ಮೂಲ ಆಕರವನ್ನು ಧರ್ಮ(Justice) ಅಥವಾ ಯುಕ್ತಿ(Equity and Reason) ಎಂದು ಕರೆದಿದ್ದಾರೆ. ನೀಲಕಂಠ ತನ್ನ ವ್ಯವಹಾರ ಮಯೂಖದಲ್ಲಿ ಬೃಹಸ್ಪತಿ ತಿಳಿಸಿರುವ 'ನ್ಯಾಯನ್ಯಾಯಗಳನ್ನು ತೀರ್ಮಾನಿಸುವಾಗ ಯಕ್ತಿ ನಿರ್ಣಾಯಕ ಅಂಶವಾಗಿರಬೇಕು' ಎಂದಿರುವ ಅಂಶವನ್ನು ಉದ್ಧರಿಸುತ್ತಾನೆ. ಅದರಲ್ಲಿ, ಅವನು "ಶಾಸ್ತ್ರವನ್ನು ಅಕ್ಷರಶಃ ಅನ್ವಯಿಸಿ ಅದಕ್ಕೆ ಅನುಸಾರ ಮಾತ್ರವೇ ಯಾವುದೇ ನಿರ್ಧಾರವನ್ನು ಕೈಗೊಳ್ಳಬಾರದು ಏಕೆಂದರೆ ಯುಕ್ತಿಯಿಂದ ಕೂಡಿರದ ಯಾವುದೇ ತೀರ್ಮಾನ ನ್ಯಾಯವನ್ನು ಕೊಡುವುದರಲ್ಲಿ ವಿಫಲವಾಗುತ್ತದೆ" ಎಂದಿದ್ದಾನೆ.

ಆಧುನಿಕ ಕಾಲದ ನ್ಯಾಯಪರಿಪಾಲನೆಯಲ್ಲಿಯೂ ಈ ವಿವೇಚನೆ ಹಾಗೂ ಸದ್ವಿವೇಕಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಕಾನೂನು ಸಾಮಾನ್ಯ ಅನ್ವಯದ ನಿಯಮಗಳನ್ನು ರಚಿಸುತ್ತದೆ. ಅವನ್ನು ಪ್ರತಿ ನಿರ್ದಿಷ್ಟ ಪ್ರಕರಣಕ್ಕೆ ಅನ್ವಯಿಸುವುದು ಪ್ರಕರಣದ ವಿವರಗಳನ್ನು ಆಧರಿಸಿಯೇ. ಹಾಗೆ ಒಂದು ನಿರ್ದಿಷ್ಟ ಪ್ರಕರಣಕ್ಕೆ ಕಾನೂನನ್ನು ಅನ್ವಯಿಸಿ ತೀರ್ಪು ನೀಡ ಹೊರಟಾಗ ಕಾನೂನಿನ ಪ್ರಕಾರ ಕೊಡಬೇಕಾಗುವ ತೀರ್ಪು ಕೆಲವೊಮ್ಮೆ ಕಾನೂನಿನ ಪ್ರಕಾರ ಕೊಡುವ ನ್ಯಾಯ(legal Justice) ಆಗುತ್ತದೆ. ಅದನ್ನೇ ಮೇಲೆ ಹೇಳಿದ ಸದ್ವಿವೇಕ ವಿವೇಚನೆಗಳನ್ನು ಅನ್ವಯಿಸಿ ನೋಡಿದಾಗ 'ಸ್ವಾಭಾವಿಕ ನ್ಯಾಯ' ಎನಿಸಿಕೊಳ್ಳದೇ ಹೋಗಬಹುದು. ಕೆಲವೊಮ್ಮೆ 'ಕಾನೂನು ನ್ಯಾಯ' ನೀಡುವಲ್ಲಿಯೂ ಕಾನೂನನ್ನು ಸರಿಯಾಗಿ ವ್ಯಾಖ್ಯಾನಿಸದೇ ಇರುವುದರಿಂದ 'ನ್ಯಾಯ' ದೊರೆಯದೇ ಹೋಗಬಹುದು.

ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ, ನ್ಯಾಯಂಗ ಸಾಮಾನ್ಯ ಜನರಿಗೆ ಕಾನೂನಿನ ಪ್ರಕಾರ ನ್ಯಾಯ ದೊರಕಿಸಿಕೊಡುತ್ತದೆ ಎಂಬ ಕಾರಣಕ್ಕಾಗಿ ಅದಕ್ಕೆ ಅತ್ಯುನ್ನತ ಸ್ಥಾನವನ್ನು ನೀಡಲಾಗಿದೆ. 'ನ್ಯಾಯ' ಎಂಬುದು ಕಾನೂನಿಗನುಸಾರವಾಗಿಯೇ ಇರಬೇಕು ಎಂದು ಹೇಳುವ ಮೂಲಕ 'ನ್ಯಾಯ' ಎಂಬ ಪರಿಕಲ್ಪನೆಯ ಅಮೂರ್ತತೆಯನ್ನು ಕಡಿಮೆ ಮಾಡಲಾಗಿದೆ. ಇದು 'ನ್ಯಾಯ'ಕ್ಕೆ ಪರಿಮಿತಿ ವಿಧಿಸುವುದಷ್ಟೇ ಅಲ್ಲದೆ, ನ್ಯಾಯವನ್ನು ಕಾನೂನಿನ ಮೂಲಕವೇ ಪಡೆಯಬೇಕು ಎಂಬುದನ್ನು ಕಡ್ಡಾಯಗೊಳಿಸುತ್ತದೆ. ಆದ್ದರಿಂದಲೇ ನ್ಯಾಯಾಲಯಗಳಿಗೆ "ನ್ಯಾಯದ ಶೋಧನೆ" ಪರಮೋತ್ಕೃಷ್ಟ ಉದ್ದೇಶವಾಗಿರುತ್ತದೆ. ಈ ಉದ್ದೇಶ ಸಾಧನೆಗೆ ನೆರವಾಗುವುದು ಜಾರಿಯಲ್ಲಿರುವ ಕಾನೂನುಗಳು.

ಯಾವುದೇ ಕಾನೂನಿನ ರಚನೆಯ ಹಿನ್ನೆಲೆಯಲ್ಲಿ ಒಂದು ನಿರ್ದಿಷ್ಟ ಉದ್ದೇಶವಿರುತ್ತದೆ ಮತ್ತು ನಿರ್ದಿಷ್ಟ ಕಾರಣಗಳಿರುತ್ತವೆ. ಈ ನಿರ್ದಿಷ್ಟ ಉದ್ದೇಶ ನೆರವೇರುವ ರೀತಿಯಲ್ಲಿ ಕಾನೂನನ್ನು ಜಾರಿಗೊಳಿಸಬೇಕು. ಇಲ್ಲದಿದ್ದರೆ ಕಾನೂನು ಮಾತ್ರ ಜಾರಿಗೊಳ್ಳುತ್ತದೆ, ಉದ್ದೇಶ ನೆರವೇರುವುದಿಲ್ಲ. ಕಾನೂನಿನ ಉದ್ದೇಶ ಸಾಧಿತವಾಗಬೇಕಾದರೆ, ಕಾನೂನನ್ನು ಅನ್ವಯಿಸುವ ಸಂದರ್ಭದಲ್ಲಿ ಆ ನಿರ್ದಿಷ್ಟ ಕಾನೂನಿನ ರಚನೆಗೆ ಕಾರಣವಾದ ಸನ್ನಿವೇಶಗಳು, ಅಂಥ ಒಂದು ಕಾನೂನಿನ ರಚನೆಯ ಉದ್ದೇಶ, ಅಂಥ ಕಾನೂನಿನ ರಚನೆಯ ಸಂದರ್ಭದಲ್ಲಿ ಆದ ಚರ್ಚೆಗಳು, ಹೊರಹೊಮ್ಮಿದ ಭಿನ್ನಾಭಿಪ್ರಾಯಗಳು, ಅಭಿಪ್ರಾಯಗಳು ಇವೆಲ್ಲವುಗಳ ಅರಿವು ಕಾನೂನನ್ನು ಅನ್ವಯಿಸುವ ವ್ಯಕ್ತಿಗೆ ತಿಳಿದಿರಬೇಕು. ಆಗ ಮಾತ್ರ ಒಂದು ಕಾನೂನು ಸಾಮಾಜಿಕ ಒಳಿತಿಗೆ ಸಾಧನವಾಗಿದೆ ಎಂದು ಹೇಳಬಹುದು. ಇದನ್ನೇ ಕಾನೂನಿನ ಆಶಯ ಎನ್ನುವುದು. ಈ ಆಶಯವನ್ನು ಬದಿಗಿಟ್ಟು ಕಾನೂನನ್ನು ಅಕ್ಷರಶಃ ಅನ್ವಯಿಸಿದಾಗ ನ್ಯಾಯ ದೊರೆಯದೇ ಹೋಗುವ ಸಂಭವವೇ ಹೆಚ್ಚು.

ಕಾನೂನನ್ನು ಅಕ್ಷರಶಃ ವ್ಯಾಖ್ಯಾನಿಸಿದ ಸಂದರ್ಭಕ್ಕೆ ಉತ್ತಮ ಉದಾಹರಣೆಯನ್ನು ನಾವು ಶೇಕ್ಸ್‌ಪಿಯರ್‌ನ 'ಮರ್ಚೆಂಟ್ ಆಫ್ ವೆನಿಸ್' ನಾಟಕದಲ್ಲಿ ನೋಡಬಹುದು. ತಾನು ನೀಡಿದ ಹಣವನ್ನು ಹಿಂತಿರುಗಿಸದ ಕಾರಣ ಒಪ್ಪಂದದಲ್ಲಿರುವಂತೆ ವ್ಯಾಪಾರಿಯ ಹೃದಯ ಭಾಗದಿಂದ ಒಂದು ಪೌಂಡು ಮಾಂಸವನ್ನು ತೆಗೆದುಕೊಳ್ಳಲು ಶೈಲಾಕ್ ಮುಂದಾಗುತ್ತಾನೆ. ಅದಕ್ಕೆ ಬದಲಾಗಿ, ಅದರ ಮೂರರಷ್ಟು ಹಣವನ್ನು ಕೊಡುವುದಾಗಿ ಪೋರ್ಷಿಯಾ ತಿಳಿಸಿದಾಗಲೂ ಶೈಲಾಕ್ ಒಪ್ಪದೆ, ಒಪ್ಪಂದದಲ್ಲಿ ಪರಸ್ಪರ ಒಪ್ಪಿಕೊಂಡಂತೆ ಒಂದು ಪೌಂಡ್ ಮಾಂಸಕ್ಕಾಗಿಯೇ ವಾದಿಸುತ್ತಾನೆ. ಆಗ ಪೋರ್ಷಿಯಾ ಹೇಳುತ್ತಾಳೆ. "ಆಯಿತು, ಹಾಗಾದರೆ ನೀನು ಒಂದು ಪೌಂಡು ಮಾಂಸವನ್ನು ಕತ್ತರಿಸಿ ತೆಗೆದುಕೋ, ಒಪ್ಪಂದದಲ್ಲಿ ಹೇಳಿರುವುದು ಒಂದು ಪೌಂಡು ಮಾಂಸವೆಂದು ಮಾತ್ರ. ಆದರೆ ಅದನ್ನು ತೆಗೆದುಕೊಳ್ಳುವಾಗ ವ್ಯಾಪಾರಿಯ ಒಂದೇ ಒಂದು ಹನಿ ರಕ್ತವೂ ಕೆಳಗೆ ಚೆಲ್ಲಬಾರದು. ಅಷ್ಟೇ ಅಲ್ಲ, ನೀನು ಕತ್ತರಿಸಿ

ತೆಗೆದ ಮಾಂಸ ಒಂದು ಪೌಂಡು ಮಾತ್ರವೇ ತೂಗಬೇಕು. ಅದರಲ್ಲಿ ಸ್ವಲ್ಪವೂ ಹೆಚ್ಚಾಗಲೀ ಕಡಿಮೆಯಾಗಲೀ ಆಗಬಾರದು. ಹಾಗೆ ಆಗಿದ್ದೇ ಆದಲ್ಲಿ ನಿನ್ನ ಸಮಸ್ತ ಆಸ್ತಿಯನ್ನೂ ಎಂದರೆ, ಸ್ಥಿರ, ಚರ ಆಸ್ತಿಗಳೆಲ್ಲವನ್ನೂ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.'' ಇದು ಒಪ್ಪಂದದ ಅಕ್ಷರಶಃ ವ್ಯಾಖ್ಯಾನ. ಕಾನೂನಿನ ಉದ್ದೇಶವನ್ನು ಕಾನೂನಿನಲ್ಲಿ ಬಳಸಲಾಗಿರುವ ಪದಗಳಿಂದಲೇ ತಿಳಿಯಬೇಕು.

ಪ್ರಾಚೀನ ಹಿಂದೂ ಕಾನೂನಿನಲ್ಲಿಯೂ ಸಹ, ಶೃತಿ ಮತ್ತು ಸ್ಮೃತಿಗಳ ನಡುವೆ, ಎರಡು ಸ್ಮೃತಿಗಳ ನಡುವೆ ಹಾಗೂ ಸ್ಮೃತಿ ಮತ್ತು ಆಚರಣೆಯ ನಡುವೆ ಉಂಟಾಗುವ ಅರ್ಥ ವ್ಯತ್ಯಾಸವನ್ನು ಪರಿಹರಿಸಿಕೊಳ್ಳಲು ಅನೇಕ ನಿಯಮಗಳು ರೂಢಿಯಲ್ಲಿತ್ತು ಎನ್ನಲಾಗಿದೆ. ಇವುಗಳ ಪೈಕಿ ಅತ್ಯಂತ ಮುಖ್ಯವಾದ ನಿಯಮಗಳೆಂದರೆ ಜೈಮಿನಿಯ ಮೀಮಾಂಸದಲ್ಲಿ ಸಂಗ್ರಹಿಸಲಾಗಿರುವ ಕಾನೂನಿನ ವ್ಯಾಖ್ಯಾನದ ನಿಯಮಗಳು.(ಜೈಮಿನಿಯ ಮೀಮಾಂಸದ ಕಾಲ ೫೦೦.ಕ್ರಿ.ಪೂ ಎನ್ನಲಾಗಿದೆ.[೮] ಇದನ್ನು ಶ್ರೀ ಜಗನಾಥ ಝಾ ಅವರು ತಮ್ಮ 'ಹಿಂದೂ ಲಾ' ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಇದರಲ್ಲಿರುವ ನಿಯಮಗಳು ಮುಖ್ಯವಾಗಿ ವೇದ ಸೂತ್ರಗಳ ವ್ಯಾಖ್ಯಾನಕ್ಕಾಗಿ ಇದ್ದರೂ, ಅವನ್ನು ಸ್ಮೃತಿಗಳಲ್ಲಿ ನಿರೂಪಿತವಾಗಿರುವ ಕಾನೂನುಗಳ ವ್ಯಾಖ್ಯಾನಗಳಲ್ಲಿ ಅನ್ವಯಿಸಲಾಗುತ್ತಿತ್ತು. ಪ್ರಾಚೀನ ಭಾರತದಲ್ಲಿ ಕಾನೂನು ಮತ್ತು ಧರ್ಮ ಇವುಗಳ ನಡುವೆ ವ್ಯತ್ಯಾಸವಿರಲಿಲ್ಲ ಎಂಬುದೂ ಇದಕ್ಕೆ ಕಾರಣವಾಗಿತ್ತು. ಮೀಮಾಂಸೆಯಲ್ಲಿ ಸೂತ್ರರೂಪದಲ್ಲಿ ನಿರೂಪಿತವಾಗಿರುವ ನಿಯಮಗಳು ಆಧುನಿಕ ವ್ಯಾಖ್ಯಾನ ನಿಯಮಗಳನ್ನು ಆಶ್ಚರ್ಯಕರ ರೀತಿಯಲ್ಲಿ ಹೋಲುತ್ತವೆ.

**ಸಾರ್ಥಕ್ಯ** : ಪ್ರತಿಯೊಂದು ಪದವು ಉದ್ದೇಶವುಳ್ಳ ಅರ್ಥವನ್ನು ಹೊಂದಿರಬೇಕು.

**ಅರ್ಥೈಕತ್ವ** : ಒಂದೇ ರೀತಿಯ ಪದಗಳು ಒಂದೇ ಅರ್ಥವನ್ನು ಹೊಂದಿರಬೇಕು.

**ಗುಣಪ್ರಧಾನ** : ಒಂದು ಕೇಂದ್ರ ಉದ್ದೇಶದೊಡನೆ ಮಿಕ್ಕೆಲ್ಲವೂ ಹೊಂದಾಣಿಕೆಯಾಗಬೇಕು.

**ಸಾಮಂಜಸ್ಯ** : ವಿರುದ್ಧಾರ್ಥವನ್ನು ಪರಿಭಾವಿಸುವ ಬದಲು ಆದಷ್ಟೂ ಹೊಂದಾಣಿಯಾಗುವ ಅರ್ಥವನ್ನು ಪರಿಭಾವಿಸುವುದಕ್ಕೆ ಪ್ರಯತ್ನಿಸಬೇಕು.

**ವಿಕಲ್ಪ** : ಎರಡು ಅರ್ಥಗಳಿದ್ದಲ್ಲಿ ಒಂದು ಅರ್ಥವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿರಬೇಕು.

**ಅನರ್ಥಕೇಯ** : ಒಂದು ಪದ ಅಥವಾ ನುಡಿಗಟ್ಟನ್ನು ಅರ್ಥಹೀನವನ್ನಾಗಿಸುವ ವ್ಯಾಖ್ಯಾನವನ್ನು ಕೈಬಿಡಬೇಕು.

ಆದ್ದರಿಂದ ಕಾನೂನಿನ ಚೌಕಟ್ಟಿನಲ್ಲಿಯೇ ನ್ಯಾಯ ಒದಗಿಸಬೇಕಾದರೂ, ಕಾನೂನಿನ ಸರಿಯಾದ ವ್ಯಾಖ್ಯಾನ ಮುಖ್ಯವಾಗುತ್ತದೆ ಮತ್ತು ಅಂಥ ವ್ಯಾಖ್ಯಾನ ಕಾನೂನಿನ ಉದ್ದೇಶಕ್ಕೆ ಪೂರಕವಾಗಿ ಇರಬೇಕಾಗುತ್ತದೆ.

ಕಾನೂನು ಅಥವಾ ಶಾಸನ ಎನ್ನುವುದು ಸಂಸತ್ತಿನ ಅಥವಾ ವಿಧಾನಮಂಡಲದಿಂದಾಗುವ ಕಟ್ಟುಪಾಡುಗಳ ಒಂದು ಗುಂಪು. ರಾಷ್ಟ್ರದ ಅಥವಾ ರಾಜ್ಯದ ಪ್ರತಿನಿಧಿಯಾಗಿ ಶಾಸಕಾಂಗ ತನ್ನ ಇಚ್ಛೆಯನ್ನು ಕಾನೂನಿನ ಮೂಲಕ ವ್ಯಕ್ತಪಡಿಸುತ್ತದೆ. ನ್ಯಾಯಾಲಯಗಳು ಶಾಸನಗಳನ್ನು, ವ್ಯಾಖ್ಯಾನ ನಿಯಮಗಳನ್ನು, ಅನ್ವಯಿಸಿ ಅರ್ಥೈಸುತ್ತದೆ. ಹೀಗೆ ಅರ್ಥೈಸುವಾಗ ನ್ಯಾಯಾಧೀಶರಿಗೆ ಮುಖ್ಯವಾಗುವುದು ಶಾಸಕಾಂಗದ ನಿಜವಾದ ಉದ್ದೇಶ. ಆದ್ದರಿಂದ, ಶಾಸನದ ನಿಜವಾದ ಉದ್ದೇಶವನ್ನು, ಆ ಉದ್ದೇಶವನ್ನು ಯಾವ ರೀತಿಯಲ್ಲಿ ಸಾಧಿಸಬೇಕೆಂದು ಶಾಸನ ಯೋಚಿಸಿದೆ ಎಂಬುದನ್ನು ತಿಳಿಯುವುದು ಮತ್ತು ಅದಕ್ಕನುಗುಣವಾಗಿ ಕಾನೂನನ್ನು ಅರ್ಥೈಸುವುದು ನ್ಯಾಯಾಧೀಶರ ಮುಖ್ಯ ಕರ್ತವ್ಯವಾಗುತ್ತದೆ ಮತ್ತು ಅವರು ಇದನ್ನು ಎಷ್ಟು ಸಮರ್ಥವಾಗಿ ಮಾಡುತ್ತಾರೆ ಎಂಬುದರ ಮೇಲೆ ಅವರು ನೀಡುವ ತೀರ್ಪು ಎಷ್ಟು ನ್ಯಾಯೋಚಿತವಾಗಿದೆ ಎಂಬುದು ನಿರ್ಧರಿತವಾಗುತ್ತದೆ. ಹೀಗೆ ಮಾಡುವಾಗ ಅವರು ಸ್ವಾತಂತ್ರ್ಯ ವಹಿಸಬಹುದೇ ಎಂಬ ಪ್ರಶ್ನೆಗೆ ಬ್ರಿಟಿಷ್ ನ್ಯಾಯಶಾಸ್ತ್ರದ ಒಂದು ಸೂತ್ರ ಹೀಗೆ ಹೇಳುತ್ತದೆ. - optima est lex minimun relinquity arbitrio Judicis optimus Jndex qui minimum simi ಎಂದರೆ ನ್ಯಾಯಾಧೀಶರ ವಿವೇಚನೆಯ ಅಗತ್ಯ ಅತ್ಯಂತ ಕಡಿಮೆ ಬೀಳುವಂಥ ಕಾನೂನಿನ ವ್ಯವಸ್ಥೆ ಅತ್ಯುತ್ತಮವಾದುದು ಮತ್ತು ತನ್ನ ಸ್ವಂತ ಅಭಿಪ್ರಾಯವನ್ನು ಅತ್ಯಂತ ಕಡಿಮೆ ಅವಲಂಬಿಸುವಂಥ ನ್ಯಾಯಾಧೀಶರು ಅತ್ಯಂತ ಉತ್ತಮ ನ್ಯಾಯಾಧೀಶರು.

ಕಾನೂನು ಸಾಮಾನ್ಯವಾಗಿ ಕರಾರುವಾಕ್ಕಾಗಿರುತ್ತದೆ ಎಂದು ಭಾವಿಸಿದರೂ, ಒಂದು ಕಾನೂನಿನ ಒಂದು ಭಾಗದ ನಿಜವಾದ ಉದ್ದೇಶ ಏನು ಎಂಬ ಬಗ್ಗೆ ಭಿನ್ನಾಭಿಪ್ರಾಯಗಳು ಬರುವ ಸಾಧ್ಯತೆ ಇದ್ದೇ ಇರುತ್ತದೆ. ಆದರೆ ಕಾನೂನನ್ನು/ಶಾಸನವನ್ನು ವಿರುದ್ಧಾರ್ಥ ಬರುವಂತೆ ಎರಡು/ಮೂರು ರೀತಿಯಲ್ಲಿ ವ್ಯಾಖ್ಯಾನಿಸಿರುವುದನ್ನು ಗಮನಿಸಿದರೆ, ಜನತೆ ಕಾನೂನಿನಲ್ಲಿ ಹಾಗೂ ನ್ಯಾಯಪರಿಪಾಲನೆಯಲ್ಲಿ ವಿಶ್ವಾಸವನ್ನೇ ಕಳೆದುಕೊಳ್ಳಬಹುದು. ಆದ್ದರಿಂದ ಒಂದು ಕಾನೂನನ್ನು, ಅರ್ಥೈಸುವಾಗ ತೀರ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗದಂತೆ ಮಾಡಲು ವ್ಯಾಖ್ಯಾನದ ಕೆಲವು ನಿಯಮಗಳನ್ನು ರೂಪಿಸಲಾಗಿದೆ. ಆದರೆ ಈ ನಿಯಮಗಳೂ ಕೂಡ ಯಾವುದೇ ಕಟ್ಟುನಿಟ್ಟಾದ ಸೂತ್ರಗಳನ್ನು ಹಾಕಿಕೊಡುವುದಿಲ್ಲ. ಏಕೆಂದರೆ ಎರಡು ವಿಭಿನ್ನ ವ್ಯಾಖ್ಯಾನಗಳನ್ನೂ ಈ ಸೂತ್ರಗಳ ಆಧಾರದ ಮೇಲೆಯೇ ಸಮರ್ಥಿಸಿಕೊಳ್ಳಬಹುದಾಗಿರುತ್ತದೆ. ಅಂಥ ಸಂದರ್ಭದಲ್ಲಿ ಕಾನೂನನ್ನು/ಕಾನೂನಿನ ಉಪಬಂಧವನ್ನು ಅರ್ಥೈಸುವಲ್ಲಿ ಮತ್ತು ಅದನ್ನು

ಅನ್ವಯಿಸಿ ನ್ಯಾಯದಾನ ಮಾಡುವಲ್ಲಿ ನ್ಯಾಯಾಧೀಶರಿಗೆ ನೆರವಾಗುವುದು ಪೂರ್ವನಿದರ್ಶನಗಳು (precedence). ಈ ಪೂರ್ವ ನಿದರ್ಶನಗಳಿಂದಾಗಿ ನ್ಯಾಯಿಕ ವಿವೇಚನೆಯನ್ನು ಬಳಸುವ ಸಂದರ್ಭಗಳು ಕಡಿಮೆಯಾಗುತ್ತದೆ. ಕಾನೂನು ಸ್ಪಷ್ಟವಾಗಿಲ್ಲದ ಸಂದರ್ಭಗಳಲ್ಲಿ, ತೀರ್ಪು ನೀಡುವಾಗ ಸಂದಿಗ್ಧತೆ ಉಂಟಾದಂಥ ಸಂದರ್ಭಗಳಲ್ಲಿ, ಅಥವಾ ಯಾವುದೇ ವಿಷಯದ ಬಗ್ಗೆ ಕಾನೂನು ಮೌನವಾಗಿರುವಂಥ ಸಂದರ್ಭದಲ್ಲಿ ತೀರ್ಪು ನೀಡುವಾಗ ನ್ಯಾಯಾಧೀಶರು ನ್ಯಾಯಾದಾನ ಮಾಡವುದು ಸ್ವಾಭಾವಿಕ ನ್ಯಾಯದ(natural Justice) ತತ್ತ್ವಗಳನ್ನು ಆಧರಿಸಿ. ಆದರೆ ಸ್ವಾಭಾವಿಕ ನ್ಯಾಯದ ತತ್ತ್ವಗಳು ಎಲ್ಲರಿಗೂ ತಿಳಿದಿರುವಂಥದ್ದಲ್ಲ ಹಾಗೂ ಅವು ಅಸ್ಪಷ್ಟ ಮತ್ತು ಅಮೂರ್ತ ತತ್ವಗಳಾಗಿರುತ್ತವೆ. ಆದ್ದರಿಂದ ಸರಿ ಮತ್ತು ಯುಕ್ತತೆಗಳ ಬಗ್ಗೆ ನಿಯಮಗಳನ್ನು ರೂಪಿಸುವಾಗ ತಮ್ಮ ಜ್ಞಾನದ ಪರಿಧಿಗಷ್ಟೇ ಸೀಮಿತವಾಗಿ ಉಳಿಯದೆ ನ್ಯಾಯಾಧೀಶರು, ಪ್ರಸ್ತುತ ಪ್ರಕರಣಕ್ಕೆ ಸದೃಶವಾದ ಪ್ರಕರಣದಲ್ಲಿ ತೀರ್ಪುನೀಡುವ ಸಂದರ್ಭದಲ್ಲಿ ಇತರ ನ್ಯಾಯಾಧೀಶರು ತಮ್ಮ ತೀರ್ಪಿಗೆ ಆಧರಿಸಿದ ಕಾನೂನಿನ ಹಾಗೂ ಸ್ವಾಭಾವಿಕ ನ್ಯಾಯದ ತತ್ತ್ವಗಳ ಮಾರ್ಗದರ್ಶನ ಪಡೆಯುತ್ತಾರೆ. ಪೂರ್ವ ನಿದರ್ಶನಗಳನ್ನು ಆಧರಿಸುವಾಗ ಅನುಸರಿಸುವ ತತ್ತ್ವವೆಂದರೆ- treat like cases alike -ಸದೃಶ ಪ್ರಕರಣಗಳನ್ನು ಒಂದೇ ರೀತಿಯಲ್ಲಿ ಪರಿಗಣಿಸಬೇಕು ಎಂಬುದು. ಯಾವುದೇ ಎರಡು ಪ್ರಕರಣಗಳೂ ತದ್ವತ್ತಾಗಿ ಒಂದೇ ರೀತಿಯದಾಗಿರುವುದಿಲ್ಲ. ಆದ್ದರಿಂದ ಪೂರ್ವನಿದರ್ಶನವನ್ನು ಅವಲಂಬಿಸುವಾಗಲೂ ನ್ಯಾಯಾಧೀಶರ ನ್ಯಾಯಿಕ ವಿವೇಚನೆ ನೆರವಿಗೆ ಬರುತ್ತದೆ. ಕೆಲವೊಮ್ಮೆ ಪೂರ್ವನಿದರ್ಶನಗಳನ್ನು ಸಹ ರದ್ದುಗೊಳಿಸಿ ತೀರ್ಪನ್ನು ಸರಿಪಡಿಸುವ ಅವಕಾಶ, ಅದು ನ್ಯಾಯಿಕವಾಗಿ ಸಮರ್ಥನೀಯವಾದರೆ, ಇದ್ದೇ ಇರುತ್ತದೆ.

ಧಾವನ್ ಅವರ[೧೦] "ಸುಪ್ರೀಂ ಕೋರ್ಟ್ ಆಫ್ ಇಂಡಿಯಾ" ಕೃತಿಯ ಮುನ್ನಡಿಯಲ್ಲಿ ಲಾರ್ಡ್ ಡೆನ್ನಿಂಗ್ ಹೀಗೆ ಬರೆದರು.

"ಇಂಗ್ಲೆಂಡಿನ ಬಹುಮಂದಿ ನ್ಯಾಯಧೀಶರು ತಾವು ಕಾನೂನನ್ನು ರೂಪಿಸುವುದಿಲ್ಲ, ಕೇವಲ ವ್ಯಾಖ್ಯಾನ ಮಾಡುತ್ತೇವೆ ಎಂದರು. ಆದರೆ ಇದು ಅವರು ಪೋಷಿಸಿಕೊಂಡು ಬಂದಿರುವ ಒಂದು ಭ್ರಮೆ. ಆದರೆ ಈ ಅಭಿಪ್ರಾಯವನ್ನು ಈಗ ಎಲ್ಲೆಡೆ ತಿರಸ್ಕರಿಸಲಾಗುತ್ತಿದೆ. ಪ್ರತಿಯೊಂದು ಹೊಸ ತೀರ್ಮಾನವೂ ಪ್ರತಿಯೊಂದು ಹೊಸ ಸಂದರ್ಭದಲ್ಲಿ- ಕಾನೂನಿನ ಬೆಳವಣಿಗೆಯಾಗಿರುತ್ತದೆ. ಕಾನೂನು ಜಡವಲ್ಲ, ಅದು ನಿರಂತರ ಚಲನೆಯನ್ನು ಹೊಂದಿರುವಂಥದ್ದು. ಇದನ್ನು ಒಪ್ಪಿಕೊಂಡಲ್ಲಿ, ನ್ಯಾಯಾಧೀಶರ ಸ್ಥಾನ ಉನ್ನತವಾದುದಾಗುತ್ತದೆ. ಅಂದಿನ ಕಾಲದ ಅಗತ್ಯಗಳಿಗೆ ಅನುವಾಗುವಂತೆ ಕಾನೂನನ್ನು ರೂಪಿಸುವ ಪ್ರಯತ್ನದಲ್ಲಿ ಅವರು ಪ್ರಜ್ಞಾಪೂರ್ವಕವಾಗಿ ತೊಡಗಬೇಕು. ಆತ ಬರೀ ಒಬ್ಬ ತಂತ್ರಜ್ಞನಾಗಬಾರದು ಅಥವಾ ಕಟ್ಟಡದ ಒಟ್ಟಾರೆ ಹೊರವಿನ್ಯಾಸದ ಬಗ್ಗೆ ಸ್ವಲ್ಪವೂ ಯೋಚನೆ ಮಾಡದೆ, ಇಟ್ಟಿಗೆಯ ಮೇಲೆ

ಇಟ್ಟಿಗೆಯನ್ನು ಜೋಡಿಸುವ ಗಾರೆಕೆಲಸದವನಾಗಬಾರದು. ಒಟ್ಟಾರೆ ನಿರ್ಮಾಣದ ಬಗ್ಗೆ ಯೋಚಿಸುವ, ಸಮಾಜಕ್ಕಾಗಿ ಶಕ್ತಿಯುತವಾದ, ಬಹುಕಾಲ ನಿಲ್ಲಬಲ್ಲ ಮತ್ತು ನ್ಯಾಯಯುತವಾದ ಕಾನೂನು ವ್ಯವಸ್ಥೆಯನ್ನು ಕಟ್ಟಿನಿಲ್ಲಿಸುವ ವಾಸ್ತುಶಿಲ್ಪಿಯಾಗಬೇಕು. ನಾಗರಿಕ ಸಮಾಜ ಅವಲಂಬಿಸುವುದು ಅವನು ನಿರ್ಮಿಸುವ ಈ ವ್ಯವಸ್ಥೆಯನ್ನು."

ಹಾರ್ವರ್ಡ್ ಲಾ ಸ್ಕೂಲಿನ ಗ್ರಂಥಾಲಯದ ಗೋಡೆಯ ಮೇಲಿನ ಬರವಣಿಗೆ ಹೀಗಿದೆ "ಕಾನೂನಿನ ಉದ್ದೇಶವೆಂದರೆ ಗೌರವಯುತವಾಗಿ ಬಾಳುವುದು, ಇತರರಿಗೆ ಹಾನಿಯುಂಟು ಮಾಡದಿರುವುದು ಮತ್ತು ಒಬ್ಬ ವ್ಯಕ್ತಿಗೆ ಸಲ್ಲಬೇಕಾದುದನ್ನು ಸಲ್ಲಿಸುವುದು." ನ್ಯಾಯ ನೀಡಿಕೆಯ ಉದ್ದೇಶವೂ ಇದೇ. ಮತ್ತು ಇದೇ ಆಗಿರಬೇಕು. ಒಬ್ಬ ವ್ಯಕ್ತಿಗೆ ತನ್ನ ಬಾಹ್ಯ ಮತ್ತು ಆಂತರಿಕ ಸಾಮರ್ಥ್ಯವನ್ನು ಸಂಪೂರ್ಣವಾಗಿ ಅಭಿವ್ಯಕ್ತಿಸುವ ಅವಕಾಶವಿದ್ದಾಗ ಮತ್ತು ಯಾವುದೇ ಭೌತಿಕ ಅಡೆತಡೆಗಳಿಲ್ಲದೆ ಹಾಗೂ ಆಧ್ಯಾತ್ಮಿಕ ಅನರ್ಹತೆಗಳಿಲ್ಲದೆ ಅದರ ಫಲವನ್ನು ಅನುಭವಿಸುವ ಅವಕಾಶವಿದ್ದಾಗ ಮಾತ್ರ ಅವನಿಗೆ ಸಲ್ಲಬೇಕಾದುದು ಸಂದಿದೆ ಎಂದರ್ಥ. ಆಗ ಮಾತ್ರ ಅವನಿಗೆ ನ್ಯಾಯ ದೊರೆತಿದೆ ಎನ್ನಬಹುದು. ಈ ನ್ಯಾಯ ಸಿವಿಲ್ ನ್ಯಾಯ ಅಥವಾ ಕ್ರಿಮಿನಲ್ ನ್ಯಾಯ ಆಗಿರಬಹುದು. ಸಿವಿಲ್ ನ್ಯಾಯದ ಉದ್ದೇಶ ಸ್ಥೂಲವಾಗಿ ಅನ್ಯಾಯಕ್ಕೆ ಒಳಗಾದ ವ್ಯಕ್ತಿಗೆ ಪರಿಹಾರ ದೊರಕಿಸಿಕೊಡುವುದಾದರೆ, ಕ್ರಿಮಿನಲ್ ನ್ಯಾಯದ ಉದ್ದೇಶ ಅಪರಾಧಿಗೆ ಶಿಕ್ಷೆ ವಿಧಿಸುವುದಾಗಿರುತ್ತದೆ ಮತ್ತು ವ್ಯಕ್ತಿ ತನ್ನ ಹಕ್ಕುಗಳ ಉಲ್ಲಂಘನೆಯಾದಾಗ ಅದಕ್ಕೆ ಪರಿಹಾರ ಕೋರಿ ಹಾಕುವ ದಾವೆ ಸಿವಿಲ್ ಸ್ವರೂಪದ್ದಾಗಿರುತ್ತವೆ. ಆದರೆ ಅಪರಾಧಗಳ ವಿರುದ್ಧ ಹೂಡುವ ದಾವೆಗಳು ಕ್ರಿಮಿನಲ್ ಸ್ವರೂಪದ್ದಾಗಿರುತ್ತವೆ. ಆದ್ದರಿಂದ ಸಿವಿಲ್ ವ್ಯವಹರಣೆಗಳ ಉದ್ದೇಶ ಹಕ್ಕುಗಳನ್ನು ಚಲಾಯಿಸುವುದು ಮತ್ತು ಕ್ರಿಮಿನಲ್ ವ್ಯವಹರಣೆಗಳ ಉದ್ದೇಶ ತಪ್ಪುಗಳನ್ನು ಶಿಕ್ಷಿಸುವುದು. ಸಿವಿಲ್ ವ್ಯವಹರಣೆಗಳಲ್ಲಿ ಜಾರಿಗೊಳಿಸುವ ಹಕ್ಕುಗಳು ಪ್ರಾಥಮಿಕ(Primary) ಹಕ್ಕುಗಳಾಗಿರುತ್ತವೆ. ಇಲ್ಲವೆ ವಿಧಾಯಕ ಹಕ್ಕುಗಳಾಗಿರುತ್ತವೆ.(Sanctioning right)

ವಿಧಾಯಕ ಹಕ್ಕು ಎಂದರೆ ಒಂದು ಹಕ್ಕನ್ನು ಉಲ್ಲಂಘಿಸುವುದರಿಂದಾಗಿ ಉಂಟಾಗುವ ಹಕ್ಕು. ಮಿಕ್ಕೆಲ್ಲ ಹಕ್ಕುಗಳೂ ಪ್ರಾಥಮಿಕ ಹಕ್ಕುಗಳು. ಇವುಗಳ ಮೂಲ ಇರುವುದು ಇನ್ನೊಬ್ಬರು ಮಾಡಿದ ಉಲ್ಲಂಘನೆಯಲ್ಲಿ ಅಲ್ಲ. ಉದಾಹರಣೆಗೆ, ಮಾನನಷ್ಟಕ್ಕೆ ಅಥವಾ ಆಕ್ರಮಣಕ್ಕೆ ಒಳಗಾಗದಿರುವುದು ಒಬ್ಬ ವ್ಯಕ್ತಿಯ ಪ್ರಾಥಮಿಕ ಹಕ್ಕು. ಆದರೆ, ವ್ಯಕ್ತಿಯ ಮೇಲೆ ಆಕ್ರಮಣ ಮಾಡಿದುದಕ್ಕಾಗಿ ಅಥವಾ ಅವನನ್ನು ಮಾನನಷ್ಟಕ್ಕೆ ಗುರಿಮಾಡಿದುದಕ್ಕಾಗಿ ಅಂಥ ವ್ಯಕ್ತಿಯಿಂದ ಹಣದ ರೂಪದಲ್ಲಿ ನಷ್ಟಪರಿಹಾರ ಪಡೆಯುವ ಹಕ್ಕು ವಿಧಾಯಕ ಹಕ್ಕು. ಕ್ರಿಮಿನಲ್ ವ್ಯವಹರಣೆಗಳ ಮೂಲಕ ನೀಡಲಾಗುವ ಕ್ರಿಮಿನಲ್ ನ್ಯಾಯ ಸಾಧಿಸುವ ಉದ್ದೇಶಗಳು ನಾಲ್ಕು ಬಗೆಯವು-

೧. ಭಯ ಹುಟ್ಟಿಸುವುದು.(deterrent)

೨. ತಡೆಯೊಡ್ಡುವುದು/ನಿವಾರಿಸುವುದು(Preventive)

೩. ಸುಧಾರಿಸುವುದು(Retributive)

೪. ಶಿಕ್ಷಿಸುವುದು/ಪ್ರತಿಫಲRetribhlive)

ಈ ನಾಲ್ಕರ ಪೈಕಿ ಮೊದಲನೆಯದು ಬಹುಮುಖ್ಯವಾದುದು. ಏಕೆಂದರೆ ಅವನಂತೆಯೇ ಅಪರಾಧವೆಸಗುವ ಮನಸ್ಸಿರುವ ವ್ಯಕ್ತಿಗಳಿಗೆ ಅಪರಾಧಿಗಾಗುವ ಗತಿಯನ್ನು ತಿಳಿಸುವ ಮೂಲಕ ಎಚ್ಚರಿಕೆ ನೀಡುವುದು ಶಿಕ್ಷೆಯ ಉದ್ದೇಶವಾಗಿರುತ್ತದೆ. ಅಪರಾಧಿಗೆ ಮರಣದಂಡನೆ, ಕಾರಾವಾಸ ಇತ್ಯಾದಿ ಶಿಕ್ಷೆ ವಿಧಿಸುವ ಮೂಲಕ ಅಪರಾಧ ಪುನರಾವರ್ತನೆಯಾಗದಂತೆ ತಡೆಯುವುದೂ, ಇನ್ನೊಂದು ಉದ್ದೇಶ. ಅಪರಾಧಗಳನ್ನು ಕೆಲವೊಮ್ಮೆ ಕೆಲವು ಪ್ರೇರಣೆಯಿಂದ ಎಸಗಲಾಗಿರುತ್ತದೆ. ಅಂಥ ಸಂದರ್ಭದಲ್ಲಿ ಕಾರಾವಾಸ ಮತ್ತು ಪರೀಕ್ಷಾರ್ಥ ಶಿಕ್ಷೆ ವಿಧಿಸುವ ಮೂಲಕ ಅವರನ್ನು ಸುಧಾರಿಸುವ, ವರ್ತನೆಯಲ್ಲಿ ಬದಲಾವಣೆ ತರುವ ಪ್ರಯತ್ನ ಮಾಡುವುದೂ ಶಿಕ್ಷೆಯ ಒಂದು ಉದ್ದೇಶ. ಕೊನೆಯದಾಗಿ, ಅನ್ಯಾಯದಿಂದ ಸಮುದಾಯದಲ್ಲಿ ಉಂಟಾಗುವ ಪ್ರತೀಕಾರದ ರೋಷವನ್ನು ತಣಿಸುವ ಉದ್ದೇಶವೂ ಶಿಕ್ಷೆಗೆ ಇರುತ್ತದೆ.

ಈ ಕ್ರಮಗಳಿಂದ ನ್ಯಾಯದ(ಕಾನೂನಿನ) ನಿಯಮಗಳನ್ನು ಜಾರಿಗೊಳಿಸಿ ನ್ಯಾಯ ದೊರಕಿಸಿಕೊಡುವುದು ರಾಜ್ಯದ ಕರ್ತವ್ಯ. ಇಲ್ಲಿ ನ್ಯಾಯ ದೊರಕಿಸಿಕೊಡುವುದು ಎಂದರೆ 'ಹಕ್ಕುಗಳ ಕಡ್ಡಾಯ ರಕ್ಷಣೆ ಮತ್ತು ತಪ್ಪುಗಳ ದಮನ.' ಇದರಿಂದಾಗಿ, ನ್ಯಾಯ ನೀಡಿಕೆಯಲ್ಲಿ, ಪ್ರತಿ ಪ್ರಕರಣದಲ್ಲಿಯೂ ಇಬ್ಬರು ಪಕ್ಷಕಾರರಿರುತ್ತಾರೆ. ವಾದಿ ಮತ್ತು ಪ್ರತಿವಾದಿ. ವಾದಿ ಹಕ್ಕು ಕ್ಲೇಮು ಮಾಡುವುದು ಪ್ರತಿವಾದಿಯಿಂದ ಅಥವಾ ಅಪರಾಧವನ್ನು ಹೊರಿಸುವುದು ಪ್ರತಿವಾದಿಯ ವಿರುದ್ಧ. ತೀರ್ಪು ಇಬ್ಬರಲ್ಲಿ ಒಬ್ಬರ ಕಡೆಗಿರುತ್ತದೆ. ಈ ತೀರ್ಪನ್ನು, ಅಗತ್ಯ ಬಿದ್ದಲ್ಲಿ ರಾಜ್ಯದ ಅಧಿಕಾರ ಬಲದಿಂದ ಜಾರಿಗೊಳಿಸಲಾಗುತ್ತದೆ.

ಆದ್ದರಿಂದ 'ನ್ಯಾಯ' ಎಂಬ ಪರಿಕಲ್ಪನೆಯ ಅಮೂರ್ತತೆಯನ್ನು ಹಾಗೂ ಅದಕ್ಕಿರುವ ವ್ಯಾಖ್ಯಾನಗಳನ್ನು ಸೀಮಿತಗೊಳಿಸಿ 'ನ್ಯಾಯ' ಕಾನೂನಿಗೆ ಅನುಗುಣವಾಗಿ ಇರಬೇಕು ಎಂಬುದನ್ನು ಒಪ್ಪಿಕೊಂಡು, ನ್ಯಾಯ ಮತ್ತು ಕಾನೂನುಗಳಿಗೆ ಸಂಬಂಧ ಕಲ್ಪಿಸಬೇಕಾಗುತ್ತದೆ ಮತ್ತು ಕಾನೂನಿನ ಮೂಲ ಉದ್ದೇಶವೇ 'ನ್ಯಾಯ'ದ ಅನ್ವೇಷಣೆಯಾಗಿರುತ್ತದೆ. ಹೀಗಾಗಿ, ಕಾನೂನು ಕ್ರಮದ ಪೂರ್ಣ ಉದ್ದೇಶವೇ ನ್ಯಾಯಯುತ ವಾದ ತೀರ್ಮಾನಕ್ಕೆ ಬರುವುದು. ಆಯಾ ಸಮಯಗಳಲ್ಲಿರುವ ಕಾನೂನುಗಳಿಗೆ ಅನುಸಾರವಾಗಿ, ವ್ಯಕ್ತಿ ವ್ಯಕ್ತಿಗಳ ನಡುವೆ ಹಾಗೂ ವ್ಯಕ್ತಿ ಮತ್ತು ಸರ್ಕಾರದ ನಡುವೆ ಉಂಟಾಗುವ ವಿವಾದಗಳನ್ನು ನ್ಯಾಯಯುತವಾಗಿ ಬಗೆಹರಿಸುವುದು. ನ್ಯಾಯಾಂಗ ಎಂದರೆ ನ್ಯಾಯಾಧೀಶರು. ಅವರ ತೀರ್ಮಾನ ಅಧಿಕೃತ ತೀರ್ಮಾನವಾಗಿರುತ್ತದೆ ಎಂಬುದು ಸ್ವಯಂ ವೇದ್ಯ. ನ್ಯಾಯಾಧೀಶರು, ನ್ಯಾಯಾಲಯಗಳಲ್ಲಿ

ಪರವಿರುದ್ಧ ಸಾಕ್ಷಿಗಳ ಹೇಳಿಕೆಗಳನ್ನು ಆಲಿಸಿ, ಲಭ್ಯವಿರುವ ಇತರ ಸಾಕ್ಷ್ಯಗಳನ್ನು ಪರಿಶೀಲಿಸಿ, ಭಯಮುಕ್ತರಾಗಿ, ನಿಷ್ಪಕ್ಷಪಾತವಾಗಿ ತೀರ್ಮಾನ ನೀಡಬೇಕು. ಎರಡೂ ಪಕ್ಷಕಾರರೂ ತಮ್ಮ ಪರವಾಗಿ ನೀಡಲಾಗುವ ತೀರ್ಪು ಮಾತ್ರವೇ ನ್ಯಾಯಯುತವಾದದ್ದು ಎಂದು ಅನೇಕ ಬಾರಿ ಭಾವಿಸುವುದರಿಂದ, ನ್ಯಾಯಾಧೀಶರ ತೀರ್ಪು ಹೊರಬಿದ್ದ ನಂತರವೂ ಅದು ಒಬ್ಬ ಪಕ್ಷಕಾರನ ದೃಷ್ಟಿಯಿಂದ 'ಅನ್ಯಾಯ'ದ ತೀರ್ಪು ಆಗಿರಲು ಸಾಕು. ಕೆಲವೊಮ್ಮೆ ಸಮಾಜ ಒಪ್ಪಿರುವ 'ನ್ಯಾಯ'ದ ಮಾನದಂಡದಿಂದಲೂ 'ಅನ್ಯಾಯ'ದ ತೀರ್ಪು ಆಗಿರಬಹುದು. ಹೀಗೆ ನ್ಯಾಯ ಸಾಧಿಸಬೇಕು ಎಂಬ ಗುರಿಯಲ್ಲಿಯೇ ವೈಫಲ್ಯದ ಸಾಧ್ಯತೆ ಅಂತರ್ಗತವಾಗಿದೆ. ಆದ್ದರಿಂದ ಬದಲಿಸಲಾಗದ ಅಧಿಕೃತ ತೀರ್ಮಾನ ನ್ಯಾಯಯುತವಾದುದು ಆಗಿಲ್ಲದೆಯೇ ಇರಬಹುದು. ಈ ಸಾಧ್ಯತೆಯನ್ನು ಮನಗಂಡೇ ಅಧೀನ ನ್ಯಾಯಾಲಯಗಳು ಕೈಗೊಳ್ಳುವ ತೀರ್ಪಿನ ವಿರುದ್ಧ ಮೇಲಿನ ನ್ಯಾಯಾಲಯಗಳಿಗೆ ಮೇಲ್ಮನವಿ ಸಲ್ಲಿಸುವ ಅವಕಾಶವನ್ನು ಕಾನೂನಿನಲ್ಲಿ ಕಲ್ಪಿಸಲಾಗಿದೆ. ನಮ್ಮ ದೇಶದ ಅತ್ಯುಚ್ಚ ನ್ಯಾಯಾಲಯವೆಂದರೆ ಸರ್ವೋಚ್ಚ ನ್ಯಾಯಾಲಯ. ಯಾವುದೇ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡುವ ತೀರ್ಪು ಅಂತಿಮವಾಗಿರುತ್ತದೆ. ಅದಕ್ಕೆ ಎಲ್ಲರೂ ಬದ್ಧರಾಗಿರುತ್ತಾರೆ.

ನ್ಯಾಯದ ಮಾನದಂಡಗಳು ಸಮಾಜದ ಸಮಷ್ಟಿ ಪ್ರಜ್ಞೆಯ ಅಭಿವ್ಯಕ್ತಿಯಿಂದ ರೂಪುಗೊಂಡಿರುವಂಥವು. ಹೀಗಾಗಿ ನಮ್ಮ ನ್ಯಾಯದ ಎಲ್ಲ ಪರಿಕಲ್ಪನೆಗಳೂ ಅಂದಿನ ಸಮಾಜದ ದೃಷ್ಟಿಕೋನದ ಅಭಿವ್ಯಕ್ತಿಗಳಾಗಿರುವುದರಿಂದ ಪುರುಷಪ್ರಧಾನ ದೃಷ್ಟಿಕೋನವನ್ನೇ ಹೊಂದಿವೆ.

ನ್ಯಾಯ ಅನ್ಯಾಯಗಳ ಚರ್ಚೆ ಹಾಗೂ ನಿರ್ವಚನಗಳು ಪ್ರಾಚೀನ ಕಾಲದಿಂದಲೂ ನಡೆಯುತ್ತಲೇ ಬಂದಿದ್ದರೂ, ನಾಗರಿಕ ಸಮಾಜದಲ್ಲಿ ಪ್ರತಿವ್ಯಕ್ತಿಗೂ ಆತ್ಮಗೌರವದಿಂದ ಬಾಳಲು ಹಕ್ಕಿದೆಯೆಂದು ಹೇಳುತ್ತಲೇ ಬಂದಿದ್ದರೂ, ಹಿಂದೂ ಸಮಾಜದಲ್ಲಿ ಅಂದಿನಿಂದ ಇಂದಿನವರೆಗೂ ಮಹಿಳೆಗೆ ದೊರೆತಿರುವುದು 'ಎರಡನೇ ಪ್ರಜೆ'ಯ ಸ್ಥಾನವೇ ಎಂಬುದನ್ನು ನಾವು ಮರೆಯುವಂತಿಲ್ಲ. ಅವಳು ಶತಶತಮಾನಗಳಿಂದ ಒಳಗಾಗಿರುವ ಶೋಷಣೆಯನ್ನು ನ್ಯಾಯದ ಯಾವ ನಿರ್ವಚನದಿಂದಲೂ ಸಮರ್ಥಿಸಿಕೊಳ್ಳಲಾಗುವುದಿಲ್ಲ.

**ಅಡಿಟಿಪ್ಪಣಿಗಳು**

೧. ಎಂ.ಬಿ.ಶಾಂತಿ, ಮಹಾಭಾರತ ಶಾಂತಿಪರ್ವ, ಸಂಸ್ಕೃತ ಹಿಂದೀ ಅನುವಾದದೊಡನೆ ಸಂ.ಶ್ರೀಪಾದ ದಾಮೋದರ ಸತ್ವಾಲೇಕರ ೧೯೫೨

೨. An Enquiry concerning the principles of morals-David Hume

೩. ವಿ.ಆರ್.ಕೃಷ್ಣ ಅಯ್ಯರ್ ಅವರ ಲಾ ವರ್ಸಸ್ ಜಸ್ಟಿಸ್ ಪುಸ್ತಕದಿಂದ ಉದ್ಧೃತ

೪. ಎಸ್.ರಾಧಕೃಷ್ಣ, ಭಾರತದ ಮಾಜಿ ರಾಷ್ಟ್ರಪತಿ The Principle of Upanishads

೫. ವಿಧವಾ ಪುನರ್ವಿವಾಹ ಕಾನೂನನ್ನು ಜಾರಿಗೆ ತರುವುದರ ಹಿಂದಿನ ಉದ್ದೇಶವೂ ಇದೇ ಆಗಿತ್ತು. ಜೀವನ ಪರ್ಯಂತ ಅನುಭವಿಸುವಂಥ ಒಂದು ಕಷ್ಟದಿಂದ ತನ್ನ ಪುಟ್ಟಮಗುವನ್ನು ಪಾರು ಮಾಡಲು ಸುಶಿಕ್ಷಿತನಾದ, ಆಲೋಚಿಸಬಲ್ಲಂಥ ಹಾಗೂ ಆತ್ಮಸಾಕ್ಷಿಗೆ ಅನುಗುಣವಾಗಿ ನಡೆಯುವಂಥ ಒಬ್ಬನೇ ಒಬ್ಬ ತಂದೆ ಪ್ರಯತ್ನಪಟ್ಟರೂ, ನಾಡಿನ ಕಾನೂನು ಅವನಿಗೆ ಅಡ್ಡ ಬರಬಾರದು.

ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ನೀಡುವ ತಿದ್ದುಪಡಿ ತರುವುದರ ಹಿಂದಿನ ಉದ್ದೇಶವೂ ಎಲ್ಲ ಹೆಣ್ಣುಮಕ್ಕಳೂ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ಕೇಳಬೇಕು ಎಂಬುದಿಲ್ಲ. ಆದರೆ ತನ್ನ ಕಾಲ ಮೇಲೆ ತಾನು ನಿಲ್ಲಬೇಕೆಂಬ ಮಹಿಳೆಗೆ ಅಗತ್ಯವಿದ್ದಲ್ಲಿ ಆರ್ಥಿಕ ನೆರವನ್ನು ಒದಗಿಸಿ ಕೊಡುವ ಅವಕಾಶ ಇದು.

೬. ಮೊದಲ ಮದುವೆ ಊರ್ಜಿತವಿರುವ, ಗುಡ್ಡಗಾಡು ಜನಾಂಗಕ್ಕೆ ಸೇರಿದ ಪುರುಷ ಗುಡ್ಡಗಾಡು ಜನಾಂಗಕ್ಕೆ ಸೇರಿದ ಮಹಿಳೆಯನ್ನು ವಿವಾಹವಾಗುತ್ತಾನೆ. ಗುಡ್ಡಗಾಡು ಜನಾಂಗದ ಕಾನೂನಿನ ಪ್ರಕಾರ ಈ ವಿವಾಹ ಊರ್ಜಿತ. ಆದರೆ ಹಿಂದೂ ವಿವಾಹ ಅಧಿನಿಯಮದ ಪ್ರಕಾರ ಈ ವಿವಾಹ, ಇದು ಆತನ ಎರಡನೇ ವಿವಾಹ ಎಂಬ ಕಾರಣಕ್ಕಾಗಿ ಅನೂರ್ಜಿತ. ಕೆಲವು ವರ್ಷಗಳ ನಂತರ ಪತಿ ಪತ್ನಿಯನ್ನು ತೊರೆಯುತ್ತಾನೆ. ಪತ್ನಿ ಅಪರಾಧಿಕ ಕಾನೂನಿನ ಅಡಿಯಲ್ಲಿ ಜೀವನಾಂಶಕ್ಕಾಗಿ ಮೊಕದ್ದಮೆ ಹೂಡುತ್ತಾಳೆ, ಹಿಮಾಚಲ ಪ್ರದೇಶದ ಉಚ್ಚ ನ್ಯಾಯಾಲಯದಲ್ಲಿ. ಇಲ್ಲಿ ಹಿಂದೂಗಳಿಗೆ ಅನ್ವಯಿಸುವ ಕಾನೂನನ್ನು ಅನ್ವಯಿಸಿ, ಪತ್ನಿ ಜೀವನಾಂಶಕ್ಕೆ ಅರ್ಹಳಲ್ಲ ಎಂದು ನ್ಯಾಲಯಲಯ ತೀರ್ಪು ನೀಡಿತು. ನ್ಯಾಯಾಲಯ ಪತಿಪತ್ನಿಯರ ಪೈಕಿ, ಪತಿಗೆ ಅನ್ವಯಿಸುವ ಕಾನೂನಿನ ಪ್ರಕಾರ ತೀರ್ಪು ನೀಡಿತು. ಅಲ್ಲದೆ ಹಿಂದೂ ಕಾನೂನಿನ ಅರಿವಿಲ್ಲದಿದ್ದ ಗುಡ್ಡಗಾಡು ಜನಾಂಗಕ್ಕೆ ಸೇರಿದ ಮಹಿಳೆಗೆ ಆದ ಶೋಷಣೆಯ ಬಗ್ಗೆಯಾಗಲೀ ಅವಳನ್ನು ಶೋಷಿಸಿದ ವ್ಯಕ್ತಿಯನ್ನಾಗಲೀ ಟೀಕಿಸಲೂ ಇಲ್ಲ ಎಂಬುದನ್ನು ಗಮನಿಸಬೇಕು.

೭. ಗೋವಿಂದರಾವ್ ವಿ. ಆನಂದಿಬಾಯಿ ಪ್ರಕರಣದಲ್ಲಿ ಗೋವಿಂದರಾವ್ ಎಂಬುವರು ಮೊದಲ ವಿವಾಹ ಊರ್ಜಿತವಿದ್ದಾಗಲೇ ಆನಂದಿಬಾಯಿಯನ್ನು ವಿವಾಹವಾದರು. ಆನಂದಿಬಾಯಿ ಮೊದಲ ವಿವಾಹದ ವಿಷಯ ತಿಳಿದಿದ್ದರೂ, ಹಣಕಾಸಿನ ಮುಗ್ಗಟ್ಟಿನಿಂದಾಗಿ ಗೋವಿಂದರಾವ್‌ನನ್ನು ವಿವಾಹವಾದಳು. ಕೆಲವು ವರ್ಷಗಳ ನಂತರ ಗೋವಿಂದರಾವ್ ಅವಳನ್ನು ಮನೆಯಿಂದಾಚೆ ಅಟ್ಟಿದ ಈ ಪ್ರಕರಣದಲ್ಲಿ ಕಾನೂನಿನ ಕಟ್ಟುನಿಟ್ಟಾದ ವ್ಯಾಖ್ಯಾನವನ್ನು ಸಡಿಲಿಸಿ ಬಾಂಬೆ ಉಚ್ಚನ್ಯಾಲಯ ಅವಳಿಗೆ ಜೀವನಾಂಶ ನೀಡಿತು.

೮. ಕೆ.ಎಲ್.ಸರ್ಕಾರ ಅವರ ಮೀಮಾಂಸ ವ್ಯಾಖ್ಯಾನ ನಿಮಯಗಳು

೯. That system of law is best which confides as little as possible to the discrection of the judge-that judge the best, who relies as little as possible on his own opinion

೧೦. ವಿ.ಆರ್.ಕೃಷ್ಣಅಯ್ಯರ್ ಅವರ ಜಸ್ಟಿಸ್ ಅಂಡ್ ಬಿಯಾಂಡ್ ಪುಸ್ತಕದ ಕೋವಾಡಿಸ್ ಇಂಡಿಯನ್ ಜಸ್ಟಿಸಿಂಗ್ ಎಂಬ ಲೇಖನದಿಂದ ಉದ್ಧೃತ

# ಸಂವಿಧಾನ, ಸಮಾನತೆ ಮತ್ತು ತಾರತಮ್ಯ

## ಸಮಾನತೆಯ ತತ್ವಗಳು

ನಮ್ಮ ಸಂವಿಧಾನ ಸ್ತ್ರೀ ಪುರುಷರಿಗೆ ಸಮಾನ ಹಕ್ಕುಗಳ್ನು ನೀಡಿದೆ. ಅಷ್ಟೇ ಅಲ್ಲದೆ ಸ್ತ್ರೀ ಪುರುಷ ಸಮಾನತೆಯನ್ನು ಸಾಧಿಸುವುದಕ್ಕೆ ಸ್ತ್ರೀಯರಿಗೆ ಸಂಬಂಧಿಸಿದಂತೆ ವಿಶೇಷ ಉಪಬಂಧಗಳನ್ನು ರಚಿಸಲು ರಾಜ್ಯ ಸರ್ಕಾಗಳಿಗೆ ಅಧಿಕಾರ ನೀಡುತ್ತದೆ.

ಬ್ರಿಟಿಷರ ಆಳ್ವಿಕೆಯಿಂದ ಮುಕ್ತವಾದ ಭಾರತವನ್ನು ಸರ್ವಶಕ್ತ ಸಮಾಜವಾದೀ ಜಾತ್ಯತೀತ ಸ್ವತಂತ್ರ ಪ್ರಜಾಸತ್ತಾತ್ಮಕ ಗಣತಂತ್ರ ರಾಷ್ಟ್ರವನ್ನಾಗಿ ರೂಪಿಸುವುದಕ್ಕಾಗಿ ರಾಷ್ಟ್ರವು ತನಗೆ ತಾನೇ ಸಮರ್ಪಿಸಿಕೊಂಡ ಭಾರತ ಸಂವಿಧಾನವು, ಇಡೀ ವಿಶ್ವದಲ್ಲಿಯೇ ಅತ್ಯುತ್ಕೃಷ್ಟ ಸ್ವಯಂಪೂರ್ಣ ಸಂವಿಧಾನವೆಂಬ ಪ್ರಶಂಸೆಗೆ ಪಾತ್ರವಾಗಿದೆ. ಸಂವಿಧಾನದ ಪ್ರಸ್ತಾವನೆ ಹೀಗಿದೆ :

"ಭಾರತದ ಸಮಸ್ತ ನಾಗರಿಕರಾದ ನಾವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವಿಚಾರ ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯ, ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆ-ಭಾರತೀಯ ನಾಗರಿಕರಿಗೆ ದೊರೆಯುವಂತೆ ಮಾಡಲು, ವ್ಯಕ್ತಿ ಗೌರವ ಹಾಗೂ ರಾಷ್ಟ್ರದ ಏಕತೆಯನ್ನು ಖಚಿತಪಡಿಸುವಂಥ ಭ್ರಾತೃ ಭಾವನೆಯನ್ನು ಎಲ್ಲರಲ್ಲೂ ಬೆಳೆಸುವ ದೃಢ ಸಂಕಲ್ಪದಿಂದ ಸಂವಿಧಾನವನ್ನು ಅಂಗೀಕರಿಸಿ, ೧೯೪೯ರ ನವೆಂಬರ್ ೨೬ರಂದು ನಮ್ಮ ಸಂಸತ್ತಿನಲ್ಲಿ ಅಧಿನಿಯಮಿಸಿ ದೇಶಕ್ಕೆ ಅರ್ಪಿಸಿಕೊಂಡಿದ್ದೇವೆ."

ಸ್ತ್ರೀ-ಪುರುಷ ಸಮಾನತೆಯ ಪರಿಕಲ್ಪನೆಯನ್ನು ಅಂತರ್ಗತಗೊಳಿಸಿಕೊಂಡಿರುವ ನಮ್ಮ ಸಂವಿಧಾನ ಮಹಿಳೆಯರಿಗೆ ಹೊಸ ದಿಗಂತವನ್ನು ತೆರೆಯಿತು. ಮಹಿಳಾ ವಿಮೋಚನೆಯ ಸಮಸ್ಯೆಯ ಸಾಮಾಜಿಕ ಆಯಾಮದ ಅರಿವು ನಮ್ಮ ಸಂವಿಧಾನ ಶಿಲ್ಪಿಗಳಿಗಿತ್ತು. ಅಲ್ಲದೆ ರಾಷ್ಟ್ರದ ಅಭಿವೃದ್ಧಿಗೆ ಮಹಿಳೆಯರು ಪುರುಷರಿಗೆ ಸರಿಸಮನಾಗಿ ತಾರತಮ್ಯವನ್ನು ಹೋಗಲಾಡಿಸಬೇಕಾದರೆ ಹಾಗೂ ಮಾನವ ಹಕ್ಕುಗಳ ಚಲಾವಣೆಗೆ ಅವಕಾಶ ಕಲ್ಪಿಸಬೇಕಾದರೆ, ಮಹಿಳೆಯರ ಶಿಕ್ಷಣ ಹಾಗೂ ಆರ್ಥಿಕ ಭದ್ರತೆಗೆ ಅವಕಾಶ ಒದಗಿಸುವುದು ಹಾಗೂ ಸಾಮಾಜಿಕ ಅನ್ಯಾಯ ಹಾಗೂ ಶೋಷಣೆಯಿಂದ ಅವರನ್ನು ರಕ್ಷಿಸುವುದು ಅತ್ಯಗತ್ಯವಾಗಿತ್ತು. ಈ ಧ್ಯೇಯದಿಂದ ನಮ್ಮ ಸಂವಿಧಾನ ಮೂರು ಮುಖ್ಯ ಕ್ರಮಗಳನ್ನು ಕೈಗೊಂಡಿದೆ. ಮೊದಲನೆಯದಾಗಿ ಲಿಂಗದ ಆಧಾರದ ಮೂಲಕವಾದ ಯಾವುದೇ ತಾರತಮ್ಯಗಳನ್ನು ನಿಷೇಧಿಸುವುದು;

ಎರಡನೆಯದಾಗಿ, ಮಹಿಳೆಯರ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ದೃಷ್ಟಿಯಲ್ಲಿರಿಸಿಕೊಂಡು ಅವರ ಬಗ್ಗೆ ರಾಜ್ಯ ವಿಶೇಷ ಕಾಳಜಿ ವಹಿಸುವುದಕ್ಕೆ ಸಾಧ್ಯವಾಗುವಂತೆ ಮಹಿಳೆಯರಿಗಾಗಿ ವಿಶೇಷ ಉಪಬಂಧಗಳನ್ನು ರಚಿಸಲು ಅಧಿಕಾರ ನೀಡುವುದ; ಮತ್ತು ಕೊನೆಯದಾಗಿ, ಮಹಿಳೆಯರಿಗೆ ಸಂಬಂಧಿಸಿದಂತೆ ನಿರ್ದಿಷ್ಟ ನಿರ್ದೇಶನಗಳನ್ನು ನೀಡುವ ನಿರ್ದೇಶನ ತತ್ವಗಳನ್ನು ರೂಪಿಸುವುದು.

ಮಾನವ ನಾಗರಿಕತೆಯ ಹಾಗೂ ಸಂಸ್ಕೃತಿಯ ನಿಜವಾದ ಪ್ರಗತಿಯೆಂದರೆ, ಸ್ತ್ರೀ ಪುರುಷರನ್ನು ಪರಿಪೂರ್ಣ ಅಸ್ತಿತ್ವವಿರುವ ವ್ಯಕ್ತಿಗಳನ್ನಾಗಿ ಪರಿಗಣಿಸುವುದರ ಮಹತ್ವವನ್ನು ಹಾಗೂ ರೀತಿ ನೀತಿಗಳನ್ನು ಗುರುತಿಸುವತ್ತ ಹೆಜ್ಜೆಯಿಡುವುದು.

ಈಗ ಪುರುಷರ ಮನೋಭಾವದಲ್ಲಿ ಹಾಗೂ ಮಹಿಳೆಯರ ಧೋರಣೆಯಲ್ಲಿ ಅದೆಷ್ಟೋ ಬದಲಾವಣೆಗಳಾಗಿ ಹೋಗಿವೆ. ಸಂವಿಧಾನದಲ್ಲಿ ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ಸಮಾನ ಅವಕಾಶಗಳನ್ನು ಕಲ್ಪಿಸಿರುವುದೇ ಇದಕ್ಕೆ ಸಾಕ್ಷಿ. ಸಂವಿಧಾನದಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಅನುಚ್ಛೇದಗಳೆಂದರೆ

೧. ಸಮಾನತೆಯ ಹಕ್ಕು(೧೪, ೧೫ ಮತ್ತು ೧೬ನೇ ಅನುಚ್ಛೇದ)

೨. ಶೋಷಣೆಯ ವಿರುದ್ಧ ಹಕ್ಕು (೨೩ನೇ ಅನುಚ್ಛೇದ)

೩. ನಿರ್ದೇಶನ ತತ್ವಗಳು (೩೯(ಎ) (ಡಿ) ಮತ್ತು (ಇ) ಹಾಗೂ ೪೨ನೇ ಅನುಚ್ಛೇದಗಳು)

೪. ಮೂಲಭೂತ ಕರ್ತವ್ಯಗಳು (೫೧ ಎ(ಇ) ಅನುಚ್ಛೇದ)

೫. ಚುನಾವಣೆಗಳು (೩೨೫ನೇ ಅನುಚ್ಛೇದ)

ನಮ್ಮ ಸಂವಿಧಾನದ ಶಿಲ್ಪಿಗಳು ಮಹಿಳೆಯರಿಗೆ ಸ್ವಾತಂತ್ರ್ಯವನ್ನು ಹಾಗೂ ಸಮಾನತೆಯನ್ನು ನೀಡಿದರು. ಇವುಗಳ ಉದ್ದೇಶ ಮಹಿಳೆಯ ಅಭಿವೃದ್ಧಿ. ಆದರೆ ಮಹಿಳೆಯರಿಗಾಗಿ ಇರುವ ಉದಾರ ತತ್ವಗಳ ದುರಪಯೋಗವನ್ನು ತಡೆಯುವುದು ಹಾಗೂ ಶೋಷಣೆಯಿಂದ ಅವರಿಗೆ ರಕ್ಷಣೆಯನ್ನೊದಗಿಸುವುದೂ ಅಷ್ಟೇ ಮುಖ್ಯವಾದುದು ಎಂಬುದನ್ನು ಅವರು ಮನಗಂಡಿದ್ದರು. ಆದ್ದರಿಂದ ಮಹಿಳೆಯ ವಿಷಯದಲ್ಲಿ, ಆಕೆ ಸ್ತ್ರೀ ಎಂಬ ಕಾರಣ ಮಾತ್ರಕ್ಕೆ ತಾರತಮ್ಯವೆಸಗದಂತೆ ರಕ್ಷಣಾ ಅನುಚ್ಛೇದಗಳನ್ನು ಸೇರಿಸಿದರು. ಸಮಾನತೆಯ ಅನುಚ್ಛೇದವನ್ನು ಸೇರಿಸಿದ್ದಲ್ಲದೇ ಮತ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳದ ಆಧಾರದ ಮೇಲೆ ಯಾವುದೇ ತಾರತಮ್ಯವಾಗುವುದನ್ನು ನಿಷೇಧಿಸಲಾಯಿತು. ಇದೆಲ್ಲದರ ಜೊತೆಗೆ, ಕೆಲವೊಂದು ವಿಶೇಷ ರಕ್ಷಣೆಗಳನ್ನು ಒದಗಿಸಿದ ಹೊರತು ಮಹಿಳೆಯ ಅಭಿವೃದ್ಧಿ ಸಾಧ್ಯವಿಲ್ಲವೆಂಬುದನ್ನು ಮನಗಂಡು ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧಗಳನ್ನು ಮಾಡಲು ರಾಜ್ಯಗಳಿಗೆ

ಅಧಿಕಾರ ನೀಡಲಾಯಿತು. ಹೀಗೆ ನಮ್ಮ ಸಂವಿಧಾನ ರಚನಾಕಾರರು ಮಹಿಳೆಗೆ ಸಮಾಜೋ-ಆರ್ಥಿಕ ನ್ಯಾಯ ಒದಗಿಸಲು ಸಾಕಷ್ಟು ಎಚ್ಚರಿಕೆಯನ್ನು ವಹಿಸಿದ್ದಾರೆ.

ಎಲ್ಲ ನಾಗರಿಕರಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ದೊರೆಯುವಂಥ ಸಾಮಾಜಿಕ ವ್ಯವಸ್ಥೆಯನ್ನು ಕಲ್ಪಿಸಿಕೊಡುವುದು, ಆ ಮೂಲಕ ಅವರ ಅಭಿವೃದ್ಧಿಗೆ ಕಾರಣವಾಗುವುದು ಪ್ರತಿಯೊಂದು ರಾಜ್ಯ ಸರ್ಕಾರದ ಕರ್ತವ್ಯವಾಗಿರುತ್ತದೆ. ಸಂವಿಧಾನದ ೩೯ನೇ ಅನುಚ್ಛೇದದಲ್ಲಿ-

೧. ತಮ್ಮ ಜೀವನೋಪಾಯಕ್ಕಾಗಿ ತಕ್ಕಷ್ಟು ಸಾಧನಗಳನ್ನು ಸ್ತ್ರೀ ಪುರುಷರು ಸಮಾನವಾಗಿ ಪಡೆಯಲು ಅನುಕೂಲವಾಗುವಂತೆ;

೨. ಸ್ತ್ರೀ ಪುರುಷರಿಬ್ಬರಿಗೂ ಸಮಾನ ಶ್ರಮಕ್ಕೆ ಸಮಾನ ವೇತನ ದೊರೆಯುವಂತೆ;

೩. ಸ್ತ್ರೀ ಪುರುಷ ಕೆಲಸಗಾರರ ಆರೋಗ್ಯ ಮತ್ತು ಶಕ್ತಿಯ ಹಾಗೂ ಮಕ್ಕಳ ವಯಸ್ಸಿನ ದುರುಪಯೋಗವಾಗದಿರುವಂತೆ ಮತ್ತು ನಾಗರಿಕರು ತಮ್ಮ ಆರ್ಥಿಕ ಅವಶ್ಯಕತೆಯಿಂದಾಗಿ ತಮ್ಮ ವಯಸ್ಸಿಗೆ ಅಥವಾ ಶಕ್ತಿಗೆ ತಕ್ಕಂತಿಲ್ಲದ ಕಸುಬುಗಳಿಗೆ ಪ್ರವೇಶಿಸದಂತೆ ನೋಡಿಕೊಳ್ಳಲು ರಾಜ್ಯ ತನ್ನ ಕಾರ್ಯನೀತಿ ತತ್ವಗಳನ್ನು ರೂಪಿಸಿಕೊಳ್ಳುವ ಅಧಿಕಾರ ನೀಡುವ ಉಪಬಂಧ ಕಲ್ಪಿಸಲಾಗಿದೆ.

೪೨ನೇ ಅನುಚ್ಛೇದದ ಮೂಲಕ, ಕೆಲಸ ಮಾಡಲು ಅನುಕೂಲಕರ ಹಾಗೂ ನ್ಯಾಯೋಚಿತ ಪರಿಸರವನ್ನು ಹಾಗೂ ಪ್ರಸೂತಿ ಸೌಲಭ್ಯವನ್ನು ಕಲ್ಪಿಸಿಕೊಡುವ ಜವಾಬ್ದಾರಿಯನ್ನು ರಾಜ್ಯಕ್ಕೆ ವಹಿಸಿಕೊಡಲಾಗಿದೆ. ಇದೆಲ್ಲದರ ಜೊತೆ ಮಹಿಳೆಯ ಘನತೆಗೆ ಅಪಮಾನಕರವಾದ ಆಚರಣೆಗಳನ್ನು ತ್ಯಜಿಸುವುದು ಪ್ರತಿಯೊಬ್ಬ ನಾಗರಿಕನ ಮೂಲಭೂತ ಕರ್ತವ್ಯ ಎಂದೂ ವಿಧಿಸಲಾಗಿದೆ.

ಸಂವಿಧಾನದ ೩೨೫ನೇ ಅನುಚ್ಛೇದದಲ್ಲಿ, ಯಾವನೇ ವ್ಯಕ್ತಿ ತನ್ನ ಮತ, ಮೂಲ, ವಂಶ, ಜಾತಿ ಅಥವಾ ಲಿಂಗದ ಆಧಾರದ ಮೇಲೆ ಚುನಾವಣಾ ಪಟ್ಟಿಯಲ್ಲಿ ಸೇಪರಡೆಯಾಗಲು ಅನರ್ಹನಾಗತಕ್ಕದ್ದಲ್ಲ ಅಥವಾ ವಿಶೇಷ ಚುನಾವಣಾ ಪಟ್ಟಿಗೆ ಸೇರ್ಪಡೆಯಾಗಲು ವಿಶೇಷ ಅರ್ಹತೆಯನ್ನು ಪಡೆಯುವುದಿಲ್ಲ ಎಂಬುದಾಗಿ ಉಪಬಂಧಿಸಲಾಗಿದೆ.

ನಮ್ಮ ಸಂವಿಧಾನದಲ್ಲಿ ೬ ಸ್ಥಳಗಳಲ್ಲಿ ಮಾತ್ರ 'ಸ್ತ್ರೀಯರು' ಎಂಬ ಉಲ್ಲೇಖವಿದೆ. ಉಳಿದಂತೆ, ಎಲ್ಲೆಡೆಗಳಲ್ಲೂ ಪ್ರಜೆಗಳು, ವ್ಯಕ್ತಿಗಳು ಎಂದೇ ಉಲ್ಲೇಖಿಸಲಾಗಿದೆ. ಈ ಪದಗಳ ಅರ್ಥ ವ್ಯಾಪ್ತಿಯಲ್ಲಿ ಸ್ತ್ರೀಯರೂ ಸೇರಿದ್ದಾರೆ ಎಂಬುದು ನಿರ್ವಿವಾದ. ಭಾರತ ಸಂವಿಧಾನದ ಮೂಲಕ ಸ್ತ್ರೀಯರಿಗೆ ನೀಡಲಾದ ಮೂಲಭೂತ ಹಕ್ಕುಗಳ ಪೈಕಿ ಸಮಾನತೆಯ ಹಕ್ಕು ಎಲ್ಲಕ್ಕಿಂತ ಮುಖ್ಯವಾದುದು.

ಸ್ತ್ರೀಪುರುಷರ ನಡುವೆ ಯಾವುದೇ ರೀತಿಯ ತಾರತಮ್ಯವನ್ನು ಎಣಿಸುವಂತಿಲ್ಲ ಎಂದು ಹೇಳುವ ಸಂವಿಧಾನವೇ ಸ್ತ್ರೀಯರ ಪರವಾಗಿ ವಿಶೇಷ ಉಪಬಂಧಗಳನ್ನು ರಚಿಸಬಹುದು ಎಂಬ ಅಧಿಕಾರವನ್ನು ರಾಜ್ಯಸರ್ಕಾರಕ್ಕೆ ನೀಡುತ್ತದೆ ಈ ಮೂಲಕ ಎರಡು ವಿರುದ್ಧ ದೃಷ್ಟಿಕೋನಗಳನ್ನು ಬೆಂಬಲಿಸುವಂತಾಗು ವುದಿಲ್ಲವೇ ಎಂಬ ಅನುಮಾನ ಉಂಟಾಗುವುದು ಸಹಜ. ಈ ಮೇಲ್ನೋಟಕ್ಕೆ ಕಾಣುವ ಈ ವೈರುಧ್ಯದ ಹಿನ್ನೆಲೆಯಲ್ಲಿರುವ ಚಿಂತನೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಮುನ್ನ ಮಹಿಳೆಯ ಹಕ್ಕುಗಳು ಎಂದರೆ ಏನು ಎಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ಮಹಿಳೆಯ ಹಕ್ಕುಗಳನ್ನು ಮೂರು ವಿಭಿನ್ನ ರೀತಿಯಲ್ಲಿ ಪರಿಗಣಿಸಬೇಕಾಗುತ್ತದೆ.

೧. ಮಹಿಳೆಯರ ಹಕ್ಕುಗಳನ್ನು ಪುರುಷರ ಹಕ್ಕುಗಳಿಗೆ ಸಮಾನವಾಗಿ ಪರಿಗಣಿಸುವುದು.

೨. ಮಹಿಳೆಯರ ಹಕ್ಕುಗಳನ್ನು ಪುರುಷರ ಹಕ್ಕುಗಳಿಗೆ ಅಸಮಾನವಾಗಿ ಎಂದರೆ, ಕಾನೂನಿನ ಮೂಲಕ ಕೊಡಲಾಗಿರುವ ವಿಶೇಷ ಹಕ್ಕುಗಳ ಉಪಬಂಧಗಳ ಸಂದರ್ಭದಲ್ಲಿ ಪರಿಗಣಿಸುವುದು.(ಹಿನ್ನೆಲೆ : ಚಾರಿತ್ರಿಕವಾಗಿ ಹಾಗೂ ಸಾಮಾಜಿಕವಾಗಿ ಮಹಿಳೆ ತುಳಿತಕ್ಕೆ ಒಳಗಾಗಿರುವುದು)

೩. ಪುರುಷರಿಂದ ಭಿನ್ನವಾದ ದೈಹಿಕವಾದ ನಿರ್ದಿಷ್ಟ ವ್ಯತ್ಯಾಸಗಳ ಕಾರಣದಿಂದ ಲಭ್ಯವಾಗುವ ಸೌಲಭ್ಯಗಳನ್ನು ವಿಶೇಷ ಹಕ್ಕುಗಳನ್ನಾಗಿ ಪರಿಗಣಿಸುವುದು.(ಪ್ರಸೂತಿ ರಜೆ ಸೌಲಭ್ಯ ಮೊದಲಾದವುಗಳು)

ಈ ಹಿನ್ನೆಲೆಯಲ್ಲಿ ಸಂವಿಧಾನದ ೧೪, ೧೫ ಹಾಗೂ ೧೬ನೇ ಅನುಚ್ಛೇದಗಳ ಮೂಲಕ ಕೊಡಮಾಡಿರುವ ಸಮಾನತೆಯ ಮೂಲಭೂತಹಕ್ಕುಗಳನ್ನು ಪರಿಶೀಲಿಸಬೇಕಾಗುತ್ತದೆ. ಭಾರತದ ಸಂವಿಧಾನದ ೧೪,೧೫ ಮತ್ತು ೧೬ನೇ ಅನುಚ್ಛೇದಗಳಲ್ಲಿ ಈ ಮುಂದಿನಂತಿದೆ.

**ಅನುಚ್ಛೇದ ೧೪ :** ಕಾನೂನಿನ ಮುಂದೆ ಸಮಾನತೆ ಭಾರತದ ರಾಜ್ಯ ಕ್ಷೇತ್ರದಲ್ಲಿ ಯಾರೇ ವ್ಯಕ್ತಿಗೆ ಕಾನೂನಿನ ಮುಂದೆ ಸಮಾನತೆಯನ್ನು ಅಥವಾ ಕಾನೂನುಗಳಿಂದ ಸಮಾನ ಸಂರಕ್ಷಣೆಯನ್ನು ರಾಜ್ಯವು ನಿರಾಕರಿಸುವಂತಿಲ್ಲ.

**ಅನುಚ್ಛೇದ ೧೫ :** ಧರ್ಮ, ಮೂಲವಂಶ, ಜಾತಿ, ಲಿಂಗ ಅಥವಾ ಜನ್ಮಸ್ಥಳದ ಆಧಾರದ ಮೇಲೆ ತಾರತಮ್ಯ ನಿಷೇಧ : ೧. ರಾಜ್ಯವು ಯಾರೇ ನಾಗರಿಕನ ವಿರುದ್ಧ ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಅವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾವುದೇ ತಾರತಮ್ಯವನ್ನು ಮಾಡತಕ್ಕುದಲ್ಲ.

**ಅನುಚ್ಛೇದ ೧೬ :** ಸಾರ್ವಜನಿಕ ನಿಯೋಜನೆಯ ವಿಷಯದಲ್ಲಿ ಸಮಾನಾವಕಾಶ : ೨. ಧರ್ಮ, ಮೂಲವಂಶ, ಜಾತಿ, ಲಿಂಗ, ಸಂತತಿ, ಜನ್ಮಸ್ಥಳ, ನಿವಾಸ ಅಥವಾ ಇವುಗಳಲ್ಲಿ ಯಾವುದೇ ಒಂದರ

ಆಧಾರದ ಮೇಲೆ ಮಾತ್ರವೇ ಯಾರೇ ನಾಗರಿಕನು ರಾಜ್ಯದ ಅಧೀನದಲ್ಲಿರುವ ಯಾವುದೇ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದಂತೆ ಅನರ್ಹತೆಗೆ ಒಳಗಾಗ ತಕ್ಕುದಲ್ಲ ಅಥವಾ ಅವನ ವಿರುದ್ಧ ತಾರತಮ್ಯ ಮಾಡತಕ್ಕುದಲ್ಲ. ಈ ಮೂರು ಅನುಚ್ಛೇದಗಳು ಒಗ್ಗೂಡಿ ಮಹಿಳೆಗೆ ಕಾನೂನು ರೀತ್ಯಾ ನೀಡಲಾಗಿರುವ ಸಮಾನತೆಯ ಅಡಿಗಲ್ಲಾಗುತ್ತದೆ. ಕಾನೂನಿನ ದೃಷ್ಟಿಯಲ್ಲಿ ಸ್ತ್ರೀಪುರುಷರಿಬ್ಬರೂ ಸಮಾನರು ಸ್ತ್ರೀ ಪುರುಷರಿಬ್ಬರಿಗೂ ಕಾನೂನಿನಲ್ಲಿ ಸಮಾನರಕ್ಷಣೆಯಿದೆ ಹಾಗೂ ಸ್ತ್ರೀ ಪುರುಷರ ನಡುವೆ ಯಾವುದೇ ಬಗೆಯ ತಾರತಮ್ಯವನ್ನು ಮಾಡುವಂತಿಲ್ಲ.

ಆದರೆ, ಇದು ಯಾವುದೇ ರೀತಿಯ ವಿವೇಚನಾಯುತ ವರ್ಗೀಕರಣವನ್ನು ನಿಷೇಧಿಸುತ್ತದೆ ಎಂದರ್ಥವಲ್ಲ. ಸಮಾನತೆಯ ಉಪಬಂಧ ಸಮಾನರನ್ನು ಅಸಮಾನರನ್ನಾಗಿ ಕಾಣುವುದನ್ನು ನಿಷೇಧಿಸುತ್ತದೆ. ಆದರೆ ಅಸಮಾನರನ್ನು ಅಸಮಾನರಂತೆ ಕಾಣುವುದಕ್ಕೆ ಅನುಮತಿ ನೀಡುತ್ತದೆ. ಈ ವ್ಯಾಖ್ಯಾನ ಸಂವಿಧಾನದ ಅನುಚ್ಛೇದದ ಮೇಲ್ನೋಟದ ವ್ಯಾಖ್ಯಾನವಾಗುತ್ತದೆ. ಆದರೆ ಸಮಾನತೆಯ ಹಕ್ಕನ್ನು ೧೫ ಮತ್ತು ೧೬ನೇ ಅನುಚ್ಛೇದಗಳಿಂದ ಬೇರ್ಪಡಿಸಿ ಪ್ರತ್ಯೇಕವಾಗಿ ನೋಡಿದಾಗ ಈ ವ್ಯಾಖ್ಯಾನ ಸರಿಯೆಂಬಂತೆ ಕಂಡರೂ, ಸಮಾನತೆಯ ಈ ಅನುಚ್ಛೇದವನ್ನು ಅನ್ವಯಿಸಿ ತೀರ್ಪು ನೀಡುವ ಸಂದರ್ಭದಲ್ಲಿ ಸಮಾನತೆ ಅಸಮಾನತೆಗಳ ಅರ್ಥ ವ್ಯಾಖ್ಯಾನ, ಚರ್ಚೆ, ಚಾರಿತ್ರಿಕ ಹಾಗೂ ಸಾಮಾಜಿಕ ಹಿನ್ನೆಲೆಗಳು ವಿಸ್ತೃತವಾಗುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿ ಸಂವಿಧಾನದ ಸಮಾನತೆಯ ಉಪಬಂಧಗಳನ್ನು ಅರ್ಥೈಸಬೇಕಾಗುತ್ತದೆ.

ನ್ಯಾಯ, ಸ್ವಾತಂತ್ರ್ಯ, ಸಮಾನತೆ ಹಾಗೂ ಭ್ರಾತೃತ್ವದ ತತ್ವಗಳನ್ನು ಒಳಗೊಂಡಿರುವ ಭಾರತದ ಸಂವಿಧಾನ, ಸ್ತ್ರೀಪುರುಷ ಬೇಧವೆಣಿಸದೆ ವ್ಯಕ್ತಿಯ ಸ್ಥಳ ಯಾವುದೇ ಇದ್ದರೂ ಎಲ್ಲ ಸಮುದಾಯಗಳಿಗೆ ಸೇರಿದ ವ್ಯಕ್ತಿಗಳಿಗೆ ಆತ್ಮಗೌರವದಿಂದ ಬಾಳಲು ಅವಕಾಶ ಕಲ್ಪಿಸಿಕೊಡುತ್ತದೆ. ನಮ್ಮ ಮಹಿಳೆಯರಿಗೆ ಸಂಬಂಧಿಸಿದಂತೆ, ಮಹಿಳೆ ಹಿಂದಿನ ಅನೇಕ ಶತಮಾನಗಳಿಂದಲೂ ಸಮಾನ ಅವಕಾಶಗಳಿಂದ ವಂಚಿತಳಾಗುತ್ತ ಒಳಗಾಗಿರುವ ಶೋಷಣೆಯ ಅರಿವು ನಮ್ಮ ಸಂವಿಧಾನ ಶಿಲ್ಪಿಗಳಿಗೆ ಇತ್ತು. ಮಹಿಳೆಯರಿಗೆ ಸಂಬಂಧಿಸಿದಂತೆ ಸಾಮಾನ್ಯ ಉಪಬಂಧಗಳನ್ನು ಹಾಗೂ ಕೆಲವು ವಿಶೇಷ ಉಪಬಂಧಗಳನ್ನು ಮಾಡಲು ಈ ಹಿನ್ನೆಲೆಯೇ ಮುಖ್ಯಕಾರಣ. ಸಂವಿಧಾನದ ಅನೇಕ ಗುರಿಗಳಲ್ಲಿ ಭಾರತದ ಎಲ್ಲ ನಾಗರಿಕರಿಗೆ ಸಮಾನ ಸ್ಥಾನಮಾನ ಹಾಗೂ ಸಮಾನ ಅವಕಾಶಗಳನ್ನು ಕಲ್ಪಿಸುವುದೂ ಸೇರುತ್ತದೆ. ಇದರ ಉದ್ದೇಶ ಸ್ಥಾನಮಾನ ಮತ್ತು ಅವಕಾಶಗಳಿಗೆ ಸಂಬಂಧಿಸಿದಂತೆ ಸ್ತ್ರೀಪುರುಷರ ನಡುವೆ ಸಮಾನತೆಯನ್ನು ಸಾಧಿಸುವುದು. ಆ ನಂತರ ರಚನೆಯಾದ ಅನೇಕ ಶಾಸನಗಳೂ ಈ ಗುರಿಯನ್ನು ಸಾಧಿಸುವ ಉದ್ಧೇಶವಿಟ್ಟುಕೊಂಡೇ ರಚಿತವಾದಂಥವು.

ಭಾರತದ ಸಂವಿಧಾನದ ೧೪ನೇ ಅನುಚ್ಛೇದ- ಮಗಳಾಗಿ ಕಾನೂನಿನಲ್ಲಿ ಮತ್ತು ಕಾನೂನಿನಿಂದ ರಕ್ಷಣೆ ಪಡೆಯಲು ಸಮಾನತೆಯನ್ನು ನೀಡುತ್ತದೆ. ಸಮಾನ ರಕ್ಷಣೆ ಎಂದರೆ ಒಂದೇ ರೀತಿಯ ಸನ್ನಿವೇಶಗಳಲ್ಲಿ,

ವಿಶೇಷ ಹಕ್ಕುಗಳನ್ನು ನೀಡುವ ಅಥವಾ ಬಾಧ್ಯತೆಗಳನ್ನು ಹೊರಿಸುವ ಸಂದರ್ಭಗಳಲ್ಲಿ, ಒಂದೇ ರೀತಿಯಲ್ಲಿ ಪರಿಗಣಿತರಾಗುವ ಸಮಾನತೆಯ ಹಕ್ಕನ್ನು ನೀಡುತ್ತದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಸದೃಶ ಸನ್ನಿವೇಶಗಳಲ್ಲಿ ಕೈಗೊಳ್ಳುವ ಕ್ರಮ ಅವೈಚಾರಿಕವಾದುದಾಗಿರಬಾರದು. ಅಂಥ ಕ್ರಮ ಕಾನೂನು ಸಮ್ಮತ ತತ್ತ್ವವನ್ನು ಆಧರಿಸಿರಬೇಕು ಅಂಥ ಕಾನೂನು ಸಮ್ಮತ ತತ್ತ್ವ ಅವೈಚಾರಿಕವಾದುದು ಅಥವಾ ತಾರತಮ್ಯ ಉಂಟುಮಾಡುವಂಥದ್ದೂ ಆಗಿರಬಾರದು. ೧೫ನೇ ಅನುಚ್ಛೇದ ಮತ, ಪಂಥ, ಜಾತಿ, ಲಿಂಗ ಮತ್ತು ಜನ್ಮ ಸ್ಥಳದ ಆಧಾರದ ಮೇಲೆ ತಾರತಮ್ಯವೆಸಗುವುದನ್ನು ನಿಷೇಧಿಸುತ್ತದೆ.

೧೫(೩)ನೇ ಅನುಚ್ಛೇದ, ಮಹಿಳೆಯರಿಗಾಗಿ ವಿಶೇಷ ಉಪಬಂಧಗಳನ್ನು ರಚಿಸಲು ರಾಜ್ಯಕ್ಕೆ ಅಧಿಕಾರ ನೀಡುತ್ತದೆ. ಈ ತಾರತಮ್ಯ ಮಹಿಳೆಯರಿಗೆ ಅನುಕೂಲಕರವಾಗಿ ಇರಬೇಕೇ ವಿನಃ ಮಹಿಳೆಯರ ವಿರುದ್ಧ ಕಲ್ಪಿಸಿದುದಾಗಿರಬಾರದು ಎಂದು ವ್ಯಾಖ್ಯಾನಿಸಲಾಗಿದೆ.

೧೬ನೇ ಅನುಚ್ಛೇದ ಸಾರ್ವಜನಿಕ ಉದ್ದೇಶಗಳಲ್ಲಿ ಎಲ್ಲ ನಾಗರಿಕರಿಗೆ ಸಮಾನಾವಕಾಶದ ಹಕ್ಕುಗಳನ್ನು ನೀಡುತ್ತದೆ. ಕಾನೂನಿನ ಮುಂದೆ ಹಾಗೂ ಸಾರ್ವಜನಿಕ ಉದ್ಯೋಗಾವಕಾಶದಲ್ಲಿ ಸ್ತ್ರೀಪುರುಷರಿಗೆ ಸಮಾನತೆ ಹಾಗೂ ಲಿಂಗಾಧಾರಿತ ತಾರತಮ್ಯ ನಿಷೇಧ ಇವುಗಳ ಜೊತೆಗೆ ಮಹಳೆಯರಿಗೆ ಹಾಗೂ ಮಕ್ಕಳಿಗೆ ವಿಶೇಷ ಉಪಬಂಧವನ್ನು ಕಲ್ಪಿಸಲು ಸಹ ಸಂವಿಧಾನ ಅವಕಾಶಮಾಡಿಕೊಡುತ್ತದೆ. ಇದು ಮೇಲ್ನೋಟಕ್ಕೆ ಲಿಂಗಾಧಾರಿತ ತಾರತಮ್ಯವನ್ನು ನಿಷೇಧಿಸುವ ಉಪಬಂಧಕ್ಕೆ ವ್ಯತಿರಿಕ್ತವಾಗಿ ಕಂಡರೂ, ಪ್ರಾಚೀನ ಕಾಲದಿಂದಲೂ ಮಹಿಳೆಯರನ್ನು ಅವಕಾಶ ವಂಚಿತರನ್ನಾಗಿಸಿ ಅಸಮಾನತೆಯನ್ನು ಕಂಡುದುದರ ಫಲವಾಗಿ ಮಹಿಳೆ ಇಂದು ಅನುಭವಿಸುತ್ತಿರುವ ಅಧೀನ ಸ್ಥಾನದ ಅರಿವು ನಮ್ಮ ಸಂವಿಧಾನದ ಕರ್ತರಿಗೆ ಇದ್ದಿತು. ಆ ಕಾರಣಕ್ಕಾಗಿ ಈ ನಿರ್ದಿಷ್ಟ ಉಪಬಂಧವನ್ನು ಸೇರಿಸಲಾಗಿದೆ. ಇದಕ್ಕೆ ಮತ್ತೊಂದು ಕಾರಣವೆಂದರೆ ಸ್ತ್ರೀಪುರುಷರಿಗೆ ದೈಹಿಕ ರಚನೆಯಲ್ಲಿರುವ ವ್ಯತ್ಯಾಸ. ಅದರಿಂದಾಗಿ ಅವಳು ಎದುರಿಸಬೇಕಾದ ಇತಿಮಿತಿಗಳು ಹಾಗೂ ಪರಿಣಾಮವಾಗಿ ಮಾಡಬೇಕಾಗಿರುವ ಕೆಲವೊಂದು ವಿಶೇಷ ಉಪಬಂಧಗಳು

೧೪ನೇ ಅನುಚ್ಛೇದ ಕಾನೂನಿನ ಮುಂದೆ ಸಮಾನತೆಯನ್ನು ಹಾಗೂ ಕಾನೂನಿನಿಂದ ಸಮಾನರಕ್ಷಣೆಯನ್ನು ನೀಡುತ್ತದೆ. ಸಮಾನ ರಕ್ಷಣೆ ಎಂದರೆ ಸದೃಶ ಸನ್ನಿವೇಶಗಳಲ್ಲಿ, ಕೊಡಲಾಗಿರುವ ವಿಶೇಷ ಹಕ್ಕುಗಳು ಹಾಗೂ ವಿಧಿಸಲಾಗಿರುವ ಬಾಧ್ಯತೆಗಳಿಗೆ ಸಂಬಂಧಿಸಿದಂತೆ ಸಮಾನವಾಗಿ ಪರಿಗಣಿಸಲ್ಪಡುವುದಕ್ಕೆ ಇರುವ ಹಕ್ಕು. ಸಂವಿಧಾನದ ೧೪ನೇ ಅನುಚ್ಛೇದದಲ್ಲಿ ಕಲ್ಪಿಸಲಾಗಿರುವ "ಸಮಾನತೆ" ಹಾಗೂ ೧೫ನೇ ಅನುಚ್ಛೇದದಲ್ಲಿ ತಾರತಮ್ಯವದ ವಿರುದ್ಧ ವಿಧಿಸಿರುವ ನಿಷೇಧ ಹಾಗೂ ಮಹಿಳೆಯರ ಪರವಾಗಿ ವಿಶೇಷ ಉಪಬಂಧಗಳನ್ನು ಮಾಡುವ ಅವಕಾಶ ಇವುಗಳ ಮಹತ್ವವನ್ನು ಇಂದಿನ ಸಾಮಾಜಿಕ ಸಂದರ್ಭದಲ್ಲಿ ವಿಶ್ಲೇಷಿಸಬೇಕಾದರೆ, 'ಸಮಾನತೆ', 'ತಾರತಮ್ಯ ನಿಷೇಧ', 'ವಿಶೇಷ' ಉಪಬಂಧ ರಚನೆಯ ಅವಕಾಶ'

ಗಳನ್ನು ಸಂವಿಧಾನದಲ್ಲಿ ನೀಡಲು ಕಾರಣವಾದ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕು ಹಾಗೂ ಪುರುಷ ಪ್ರಧಾನ ವ್ಯವಸ್ಥೆಯ ಸಂದರ್ಭಕ್ಕೆ ಅನ್ವಯಿಸಿ ವ್ಯಾಖ್ಯಾನಿಸಬೇಕು.

ಸಮಾನತೆಯ ತತ್ವ ಎಲ್ಲರಿಗೂ ಎಲ್ಲ ಸಂದರ್ಭಗಳಲ್ಲಿಯೂ ಎಲ್ಲ ಕಾನೂನುಗಳೂ ಸಮಾನವಾಗಿ ಅನ್ವಯಿಸಬೇಕು ಎಂದಲ್ಲ. ಆದ್ದರಿಮದ 'ಸಮಾನತೆಯ ತತ್ವ' ಕಾನೂನುಬದ್ಧ ಉದ್ದೇಶಗಳಿಗಾಗಿ ವ್ಯಕ್ತಿಗಳನ್ನು ವರ್ಗೀಕರಿಸಲು ರಾಜ್ಯಕ್ಕಿರುವ ಅಧಿಕಾರವನ್ನು ಕಸಿದುಕೊಳ್ಳುವುದಿಲ್ಲ. ಪ್ರತಿಯೊಂದು ವರ್ಗೀಕರಣವೂ ಸ್ವಲ್ಪ ಮಟ್ಟಿಗಿನ ಅಸಮಾನತೆಯನ್ನು ಉಂಟುಮಾಡಬಹುದು. ಆದರೆ ಅಸಮಾನತೆ ಯನ್ನುಂಟು ಮಾಡಿದೆ ಎಂಬುದು ತನ್ನಷ್ಟಕ್ಕೆ ಸಮಾನತೆಯ ಮೂಲಭೂತ ಹಕ್ಕಿನ ಉಲ್ಲಂಘನೆಯಾಗುವುದಿಲ್ಲ. ಪರಿಗಣನೆಯಲ್ಲಿ ತೋರಿಸುವ ತಾರತಮ್ಯ(differential treatment)ವನ್ನು ಸಂದರ್ಭದಿಂದ ಪ್ರತ್ಯೇಕಿಸಿ ಅದು ೧೪ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆ ಎಂದು ಹೇಳಲಾಗದು. ಆದರೆ ಅಂಥ ತಾರತಮ್ಯವನ್ನು ಸಕಾರಣವಾದ ಆಧಾರದ ಮೇಲೆ ಮಾಡಿಲ್ಲದಿದ್ದಾಗ ಮಾತ್ರವೇ ಅದು ಸಮಾನರಕ್ಷಣೆಯನ್ನು ಉಲ್ಲಂಘಿಸಿದೆ ಎಂದು ಭಾವಿಸಲಾಗುತ್ತದೆ ಎಂಬ ಅಭಿಪ್ರಾಯಗಳನ್ನು ಸರ್ವೋಚ್ಚ ನ್ಯಾಯಾಲಯ ವಿವಿಧ ಪ್ರಕರಣಗಳಲ್ಲಿ ತೀರ್ಪುನೀಡುವಾಗ ವ್ಯಕ್ತಪಡಿಸಿದೆ.

ಒಂದೇ ಸನ್ನಿವೇಶದಲ್ಲಿರುವ ಎಲ್ಲರಿಗೂ ಕಾನೂನನ್ನು ಒಂದೇ ಬಗೆಯಲ್ಲಿ ಅನ್ವಯಿಸಬೇಕು ಮತ್ತು ಅನ್ವಯಿಸಬೇಕಾದ ಕಾನೂನಿಗೆ ಸಂಬಂಧಿಸಿದಂತೆ ಅವರ ಸ್ಥಾನ ವಾಸ್ತವಿಕವಾಗಿ ಒಂದೇ ಆಗಿದ್ದರೆ, ಅಂಥ ಸಂದರ್ಭದಲ್ಲಿ ಅವರ ನಡುವೆ ತಾರತಮ್ಯವೆಸಗುವಂತಿಲ್ಲ ಎಂಬ ಸಮಾನತೆಯ ಈ ತತ್ವವನ್ನು ನ್ಯಾಯಸಮ್ಮತವಲ್ಲದ ವರ್ಗೀಕರಣದ ವಿರುದ್ಧ ವಿಧಿಸಿರುವ ನಿಷೇಧವಾಗಿದೆ ಎಂದು ವ್ಯಾಖ್ಯಾನಿಸಲಾಗಿದೆ. ಈ ಉಪಬಂಧ ವರ್ಗೀಕರಣ ಮಾಡಲು ರಾಷ್ಟ್ರಕ್ಕೆ ಅವಕಾಶ ನೀಡುತ್ತದೆ. ಆದರೆ ವರ್ಗೀಕರಿಸುವ ಈ ಅಧಿಕಾರವನ್ನು ವಿವೇಚನಾಯುತವಾಗಿ, ನ್ಯಾಯಸಮ್ಮತ ಕಾರಣಗಳನ್ನು ಆಧರಿಸಿ ಬಳಸಬೇಕು ಎಂದು ಸರ್ವೋಚ್ಚ ನ್ಯಾಯಾಲಯ ವರ್ಗೀಕರಣವನ್ನು ಪ್ರಶ್ನಿಸಿದ ಅನೇಕ ಪ್ರಕರಣಗಳಲ್ಲಿ ತೀರ್ಪು ನೀಡುವ ಸಂದರ್ಭದಲ್ಲಿ ಅಭಿಪ್ರಾಯಪಟ್ಟಿದೆ. ಆದ್ದರಿಂದ ವರ್ಗೀಕರಣ ಸಿದ್ಧಾಂತ ಶಾಸಕಾಂಗದ ಅಥವಾ ಕಾರ್ಯಾಂಗದ ಒಂದು ಪ್ರಶ್ನಿತ ಕ್ರಮವನ್ನು ಅವೈಚಾರಿಕವಾದುದೇ ಎಂಬುದನ್ನು ಮತ್ತು ಅದರಿಂದಾಗಿ ಸಮಾನತೆಯಿಂದ ವಂಚಿತರಾಗಿದ್ದಾರೆಯೇ ಎಂಬುದನ್ನು ನಿರ್ಧರಿಸುವ ನ್ಯಾಯಿಕ ಸೂತ್ರವಾಗುತ್ತದೆ. ವರ್ಗೀಕರಣ ವಿವೇಚನಾ ರಹಿತವಾದುದುದಾಗಿದ್ದರೆ ಆಕ್ಷೇಪಿತ ಕ್ರಮ ಅವೈಚಾರಿಕವಾದುದಾಗುತ್ತದೆ ಮತ್ತು ಯಾವುದೇ ಅವೈಚಾರಿಕ ವರ್ಗೀಕರಣ ೧೪ನೇ ಅನುಚ್ಛೇದದ ಮೇರೆಗೆ ನೀಡಲಾಗುವ ಸಮಾನತೆಯ ಹಕ್ಕನ್ನು ಉಲ್ಲಂಘಿಸುತ್ತದೆ. ಆದ್ದರಿಂದ ವರ್ಗೀಕರಣ ವಿವೇಚನಾಯುತವಾದುದಾಗಬೇಕಾದರೆ, ಒಂದು ಗುಂಪಿನ ವ್ಯಕ್ತಿಗಳು ಇನ್ನೊಂದು ಗುಂಪಿನ ವ್ಯಕ್ತಿಗಳಿಂದ ಬುದ್ಧಿ ಗ್ರಾಹ್ಯವಾಗುವಷ್ಟು ಸ್ಪಷ್ಟವಾಗಿ

ಭಿನ್ನವಾಗಿರಬೇಕು ಮತ್ತು ಅಂಥ ವ್ಯತ್ಯಾಸಗಳು ಪ್ರಶ್ನಿತ ಕಾನೂನಿನಿಂದ ಸಾಧಿಸಬೇಕೆಂದಿರುವ ಉದ್ದೇಶಕ್ಕೆ ಸಹಾಯಕವಾಗಿರಬೇಕು. ಆದ್ದರಿಂದ ಸಮಾನರಕ್ಷಣೆಯನ್ನು ನೀಡಲಾಗಿಲ್ಲ ಎಂಬ ಕಾರಣದ ಮೇಲೆ ಯಾವುದೇ ಕಾನೂನನ್ನು ಪ್ರಶ್ನಿಸಿದಾಗ ನ್ಯಾಯಾಲಯ ಪರಿಗಣಿಸಬೇಕಾಗಿರುವುದು ಅಂಥ ಕಾನೂನಿನಿಂದ ಅಸಮಾನತೆ ಉಂಟಾಗಿದೆಯೇ ಎಂಬುದಕ್ಕಿಂತ ಹೆಚ್ಚಾಗಿ ಎರಡು ಪಕ್ಷಕಾರರು ಕಾನೂನಿನ ಉದ್ದೇಶದ ಮೇಲೆ ಪರಿಣಾಮ ಬೀರಬಲ್ಲಂಥ ವ್ಯತ್ಯಾಸವಿರುವ ಎರಡು ಭಿನ್ನ ಗುಂಪುಗಳಿಗೆ ಸೇರಿದ್ದಾರೆಯೇ ಎಂಬುದನ್ನು ಎಂದರೆ ವರ್ಗೀಕರಣ ನ್ಯಾಯಯುತವಾದ ಮತ್ತು ವಿವೇಚನಾಯುತವಾದ ಕಾರಣಗಳನ್ನು ಆಧರಿಸಿದೆಯೆ ಎಂಬುದನ್ನು. ಆದರೆ ನಮ್ಮ ನ್ಯಾಯಾಲಯಗಳು ಔಪಚಾರಿಕ ಸಮಾನತೆಗೇ ಹೆಚ್ಚು ಒತ್ತು ನೀಡುತಾ ಬಂದಿದ್ದು ಅಸಮಾನತೆಯುಂಟಾಗಲು ಕಾರಣವಾಗುವ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಪರಿಗಣಿಸಿ, ವಾಸ್ತವಿಕ ಸಮಾನತೆಯನ್ನು ನೀಡಲು ಅಗತ್ಯವಾಗಿರುವ ವಿಶ್ಲೇಷಣೆಗೆ ಗಮನ ನೀಡಿಲ್ಲವೆಂದೇ ಹೇಳಬಹುದು.

ಸಂವಿಧಾನದ ೧೫ನೇ ಅನುಚ್ಛೇದ, ಮತ, ಪಂಥ, ಜನ್ಮಸ್ಥಳ ಇವುಗಳ ಕಾರಣಕ್ಕಾಗಿ ಯಾರೇ ನಾಗರಿಕರ ನಡುವೆ ತಾರತಮ್ಯ ಮಾಡುವಂತಿಲ್ಲ ಎನ್ನುತ್ತದೆ. ಆದರೆ ಅದೇ ಅನುಚ್ಛೇದದಲ್ಲಿ ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧಗಳನ್ನು ರಚಿಸಲು ಈ ಅನುಚ್ಛೇದದಲ್ಲಿರುವುದಾವುದೂ ಅಡ್ಡಿಮಾಡತಕ್ಕುದಲ್ಲ ಎಂದೂ ಉಪಬಂಧಿಸುತ್ತದೆ. ಅನುಚ್ಛೇದದಲ್ಲಿ ಬಳಸಿರುವ ಭಾಷೆಯಿಂದಲೇ, ಮಹಿಳೆ ಮತ್ತು ಮಕ್ಕಳ ಹಿತಾಸಕ್ತಿಯನ್ನು ಕಾಪಾಡುವುದು ಸಂವಿಧಾನ ಶಿಲ್ಪಗಳ ಉದ್ದೇಶವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಮಹಳೆಯರಿಗೆ ಅನುಕೂಲಕರವಾಗಿರುವ ಕಾನೂನಿನಷ್ಟೆ ವಿಶೇಷ ಉಪಬಂಧ ಕಲ್ಪಿಸುವ ಅನುಚ್ಛೇದದ ನೆರವು ಪಡೆಯಬಹುದು, ಆದರೆ ಮಹಿಳೆಯರಿಗೆ ವಿರುದ್ಧವಾಗಿ ತಾರತಮ್ಯವೆಸಗುವ ಕಾನೂನಿಗೆ ಅಲ್ಲ. ಆದರೆ ಇದನ್ನು ಅನ್ವಯಿಸುವಾಗ, ಈ ಉಬಂಧ ಮಹಿಳೆಗೆ ಅನುಕೂಲಕರವಾಗಿದೆಯೇ ಅಥವಾ ಮಹಿಳೆಯ ವಿರುದ್ಧ ತಾರತಮ್ಯವೆಸಗುತ್ತದೆಯೇ ಎಂಬುದನ್ನು ನ್ಯಾಯಾಲಯಗಳು ವ್ಯಾಖ್ಯಾನಿಸಬೇಕಾದಾಗ ಈ ಸಿದ್ಧಾಂತ ಹೆಚ್ಚಿನ ಮಾರ್ಗದರ್ಶನ ನೀಡುವುದಿಲ್ಲ. ಪುರುಷ ಪ್ರಾಧಾನ್ಯತೆಯ ವ್ಯವಸ್ಥೆಗೆ ಒಳಗಾಗಿರುವ ಮಹಿಳೆಯರಿಗೆ ಸಂದರ್ಭಕ್ಕೆ ತಕ್ಕ ಹಾಗೆ ಕಾನೂನನ್ನು ಅನ್ವಯಿಸುವ, ವಾಸ್ತವಿಕ ಸಮಾನತೆಯನ್ನೊದಗಿಸುವ ವ್ಯಾಖ್ಯಾನ ವಿರಳವಾಗಿರುವ ಸಂದರ್ಭದಲ್ಲಿ ನ್ಯಾಯಾಲಯಗಳು ವಿಶೇಷ ಸೌಲಭ್ಯದ ಉಪಬಂಧವನ್ನು 'ರಕ್ಷಣಾತ್ಮಕ' ಕಾನೂನುಗಳನ್ನಾಗಿ ವರ್ಗೀಕರಿಸಿಬಿಡುತ್ತದೆ. ಕಾನೂನು ನಿಜವಾಗಿಯೂ ಮಹಿಳೆಯರಿಗೆ ಸಹಾಯಕವಾಗಿದೆಯೇ ಅಥವಾ ತೋರಿಕೆಗೆ ರಕ್ಷಣಾತ್ಮಕವೆನಿಸುವ ಕಾನೂನಿನ ಹಿಂದಿರುವ ಕಾರಣ ಸೂಕ್ತವಾಗಿದೆಯೇ ಎಂಬ ಬಗ್ಗೆ ಪರ್ಯಾಲೋಚನೆ ಮಾಡಿಯೇ ಇಲ್ಲ.

ಸಂವಿಧಾನದ ೧೫ನೇ ಅನುಚ್ಛೇದದ (೩) ಮತ್ತು (೪)ನೇ ಉಪಬಂಧಗಳು ಅದೇ ಅನುಚ್ಛೇದದ(೧) ಮತ್ತು (೨)ನೇ ಉಪಬಂಧಗಳಿಗೆ ವ್ಯತಿರಿಕ್ತವಾಗಿದೆಯೆಂದು ತೋರುವುದರಿಂದ, ಅನೇಕ ಪ್ರಕರಣಗಳಲ್ಲಿ, (೩) ಮತ್ತು (೪)ನೇ ಉಪಬಂಧಗಳನ್ನು ಅವು ಸಂವಿಧಾನದಲ್ಲಿ ಕೊಡಮಾಡಿರುವ ಮೂಲಭೂತಹಕ್ಕುಗಳನ್ನು ಉಲ್ಲಂಘಿಸುತ್ತವೆಂಬ ಕಾರಣದ ಮೇಲೆ ಪ್ರಶ್ನಿಸಲಾಗಿದೆ. ಇಂಥ ಪ್ರಕರಣಗಳಲ್ಲಿ ನ್ಯಾಯಾಲಯಗಳು ತಳೆದಿರುವ ಎರಡು ಭಿನ್ನ ನಿಲುವುಗಳು ಇದನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಾಯಕವಾಗುತ್ತವೆ.

ಅಂಜಲಿರಾಯ್.ವಿ- ಪಶ್ಚಿಮ ಬಂಗಾಳ ರಾಜ್ಯ ಪ್ರಕರಣದಲ್ಲಿ(A ೧೯೫೨ cal ೮೨೫) ಕಲ್ಕತ್ತ ಉಚ್ಚ ನ್ಯಾಯಾಲಯ "ಅನುಚ್ಛೇದ ೧೫(೩) ಸಷ್ಟವಾಗಿ ೧೫(೧) ಮತ್ತು ೧೫(೨)ಕ್ಕೆ ಒಂದು ಅಪವಾದ.

ಶ್ರೀಮತಿ ಅಂಜಲಿ ರಾಯ್.ವಿ- ಪಶ್ಚಿಮ ಬಂಗಾಳ ರಾಜ್ಯ (ಎಐಆರ್ ೧೯೫೨ ಕಲ್ಕತ್ ೮೨೫) ಈಪ್ರಕರಣದಲ್ಲಿ ಅಂಜಲಿ ರಾಯ್ ಎಂಬ ವಿದ್ಯಾರ್ಥಿನಿ ಹುಡುಗ ಹುಡುಗಿಯರಿಬ್ಬರೂ ಓದುವಂಥ ಕಾಲೇಜಿಗೆ ಪ್ರವೇಶಕ್ಕಾಗಿ ಅರ್ಜಿ ಹಾಕಿದಳು. ಅವಳಿಗೆ ಪ್ರವೇಶವನ್ನು ನಿರಾಕರಿಸಲಾಯಿತು ಮತ್ತು ಇತ್ತೀಚೆಗೆ ಸ್ಥಾಪಿಸಲಾಗಿರುಂಥ ಮಹಿಳೆಯರ ಕಾಲೇಜಿನಲ್ಲಿ ಪ್ರವೇಶ ಪಡೆಯುವಂತೆ ಸೂಚಿಸುವುದರ ಜೊತೆಗೆ, ಅವಳು ಅಲ್ಲಿ ಪ್ರವೇಶಪಡೆದರೆ, ತಮ್ಮ ಕಾಲೇಜಿನ ತರಗತಿಗಳಿಗೆ ಹಾಜರಾಗಲು ಅನುಮತಿ ನೀಡುವುದಾಗಿಯೂ, ಅವಳಿಗೆ ತಿಳಿಸಲಾಯಿತು. ಇದು ಕೇವಲ ಲಿಂಗಾಧಾರಿತ ತಾರತಮ್ಯವೆಂದು ಆ ಕ್ರಮವನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಿದಳು. ಈ ಪ್ರಕರಣದಲ್ಲಿ ತೀರ್ಪುನೀಡುತ್ತಾ ನ್ಯಾಯಾಲಯ ೧೫(೧)ನೇ ಅನುಚ್ಛೇದ, ಕೇವಲ ಲಿಂಗವನ್ನಾಧರಿಸಿ ಮಾಡುವ ತಾರತಮ್ಯವನ್ನು ನಿಷೇಧಿಸುತ್ತದೆ. ಆದರೆ ಈ ತಾರತಮ್ಯಕ್ಕೆ ಲಿಂಗಾಧಾರಿತ ಕಾರಣದ ಜೊತೆಯಲ್ಲಿ ಬೇರೆ ಕಾರಣಗಳೂ ಸೇರಿದ್ದರೆ ಆಗ ಅಂಥ ತಾರತಮ್ಯ ಆ ಅನುಚ್ಛೇದದ ಅಡಿಯಲ್ಲಿ ನಿಷೇಧಿತವಲ್ಲ" ಎಂದೂ, ಆದ್ದರಿಂದ ಇದು ಉತ್ತಮ ಶಿಕ್ಷಣಕ್ಕಾಗಿ ಸರ್ಕಾರ ಕೈಗೊಂಡಿರುವ ಯೋಜನೆಯಾದ್ದರಿಂದ ಇಂಥ ತಾರತಮ್ಯ ಅನುಮತೀಯ ಎಂದೂ ಅಭಿಪ್ರಾಯ ಪಟ್ಟಿತು.

೧೫ನೇ ಅನುಚ್ಛೇದದ (೧) ಮತ್ತು (೨)ನೇ ಖಂಡಗಳು ಲಿಂಗದ ಆಧಾರದ ಮೇಲೆ "ಯಾರೇ ನಾಗರಿಕರಲ್ಲಿ ತಾರತಮ್ಯವೆಸಗುದನ್ನು ನಿಷೇಧಿಸಿದರೂ ಸಹ, ಸ್ತ್ರೀಯರ ಪರವಾಗಿ ವಿಶೇಷ ಉಪಬಂಧವನ್ನು ಮಾಡುವ ಮೂಲಕ ರಾಷ್ಟ್ರ ಪುರುಷರ ವಿರುದ್ಧ ತಾರತಮ್ಯವೆಸಗಬಹುದಾಗಿದೆ." ಎಂದು ಅಭಿಪ್ರಾಯ ಪಟ್ಟಿದೆ. ಈ ಅವಕಾಶವನ್ನು ಪ್ರಶ್ನಿಸಿದ ಬಹುಪಾಲು ಪ್ರಕರಣಗಳಲ್ಲಿ ನ್ಯಾಯಾಲಯಗಳು ಬಹುತೇಕ ಇದೇ ಅಪವಾದ ನಿಲುವನ್ನೇ ತಳೆದಿದೆ.ಈ ಉಪಬಂಧ ತಳೆದಿರುವ ಇನ್ನೊಂದು ನಿಲುವೆಂದರೆ 'ಸಮಗ್ರ ನಿಲುವು'(holistic approach). ಇಲ್ಲಿ ೧೫ನೇ ಅನುಚ್ಛೇದವನ್ನು ಒಟ್ಟಾರೆಯಾಗಿ ಪರಿಗಣಿಸಿ, ೧೫(೩)

ಮತ್ತು ೧೫(೪)ನೇ ಅನುಚ್ಛೇದಗಳ ಮೂಲಕ ಸಮಾನತೆಯ ಪರಿಕಲ್ಪನೆಯನ್ನು ವ್ಯಾಖ್ಯಾನಿಸುವ ಪ್ರಯತ್ನ ಮಾಡಲಾಗಿದೆ.

ದತ್ತಾತ್ರೇಯ ಮೋತಿರಾವ್ ಮೋರೆ ವಿ - ಮುಂಬಯಿ ರಾಜ್ಯ( ಎ ೧೯೫೩ ಮುಂಬಯಿ ೩೧೧) ಪ್ರಕರಣ ಇದಕ್ಕೆ ಉದಾಹರಣೆ. ನಮ್ಮ ಅಭಿಪ್ರಾಯದಲ್ಲಿ ಅರ್ಜಿದಾರ ದತ್ತಾತ್ರೇಯ ಮೋತಿರಾಮ ಮೋರೆ, ಜಲಗಾಂವ್ ಪುರಸಭೆಯ ತೆರಿಗೆದಾರ, ಅಲ್ಲಿನ ನಿವಾಸಿ. ಜಲಗಾಂವ್ ಪುರಸಭೆ ಚುನಾವಣೆಯಲ್ಲಿ ಮಹಿಳೆಯರಿಗೆ ಸ್ಥಾನಗಳನ್ನು ಮೀಸಲಿಡುವ ೧೯೨೫ರ ಮುಂಬಯಿ ಪುರಸಭಾ ಬರೋಗಳ ಅಧಿನಿಯಮದ ಕೆಲವು ಉಪಬಂಧಗಳನ್ನು ಅರ್ಜಿಯಲ್ಲಿ ಪ್ರಶ್ನಿಸಿದರು. ಅಧಿನಿಯಮದ ೧೦(೧)(ಸಿ) ಪ್ರಕರಣ ಹೀಗಿದೆ "ರಾಜ್ಯ ಸರ್ಕಾರವು ಕಾಲಕಾಲಕ್ಕೆ, ಪ್ರತಿ ಪುರಸಭೆಗೆ, ಸಾಮಾನ್ಯವಾಗಿ ಅಥವಾ ವಿಶೇಷವಾಗಿ ಈ ಅಧಿನಿಯಮಕ್ಕೆ ಸುಸಂಗತವಾಗಿರುವಂತೆ ...ಮಹಿಳಾ ಪ್ರಾತಿನಿಧ್ಯಕ್ಕಾಗಿ ಸ್ಥಾನಗಳನ್ನು ಮೀಸಲಿಡಲು ನಿಯಮಗಳನ್ನು ರಚಿಸತಕ್ಕದ್ದು" ಇದರ ಅನುಸರಣೆಯಲ್ಲಿ ಸರ್ಕಾರವು ಜಲಗಾಂವ್ ಪುರಸಭೆಯ ೩೫ ಚುನಾಯಿತ ಸ್ಥಾನಗಳ ಪೈಕಿ ನಾಲ್ಕು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಟ್ಟಿತು. ಈ ಉಪಬಂಧ ಸಂವಿಧಾನದ ೧೪, ೧೫ ಮತ್ತು ೧೬ನೇ ಅನುಚ್ಛೇದಗಳಿಗೆ ವಿರುದ್ಧವಾಗಿರುವುದರಿಂದ ಈ ಉಪಬಂಧಗಳು ಅನೂರ್ಜಿತವಾಗುತ್ತದೆ ಎಂಬುದು ಅರ್ಜಿದಾರರ ವಾದವಾಗಿತ್ತು. ಈ ಪ್ರಕರಣದಲ್ಲಿ, "೧೫(೩)ನೇ ಅನುಚ್ಛೇದದ ಸರಿಯಾದ ಅರ್ಥ ೧೫(೧)ನೇ ಅನುಚ್ಛೇದದ ಮೇರೆಗೆ ಪುರುಷನೆಂಬ ಆಧಾರದ ಮೇಲೆ ಅವನ ಪರವಾಗಿ ತಾರತಮ್ಯ ಮಾಡಲು ಅವಕಾಶವಿಲ್ಲ. ಆದರೆ, ೧೫(೩)ನೇ ಅನುಚ್ಛೇದದ ಆಧಾರದ ಮೇಲೆ ಮಹಿಳೆಯರ ಪರವಾಗಿ ರಾಷ್ಟ್ರ ತಾರತಮ್ಯ ಮಾಡಿದಾಗ, ಅದು ೧೫(೧)ನೇ ಅನುಚ್ಛೇದವನ್ನು ಉಲ್ಲಂಘಿಸುವುದಿಲ್ಲ" ಎಂದು ಮುಂಬಯಿ ಉಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿತು. ಇಂಥ ಪ್ರಕರಣಗಳಲ್ಲಿ ಅನೇಕ ಉಚ್ಚನ್ಯಾಯಾಲಯಗಳು ಹಾಗೂ ಸರ್ವೋಚ್ಚ ನ್ಯಾಯಾಲಯ ಈ ನಿಲುವನ್ನು ತಳೆದಿವೆ.

ಮೊದಲನೆಯ ಅಪವಾದ ನಿಲುವಿನಲ್ಲಿ ಸಮಾನತೆ ಎಂದರೆ 'ಸಾದೃಶ್ಯತೆ'. ಸ್ತ್ರೀಪುರುಷರು ಸಮಾನರು ಎಂಬ ನಿಲುವಿಗಿಂತ ಭಿನ್ನವಾಗುವ, ೧೫(೩) ಮತ್ತು ೧೫(೪)ನೇ ಅನುಚ್ಛೇದದ ಮೇರೆಗೆ ಮಹಿಳೆಯರ ಪರವಾಗಿ ಮಾಡುವ ಯಾವುದೇ ಉಪಬಂಧವನ್ನು 'ಸಮಾನತೆ'ಗೆ 'ಅಪವಾದ' ಎಂದು ಪರಗಣಿಸಲಾಗುತ್ತದೆ. ಆದರೆ ಎರಡನೆಯ 'ಸಮಗ್ರತೆಯ ನಿಲುವಿ'ನಲ್ಲಿ 'ಸಮಾನತೆ'ಯನ್ನು ಕೆಲವೊಮ್ಮೆ ವ್ಯಕ್ತಿಗಳನ್ನು ಭಿನ್ನವಾಗಿ ಪರಿಗಣಿಸುವ ಅಗತ್ಯತೆಯನ್ನುಂಟು ಮಾಡುವಂಥದ್ದೆಂದು ಅರ್ಥೈಸಲಾಗಿದೆ. ಆದ್ದರಿಂದ, ೧೫(೩) ಮತ್ತು ೧೫(೪) ಅನುಚ್ಛೇದದ ಮೇರೆಗೆ ಮಾಡುವ ಯಾವುದೇ ವಿಶೇಷ ಉಪಬಂಧ 'ಅಪವಾದ'ವೆಂದು ಅಲ್ಲದೆ 'ಸಮಾನತೆ'ಯ ಮೂಲಭೂತ ಅಂಶವೆಂದು ಪರಿಗಣಿತವಾಗುತ್ತದೆ. ಭಿನ್ನತೆಯನ್ನು 'ಸಮಾನತೆಯಲ್ಲ' ಎಂದು ಪರಿಗಣಿಸದೆ, ಸಮಾನತೆಯನ್ನು ಒದಗಿಸುವಲ್ಲಿ ಅಗತ್ಯವಾದುದು ಎಂದು ಪರಿಗಣಿಸುವ ಈ

ನಿಲುವು ವಾಸ್ತವಿಕ ಸಮಾನತೆಯನ್ನು ಒದಗಿಸುವ ದಿಕ್ಕಿನಲ್ಲಿ ತಳೆದ ಮಹತ್ತರವಾದ ನಿಲುವು. ಸಂವಿಧಾನದ ೧೬ನೇ ಅನುಚ್ಛೇದ ಎಲ್ಲ ನಾಗರಿಕರಿಗೂ ಸಮಾನ ಉದ್ಯೋಗಾವಕಾಶವನ್ನು ಕಲ್ಪಿಸುತ್ತದೆ ಮತ್ತು ತಾರತಮ್ಯವನ್ನು ನಿಷೇಧಿಸುತ್ತದೆ. ಇಲ್ಲಿಯೂ ೧೬ನೇ ಅನುಚ್ಛೇದದ (೪)ನೇ ಖಂಡ[೧] ಹಿಂದುಳಿದ ವರ್ಗಗಳಿಗೆ ನೇಮಕಾತಿಗಳನ್ನು ಅಥವಾ ಹುದ್ದೆಗಳನ್ನು ಮೀಸಲಿಡಲು ಅವಕಾಶ ಕಲ್ಪಿಸುತ್ತದೆ. ಈ ಅನುಚ್ಛೇದದ ಬಗೆಗೂ ೧೫ನೇ ಅನುಚ್ಛೇದಕ್ಕೆ ಬಂದ ಪ್ರತಿಕ್ರಿಯೆಯೇ ಬಂದಿದೆ. ಇದನ್ನು ಪ್ರಶ್ನಿಸಿದ ಪ್ರಾರಂಭಿಕ ಪ್ರಕರಣಗಳಲ್ಲಿ(ಆಲ್ ಇಂಡಿಯಾ ಎಸ್‌ಎಂ ಮತ್ತು ಎಎಸ್‌ಎಂ ಅಸೋಸಿಯೇಷನ್ ವಿ ಜನರಲ್ ಮ್ಯಾನೇಜರ್, ಸೆಂಟ್ರಲ್ ರೈಲ್ವೆ ಎ ೧೯೬೦ ಎಸ್‌ಸಿ ೩೮೪ ಮತ್ತು ಗೋವಿಂದ ದತಾತ್ರಿ ವಿ ಕಂಟ್ರೋಲರ್ ಆಫ್ ಇಂಪೋರ್ಟ್ಸ್ ಅಂಡ್ ಎಕ್ಸ್‌ಪೋರ್ಟ್ಸ್, ಎ ೧೯೬೭ ಎಸ್‌ಸಿ) ಸರ್ವೋಚ್ಚ ನ್ಯಾಯಾಲಯ ಔಪಚಾರಿಕ ಸಮಾನತೆಯನ್ನು ಪರಿಗಣಿಸಿಯೇ ತೀರ್ಪುನೀಡಿದೆ ಎಂದರೆ, ಇಲ್ಲಿ ಸಮಾನತೆಗೆ ಸಾದೃಶ್ಯತೆಯನ್ನೇ(sameness) ಆಧಾರವನ್ನಾಗಿಟ್ಟುಕೊಂಡು ಎರಡೂ ಪಕ್ಷಕಾರರ ಸ್ಥಾನ ಸದೃಶವಾಗಿದೆಯೇ ಎಂಬ ಅಂಶವನ್ನಾಧರಿಸಿ ತೀರ್ಪು ನೀಡಲಾಗಿದೆ. ಇದರಿಂದ, ಅವಕಾಶದಲ್ಲಿ ಸಮಾನತೆಯಿರಬೇಕು ಎಂಬ ನ್ಯಾಯಾಲಯದ ದೃಷ್ಟಿಯನ್ನು ಪ್ರತಿಬಿಂಬಿಸುವ ಮೂಲಕ ಮತ್ತೆ ಔಪಚಾರಿಕ ಸಮಾನತೆಯ ದೃಷ್ಟಿಕೋನಕ್ಕೇ ಇಲ್ಲಿ ಒತ್ತು ನೀಡಿದಂತಾಗಿದೆ.

೧೬ನೇ ಅನುಚ್ಛೇದದ[೨] ಖಂಡಗಳನ್ನು ಪ್ರಶ್ನಿಸಿದ ಅನೇಕ ಪ್ರಕರಣಗಳಲ್ಲಿ ನ್ಯಾಯಾಲಯ ಸಮಾನ ಅವಕಾಶ ಹಾಗೂ ೧೬(೪)ರಲ್ಲಿ ಕೊಡಮಾಡಿರುವ ಮೀಸಲಾತಿಯ ಸೌಲಭ್ಯವನ್ನು ಎತ್ತಿಹಿಡಿದಿದೆ. ಈ ಕೆಲವು ತೀರ್ಪುಗಳು ಸಂವಿಧಾನದ ಆಶಯಕ್ಕೆ ಪೂರಕವಾಗಿ ಬಂದರೂ, ಇಲ್ಲಿ ನಮ್ಮ ಕಾಳಜಿಯಿರಬೇಕಾದುದು, ಸ್ತ್ರೀ ಪುರುಷ ಸಮಾನತೆಗೆ ಪೂರಕವಾಗಿ ಹೊರಬಿದ್ದಿರುವ ತೀರ್ಪುಗಳನ್ನು ನೀಡಿದ ನ್ಯಾಯಾಧೀಶರ ಮನೋಭಾವದ ಬಗ್ಗೆ, ಮತ್ತು ಆ ಮನೋಭಾವ ರೂಪಿತವಾಗಲು ಕಾರಣವಾದ ಸಮಾಜದ ದೃಷ್ಟಿಕೋನದ ಬಗ್ಗೆ. ಸಾಮಾನ್ಯವಾಗಿ ೧೬(೪)ರ ಮೂಲಕ ಮಾಡಲಾದ ವಿಶೇಷ ಉಪಬಂಧಗಳನ್ನು ೧೬(೧) ಮತ್ತು ೧೬(೨)ರ ಮೂಲಕ ಕೊಡಮಾಡಿರುವ ಸಮಾನ ಅವಕಾಶಕ್ಕೆ ಇರುವ ಅಪವಾದಗಳನ್ನಾಗಿ ನೋಡಲಾಗುತ್ತದೆ. ಆದರೆ, ೧೫(೩)ನೇ ಅನುಚ್ಛೇದದ ಬಗ್ಗೆ ಹೇಳಿದಂತೆಯೇ ಇಲ್ಲಿಯೂ ೧೬(೪)ನೇ ಅನುಚ್ಛೇದವನ್ನು ಒಟ್ಟಾರೆಯಾಗಿ ಸಮಾನ ಉದ್ಯೋಗವಕಾಶಕ್ಕೆ ಪೂರಕವಾದ ಒಂದು ಉಪಬಂಧವನ್ನಾಗಿ ಪರಿಗಣಿಸಬೇಕಾಗುತ್ತದೆ. ಇದನ್ನೇ ಮಾರ್ಕ್ ಗ್ಯಾಲೆಂಟರ್, "ಸಮಗ್ರ ನಿಲುವು" ಎಂದಿರುವುದು.[೩] ಅವನ ಪ್ರಕಾರ "೧೫(೪) ಮತ್ತು ೧೬(೪)ನೇ ಅನುಚ್ಛೇದಗಳು, ನಿಸ್ಸಂದೇಹವಾಗಿ, ಜಾತಿ, ಮತ ಮತ್ತು ಮುಂತಾದುವುಗಳನ್ನು ಆಧರಿಸಿರಬಾರದೆಂಬ ಸಂವಿಧಾನಾತ್ಮಕ ನಿಷೇಧಕ್ಕೆ ಅಪವಾದಗಳು ನಿಜ. ಆದರೆ, ಅವು ೧೪, ೧೫ ಮತ್ತು ೧೬ನೇ ಅನುಚ್ಛೇದಗಳು ವಿಧಿಸಿರುವ ಸಮಾನತೆಯ ನೀತಿಗೆ ಅಪವಾದಗಳಲ್ಲ.

ಏಕೆಂದರೆ ಅವು, ಹಿಂದುಳಿದ ವರ್ಗಗಳು ಮತ್ತು ಇತರರ ನಡುವೆ ಇರುವ ವ್ಯತ್ಯಾಸಗಳಿಗೆ ಸಂಬಂಧಿಸಿದಂತೆ ವಾಸ್ತವಿಕ ಸಮಾನತೆಯನ್ನು ತರುವಲ್ಲಿ ರಾಷ್ಟ್ರಕ್ಕೆ ನೀಡಿದ ಅಧಿಕಾರವನ್ನು ಪ್ರತಿನಿಧಿಸುತ್ತದೆ.''

ಇದೇ ದೃಷ್ಟಿಕೋನ, ಕೇರಳ-ವಿ ಎನ್.ಎಂ.ಥಾಮಸ್ ಪ್ರಕರಣ(A ೧೯೭೬ SC ೪೯೦)ದಲ್ಲಿ ನ್ಯಾಯಾಧೀಶ ಮ್ಯಾಡ್ಯೂಸ್ ನೀಡಿದ ಪ್ರಕರಣದಲ್ಲಿ ವ್ಯಕ್ತವಾಗಿದೆ. ಎಲ್ಲ ವ್ಯಕ್ತಿಗಳನ್ನೂ ಸಮಾನವಾಗಿ ಪರಿಗಣಿಸುವುದರಿಂದ ಔಪಚಾರಿಕ ಸಮಾನತೆಯನ್ನು ಸಾಧಿಸಬಹುದು- ''ಒಬ್ಬ ವ್ಯಕ್ತಿಯನ್ನು ಒಬ್ಬ ವ್ಯಕ್ತಿಯೊಡನೆ- ಒಬ್ಬನಿಗಿಂತ ಹೆಚ್ಚಲ್ಲ- ಮಾತ್ರ ಸಮೀಕರಿಸಬಹುದು. ಆದರೆ ಮನುಷ್ಯರು ಎಲ್ಲ ವಿಷಯಗಳಲ್ಲಿ ಒಂದೇ ಆಗಿರುವುದಿಲ್ಲ. ಆದ್ದರಿಂದ ಅನೇಕ ಸಂದರ್ಭಗಳಲ್ಲಿ ನ್ಯಾಯವನ್ನು ಸಾಧಿಸುವುದಕ್ಕಾಗಿ ಒಂದು ಬಗೆಯ ಪ್ರಮಾಣವಾರು ಸಮಾನತೆ(proportionate equality)ಗೆ ಮೊರೆಹೋಗಬೇಕಾಗುತ್ತದೆ. ನ್ಯಾಯಧೀಶ ಕೃಷ್ಣ ಅಯ್ಯರ್, ಅವರೂ ಅದರಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ''೧೪ ರಿಂದ ೧೬ ವರೆಗಿನ ಅನುಚ್ಛೇದಗಳ ಮಹತ್ವವಿರುವುದು, ಅಕ್ಷರಶಃ ಸಮಾನತೆಯನ್ನು ಸಾಧಿಸಬೇಕೆಂಬುದಲ್ಲ. ಆದರೆ ಸ್ಪಷ್ಟವಾಗಿ ಗೋಚರಿಸುತ್ತಿರುವ ಅಸಮಾನತೆಯನ್ನು ಕ್ರಮೇಣ ನಿರ್ಮೂಲನ ಮಾಡಬೇಕು ಎಂಬುದರಲ್ಲಿ. ಇದೇ ಸಂವಿಧಾನದ 'ಸಮಾನತೆಯ' ಆಶಯ ಎಂಬುದರಲ್ಲಿ ಸಂದೇಹವಿಲ್ಲ. ಸಂವಿಧಾನದ ಅನುಚ್ಛೇದಗಳನ್ನು ವ್ಯಾಖ್ಯಾನಿಸುವಾಗ ಮತ್ತು ಅನ್ವಯಿಸುವಾಗ ಕೇವಲ ಅವುಗಳ ಔಪಚಾರಿಕತೆಗೆ(Formal) ಗಮನಕೊಡದೆ, ಅದರ ಹಿಂದಿನ ಉದ್ದೇಶಕ್ಕೆ ಪ್ರಾಮುಖ್ಯತೆ ನೀಡಿದಾಗ ಮಾತ್ರ ಅದರ ಆಶಯ ನೆರವೇರುವುದು. ಇದು ಯಾವುದೇ ಕಾನೂನಿಗೆ ಅನ್ವಯಿಸುವಂತೆಯೂ ಸತ್ಯ. ಆದ್ದರಿಂದ ವ್ಯಾಖ್ಯಾನಿಸುವಾಗ ಆ ಬಗ್ಗೆ ತಳೆಯುವ ನಿಲುವು ಸಹ ಅದರ ಫಲಶೃತಿಯಂತೆಯೇ ಮಹತ್ವದ್ದಾಗುತ್ತದೆ. ಈ ದೃಷ್ಟಿಯಿಂದ ಲಿಂಗ ತಾರತಮ್ಯವನ್ನು ಪ್ರಶ್ನಿಸುವ ಅನೇಕ ಪ್ರಕರಣಗಳಿಗೆ ಸಂಬಂಧಿಸಿದಂತೆ, ಅಂತಿಮ ತೀರ್ಪಿನಲ್ಲಿ ಸಮಾನತೆಯನ್ನು ಎತ್ತಿಹಿಡಿದದ್ದು, ಸಂವಿಧಾನದ ಆಶಯ ಈಡೇರಿದ್ದರೂ ಸಹ, ಅಂತಹ ತೀರ್ಮಾನಕ್ಕೆ ಬರಲು ಕಾರಣವಾಗಿ ಸನ್ನಿವೇಶಗಳ ವಿಶ್ಲೇಷಣೆ ಹಾಗೂ ವಿಶ್ಲೇಷಣೆಯ ಹಿಂದಿನ ಮನೋಧರ್ಮ ಬಹಳ ಮುಖ್ಯವಾಗುತ್ತದೆ. ಏಕೆಂದರೆ ಜಾರಿಯಲ್ಲಿರುವ ಕಾನೂನುಗಳು ಮಹಿಳೆಯರ ಸಮಸ್ಯೆಗಳಿಗೆ ಉತ್ತರವಾಗಿದೆಯೇ ಹಾಗೂ ಅದರಿಂದ ನ್ಯಾಯದೊರಕಿದೆಯೇ ಎಂಬುದನ್ನು ವಿಶ್ಲೇಷಿಸಲು ಯತ್ನಿಸುವ ನನ್ನ ಅಧ್ಯಯನದಲ್ಲಿ, ಮುಂದೆ ನೋಡುವ ಅನೇಕ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಈ ವಿಶ್ಲೇಷಣಾ ವಿಧಾನ ಮತ್ತು ಅದರ ಹಿಂದಿನ ಮನೋಧರ್ಮ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಅನೇಕ ಶತಮಾನಗಳಿಂದ ಬೇರೂರಿರುವ ಪುರುಷಪ್ರಧಾನ ಮನೋಭಾವದಿಂದಾಗಿ ಮಹಿಳೆಯರಿಂದ ನಿರೀಕ್ಷಿಸುವ ವರ್ತನೆಯ ಹಿನ್ನೆಲೆಯಲ್ಲಿ ಕಾನೂನಿನ ವ್ಯಾಖ್ಯಾನ ಹಾಗೂ ಅನ್ವಯಗಳ ಮೇಲೆ ಪ್ರಭಾವ ಬೀರಿರುವುದು, ಆ ಮೂಲಕ ಕಾನೂನಿನ ಆಶಯ ಅನ್ವಯದಿಂದ ಬೇರ್ಪಟ್ಟು ಸರಳುವುದನ್ನು ಕಾಣಬಹುದು. ಈ

ದೃಷ್ಟಿಯಿಂದ ರತ್ನಕಪೂರ್ ಮತ್ತು ಬ್ರೆಂಡ್ ಕಾಸ್ ಮನ್[1] ಅವರು ಕೆಲವು ಪ್ರಕರಣಗಳ ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳ ವರ್ಗೀಕರಣ ಹೆಚ್ಚು ಪ್ರಸ್ತುತವಾಗುತ್ತವೆ.

ಲಿಂಗ ತಾರತಮ್ಯಕ್ಕೆ ಸಂಬಂಧಿಸಿದಂತೆ ತೀರ್ಪು ಹೊರಬಿದ್ದ ಪ್ರಕರಣಗಳಲ್ಲಿ ಸಮಾನತೆಯ ಹಕ್ಕುಗಳ ಬಗ್ಗೆ ಹೆಚ್ಚು ಸಾಮಾನ್ಯವಾದ ನ್ಯಾಯಿಕ ವ್ಯಾಖ್ಯಾನಗಳನ್ನು ನೀಡಿರುವುದನ್ನು ಗಮನಿಸಬಹುದು. ಈ ಪ್ರಕರಣಗಳಲ್ಲಿ, ಔಪಚಾರಿಕ ಸಮಾನತೆ(formal equality) ಮತ್ತು ವಾಸ್ತವಿಕ ಸಮಾನತೆ(substantive equality)ಗಳ ನಡುವಿನ ಅಂತರವನ್ನು ವ್ಯಾಖ್ಯಾನಿಸುವ ಹೆಚ್ಚಿನ ಪ್ರಯತ್ನಗಳಾಗಿಲ್ಲವೆಂದೇ ಹೇಳಬಹುದು. ಲಿಂಗ ತಾರತಮ್ಯದ ವಿಷಯವನ್ನು ಮುಖ್ಯವಾಗಿವುಳ್ಳ ಪ್ರಕರಣಗಳು ಕೆಲವು ಪ್ರಶ್ನೆಗಳನ್ನು ಎತ್ತುತ್ತವೆ. ಸಮಾನತೆ ಎಂದರೆ ಸಾದೃಶ್ಯತೆ(sameness) ಎಂಬ ಚಾಲ್ತಿಯಲ್ಲಿರುವ ಪರಿಕಲ್ಪನೆ ಲಿಂಗ ತಾರತಮ್ಯದ ಸುಸಂಗತೆಗೆ ಹೆಚ್ಚಿನ ಒತ್ತು ನೀಡುತ್ತದೆ. ಈ ದೃಷ್ಟಿಯಿಂದ ಕೇಸ್ ಲಾಗಳನ್ನು ಗಮನಿಸಿದಾಗ ಮೂರು ರೀತಿಯ ನ್ಯಾಯಿಕ ವ್ಯಾಖ್ಯಾನಗಳನ್ನು(Judicial approaches) ಗುರುತಿಸಬಹುದು. ರಕ್ಷಣಾತ್ಮಕ (protective), ಸಾದೃಶ್ಯಾತ್ಮಕ(sameness) ಮತ್ತು ನೇರ್ಪಡೆ(corrective). ಮೊತ್ತಮೊದಲ ಮತ್ತು ಅತ್ಯಂತ ಸಾಮಾನ್ಯವಾದ ನ್ಯಾಯಿಕ ವ್ಯಾಖ್ಯಾನ(approach) ಎಂದರೆ ರಕ್ಷಣಾತ್ಮಕ ವ್ಯಾಖ್ಯಾನ.

ಇಲ್ಲಿ ಮಹಿಳೆಯರು ದುರ್ಬಲರು ಮತ್ತು ಅಧೀನರು ಎಂದು ಪರಿಭಾವಿಸಿ ಅವರಿಗೆ ರಕ್ಷಣೆಯ ಅಗತ್ಯವಿದೆ ಎಂದು ವ್ಯಾಖ್ಯಾನಿಸಲಾಗುತ್ತದೆ. ಮಹಳೆಯರನ್ನು ಭಿನ್ನವಾಗಿ ಪರಿಗಣಿಸಲು ನ್ಯಾಯಾಲಯ ಅರ್ಥಮಾಡಿಕೊಳ್ಳುವಂಥ ಮಹಿಳೆಯರ ಭಿನ್ನತೆಯನ್ನೇ ಸಮರ್ಥನೀಯ ಕಾರಣವನ್ನಾಗಿ ತೋರಿಸಲಾಗುತ್ತದೆ. ಇಂಥ ವ್ಯಾಖ್ಯಾನ, ಸ್ತ್ರೀ ಪುರುಷರ ನಡುವಿನ ವ್ಯತ್ಯಾಸವನ್ನು ಸಹಜ ಎಂದು ಒಪ್ಪುವುದಷ್ಟೇ ಅಲ್ಲದೆ ಸ್ತ್ರೀಯರನ್ನು ಭಿನ್ನವಾಗಿ ಪರಿಗಣಿಸಲು ಆ ವ್ಯತ್ಯಾಸವನ್ನು ಸಮರ್ಥನೀಯ ಕಾರಣ ಎಂದೂ ಒಪ್ಪುತ್ತದೆ. ಈ ವ್ಯತ್ಯಾಸ ಉಂಟಾಗಲು ಕಾರಣವೇನು ಎಂಬುದರ ಬಗ್ಗೆ ಅಥವಾ ಹಾಗೆ ಭಿನ್ನವಾಗಿ ಪರಿಗಣಿಸುವುದರ ಪರಿಣಾಮದ ಬಗ್ಗೆ ಚಿಂತಿಸುವ ಪ್ರಯತ್ನ ಇಲ್ಲಿ ಕಂಡುಬರುವುದಿಲ್ಲ ಮತ್ತು ಹಾಗೇ ಭಿನ್ನವಾಗಿ ಪರಿಗಣಿಸುವ ಮೂಲಕ ಅವರಿಗೆ ಉಪಕಾರ ಮಾಡಲಾಗುತ್ತಿದೆ ಎಂಬ ಭಾವನೆಗೆ ಪುಷ್ಟಿ ದೊರೆತಿದೆ. ಮಹಿಳೆಯರಿಗೆ ರಕ್ಷಣೆ ನೀಡಲಾಗುತ್ತಿದೆ ಎಂದು ಹೇಳುವ ಮೂಲಕ ಮಹಿಳೆಯರ ಅಧೀನ ಸ್ಥಾನಮಾನವನ್ನು ಗಟ್ಟಿಗೊಳಿಸುವ ಪ್ರಯತ್ನ ಇದು ಎನ್ನಬಹುದು.

ಎರಡನೆಯದು, ಸಮಾನವಾಗಿ ಪರಿಗಣಿಸುವುದು ಅಥವಾ ಸಾದೃಶ್ಯತಾ ವ್ಯಾಖ್ಯಾನ. ಇಲ್ಲಿ ಸ್ತ್ರೀ ಪುರುಷರು ಸಮಾನ ಆದ್ದರಿಂದ ಕಾನೂನಿನಲ್ಲಿ ಸ್ತ್ರೀಯರನ್ನು ಪುರುಷರಿಗೆ ಸಮಾನವಾಗಿ ಪರಿಗಣಿಸಬೇಕು ಎಂಬುದು ವಾದ. ಈ ವಾದದಲ್ಲಿ ಮಹಿಳೆಯರಿಗೆ ಕೊಡಲಾಗಿರುವ ವಿಶೇಷ ಸೌಲಭ್ಯಗಳನ್ನು ರದ್ದುಗೊಳಿಸಬೇಕು ಎಂಬ ವಾದಕ್ಕೆ ಸಮರ್ಥನೆಯನ್ನಾಗಿ ಬಳಸಿಕೊಳ್ಳಲಾಗುತ್ತದೆ. ಸ್ತ್ರೀ ಪುರುಷ

ಭೇದವೆಣಿಸದ ಶಾಸನಗಳ ವಿಶ್ಲೇಷಣೆ ಮಾಡುವಾಗಲೂ ಈ ವಾದವನ್ನು ಬಳಸಿಕೊಳ್ಳಲಾಗಿದೆ. ಈ ವಾದದ ಪ್ರಕಾರ ಸ್ತ್ರೀ ಪುರುಷರನ್ನು ಔಪಚಾರಿಕ ಸಮಾನತೆಯಿಂದ ಕಂಡರೆ ಸಾಕಾಗಿದೆ.

ಮಹಿಳಾವಾದಿಗಳು ಸಮಾನತೆಯ ಈ ಪರಿಕಲ್ಪನೆಯನ್ನು ಎಂದರೆ, ಸ್ತ್ರೀಯರು ಪುರುಷರಿಗೆ ಸರಿಸಮಾನರು ಮತ್ತು ಅವರನ್ನು ಪುರುಷರಿಗೆ ಸಮಾನವೆಂದು ಪರಿಗಣಿಸಬೇಕು ಎಂಬುದನ್ನು ಒಪ್ಪುತ್ತಾರೆ. ಇದರ ಪ್ರಕಾರ, ಹಿಂದೆ ಸ್ತ್ರೀಪುರುಷರ ನಡುವಿನ ವ್ಯತ್ಯಾಸಕ್ಕೆ ಮನ್ನಣೆ ನೀಡುವ ಯಾವುದೇ ವ್ಯಾಖ್ಯಾನವನ್ನು ಮಹಿಳೆಯರ ವಿರುದ್ಧ ತಾರತಮ್ಯವೆಸಗುವುದಕ್ಕೆ ಕೊಡಲಾಗುವ ಸಮರ್ಥನೆಯೆಂದು ಪರಿಗಣಿಸಲಾಗುತ್ತದೆ. ಈ ವಾದವನ್ನು ಬೆಂಬಲಿಸುವವರು ಸ್ತ್ರೀಯರ ಬಗ್ಗೆ ಮಾಡಲಾದ ಯಾವುದೇ ವಿಶೇಷ ವ್ಯಾಖ್ಯಾನ ಅಥವಾ ಸವಲತ್ತು, ಅವರಿಗೆ ರಕ್ಷಣೆಯೊದಗಿಸುವ ನೆಪದಲ್ಲಿ ಮಹಿಳೆಯರ ವಿರುದ್ಧ ತಾರತಮ್ಯ ತೋರಲು ಬಳಸಲಾಗಿದೆ ಎಂದು ವಾದಿಸುತ್ತಾರೆ. ಇವರ ಪ್ರಕಾರ ಈ ವಿಶೇಷ ಉಪಬಂಧಗಳು ಎರಡೂ ಬದಿಯಲ್ಲಿ ಹರಿತವಾದ ಕತ್ತಿಯಿದ್ದಂತೆ. ಸ್ತ್ರೀ ಪುರುಷರ ನಡುವೆ ವ್ಯತ್ಯಾಸವಿದೆಯೆಂದು ಒಪ್ಪಿಕೊಳ್ಳುವ ಯಾವುದೇ ಪ್ರಯತ್ನವನ್ನು ಅಸಮಾನತೆಯಿಂದ ಮತ್ತು ತಾರತಮ್ಯದೊಡನೆ ಕಾಣಲು ನೀಡುವ ಮುಂದುವರಿದ ಸಮರ್ಥನೆ ಎಂದು ಭಾವಿಸಲಾಗುತ್ತದೆ. ಇದಕ್ಕೆ ಇವರು ಕೊಡುವ ಉದಾಹರಣೆಯೆಂದರೆ, ಹಿಂದೆ ಸ್ತ್ರೀಯರಿಗೆ ಅವರು ಸ್ತ್ರೀಯರೆಂಬ ಕಾರಣದ ಮೇಲೆ ಅವರಿಗೆ ಮತದಾನದ ಹಕ್ಕನ್ನು ನೀಡದಿರುವುದು, ಚುನಾಯಿತ ಸರ್ಕಾರದಲ್ಲಿ ಅವಕಾಶ ನೀಡದಿರುವುದು, ಕಾನೂನು ವೃತ್ತಿಗೆ ಪ್ರವೇಶ ನಿರಾಕರಿಸಿದುದು ಸಮಾಜದ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವಕಾಶ ನಿರಾಕರಣೆ ಇವುಗಳನ್ನು ಲಿಂಗಭೇದದ ಪರಿಣಾಮವೆಂದು ಗುರುತಿಸುತ್ತಾರೆ.

ಮೂರನೆಯ ಮತ್ತು ಆಶಾದಾಯಕವಾದ ವ್ಯಾಖ್ಯಾನವೆಂದರೆ, ನೇರ್ಪಡೆ ವ್ಯಾಖ್ಯಾನ(corrective approach). ಇದರಲ್ಲಿ ಹಿಂದೆ ಮಾಡಿದ ತಾರತಮ್ಯದ ಫಲವಾಗಿ ಅವರಿಗೆ ವಿಶೇಷ ಸವಲತ್ತುಗಳನ್ನು ನೀಡುವ ಅಗತ್ಯವನ್ನು ಸಮರ್ಥಿಸಲಾಗುತ್ತದೆ. ಈ ವಾದದ ಪ್ರಕಾರ ಲಿಂಗಭೇದ ಸುಸಂಗತವಾದುದು ಮತ್ತು ಕಾನೂನಿನಲ್ಲಿಯೂ ಈ ಭೇದವಿರುವುದು ಅಗತ್ಯವಾಗಿದೆ. ಸ್ತ್ರೀ ಪುರುಷರ ನಡುವಿನ ವ್ಯತ್ಯಾಸವನ್ನು ಗಮನಕ್ಕೆ ತೆಗೆದುಕೊಳ್ಳಲು ವಿಫಲರಾದಲ್ಲಿ, ಅದು ಅವರ ನಡುವಿನ ವ್ಯತ್ಯಾಸವನ್ನು ಅಧಿಕಗೊಳಿಸುತ್ತದೆ ಮತ್ತು ಅಂತರ್ಗತ ಅಸಮಾನತೆಗಳನ್ನು ಮುಂದುವರಿಸಲು ಕಾರಣವಾಗುತ್ತದೆ. ಈ ವಾದವನ್ನು ಸಮರ್ಥಿಸುವವರು ಸ್ತ್ರೀ ಪುರುಷ ಭೇದವೆಣಿಸದ ಶಾಸನಗಳು ಔಪಚಾರಿಕ ಸಮಾನತೆಯನ್ನು ಹೊಂದಿದೆಯೇ ವಿನಃ ಅವು ಸ್ತ್ರೀ ಪುರುಷ ಸಮಾನತೆಯ ಶಾಸನಗಳಾಗಿಯೇ ಇಲ್ಲ. ಏಕೆಂದರೆ ಅವೆಲ್ಲವೂ ಪುರುಷ ಮಾನದಂಡದ ಮತ್ತು ಮೌಲ್ಯಗಳ ಆಧಾರದ ಮೇಲೆ ರಚಿತವಾದವುಗಳು ಎನ್ನುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ ರಚಿತವಾದ ನಿಯಮಗಳು ಪುರುಷರ ಅಗತ್ಯಗಳನ್ನು, ಪುರುಷರ ಕಾಳಜಿಗಳನ್ನು ಹಾಗೂ

ಪುರುಷರ ಅನುಭವಗಳನ್ನು ಪ್ರತಿಬಿಂಬಿಸುತ್ತವೆ. ಅಂಥ ಸಮಾನದಲ್ಲಿ, ಪುರುಷರ ಮೌಲ್ಯಗಳು ಮತ್ತು ಮಾನದಂಡಗಳೊಡನೆ ಹೊಂದಾಣಿಕೆಯಾಗುವ ಮಟ್ಟಿಗೆ ಮಾತ್ರ ಮಹಿಳೆಯರು ಸಮಾನತೆಯನ್ನು ಪಡೆಯುತ್ತಾರೆ. ಆದ್ದರಿಂದ ಮಹಿಳೆಯರಿಗೆ ವಾಸ್ತವಿಕ ಸಮಾನತೆ ದೊರೆಯಬೇಕಾದರೆ ಲಿಂಗಭೇದವನ್ನು ಪರಿಗಣಿಸಬೇಕೆಂದು ನೇರ್ಪಡೆ ವ್ಯಾಖ್ಯಾನಕಾರರು ವಾದಿಸುತ್ತಾರೆ.

ರಕ್ಷಣಾತ್ಮಕ ಹಾಗೂ ನೇರ್ಪಡೆ ವ್ಯಾಖ್ಯಾನಗಳಲ್ಲಿ ಕೆಲವು ಮುಖ್ಯ ಸಾದೃಶ್ಯಗಳಿವೆ. ಎರಡೂ ಬಗೆಯ ವ್ಯಾಖ್ಯಾನಕಾರರೂ, ಲಿಂಗ ಭೇದ ಸುಸಂಗತವಾದುದು, ಆದ್ದರಿಂದ ಕಾನೂನಿನಲ್ಲಿ ಅದಕ್ಕೆ ಮನ್ನಣೆ ಇರಬೇಕೆಂದು ವಾದಿಸುತ್ತಾರೆ. ಆದರೆ ಇವೆರಡು ವಾದಗಳ ನಡುವೆ ಬಹುಮುಖ್ಯವಾದ ವ್ಯತ್ಯಾಸವೂ ಇದೆ. ರಕ್ಷಣಾತ್ಮಕ ವ್ಯಾಖ್ಯಾನದ ಬೆಂಬಲಿಗರು, ಲಿಂಗಭೇದ ಹಾಗೂ ವಿಶೇಷ ಸವಲತ್ತು ಇವೆರಡನ್ನೂ ಸಹಜ ಹಾಗೂ ಅಗತ್ಯ ಎಂದು ಪರಿಗಣಿಸುತ್ತಾರೆ. ಆದರೆ ನೇರ್ಪಡೆ ವ್ಯಾಖ್ಯಾನದ ಬೆಂಬಲಿಗರು, ವ್ಯತ್ಯಾಸಕ್ಕೆ ಕಾರಣವಾದ ಆಧಾರಗಳನ್ನೂ ಮತ್ತು ಲಿಂಗಭೇದವನ್ನು ಒಪ್ಪದೇ ಇರುವುದಕ್ಕಿಂತ ಒಪ್ಪುವುದರಿಂದ ಮಹಿಳೆಯರ ಜೀವನದ ಸ್ಥಾನಮಾನದ ಮೇಲೆ ಆಗುವ ಪರಿಣಾಮವನ್ನು ಪರಿಗಣಿಸುತ್ತಾರೆ. ಎಂದರೆ ಅವರು ಲಿಂಗಭೇದವನ್ನು ಒಪ್ಪುತ್ತಾರೆ ಎನ್ನುವುದಕ್ಕಿಂತ ಹೆಚ್ಚಾಗಿ, ಹಿಂದೆ ಇದರಿಂದಾಗಿಯೇ ಉಂಟಾದ ಅನನುಕೂಲತೆಗಳ ಹಿನ್ನೆಲೆಯಲ್ಲಿ ಅದರ ಸುಸಂಗತತೆಯನ್ನು ಅರ್ಥೈಸ ಹೊರಡುತ್ತಾರೆ. ಚಾರಿತ್ರಿಕವಾಗಿ ಲಿಂಗಭೇದ ಉಂಟುಮಾಡಿದ ಅನನುಕೂಲಗಳು ಮತ್ತು ತಾರತಮ್ಯಗಳ ಕಾರಣಕ್ಕಾಗಿಯೇ ಲಿಂಗಭೇದವನ್ನು ಒಪ್ಪಬೇಕಾಗುತ್ತದೆ ಎಂಬುದು ಇವರ ವಾದ.

ಈ ಎಲ್ಲ ವಾದಗಳೂ ಔಪಚಾರಿಕ ಸಮಾನತೆ ಮತ್ತು ವಾಸ್ತವಿಕ ಸಮಾನತೆಗೆ ಸರಿಸುಮಾರು ಸಂವಾದಿಯಾದ ವಾದಗಳಾಗುತ್ತವೆ. ರಕ್ಷಣಾತ್ಮಕ ಮತ್ತು ಸಾದೃಶ ವ್ಯಾಖ್ಯಾನಗಳು ಔಪಚಾರಿಕ ಸಮಾನತೆಯ ಆಧಾರದ ಮೇಲೆ ಮಾಡಿದವುಗಳಾದರೆ, ನೇರ್ಪಡೆ ವ್ಯಾಖ್ಯಾನ ವಾಸ್ತವಿಕ ಸಮಾನತೆಯನ್ನು ಆಧರಿಸಿದುದಾಗಿದೆ. ಆದರೆ ವಾಸ್ತವಿಕ ಸಮಾನತೆ ಸಂಪೂರ್ಣವಾಗಿ ನೇರ್ಪಡೆ ವ್ಯಾಖ್ಯಾನಕ್ಕೆ ಸಂವಾದಿಯಾದುದೆಂದಲ್ಲ. ಏಕೆಂದರೆ ನೇರ್ಪಡೆ ವ್ಯಾಖ್ಯಾನಕಾರರು ನಿರ್ದಿಷ್ಟ ಸಂದರ್ಭಗಳಲ್ಲಿ, ಸ್ತ್ರೀಯರನ್ನು ಭಿನ್ನವಾಗಿ ಪರಿಗಣಿಸುವುದರಿಂದ ಅದು ಅನನುಕೂಲತೆಗೆ ನೆರವಾಗುತ್ತದೆ ಎಂಬ ಕಾರಣಕ್ಕಾಗಿ, ಸ್ತ್ರೀಯರನ್ನು ಪುರುಷರಿಗೆ ಸಮಾನವಾಗಿ ಕಾಣಬೇಕು ಎಂದೂ ವಾದಿಸುತ್ತಾರೆ. ಆದರೆ ವಾಸ್ತವಿಕ ಸಮಾನತೆಯ ವ್ಯಾಖ್ಯಾನಕಾರರು ಲಿಂಗಭೇದವನ್ನು ಒಪ್ಪುವುದರೊಂದಿಗೆ, ಅದನ್ನು ಹೇಗೆ ಮತ್ತು ಯಾವಾಗ ಒಪ್ಪಬೇಕೆಂಬ ಆಯ್ಕೆಯ ಸ್ವಾತಂತ್ರವಿರಬೇಕು ಎಂಬುದನ್ನು ಒತ್ತಿ ಹೇಳುತ್ತಾರೆ.

ಯಾವುದೇ ಕಾನೂನು ಅಥವಾ ಒಂದು ಉಪಬಂಧ ಮಹಿಳೆಯರ ಅಧೀನ ಸ್ಥಾನಮಾನ ಉಂಟಾಗಲು ಕಾರಣವಾಗುತ್ತದೆಯೇ ಅಥವಾ ಅದನ್ನು ಬೆಂಬಲಿಸುತ್ತದೆಯೇ ಎಂಬುದು ವಾಸ್ತವಿಕ ಸಮಾನತೆಯ

ವ್ಯಾಖ್ಯಾನಕಾರರು ಲಿಂಗಭೇದದ ಸುಸಂಗತತೆಗೆ ಅನ್ವಯಿಸುವ ಮಾನದಂಡ. ಹೀಗಾಗಿ ಕೆಲವೊಂದು ಸಂದರ್ಭಗಳಲ್ಲಿ ವಾಸ್ತವಿಕ ಸಮಾನತೆಯ ವ್ಯಾಖ್ಯಾನಕಾರರು ಸಾದೃಶ್ಯ ಸಮಾನತೆಯನ್ನು ಬೆಂಬಲಿಸಿದರೆ, ಕೆಲವೊಂದು ಸಂದರ್ಭಗಳಲ್ಲಿ ನೇರ್ಪಡೆಯ ವ್ಯಾಖ್ಯಾನವನ್ನು ಬೆಂಬಲಿಸುತ್ತಾರೆ. ಉದಾಹರಣೆಗೆ ಮತ ನೀಡುವ ಹಕ್ಕು ಮತ್ತು ಭೂಮಿಯನ್ನು ಹೊಂದುವ ಹಕ್ಕುಗಳಂಥ ರಾಜಕೀಯ ಮತ್ತು ಸಿವಿಲ್ ಹಕ್ಕುಗಳ ಸಂದರ್ಭದಲ್ಲಿ, ಸಮಾನತೆಯ ಸಾಧನೆಗೆ ಲಿಂಗತಾರತಮ್ಯ ಅಸಂಗತವಾದುದು ಮತ್ತು ಲಿಂಗಭೇದ ಮಹಿಳೆಯ ಅಧೀನ ಸ್ಥಾನಮಾನಕ್ಕೆ ಪೂರಕವಾದದ್ದು ಮತ್ತು ಅದನ್ನು ಬೆಂಬಲಿಸುವಂಥದ್ದೂ ಆಗುತ್ತದೆ. ಆದ್ದರಿಂದ ಇಲ್ಲಿ ಸಾದೃಶ್ಯ ವ್ಯಾಖ್ಯಾನ ಸುಸಂಗತವಾದುದಾಗುತ್ತದೆ. ಆದರೆ, ಉದ್ಯೋಗ ಹಕ್ಕುಗಳ ಸಂದರ್ಭದಲ್ಲಿ, ವಾಸ್ತವಿಕ ಸಮಾನತೆಯ ವ್ಯಾಖ್ಯಾನ ಹೆಚ್ಚು ಸುಸಂಗತವಾಗುತ್ತದೆ. ಮಹಿಳೆಯರಿಗಿರುವ ಪ್ರಜನನ ವ್ಯತ್ಯಾಸಗಳಿಂದಾಗಿ ಅವರಿಗೆ ಪ್ರಸೂತಿ ಸೌಲಭ್ಯ ಮತ್ತಿತರ ಸೌಲಭ್ಯಗಳನ್ನು ಕೊಡುವ ಮಟ್ಟಿಗೆ ಸಮಾನತೆಯ ವ್ಯಾಖ್ಯಾನ ವಾಸ್ತವಿಕ ಸಮಾನತೆಯ ವ್ಯಾಖ್ಯಾನವಾಗಿ ವಿಸ್ತೃತಗೊಳ್ಳಬೇಕಾಗುತ್ತದೆ.

ಕಾನೂನು, ಸಿದ್ಧ ಹಾಗೂ ನೆಲೆಗೊಂಡ ತಾರತಮ್ಯವೆನಿಸುವಂಥ ಅನೇಕ ಆಚರಣೆಗಳನ್ನು ಅರ್ಥಪೂರ್ಣ ವಿಧಾಯಕಗಳಿಂದ ಬದಲಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಬಲ್ಲುದು. ತಾರತಮ್ಯವಿರದ ತತ್ವಗಳನ್ನು ಒಪ್ಪಿಕೊಳ್ಳುವಂತೆ ಒಂದು ಸಮಾಜವನ್ನು ಅಣಿಗೊಳಿಸುವತ್ತ ಆ ಸಮಾಜದ ಜನ ಸಮುದಾಯದ ಮನಃ ಪರಿವರ್ತನೆಯಲ್ಲಿ ಕಾನೂನು, ಸೀಮಿತವಾದುದಾದರೂ, ಒಂದು ಸಾಧನವಾಗುತ್ತದೆ. ಇಂಥ ಮನಃ ಪರಿವರ್ತನೆ ಎಷ್ಟೇ ನಿಧಾನವಾದುದಾದರೂ, ಕಾನೂನಿನ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಕಾನೂನಿನ ಮೂಲಕ ನಿರೀಕ್ಷಿಸುವ ಈ ಬದಲಾವಣೆ ಸಾಧಿತವಾಗಬೇಕಾದರೆ, ಕಾನೂನನ್ನೇ ವಿಮರ್ಶಾತ್ಮಕ ದೃಷ್ಟಿಯಿಂದ ವಿಶ್ಲೇಷಿಸಬೇಕಾಗುತ್ತದೆ. ಏಕೆಂದರೆ, ಕಾನೂನು ಮೇಲ್ನೋಟಕ್ಕೆ ಎಷ್ಟೇ ಸಮಾನ ಮೌಲ್ಯವನ್ನೊಳಗೊಂಡಿದೆ ಎಂದು ಕಂಡುಬಂದರೂ, ಬಳಸಿರುವ ಪದಗಳು ಮತ್ತು ವ್ಯಾಖ್ಯಾನ ಸಾಧ್ಯತೆಗಳಲ್ಲಿ ಬೇರೂರಿರುವ ಪುರುಷ ಪ್ರಧಾನ ಚಿಂತನೆಗಳು ಅಂತರ್ಗತವಾಗಿರುತ್ತವೆ. ಆದ್ದರಿಂದ, ಮೇಲ್ನೋಟಕ್ಕೆ ತಾರತಮ್ಯವೆನಿಸುವಂಥ ಕಾನೂನನ್ನಷ್ಟೇ ಅಲ್ಲದೆ ತಟಸ್ಥ ಮೌಲ್ಯ(ವ್ಯಾಲ್ಯೂನ್ಯೂಟ್ರಲ್) ಎನಿಸುವಂಥ ರಚನೆಯನ್ನೊಳಗೊಂಡ ಪದ ಬಳಕೆ, ಅವುಗಳ ವ್ಯಾಖ್ಯಾನ ವೈಯಕ್ತಿಕ ಹಕ್ಕುಗಳ ನೇರ ಪರಿಣಾಮವನ್ನು ಬೀರುವಂಥ ಕಾನೂನುಗಳ ಬಗ್ಗೆಯೂ ಗಮನಹರಿಸಬೇಕಾಗುತ್ತದೆ.

ಕೇವಲ ಕಾನೂನಿನಲ್ಲಿ ತರುವ ಬದಲಾವಣೆ, ವೈಯಕ್ತಿಕ ಹಾಗೂ ಸಾಮುದಾಯಿಕ ಆಚರಣೆಗಳನ್ನು ರೂಢಿಸುವಂಥ ಮನೋಭಾವದಲ್ಲಿ ಬದಲಾವಣೆಯನ್ನು ತರಲಾರದು ನಿಜ. ಆದರೆ, ಧೀರ್ಘ ಅವಧಿಯಲ್ಲಿ, ಕಾನೂನಿನ ಪ್ರಭಾವವನ್ನು ಅಲ್ಲಗೆಳೆಯಲಾಗದು.

ತಾರತಮ್ಯವನ್ನು ಹೋಗಲಾಡಿಸುವಲ್ಲಿ, ಕಾನೂನು ಕೊಡುಗೆ ನೀಡಬೇಕಾದರೆ ಮೊದಲು ತಾರತಮ್ಯಕ್ಕೆ ಕಾರಣವಾದ ಅಂಶಗಳನ್ನು ಮತ್ತು ಕಾನೂನಿನಲ್ಲಿ ಪದಪುಂಜಗಳಲ್ಲಿ ಅಂತರ್ಗತವಾಗಿರುವ ಅರ್ಥ ಹಾಗೂ ಪರಿಕಲ್ಪನೆಗಳನ್ನು ವಿಶ್ಲೇಷಿಸುವುದು ಮತ್ತು ಅದರಲ್ಲಿ ಮಾಡಬೇಕಾದ ಬದಲಾವಣೆಗಳ ಬಗ್ಗೆ ಪರ್ಯಾಲೋಚಿಸುವುದು ಅಗತ್ಯ. ಇದಕ್ಕೆ ಮೊದಲು 'ತಾರತಮ್ಯ' ಎಂದರೇನು ಮತ್ತು ಅದರ ಪರಿಣಾಮಗಳೇನು ಎಂಬುದನ್ನು ತಿಳಿಯುವುದು ಬಹುಮುಖ್ಯ.

ತಾರತಮ್ಯ ಪ್ರತ್ಯಕ್ಷವಾದುದಾಗಿರಬಹುದು ಅಥವಾ ಪರೋಕ್ಷವಾದುದಾಗಿರಬಹುದು. ಉದ್ದೇಶಪೂರ್ವಕವಾಗಿ ಉಂಟಾದುದಾಗಿರಬಹುದು ಅಥವಾ ಉದ್ದೇಶಪೂರ್ವಕವಾದುದಲ್ಲದಿರಬಹುದು. ತಾರತಮ್ಯ ಎಂಬುದು ಬರಿಯ ತಪ್ಪಲ್ಲ, ಅದೊಂದು ಪಿಡುಗು. ಇದು ಕೇವಲ ಅನನುಕೂಲವನ್ನು ಮಾತ್ರ ಉಂಟುಮಾಡುವುದಿಲ್ಲ. ತಾರತಮ್ಯಕ್ಕೆ ಒಳಗಾದವರು ಒಂದು ರೀತಿಯ ಅವಮಾನವನ್ನೆದುರಿಸುವಂತೆ ಮಾಡುತ್ತದೆ. ಅದರಿಂದಾಗಿಯೇ, ತಾರತಮ್ಯವನ್ನು 'ಅನ್ಯಾಯ'ದ ಒಂದು ರೂಪ ಎನ್ನಬಹುದು.

ಹಿಂದಿನಿಂದಲೂ ಮಹಿಳೆಯರು ಇಂಥ ಲಿಂಗತಾರತಮ್ಯಕ್ಕೆ ಒಳಗಾಗುತ್ತಲೇ ಬಂದಿದ್ದಾರೆ. ಮಹಿಳೆಯರು ಎಂಬ ಕಾರಣದಿಂದಲೇ ಜನಸಂಖ್ಯೆಯ ಅರ್ಧದಷ್ಟಿರುವ ಅವರನ್ನು ಸಾಮಾಜಿಕ ಜೀವನದ ಯಾವುದೇ ರಂಗದಲ್ಲಿಯೂ ಪರಿಗಣಿಸಿಲ್ಲ ಹಾಗೂ ಜನಸಂಖ್ಯೆಯ ಇನ್ನರ್ಧ ಭಾಗವಾದ ಪುರುಷರೊಂದಿಗೆ ಸ್ಪರ್ಧಿಸದಂತೆ ದೂರವೇ ಇಡಲಾಗಿದೆ. ಆಧುನಿಕ ಸಮಾಜದಲ್ಲಿಯೂ ಸಹ, ಪುರುಷನಿಗೆ ಹೋಲಿಸಿದಾಗ, ಮಹಿಳೆಗೆ ಕೊಡಲಾಗುವ ಮಜೂರಿ ಕಡಿಮೆ. ಉದ್ಯೋಗ ಕ್ಷೇತ್ರದಲ್ಲಿ ಕೊಡಲಾಗುವ ಅವಕಾಶಗಳು ಕಡಿಮೆ. ಅವಳನ್ನು ಸಾಧ್ಯವಾದಷ್ಟು ಅಲಕ್ಷಿಸಲಾಗುತ್ತದೆ. ಅಷ್ಟೇ ಅಲ್ಲದೆ ಸಮಾಜ ಒಪ್ಪಿದ ಪಾತ್ರವನ್ನಲ್ಲದೆ ಬೇರೆ ಪಾತ್ರವಹಿಸ ಹೊರಡುವ ಮಹಿಳೆಯರನ್ನು ಹಾಸ್ಯ ಮಾಡಲಾಗುತ್ತದೆ. ಆತ್ಮಗೌರವವಿರುವ ಯಾರೇ ಮಹಿಳೆಗೂ ಸಮಾಜದ ಇಂಥ ಮನೋಭಾವ ಗಾಯಕ್ಕೆ ಉಪ್ಪು ಸವರಿದಂತೆ ನೋವುಂಟುಮಾಡುವಂಥದ್ದು. ಇಂಥ ತಾರತಮ್ಯ ಒಂದು ವ್ಯಕ್ತಿಯ ವಿರುದ್ಧ ಮಾಡಿದ ತಾರತಮ್ಯವಾಗಿರುವುದಿಲ್ಲ. ಇದು ಒಂದು ಗುಂಪಿನ ವಿರುದ್ಧದ ತಾರತಮ್ಯ. ಆದರೆ ಅದಕ್ಕೆ ಬಲಿಯಾಗುವುದು ಮಹಿಳೆ. ಒಬ್ಬ ವ್ಯಕ್ತಿಯಾಗಿ, ಮಹಿಳೆಯರು ದುರ್ಬಲರು(ಆದರೆ ಒಳ್ಳೆಯವರು), ಅವರಿಗೆ ದೂರದರ್ಶಿತ್ವವಿಲ್ಲ(ಆದರೆ ಮನೆಯ ವ್ಯವಹಾರಗಳ ವಿಷಯದಲ್ಲಿ ಇದು ಇರುತ್ತದೆ), ಅವರು ವಿಶ್ವಾಸಾರ್ಹರಲ್ಲ(ಏಕೆಂದರೆ ಅವರ ಮನಸ್ಸು ಇತರ ವಿಷಯಗಳಲ್ಲಿ ಆಸಕ್ತವಾಗಿರುತ್ತದೆ.), ಅಧಿಕಾರ ಚಲಾಯಿಸಲಾರರು(ಪ್ರೀತಿಯ ವಿಷಯದಲ್ಲಿ ಮಾತ್ರ ಚಲಾಯಿಸಬಲ್ಲರು), ಆದ್ದರಿಂದ ಅವರು ಹೆಚ್ಚು ಕಷ್ಟದ ಕೆಲಸವನ್ನು ಮತ್ತು ದೀರ್ಘಕಾಲ ಒಡಿಯುವಂಥ ಕೆಲಸವನ್ನು ಮಾಡಲು ಸೂಕ್ತರಾದವರಲ್ಲ. ಮಹಿಳೆಯರು ಅವಲಂಬಿತರು, ಅಧೀನರು, ವಾಚಾಳಿಗಳು, ಅದೃಷ್ಟರು, ಅತಾರ್ಕಿಕವಾದ ಮೃದು ಮನಸ್ಸಿನವರು ಹಾಗೂ ವಸ್ತುನಿಷ್ಠತೆಯುಳ್ಳದವರು.

ಆದ್ದರಿಂದ ಅವರು ಮನೆಯನ್ನು ನಡೆಸಲು ಮಕ್ಕಳನ್ನು ನೋಡಿಕೊಳ್ಳಲು ಮಾತ್ರ ಶಕ್ತರು. ಹಾಗಿರುವುದೇ ಅವರಿಗೆ ಇಷ್ಟ ಮತ್ತು ಅದನ್ನೇ ಅವರು ಮಾಡುವುದು. ಇದು ಸಮಾಜದಲ್ಲಿ ಮಹಿಳೆಯರ ಬಗ್ಗೆ ಇರುವ ಪರಿಕಲ್ಪನೆ ಮತ್ತು ಸಮಾಜ ಅವರು ನಿರ್ವಹಿಸಬೇಕೆಂದು ನಿರೀಕ್ಷಿಸುವ ಪಾತ್ರ. ಆದ್ದರಿಂದ ಮಹಿಳೆಯರನ್ನು ಸ್ವತಂತ್ರ ವ್ಯಕ್ತಿತ್ವವುಳ್ಳ, ಶಕ್ತಿ ಸಾಮರ್ಥ್ಯಗಳಿರುವ ವ್ಯಕ್ತಿಯನ್ನಾಗಿ ಗುರುತಿಸದೆ ಕೇವಲ ಮೇಲಿನ ಗುಣಗಳಿರುವ (ಅಥವಾ ದೋಷಗಳಿಂದ ಕೂಡಿದ) ತಾರತಮ್ಯಕ್ಕೊಳಗಾದ ಒಂದು ಗುಂಪಿನ ಒಬ್ಬ ಸದಸ್ಯೆಯನ್ನಾಗಿ ಮಾತ್ರ ಕಾಣಲಾಗುತ್ತದೆ. ಹೀಗಾಗಿ ಅವಳಿಗೂ ತಾರತಮ್ಯದಿಂದ ಕೂಡಿದ ನಿಯಮಗಳು ಅನ್ವಯವಾಗುತ್ತದೆ ಮತ್ತು ಶಕ್ತಿಶಾಲಿಗಳೆನಿಸಿಕೊಂಡವರು ತಾರತಮ್ಯದಿಂದ ಕೂಡಿದ ನಿರ್ಧಾರಗಳಿಗೆ ಒಳಪಡಬೇಕಾಗುತ್ತದೆ. ಇದು ಅವಳಿಗೆ ಒಬ್ಬ ವ್ಯಕ್ತಿಯಾಗಿ, ಒಬ್ಬ ಮಹಿಳೆಯಾಗಿ ಮತ್ತು ಒಂದು ಗುಂಪಿನ ಸದಸ್ಯೆಯಾಗಿರುವುದರಿಂದ ಆ ಗುಂಪಿಗೆ ಉಂಟಾದ ಅವಮಾನವಾಗುತ್ತದೆ.

ಪುರುಷ ಪ್ರಧಾನ ಸಮಾಜದ ಈ ಮನೋಭಾವ ಅವರಿಂದ ರಚಿತವಾದ ಕಾನೂನುಗಳಲ್ಲಿಯೂ ಅಂತರ್ಗತವಾಗಿದೆ. ಸಂವಿಧಾನ ಸ್ತ್ರೀ ಪುರುಷರನ್ನು ಸಮಾನವಾಗಿ ಕಂಡಿದ್ದು ಉದ್ಯೋಗ, ರಾಜಕಾರಣ ಹಾಗೂ ಸಮಾಜದಲ್ಲಿ ಸಮಾನ ಸ್ತ್ರೀ ಪುರುಷರನ್ನು ಸಮಾನವಾಗಿ ಕಾಣಬೇಕೆಂದು ವಿಧಿಸಿದ್ದರೂ ಅದರಲ್ಲಿ ಮತ್ತು ಅದರ ಅಡಿಯಲ್ಲಿ ರಚನೆಯಾಗಿರುವ ಕಾನೂನುಗಳಲ್ಲಿ ಪುರುಷ ಪ್ರಧಾನ ಸಮಾಜದ ಚಿಂತನೆಯನ್ನು ಕಾಣಬಹುದಾಗಿದೆ. ಇದು ಸ್ಪಷ್ಟವಾಗುವುದು ಕಾನೂನುಗಳ ಅನ್ವಯ ಮತ್ತು ವ್ಯಾಖ್ಯಾನಗಳ ಮೂಲಕ.

ಮಹಿಳೆಯರನ್ನು ಉದ್ಯೋಗಕ್ಕೆ ನಿಯೋಜಿಸಿಕೊಳ್ಳುವುದರ ಮೇಲೆ ನಿರ್ಬಂಧಗಳನ್ನು ಹೇರುವ ಅನೇಕ ನಿಯಮಗಳು ಹಾಗೂ ವಿನಿಯಮಗಳು ಸಂವಿಧಾನದ ಮೂಲಕ ನೀಡಲಾದ ಸಮಾನತೆಯನ್ನು ಉಲ್ಲಂಘಿಸುತ್ತದೆ. ಇಂಥ ಕಾನೂನುಗಳನ್ನು ನಿಯಮಗಳನ್ನು ಹಾಗೂ ವಿನಿಯಮಗಳನ್ನು ಮಹಿಳೆಯರು ಪ್ರಶ್ನಿಸಿದ್ದಾರೆ. ಹಾಗೆಯೇ ಮಹಿಳೆಯರಿಗೆ ಕಾನೂನುಗಳಲ್ಲಿ ಹಾಗೂ ನಿಯಮಗಳಲ್ಲಿ ಮಾಡಲಾದ ವಿಶೇಷ ಉಪಬಂಧಗಳನ್ನು, ಅವು ಪುರುಷರ ಉದ್ಯೋಗಾವಕಾಶವನ್ನು ಸೀಮಿತಗೊಳಿಸುತ್ತವೆ ಎಂಬ ಕಾರಣಕ್ಕೆ, ಪುರುಷರು ಪ್ರಶ್ನಿಸಿದ್ದಾರೆ.

ಈ ಕೆಲವು ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳನ್ನು ಮೇಲೆ ಹೇಳಿದ ಮೂರು ಬಗೆಯ ವ್ಯಾಖ್ಯಾನಗಳನ್ನು ಅನ್ವಯಿಸಿ ವಿಶ್ಲೇಷಿಸುವ ಮೂಲಕ ಔಪಚಾರಿಕ ಸಮಾನತೆ ಮತ್ತು ವಾಸ್ತವಿಕ ಸಮಾನತೆಯ ಪರಿಕಲ್ಪನೆಗಳು ವ್ಯಕ್ತಗೊಂಡಿರುವ ಪರಿಯನ್ನು ಮತ್ತು ಕಾನೂನು ರಚನೆಯ ಹಿನ್ನೆಲೆಯಲ್ಲಿ ಕಾನೂನಿನ ಆಶಯ ಆ ಮೂಲಕ ಎಷ್ಟರಮಟ್ಟಿಗೆ ಸಾಧಿತವಾಗಿದೆ ಎಂಬುದನ್ನು ತಿಳಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಸಿ.ಬಿ.ಮುತ್ತಮ್ಮ -ವಿ- ಯೂನಿಯನ್ ಆಫ್ ಇಂಡಿಯಾ ಮತ್ತು ಇತರರು (ಎ ೧೯೭೯ ಎಸ್‌ಸಿ ೧೮೬೮) ಪ್ರಕರಣದಲ್ಲಿ, ಅರ್ಜಿದಾರಳು ಭಾರತೀಯ ವಿದೇಶ ಸೇವೆಯಲ್ಲಿ ಯಶಸ್ವಿಯಾದ ಅಭ್ಯರ್ಥಿ. ಆದರೆ ಈಕೆ ವಿವಾಹಿತಳು ಎಂಬ ಕಾರಣಕ್ಕೆ ಅವಳಿಗೆ ಉದ್ಯೋಗವನ್ನು ನಿರಾಕರಿಸಲಾಯಿತು. ವಿವಾಹಿತ ಮಹಿಳೆಯರ ನಿಯೋಜನೆಯನ್ನು ನಿಷೇದಿಸುವ ಮತ್ತು ವಿದೇಶ ಸೇವೆಯ ನಿಯೋಜನೆಯಲ್ಲಿರುವ ಅವಿವಾಹಿತ ಸ್ತ್ರೀಯರು ವಿವಾಹಕ್ಕೆ ಮುನ್ನ ಅನುಮತಿಯನ್ನು ಪಡೆಯಬೇಕೆಂಬುದನ್ನು ಅಗತ್ಯಪಡಿಸುವ ಭಾರತೀಯ ವಿದೇಶ ಸೇವೆಯ ನಿಯಮಗಳನ್ನು ಈ ಪ್ರಕರಣದಲ್ಲಿ ಪ್ರಶ್ನಿಸಲಾಯಿತು. ಸರ್ವೋಚ್ಚ ನ್ಯಾಯಾಲಯ ಈ ಪ್ರಕರಣದಲ್ಲಿ ಹೀಗೆ ಅಭಿಪ್ರಾಯಪಟ್ಟಿತು.-

"ಮಹಿಳಾ ಸದಸ್ಯಳು ತಾನು ಮದುವೆಯಾಗುವ ಮುನ್ನ ಸರ್ಕಾರದ ಅನುಮತಿಯನ್ನು ಪಡೆಯುವುದು ಕಡ್ಡಾಯವಾದರೆ, ಪುರುಷ ಸದಸ್ಯರು ವಿವಾಹವಾದಾಗಲೂ ಸರ್ಕಾರಕ್ಕೆ ಅದೇ ಸಮಸ್ಯೆಯುಂಟಾಗುತ್ತದೆ. ಸೇವೆಯಲ್ಲಿರುವ ಮಹಿಳಾ ಸದಸ್ಯಳ ಕೌಟುಂಬಿಕ ಮತ್ತು ಗೃಹಕೃತ್ಯಗಳು ಅವಳ ದಕ್ಷಕರ್ತವ್ಯ ನಿರ್ವಹಣೆಗೆ ಅಡ್ಡಿ ಬರುವ ಸಂಭವವಿದ್ದರೆ, ಪುರುಷ ಸದಸ್ಯನ ಸಂದರ್ಭದಲ್ಲಿಯೂ ಇದೇ ಪರಿಸ್ಥಿತಿ ಉಂಟಾಗಬಹುದು. ವಿಭಕ್ತ ಕುಟುಂಬಗಳು, ಅಂತರ್ ಖಂಡ ವಿವಾಹಗಳು ಮತ್ತು ಸಾಂಪ್ರದಾಯಿಕವಲ್ಲದ ನಡವಳಿಕೆಗಳ ಇಂದಿನ ಸಂದರ್ಭದಲ್ಲಿ ಮಹಿಳೆಯ ಬಗೆಗಿನ ಈ ಪೂರ್ವ ನಿರ್ಧರಿತ ಭಾವನೆಗಳು ಅರ್ಥವಾಗುವುದಿಲ್ಲ."(ಪು ೧೯೭೦ ಪ್ಯಾರಾ ೮) ನ್ಯಾಯಾಲಯ ಎಲ್ಲ ಸೇವಾ ನಿಯಮಗಳನ್ನು ಪರಿಶೀಲಿಸಿ ಅವುಗಳಲ್ಲಿರುವ ಲಿಂಗತಾರತಮ್ಯವನ್ನು ತೆಗೆದು ಹಾಕುವಂತೆ ಸಹ ಸರ್ಕಾರಕ್ಕೆ ನಿರ್ದೇಶಿಸಿತು.

ವಿದೇಶೀ ಸೇವೆಯಲ್ಲಿ ನಿಯೋಜನೆಯ ಉದ್ದೇಶಗಳಿಗಾಗಿ, ಸ್ತ್ರೀ ಪುರುಷರನ್ನು ಸಮಾನವಾಗಿ ಪರಿಗಣಿಸಬೇಕು ಮತ್ತು ಸ್ತ್ರೀ ಪುರುಷರಿಬ್ಬರೂ ಕರ್ತವ್ಯ ಹಾಗೂ ಕುಟುಂಬ ನಿರ್ವಹಣೆಗಳನ್ನು ತೂಗಿಸಿಕೊಂಡು ಹೋಗಬೇಕು. ಸ್ತ್ರೀ ಪುರುಷರನ್ನು ಕಾನೂನಿನಲ್ಲಿ ಸಮಾನರನ್ನಾಗಿ ಕಾಣಬೇಕು ಎಂದು ಹೇಳುವ ಮೂಲಕ ನ್ಯಾಯಾಲಯ ಔಪಚಾರಿಕ ಸಮಾನತೆಯ ಮತ್ತು ಸಾದೃಶ್ಯತೆಯ ನಿಲುವನ್ನು ತಳೆದಿದೆ. ತೀರ್ಪಿನಲ್ಲಿ ಮಹಿಳೆಗೆ "ದಿ ಜೆಂಟ್ಲರ್ ಆಫ್ ದಿ ಸ್ಪೀಷೀಸ್" ಎಂದು ಹೇಳುವ ಮೂಲಕ ನ್ಯಾಯಾಲಯ ಮಹಿಳೆಯನ್ನು ಭಿನ್ನವಾಗಿ, ದುರ್ಬಲಳನ್ನಾಗಿ ಮತ್ತು ರಕ್ಷಣೆಯ ಅಗತ್ಯವಿರುವವಳನ್ನಾಗಿ ಪರಿಗಣಿಸಿದೆ. ಈ ಬಗೆಯ ನಿಲುವು ಮಹಿಳೆ ದುರ್ಬಲಳು ರಕ್ಷಣೆಯ ಅಗತ್ಯವಿರುವವಳು ಎಂಬ ದೃಷ್ಟಿಕೋನವನ್ನು ಬೆಂಬಲಿಸುತ್ತದೆ. ಆದರೆ ಅದೇ ತೀರ್ಪಿನ ೭ನೇ ಪ್ಯಾರಾದಲ್ಲಿ

"ಎಲ್ಲ ವೃತ್ತಿಗಳಲ್ಲಿ ಮತ್ತು ಎಲ್ಲ ಸಂದರ್ಭಗಳಲ್ಲಿ ಸ್ತ್ರೀ ಪುರುಷರು ಸಮಾನರು ಎಂದು ಸಾಮಾನ್ಯೀಕರಿಸುವುದು ಅಥವಾ ಪ್ರತಿಪಾದಿಸುವುದು ನಮ್ಮ ಉದ್ದೇಶವಲ್ಲ ಮತ್ತು ಒಂದು ನಿರ್ದಿಷ್ಟ ಉದ್ಯೋಗಕ್ಕೆ ಅವರ ವಿಶಿಷ್ಟತೆಯಿಂದಾಗಿ, ಸ್ತ್ರೀ ಅಥವಾ ಪುರುಷನನ್ನು ಮಾತ್ರ ಆಯ್ಕೆ ಮಾಡುವ

ಸಂದರ್ಭವುಂಟಾದಾಗ, ಹಾಗೆ ಮಾಡುವ ಅಗತ್ಯವನ್ನು ತಳ್ಳಿಹಾಕುವುದಿಲ್ಲ" ಎಂದು ಹೇಳುವ ಮೂಲಕ ಸ್ತ್ರೀ ಪುರುಷರಲ್ಲಿ ಭಿನ್ನತೆಯನ್ನು ಗುರುತಿಸುವ ಅಗತ್ಯ ಬೀಳುವ ಸಾಧ್ಯತೆಯನ್ನು ಮುಕ್ತವಾಗಿರಿಸಿದೆ.

ಉದ್ಯೋಗದಲ್ಲಿ ಮಹಿಳೆಗೆ ಸಮಾನಾವಕಾಶ ಮತ್ತು ಸಮಾನ ಸೌಲಭ್ಯಗಳು ದೊರೆಯಬೇಕೆನ್ನುವ ವಿಷಯದ ಸಂದರ್ಭದಲ್ಲಿ, ಏರ್ ಇಂಡಿಯಾ -ವಿ- ನರ್ಗೀಸ್ ಮಿರ್ಜಾ(ಆ ೧೯೮೧ ಶಭ ೧೮೨೯) ಪ್ರಕರಣ ಪ್ರಮುಖವಾದುದು. ಇದರಲ್ಲಿ ಏರ್ ಹೋಸ್ಟೆಸ್ ಮತ್ತು ಸ್ಟೀವರ್ಡ್‌ಗಳ ಉದ್ಯೋಗ ಷರತ್ತುಗಳ ನಡುವೆ ಇದ್ದ ತಾರತಮ್ಯವನ್ನು ಪ್ರಶ್ನಿಸಲಾಗಿತ್ತು. ಸೇವೆಗೆ ಸೇರಿದ ನಾಲ್ಕು ವರ್ಷಗಳೊಳಗೆ ಏರ್ ಹೋಸ್ಟೆಸ್ ವಿವಾಹವಾದರೆ, ಅವಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂಬ ಸೇವಾ ಕರಾರಿನ ಷರತ್ತಿಗೆ ಸರ್ವೋಚ್ಚ ನ್ಯಾಯಾಲಯ ಅನುಮತಿಸಿ, ಆದರ ಅವಳು ಗರ್ಭಿಣಿಯಾದ ಕೂಡಲೇ ಕೆಲಸದಿಂದ ವಜಾ ಮಾಡಬಹುದೆಂಬ ಷರತ್ತನ್ನು ಅಸಿಂಧುವೆಂದು ತೀರ್ಪು ನೀಡಿತು.

ವಿವಾಹವಾಗುವುದರ ಮೇಲೆ ಹಾಕಲಾಗಿರುವ ನಿರ್ಬಂಧವನ್ನು ಎತ್ತಿ ಹಿಡಿದುದಕ್ಕೆ ನೀಡಿದ ಸಮರ್ಥನೆಯೆಂದರೆ, ಇಂಥ ನಿರ್ಬಂಧ ರಾಜ್ಯದ ಕುಟುಂಬ ನಿಯಂತ್ರಣ ನೀತಿಯನ್ನು ಪ್ರೋತ್ಸಾಹಿಸುವುದೇ ಅಲ್ಲದೆ ಕೆಲಸಕ್ಕೆ ಸೇರಿದ ನಂತರ ನಾಲ್ಕು ವರ್ಷಗಳ ಕಾಯುವ ಅವಧಿ ಅವಳಿಗೆ ವೈವಾಹಿಕ ಜವಾಬ್ದಾರಿಯನ್ನು ನಿರ್ವಹಿಸಲು ಹೆಚ್ಚಿನ ಪ್ರೌಢತೆಯನ್ನು ನೀಡುತ್ತದೆ ಮತ್ತು ವಿವಾಹ ನಿರ್ಬಂಧವನ್ನು ತೆಗೆಯುವುದರಿಂದ ಕಂಪನಿಯು ಹಣಕಾಸು ನಷ್ಟವನ್ನು ಭರಿಸಬೇಕಾಗುತ್ತದೆ ಎಂಬುದು. ಆದ್ದರಿಂದ ಈ ನಿಯಮದಲ್ಲಿ 'ಮಹಿಳೆ' ಎಂಬುದಾಗಿ ಪರಿಗಣಿಸಿರುವುದು ಅವೈಚಾರಿಕವಾದುದು ಅಲ್ಲ, ಆದ್ದರಿಂದ ಇದು ಸಂವಿಧಾನದ ೧೪ನೇ ಅನುಚ್ಛೇದವನ್ನು ಉಲ್ಲಂಘಿಸುವುದಿಲ್ಲ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು.

ಅನಂತರ, ನ್ಯಾಯಾಲಯ ಏರ್ ಹೋಸ್ಟೆಸ್ ಗರ್ಭಿಣಿಯಾದಾಗ ರಾಜೀನಾಮೆ ನೀಡಬೇಕೆಂಬ ಪ್ರಶ್ನಿತ ನಿಯಮವನ್ನು ಪರೀಕ್ಷಿಸಿತು. ಇಂಥ ಒಂದು ನಿಯಮ ಮಗುವನ್ನು ಪಡೆಯದಂತೆ ಅವಳನ್ನು ತಡೆಯುವುದರಿಂದ, ಮಹಿಳೆಗೆ ಸಹಜವಾದ ಹಕ್ಕಿನಿಂದ ಅವಳನ್ನು ವಂಚಿತಳನ್ನಾನಗಿಸುತ್ತದೆ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. ಆದ್ದರಿಂದ ಗರ್ಭಿಣಿಯಾಗದಂತೆ ಹಾಕುವ ನಿರ್ಬಂಧ ಅವೈಚಾರಿಕವಾದುದು ಮತ್ತು ಅಸಮರ್ಥನೀಯವಾದದ್ದು, ಆದ್ದರಿಂದ ಅದು ೧೪ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆ ಎಂದು ತೀರ್ಪು ನೀಡಿತು.

ಈ ತೀರ್ಪು ಮಹಿಳೆಯರ ಹಕ್ಕುಗಳನ್ನು ಎತ್ತಿ ಹಿಡಿದ ತೀರ್ಪು ಆದ್ದರಿಂದ ಮಹಿಳಾ ಸಮಾನತೆಯ ಸಂದರ್ಭದಲ್ಲಿ ಇದೊಂದು ಮೈಲಿಗಲ್ಲು ಎಂದು ಪರಿಗಣಿಸಲಾಗಿದೆ. ಆದರೆ ಔಪಚಾರಿಕ ಮತ್ತು ವಾಸ್ತವಿಕ ಸಮಾನತೆಯ ದೃಷ್ಟಿಕೋನದಿಂದ ಈ ತೀರ್ಪನ್ನು ಪರಿಶೀಲಿಸಿದಾಗ, ಇಲ್ಲಿಯೂ ಸಹ ಪುರುಷ ಹಾಗೂ

ಮಹಿಳಾ ಉದ್ಯೋಗಿಗಳ ನಡುವೆ ಇರುವ ವಾಸ್ತವಿಕ ಔಪಚಾರಿಕ ಸಮಾನತೆ ಅಸಮಾನತೆಯ ವಿಶ್ಲೇಷಣೆಯನ್ನು ಮಾಡದೆ ಹಾಗೂ ಸಾದೃಶ್ಯತೆಯನ್ನು ಆಧರಿಸಿ ತೀರ್ಪು ನೀಡಿರುವುದು ಸ್ಪಷ್ಟವಾಗುತ್ತದೆ.

ಎರಡನೆಯದಾಗಿ, ವಿವಾಹದ ಸಂದರ್ಭದಲ್ಲಿ ಸ್ತ್ರೀ ಪುರುಷರಿಗಿರುವ ವ್ಯತ್ಯಾಸಗಳನ್ನು ಪರಿಗಣಿಸುವಾಗಲೂ ಮಹಿಳೆಯ ಬಗ್ಗೆ ತಳೆದಿರುವ ನಿಲುವು ರಕ್ಷಣಾತ್ಮಕವಾದುದು. ಎಂದರೆ ರಕ್ಷಿಸುವುದಕ್ಕಾಗಿ ಅವರನ್ನು ಭಿನ್ನವಾಗಿ ಪರಿಗಣಿಸಬೇಕು ಎಂಬುದು. ಗರ್ಭಧಾರಣೆ ಮತ್ತು ಪ್ರಸೂತಿ ಸೌಲಭ್ಯಗಳ ವಿಷಯದಲ್ಲಿಯೂ, ನ್ಯಾಯಾಲಯ ತಳೆದಿರುವ ನಿಲುವು ರಕ್ಷಣಾತ್ಮಕವಾದುದು ಮತ್ತು ಅಗತ್ಯಾತ್ಮಕವಾದುದು. ಇವೆರಡನ್ನು ಸ್ತ್ರೀ ಪುರುಷರ ನಡುವೆ ಇರುವ ದೈಹಿಕ ವ್ಯತ್ಯಾಸಗಳ ಫಲ ಎಂದು ಪರಿಗಣಿಸದೆ ಇದನ್ನು ಸ್ತ್ರೀ ಪುರುಷರು ವಹಿಸಬೇಕಾಗಿರುವ ಪಾತ್ರಗಳ ನಡುವಿನ ವ್ಯತ್ಯಾಸವನ್ನಾಗಿ ವಿಶ್ಲೇಷಿಸಲಾಗಿದೆ. ಇದು ಇಂದಿನ ಸ್ತ್ರೀವಾದಿಗಳ ಈ ತೀರ್ಪಿನ ವಿಶ್ಲೇಷಣೆ.

ಪ್ರಸ್ತುತ ಅಧ್ಯಯನದ ಮಟ್ಟಿಗೆ ತೀರ್ಪು ನೀಡುವ ನ್ಯಾಯಾಧೀಶರುಗಳೂ ಅಂದಿನ ಸಮಾಜದಿಂದ ಬಂದವರೇ ಆಗಿರುವುದರಿಂದ, ಅವರ ತೀರ್ಪುಗಳು ಅಂದಂದಿನ ಸಮಾಜದ ದೃಷ್ಟಿಕೋನವನ್ನು ಅಳವಡಿಸಿಕೊಂಡಿರುತ್ತವಷ್ಟೇ ಅಲ್ಲದೆ ಅಂದಿನ ಸಮಾಜ ಒಪ್ಪಿ ಅನುಸರಿಸುವ ಅಲಿಖಿತ ಸಮಾನಾಂತರ ನೀತಿ ಸಂಹಿತೆಯ ವ್ಯಾಖ್ಯಾನವೂ ಆಗಿರುತ್ತದೆ ಎಂಬುದನ್ನು ಮರೆಯುವಂತಿಲ್ಲ ಮತ್ತು ಅಂಥ ತೀರ್ಪುಗಳು ಮಹಿಳೆಯರಿಗೆ ಸಮಾನತೆಯನ್ನು ತಂದುಕೊಡುವಲ್ಲಿ ಯಾವ ಪಾತ್ರವನ್ನು ವಹಿಸಿದವು ಎಂಬುದು ಇಂಥ ತೀರ್ಪುಗಳು ಪೂರ್ವ ನಿದರ್ಶನಗಳಾಗಿ ಮಹತ್ವದವುಗಳಾಗಿರುವುದರಿಂದ, ಕಾನೂನಿನ ಚೌಕಟ್ಟಿನಲ್ಲಿ ನ್ಯಾಯ ಒದಗಿಸಿಕೊಡುವ ಸಂದರ್ಭದಲ್ಲಿ ಮಹತ್ವದ್ದಾಗುತ್ತದೆ.

ಮಾಯಾದೇವಿ -ವಿ- ಮಹಾರಾಷ್ಟ್ರ ರಾಜ್ಯ(೧೯೮೬ ಐಎಸ್‌ಸಿಆರ್ ೭೪೩) ಪ್ರಕರಣದಲ್ಲಿ ವಿವಾಹಿತ ಮಹಿಳೆಯರು ಸರ್ಕಾರೀ ಕೆಲಸಕ್ಕೆ ಅರ್ಜಿ ಹಾಕುವ ಮುನ್ನ ತಮ್ಮ ಗಂಡಂದಿರ ಅನುಮತಿಯನ್ನು ಪಡೆಯಬೇಕೆಂಬ ನಿಯಮವನ್ನು ಅದು ಸಂವಿಧಾನದ ೧೪, ೧೫ ಮತ್ತು ೧೬ನೇ ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆಂದು, ಪ್ರಶ್ನಿಸಲಾಗಿತ್ತು. ಈ ಪ್ರಕರಣದಲ್ಲಿ, ಸರ್ವೋಚ್ಚ ನ್ಯಾಯಾಲಯ-

"ಈ ವಿಷಯ ಸಂಪೂರ್ಣವಾಗಿ ಪತಿ ಪತ್ನಿಯರಿಗೆ ಸಂಬಂಧಿಸಿದ ವೈಯಕ್ತಿಕ ವಿಷಯ. ಇಂದಿನ ಸಾಮಾಜಿಕ ಸಂದರ್ಭದಲ್ಲಿ ಪತಿ ತನ್ನ ಇಚ್ಛೆಗನುಸಾರ ಪತ್ನಿ ಆರ್ಥಿಕವಾಗಿ ಸ್ವತಂತ್ರಳಾಗಿರುವುದನ್ನು ತಡೆಯಬಹುದು ಎಂಬುದನ್ನು ಊಹಿಸಲೂ ಆಗದು" ಎಂದು ಅಭಿಪ್ರಾಯಪಟ್ಟಿತು ಮತ್ತು ಪತಿಯ ಒಪ್ಪಿಗೆಯನ್ನು ಪಡೆಯಬೇಕೆಂಬ ನಿಯಮವನ್ನು ಅಸಂವೈಧಾನಿಕವೆಂದು ತೀರ್ಪು ನೀಡಿತು. ನ್ಯಾಯಾಲಯ ಮಹಿಳೆಯರ ಆರ್ಥಿಕ ಸ್ವಾತಂತ್ರ್ಯದ ಮತ್ತು ಅದನ್ನು ಪ್ರೋತ್ಸಾಹಿಸದಿರುವ ಷರತ್ತುಗಳನ್ನು ಹಾಕದಿರುವುದರ

ಮಹತ್ವವನ್ನು ಒತ್ತಿ ಹೇಳಿತು. ಈ ತೀರ್ಪಿನಲ್ಲಿ ಔಪಚಾರಿಕ ಸಮಾನತೆ ಮತ್ತು ಸಾದೃಶ್ಯತೆಯ ನಿಲುವನ್ನು ಕಾಣಬಹುದು. ಅಲ್ಲದೆ ಒಪ್ಪಿಗೆಯನ್ನು ಪಡೆಯಬೇಕೆಂಬ ಷರತ್ತು ಮಹಿಳೆಯ ಅಧೀನ ಸ್ಥಾನಮಾನವನ್ನು ಬೆಂಬಲಿಸಿದಂತಾಗುತ್ತದೆ ಎಂಬುದನ್ನು ಗುರುತಿಸುವ ಮೂಲಕ ತಳೆದಿರುವ ವಾಸ್ತವಿಕ ಸಮಾನತೆಯ ನಿಲುವನ್ನೂ ಕಾಣಬಹುದು. ಈ ದೃಷ್ಟಿಯಿಂದ, ಈ ತೀರ್ಪು ಮಹತ್ವದ್ದಾಗಿದೆ.

ಮೇಲಿನ ಪ್ರಕರಣಗಳಲ್ಲಿ, ಉದ್ಯೋಗಕ್ಕೆ ಸಂಬಂಧಪಟ್ಟ ನಿಯಮಗಳು ಸ್ತ್ರೀ ಪುರುಷರ ನಡುವೆ ತಾರತಮ್ಯವೆಸಗಿವೆಯೆಂದು ಆರೋಪಿಸಿ ಅವುಗಳನ್ನು ಪ್ರಶ್ನಿಸಿ ಹೂಡಿದ ಮೊಕದ್ದಮೆಗಳಾಗಿವೆ.

ಆದರೆ, ೧೫(೩)ರ ಅಡಿಯಲ್ಲಿ, ಸ್ತ್ರೀಯರಿಗೆ ವಿಶೇಷ ಸೌಲಭ್ಯ ಕಲ್ಪಿಸಿ ಮಾಡಲಾಗುವ ಯಾವುದೆ ಉಪಬಂಧ ಪುರುಷರ ವಿರುದ್ಧ ತಾರತಮ್ಯವೆಸಗುತ್ತದೆಂದು, ಆ ಮೂಲಕ ಅವರ ಉದ್ಯೋಗಾವಕಾಶಗಳು ಸೀಮಿತವಾಗುತ್ತದೆಂದು ಆರೋಪಿಸಿ ಅನೇಕ ಅಂಥ ನಿಯಮಗಳನ್ನು ಪುರುಷರಿಂದ ಪ್ರಶ್ನಿಸಲಾಗಿದೆ.

ಶಂಶೀರ್ ಸಿಂಗ್ -ವಿ- ರಾಜ್ಯ(ಎ ೧೯೭೦ ಐ ಅಂಡ್ ಎಚ್ ೩೭೨) ಪ್ರಕರಣದಲ್ಲಿ ರಾಜ್ಯ ಶಿಕ್ಷಣ ವ್ಯವಸ್ಥೆಯ ನಿಯೋಜನೆಯ ಪದ್ಧತಿಯು ೧೬(೨) ಅನುಚ್ಛೇದವನ್ನು ಉಲ್ಲಂಘಿಸುತ್ತದೆಂದು ಅದನ್ನು ಪ್ರಶ್ನಿಸಲಾಗಿತ್ತು. ಪ್ರಶ್ನಿತ ಶಿಕ್ಷಣ ಪದ್ಧತಿಯು ಎರಡು ಶಾಖೆಗಳನ್ನು ಹೊಂದಿತ್ತು. ಒಂದು ಸಂಪೂರ್ಣವಾಗಿ ಮಹಿಳೆಯರದಾದರೆ ಇನ್ನೊಂದು ಸಂಪೂರ್ಣವಾಗಿ ಪುರುಷರದು. ಮಹಿಳೆಯರ ಶಾಖೆಯಲ್ಲಿ, ಸಹಾಯಕ ಜಿಲ್ಲಾ ಪರಿವೀಕ್ಷಕರಿಗೆ ವಿಶೇಷ ವೇತನ ಹೆಚ್ಚಳವನ್ನು ನೀಡಲಾಗಿತ್ತು. ತರುವಾಯ, ಶಿಕ್ಷಣ ಇಲಾಖೆಯನ್ನು ಮರುಸಂಘಟನೆ ಮಾಡಿದಾಗ, ಸ್ತ್ರೀ ಪುರುಷ ಸಹಾಯಕ ಜಿಲ್ಲಾ ಪರಿವೀಕ್ಷಕರಿಬ್ಬರಿಗೂ ಬ್ಲಾಕ್ ಶಿಕ್ಷಣ ಅಧಿಕಾರಿಗಳೆಂದು ಮರುಪದನಾಮ ನೀಡಲಾಯಿತು. ಪುರುಷ ಸ್ತ್ರೀ ಅಧಿಕಾರಿಗಳಿಬ್ಬರೂ ಒಂದೇ ರೀತಿಯ ಕೆಲಸವನ್ನು ನಿರ್ವಹಿಸುತ್ತಿದ್ದರು. ಪುರುಷ ಅರ್ಜಿದಾರರು ಈ ಸಂದರ್ಭದಲ್ಲಿ, ವೇತನ ಹೆಚ್ಚಳವನ್ನು, ಲಿಂಗಾಧಾರಿತ ತಾರತಮ್ಯವೆಂದೂ, ಹಾಗಾಗಿ ಅದು ೧೬(೨)ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆಂದೂ, ಅದನ್ನು ಪ್ರಶ್ನಿಸಿದರು. ಇಲ್ಲಿ ತಲೆ ಎತ್ತಿದ ಪ್ರಶ್ನೆಯೆಂದರೆ ೧೬(೨) ನೇ ಅನುಚ್ಛೇದವನ್ನು ವ್ಯಾಖ್ಯಾನಿಸುವಾಗ ೧೫(೩)ನೇ ಅನುಚ್ಛೇದದ ನೆರವು ಪಡೆಯಬಹುದೇ ಎಂಬುದು. ಇದಕ್ಕೆ ಉತ್ತರವಾಗಿ, ಉಚ್ಚನ್ಯಾಯಾಲಯದ ಪೂರ್ಣಪೀಠ, ೧೪, ೧೫ ಮತ್ತು ೧೬ನೇ ಅನುಚ್ಛೇದಗಳು ಒಂದೇ ಸಂಹಿತೆಯಾಗುತ್ತದೆ. ಆದ್ದರಿಂದ ೧೬(೨)ರ ವ್ಯಾಪ್ತಿಯನ್ನು ನಿರ್ಧರಿಸುವಾಗ ೧೫(೩)ರ ನೆರವು ಪಡೆಯಬಹುದು ಎಂದು ಅಭಿಪ್ರಾಯಪಟ್ಟಿತು. ಆದ್ದರಿಂದ ಅರ್ಜಿಯನ್ನು ವಜಾಮಾಡಿ, ವೇತನ ಹೆಚ್ಚಳವನ್ನು ಎತ್ತಿ ಹಿಡಿಯಿತು. ಇಲ್ಲಿ ಸಮಾನತೆ ಎಂಬುದು ಕೆಲವು ಸಂದರ್ಭಗಳಲ್ಲಿ ಭಿನ್ನ ಪರಿಗಣನೆಗೆ ಮಾನ್ಯತೆ ನೀಡುವ ವಾಸ್ತವಿಕ ಸಮಾನತೆಯನ್ನು ಆಧರಿಸಲಾಗಿದೆ ಎನ್ನಬಹುದು.

ವಾಲ್ಟರ್ ಆಲ್ಫ್ರಡ್ ಬೈಡ್ -ವಿ- ಯೂನಿಯನ್ ಆಫ್ ಇಂಡಿಯಾ (ಎ ೧೯೭೬ ಡಿಡಿ ೩೦೨) ಪ್ರಕರಣದಲ್ಲಿ ಪ್ರಧಾನವಾಗಿ ಮಹಿಳಾ ಸಂಸ್ಥೆಯಾದ ನರ್ಸಿಗ್ ಶಾಲೆಯಲ್ಲಿ ಹಿರಿಯ ನರ್ಸ್ ೯ ಶಿಕ್ಷಕರ ಸ್ಥಾನಕ್ಕೆ ಪುರುಷ ಅಭ್ಯರ್ಥಿಗಳನ್ನು ಅನರ್ಹರನ್ನಾಗಿಸುವ ನೇಮಕಾತಿ ನಿಯಮ ತಾರತಮ್ಯವೆಣಿಸುವಂಥದ್ದೆಂದು, ಆದ್ದರಿಂದ ೧೬(೨)ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆಂದು ಆರೋಪಿಸಿ ಅದರ ಸಿಂಧುತ್ವವನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಈ ಪ್ರಕರಣದಲ್ಲಿ, ಲಿಂಗಾಧಾರಿತ ವರ್ಗೀಕರಣವನ್ನು ೧೬(೨) ಅನುಚ್ಛೇದ ಅನುಮತಿಸುವುದಿಲ್ಲ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. ಅಲ್ಲದೆ ಉದ್ಯೋಗ ವಿಷಯಗಳಲ್ಲಿ ಸ್ತ್ರೀ ಪುರುಷರ ನಡುವೆ ಸಂಪೂರ್ಣ ಸಮಾನತೆಯ ಪರಿಕಲ್ಪನೆಯನ್ನು ೧೬(೨)ನೇ ಅನುಚ್ಛೇದ ಒಳಗೊಂಡಿದೆ ಎಂದೂ ಅಭಿಪ್ರಾಯಪಟ್ಟಿತು. ಇಲ್ಲಿ ನ್ಯಾಯಾಲಯ ಔಪಚಾರಿಕ ಸಮಾನತೆಯನ್ನು ಆಧರಿಸಿತು. ಇದರ ಪ್ರಕಾರ ಉದ್ಯೋಗದ ವಿಷಯಗಳಲ್ಲಿ ಸ್ತ್ರೀ ಪುರುಷರನ್ನು ಸಮಾನವಾಗಿ ಪರಿಗಣಿಸಬೇಕು. ಸಾದೃಶ್ಯತೆಯ ಆಧಾರದ ಮೇಲೆ ಮಾಡುವ ವ್ಯಾಖ್ಯಾನದಲ್ಲಿ, ಮಹಿಳೆಗೆ ಅನುಕೂಲವಾಗುವಂತಿದ್ದರೂ ಭಿನ್ನವಾಗಿ ಪರಿಗಣಿಸಬಾರದು ಎಂಬುದರ ಜೊತೆಗೆ ಲಿಂಗದ ಆಧಾರದ ಮೇಲೆ ಯಾವುದೇ ರೀತಿಯ ಭಿನ್ನ ಪರಿಗಣನೆಗೆ ಅವಕಾಶ ನೀಡುವುದಿಲ್ಲ.

ಅದೇ ತೀರ್ಪಿನಲ್ಲಿ ನ್ಯಾಯಾಲಯ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೀಗೆ ಹೇಳಿತು. "ಮಹಿಳೆಯುರು ಒಂದು ವರ್ಗವಾಗಿ ಅನರ್ಹಳಾಗುವ ಮಾನವನ ಚಟುವಟಿಕೆಯ ಯಾವುದೇ ಕ್ಷೇತ್ರವಿದೆಯೆಂದು ಅಥವಾ ಮಹಿಳೆಯರು ಯೋಗ್ಯರಲ್ಲವೆಂದು ಹೇಳುವ ಯಾವುದೇ ಕೆಲಸವಿದೆಯೆಂದು ಯಾರೂ ಇಂದು ಹೇಳುವುದು ಸಾಧ್ಯವಿಲ್ಲ."

ಇಲ್ಲಿ ಕಾನೂನಿನ ಉದ್ದೇಶಕ್ಕೆ ಸ್ತ್ರೀ ಪುರುಷರಿಬ್ಬರೂ ಸಮಾನರು ಎಂಬ ನಿಲುವನ್ನು ತಳೆಯಲಾಗಿದೆ. ವಾಸ್ತವಿಕ ಸಮಾನತೆಯ ಮಾದರಿಯ ಸಂದರ್ಭದಲ್ಲಿ, ಆರ್ಥಿಕ ಅವಲಂಬನೆಯಿಂದ ಹಿಡಿದು ಶೈಕ್ಷಣಿಕ ಹಿಂದುಳಿದಿರುವಿಕೆಯವರೆಗೆ ಮಹಿಳೆಯರು ಎದುರಿಸುತ್ತಿರುವ ಸಮಾಜ ನಿರ್ಮಿತ ಅಸಮಾನತೆಗಳ ಬಗ್ಗೆ ಸರಿಯಾದ ತೀರ್ಪು ನೀಡಲು ಮೇಲಿನ ತೀರ್ಪಿನಲ್ಲಿ ತಳೆದ ನಿಲುವು ಸಹಕಾರಿಯಾಗುತ್ತದೆ. ಔಪಚಾರಿಕ ಸಮಾನತೆಯ ಮತ್ತು ಲಿಂಗ ವ್ಯತ್ಯಾಸಗಳಿಗೆ ಸಾದೃಶ್ಯತೆಯ ನಿಲುವು ತಳೆದುದರಿಂದ ಸ್ತ್ರೀ ಅಥವಾ ಪುರುಷರನ್ನು ಅರ್ಜಿ ಸಲ್ಲಿಸುವುದರಿಂದ ತಡೆಯುವ ನಿಯಮ ೧೬(೨)ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆಂಬ ನಿಲುವನ್ನು ನ್ಯಾಯಾಲಯ ತಳೆಯಿತು. ಈ ತೀರ್ಪಿನಲ್ಲಿ ತಳೆದ ಔಪಚಾರಿಕ ಸಮಾನತೆ ಹಾಗೂ ಸಾದೃಶ್ಯತೆಯ ನಿಲುವಿನಿಂದಾಗಿ, ಸ್ತ್ರೀ ಪುರುಷರನ್ನು ಬೇರೆ ಬೇರೆಯಾಗಿ ಪರಿಗಣಿಸಿದುದರ ಉದ್ದೇಶವನ್ನು ವಿಶ್ಲೇಷಣೆ ಮಾಡಿಲ್ಲ. ಹಾಗಾಗಿ, ಹೀಗೆ ಭಿನ್ನವಾಗಿ ಪರಿಗಣಿಸಿದುದರಿಂದಾಗಿ ಮಹಿಳೆಗೆ ಅನುಕೂಲ, ಅಥವಾ ಅನನುಕೂಲವನ್ನುಂಟು ಮಾಡುವ ಉದ್ದೇಶ ಹೊಂದಿತ್ತೇ ಎಂಬ ಅಂಶವನ್ನು

ಸಹ ಪರಿಗಣಿಸಲಾಗಿಲ್ಲ. ಆದರೆ ಮಹಿಳೆಗೆ ವಾಸ್ತವಿಕ ಸಮಾನತೆಯನ್ನು ದೊರಕಿಸಿಕೊಡಬೇಕಾದ ದೃಷ್ಟಿಯಿಂದ ನೋಡಿದರೆ, ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳು ವೈವಾಹಿಕ ಸ್ಥಾನಮಾನ, ಆರೋಗ್ಯ ಮತ್ತು ಶಿಕ್ಷಣ ಈ ಎಲ್ಲವೂ ಸ್ತ್ರೀಗೆ ಸಂಬಂಧಿಸಿದಂತೆ ಮುಖ್ಯವಾಗುತ್ತದೆ ಮತ್ತು ಸ್ತ್ರೀ ಪುರುಷರನ್ನು ಭಿನ್ನವಾಗಿ ಪರಿಗಣಿಸುವ ಸಂದರ್ಭದಲ್ಲಿ, ಈ ಕಾರಣಗಳಿಗಾಗಿ, ನೇರ್ಪಡೆಯ ನಿಲುವು ಹೆಚ್ಚು ಸೂಕ್ತವಾದುದಾಗುತ್ತದೆ.

ಸಂವಿಧಾನ ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ನೀಡಿದ್ದರೂ, ಸಿವಿಲ್ ಹಕ್ಕುಗಳಿಗೆ ಸಂಬಂಧಿಸಿದಂತೆ ತಾರತಮ್ಯ ಕಾನೂನು ರಚನೆಯಲ್ಲಿಯೇ ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಮತ್ತು ಈ ತಾರತಮ್ಯವಿರುವ ಶಾಸನಗಳನ್ನು ನ್ಯಾಯಾಲಯಗಳು ಅನೇಕ ಬಾರಿ ಎತ್ತಿ ಹಿಡಿದಿವೆ.

ಸೂಚಾ ಸಿಂಗ್ ಬಜ್ವ ಮತ್ತು ಸಾಧು ಸಿಂಗ್ ಬಜ್ವ-ವಿ-ಪಂಜಾಬ್ ರಾಜ್ಯ ಪ್ರಕರಣದಲ್ಲಿ (ಎ ೧೯೭೪ ಐ ಅಂಡ್ ಎಚ್ ೧೬೨), ಪಂಜಾಬ್ ಭೂ ಸುಧಾರಣಾ ಅಧಿನಿಯಮದ ೫ನೇ ಪ್ರಕರಣವನ್ನು, ಅದು ಭೂ ಹಿಡುವಳಿದಾರ ಅಥವಾ ಭೂ ಮಾಲೀಕನು ತನ್ನ ವಯಸ್ಕ ಗಂಡುಮಕ್ಕಳ ಸಂದರ್ಭದಲ್ಲಿ ಅನುಮತಿಸಲಾಗುವ ಪ್ರತ್ಯೇಕ ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲು ಅನುಮತಿಸುತ್ತದೆ. ಆದರೆ ವಯಸ್ಕ ಹೆಣ್ಣು ಮಕ್ಕಳ ಸಂದರ್ಭದಲ್ಲಿ ಹೀಗೆ ಆಯ್ಕೆ ಮಾಡಿಕೊಳ್ಳುವ ಅವಕಾಶ ಕೊಡುವುದಿಲ್ಲ ಎಂಬ ಕಾರಣದ ಮೇಲೆ ಪ್ರಶ್ನಿಸಲಾಯಿತು. ಈ ಪ್ರಕರಣದಲ್ಲಿ, ಉಚ್ಚ ನ್ಯಾಯಾಲಯ, 'ಶಾಸನ ಸಂಬಂಧಪಟ್ಟಿರುವುದು ಭೂ ಮಾಲೀಕ ಅಥವಾ ಭೂ ಹಿಡುವಳಿದಾರನಿಗೇ ಹೊರತು ಅವನ ಅಥವಾ ಅವಳ ಮಕ್ಕಳಿಗಲ್ಲ. ೫ನೇ ಪ್ರಕರಣದಲ್ಲಿ ಹೇಳಿರುವ ಪ್ರತಿಯೊಬ್ಬ ವ್ಯಕ್ತಿಗೂ, ಪುರುಷನಿರಲಿ ಅಥವಾ ಮಹಿಳೆಯಿರಲಿ, ಒಂದೇ ವಿಸ್ತೀರ್ಣದ ಪ್ರತ್ಯೇಕ ಭೂಮಿಯನ್ನು ಅನುಮತಿಸಲಾಗಿದೆ ಮತ್ತು ಲಿಂಗದ ಆಧಾರದ ಮೇಲೆ ಒಬ್ಬ ಮಾಲೀಕನಿಗೂ ಮತ್ತು ಇನ್ನೊಬ್ಬ ಮಾಲೀಕನಿಗೂ, ಅವನು ಹೊಂದುವ ಭೂಮಿಯ ವಿಸ್ತೀರ್ಣದಲ್ಲಿ ತಾರತಮ್ಯ ಇಲ್ಲ" ಎಂದು ಅಭಿಪ್ರಾಯಪಟ್ಟಿತು. ಇದಲ್ಲದೆ ಮೇಲಿನ ನಿಯಮದಲ್ಲಿ ವಯಸ್ಕ ಗಂಡುಮಕ್ಕಳು ಮತ್ತು ವಯಸ್ಕ ಹೆಣ್ಣು ಮಕ್ಕಳ ನಡುವೆ ತೋರಿಸಿರುವ ತಾರತಮ್ಯಕ್ಕೆ ಕಾರಣ ಹೆಣ್ಣು ಮಕ್ಕಳು ವಿವಾಹವಾದ ನಂತರ ಇನ್ನೊಂದು ಕುಟುಂಬಕ್ಕೆ ಹೋಗುತ್ತಾರೆ ಎಂಬ ಕಾರಣವನ್ನು ನೀಡಿ ಕಾನೂನಿನಲ್ಲಿ ವಿಧಿಸಲಾದ ನಿರ್ಬಂಧವನ್ನು ಎತ್ತಿ ಹಿಡಿಯಿತು. ಮೇಲಿನ ಕಾನೂನಿನಲ್ಲಿ ಭೂ ಮಾಲೀಕರು ಭೂ ಹಿಡುವಳಿದಾರರ ಬಗ್ಗೆ ಹೇಳಿರುವುದರಿಂದ ಮತ್ತು ಅಲ್ಲಿ ಪುರುಷ ಮತ್ತು ಸ್ತ್ರೀ ಭೂ ಹಿಡುವಳಿದಾರರಲ್ಲಿ ವ್ಯತ್ಯಾಸ ಮಾಡಿಲ್ಲವಾದ್ದರಿಂದ ಅಲ್ಲಿ ಅಸಮಾನತೆಯಿಲ್ಲ ಎಂಬ ನಿಲುವನ್ನು ನ್ಯಾಯಾಲಯ ತಳೆಯಿತು. ಔಪಚಾರಿ ಸಮಾನತೆಯ ನಿಲುವನ್ನು ತಳೆಯುವ ಮೂಲಕ, ವರ್ಗೀಕರಣವನ್ನು ಮತ್ತು ಹೋಲಿಕೆಯನ್ನು ತಮ್ಮ ಅಭಿಪ್ರಾಯಕ್ಕೆ ತಕ್ಕಂತೆ ಹೇಗೆ ಬದಲಿಸಿಕೊಳ್ಳಬಹುದು ಎಂಬುದಕ್ಕೆ ಇದು ಒಂದು ಉದಾಹರಣೆ. ಇಲ್ಲಿ ಈ ಕಾನೂನಿನಲ್ಲಿ ಮೇಲ್ನೋಟಕ್ಕೆ ಸ್ಪಷ್ಟವಾಗಿರುವ, ವಯಸ್ಕ ಮಗ

ಮತ್ತು ವಯಸ್ಕ ಮಗಳ ನಡುವಿನ ತಾರತಮ್ಯ, ಔಪಚಾರಿಕ ಸಮಾನತೆಯ ನಿಲುವಿನಿಂದಲೂ ತಾರತಮ್ಯವೇ ಆದರೂ ಅದನ್ನು ನ್ಯಾಯಾಲಯ ಪರಿಗಣಿಸಿಲ್ಲ. ವಿವಾಹದ ನಂತರ ಮಗಳು ಇನ್ನೊಂದು ಕುಟುಂಬಕ್ಕೆ ಹೋಗುವವಳು ಎಂಬ ಸಮಾಜದಲ್ಲಿ ನೆಲೆಗೊಂಡಿರುವ ಪದ್ಧತಿಯನ್ನು ಕಾರಣವನ್ನಾಗಿ ನೀಡಿ, ಅವಳು ಸ್ತ್ರೀ ಎಂಬ ಕಾರಣಕ್ಕಾಗಿಯೇ ಅವಳು ಒಳಗಾಗುವ ಅನನುಕೂಲತೆಯನ್ನು ಗಮನಿಸಿ ವಿಶ್ಲೇಷಿಸದೇ, ನಿರ್ಬಂಧವನ್ನು ಎತ್ತಿ ಹಿಡಿದಿರುವುದು ಮಹಿಳೆಯ ಅಸಮಾನತೆಗೆ ಪೂರಕವಾಗುತ್ತದೆ ಎನ್ನಬಹುದು.

ನಳಿನಿ ರಂಜನ್ ಸಿಂಗ್ ಮತ್ತು ಇತರರು -ವಿ- ರಾಜ್ಯ(ಎ ೧೯೭೭ ಪಾಟ್ನ ೧೭೧) ಪ್ರಕರಣದಲ್ಲಿ ನೀಡಿರುವ ತೀರ್ಪಿನಲ್ಲಿಯೂ ಮಹಿಳೆಗೆ ಹಿಂದಿನಿಂದಲೂ ನೀಡಿರುವ 'ಎರಡನೇ ಪ್ರಜೆಯ' ಪರಿಕಲ್ಪನೆಯೇ ಪ್ರಧಾನವಾಗಿದೆ. ಬಿಹಾರ್ ಭೂ ಸುಧಾರಣಾ ಅಧಿನಿಯಮದ ೨(ಇ) ಪ್ರಕರಣದಲ್ಲಿ ಭೂಮಿಯ ಪ್ರತ್ಯೇಕ ಘಟಕವನ್ನು ಕ್ಲೇಮು ಮಾಡುವ ಉದ್ದೇಶಗಳಿಗಾಗಿ, 'ಕುಟುಂಬ' ಎಂಬುದರ ಪರಿಭಾಷೆಯಲ್ಲಿ ವಯಸ್ಕ ಮಗಳನ್ನು ಸೇರಿಸಿಲ್ಲ. ಇದು ವಯಸ್ಕ ಗಂಡುಮಕ್ಕಳು ಮತ್ತು ವಯಸ್ಕ ಹೆಣ್ಣು ಮಕ್ಕಳ ನಡುವೆ ತಾರತಮ್ಯವೆಸಗುತ್ತದೆಂದು, ಆದ್ದರಿಂದ ಸಂವಿಧಾನದ ೧೫ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆಂದು ಇದರ ಸಿಂಧುತ್ವವನ್ನು ಮೇಲಿನ ಪ್ರಕರಣದಲ್ಲಿ ಪ್ರಶ್ನಿಸಲಾಯಿತು. ಆದರೆ ನ್ಯಾಯಾಲಯ, ಹಿಂದೂ ವೈಯಕ್ತಿಕ ಕಾನೂನಿನ ತತ್ತ್ವಗಳ ಆಧಾರದ ಮೇಲೆ, ಹೆಣ್ಣುಮಕ್ಕಳು ದಾಯದಿತ್ವಕ್ಕೆ ಸದಸ್ಯರಾಗುವುದಿಲ್ಲ ಎಂದು ಅಭಿಪ್ರಾಯಪಟ್ಟಿತು... "ದಾಯದಿತ್ವದಲ್ಲಿ ಮಗ ಮತ್ತು ಮಗಳ ನಡುವಿನ ತಾರತಮ್ಯವನ್ನು ಯಾವ ಕಾರಣಗಳು ಸಮರ್ಥಿಸುತ್ತವೋ ಅವೇ ಕಾರಣಗಳೇ ಮೇಲಿನ ಪ್ರಶ್ನಿತ ಶಾಸನದ ಸಿಂಧುತ್ವದ ಬಗ್ಗೆ ಅದು ೧೫(೧)ನೇ ಅನುಚ್ಛೇದವನ್ನು ಉಲ್ಲಂಘಿಸುತ್ತದೆಂದು ಮಾಡಿದ ಆರೋಪಕ್ಕೆ ಸಹ ಉತ್ತರವಾಗಬಲ್ಲುದು" ಈ ಕಾರಣವನ್ನು ನೀಡಿ ನಿರ್ಬಧವನ್ನು ನ್ಯಾಯಾಲಯ ಎತ್ತಿ ಹಿಡಿಯಿತು.

ವಿವಾಹ, ಆಸ್ತಿ, ಕಾನೂನು, ವಿಚ್ಛೇದನೆ ಕಾನೂನು ಹಾಗೂ ಕ್ರಿಮಿನಲ್ ಕಾನೂನುಗಳ ಅನೇಕ ಉಪಬಂಧಗಳನ್ನು ಅವು ಸಂವಿಧಾನದ ಸಮಾನತೆಯ ತತ್ವವನ್ನು ಉಲ್ಲಂಘಿಸುತ್ತವೆಂಬ ಕಾರಣಕ್ಕಾಗಿ ನ್ಯಾಯಾಲಯಗಳಲ್ಲಿ ಪ್ರಶ್ನಿಸಲಾಗಿದೆ. ನ್ಯಾಯಾಲಯಗಳು ಕೆಲವು ಪ್ರಕರಣಗಳಲ್ಲಿ ಔಪಚಾರಿಕ ಅಥವಾ ಸಾದೃಶ್ಯ ಸಮಾನತೆಯ ತತ್ತ್ವವನ್ನು ಅನುಸರಿಸಿದ್ದರೆ ಇನ್ನು ಕೆಲವು ಪ್ರಕರಣಗಳಲ್ಲಿ ವಾಸ್ತವಿಕ ಅಥವಾ ನೇರ್ಪಡೆ ಸಮಾನತೆಯ ತತ್ತ್ವವನ್ನು ಅನುಸರಿಸಿ ತೀರ್ಪು ನೀಡಿದೆ. ಈ ಎರಡೂ ಸಂದರ್ಭಗಳಲ್ಲಿ ತೀರ್ಪುಗಳು ತದ್ವಿರುದ್ಧವಾಗಿರುವ, ಸಂದರ್ಭಗಳೂ ಇದೆ. ಉದಾಹರಣೆಗೆ ಭಾರತೀಯ ವಿಚ್ಛೇದನಾ ಅಧಿನಿಯಮದ(೧೮೬೯)ದ ೧೦ನೇ ಪ್ರಕರಣ ಪತಿ ಪತ್ನಿಯ ವ್ಯಭಿಚಾರದ ಕಾರಣವೊಂದರ ಮೇಲೆಯೇ ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಬಹುದು. ಆದರೆ ಪತ್ನಿ ಪತಿಯ ವ್ಯಭಿಚಾರದ ಕಾರಣವೊಂದರ ಮೇಲೆಯೇ

ಅರ್ಜಿ ಸಲ್ಲಿಸುವಂತಿಲ್ಲ. ಅವಳು ವಿಚ್ಛೇದನೆ ಪಡೆಯಬೇಕಾದರೆ, ಪತಿಯ ವ್ಯಭಿಚಾರದ ಜೊತೆಗೆ ಕ್ರೌರ್ಯ, ಪರಿತ್ಯಾಗ, ಅತ್ಯಾಚಾರ, ದ್ವಿಪತ್ನಿತ್ವ ಇವುಗಳಲ್ಲಿ ಯಾವುದಾದರೊಂದನ್ನು ರುಜುವಾತು ಪಡಿಸಬೇಕು. ಈ ಉಪಬಂಧ ಸಂವಿಧಾನದ ೧೪ ಮತ್ತು ೧೫ನೇ ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆಂದು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ದ್ವಾರಕಾಬಾಯಿ -ವಿ-ಪ್ರೋ.ಎನ್. ಮ್ಯಾಥ್ಯೂಸ್ (ಎ ೧೯೫೩ ಮದ್ರಾಸ್ ೭೯೨) ಪ್ರಕರಣದಲ್ಲಿ ಮಹಿಳೆ ಮತ್ತು ಪುರುಷನು ನಡೆಸುವ ವ್ಯಭಿಚಾರದ ನಡುವೆ ಇರುವ ವ್ಯತ್ಯಾಸದ ಮೇಲೆ ಈ ಪ್ರಕರಣವನ್ನು ಆಧರಿಸಲಾಗಿದೆ. ಆದ್ದರಿಂದ ಈ ವರ್ಗೀಕಣ ವಿವೇಚನಾಯುತವಾದುದು ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. ಮತ್ತು ಅದನ್ನು ಈ ಮುಂದಿನಂತೆ ಸಮರ್ಥಿಸಿಕೊಂಡಿತು.

''ಪತಿ ವ್ಯಭಿಚಾರದಲ್ಲಿ ತೊಡಗಿದ್ದರೂ, ಅವನು ಅದರ ಫಲವಾಗಿ ಮಗುವನ್ನು ಪಡೆಯುವುದಿಲ್ಲ ಮತ್ತು ಅದನ್ನು ತನ್ನ ಪತ್ನಿಯ ಔರಸ ಮಗುವನ್ನಾಗಿ ಮಾಡುವುದಿಲ್ಲ ಮತ್ತು ಅದನ್ನು ಪೋಷಿಸುವ ಜವಾಬ್ದಾರಿಯೂ ಹಾಗಾಗಿ ಉಂಟಾಗುವುದಿಲ್ಲ. ಆದರೆ ಪತ್ನಿ ವ್ಯಭಿಚಾರಿಯಾದರೆ, ಅದರ ಫಲವಾಗಿ ಅವಳು ಮಗುವನ್ನು ಪಡೆಯಬಹುದಾಗಿರುತ್ತದೆ ಮತ್ತು ಆ ಮಗುವನ್ನು ಪತಿ ತನ್ನ ಔರಸ ಮಗುವೆಂದು ಪರಿಗಣಿಸಬೇಕಾಗುತ್ತದೆ ಮತ್ತು ಅದನ್ನು ಪೋಷಿಸಲು ಅವನು ಬದ್ಧನಾಗಿರುತ್ತಾನೆ.'' ಈ ಕಾರಣದ ಮೇಲೆ ೧೦ನೇ ಪ್ರಕರಣವನ್ನು ಕಾನೂನು ಮಾನ್ಯವೆಂದು ಎತ್ತಿಹಿಡಿಯಿತು.

ಸ್ವಪ್ನ ಘೋಷ್ -ವಿ- ಸದಾನಂದ ಘೋಷ್ ಪ್ರಕರಣದಲ್ಲಿ (ಎ ೧೯೮೯ ಕಲ್ಕತ್ತ ೧) ಮತ್ತೆ ಇದೇ ಪ್ರಶ್ನೆ ನ್ಯಾಯಾಲಯದ ಮುಂದೆ ಬಂದಿತು. ಈ ಪ್ರಕರಣದಲ್ಲಿ ನ್ಯಾಯಾಲಯ, ಪತಿ ಗರ್ಭಧರಿಸುವುದಿಲ್ಲ, ಪತ್ನಿ ಗರ್ಭಧರಿಸುತ್ತಾಳೆ ಎಂಬ ಕಾರಣ ಬೇರೆ ಸಂದರ್ಭದಲ್ಲಿ ವರ್ಗೀಕರಣಕ್ಕೆ ಸೂಕ್ತ ಕಾರಣವಾಗ ಬಹುದಾದರೂ, ಈ ಕಾರಣ ಸಂಪೂರ್ಣವಾಗಿ ಲಿಂಗಾಧಾರಿತವಾದ್ದರಿಂದ, ಅದು ೧೫ನೇ ಅನುಚ್ಛೇದದ ಉಲ್ಲಂಘನೆಯಾಗುತ್ತದೆ ಎಂದು ಅಭಿಪ್ರಾಯ ಪಟ್ಟಿತು. ಮೇಲಿನ ಎರಡೂ ಪ್ರಕರಣಗಳಲ್ಲಿ, ಲಿಂಗಭಿನ್ನತೆ ಎರಡೂ ಪ್ರಕರಣಗಳಿಗೆ ಅನ್ವಯಿಸುವ ಕಾರಣವಾದರೂ, ಮೊದಲನೆಯ ಪ್ರಕರಣದಲ್ಲಿ, ಸ್ತ್ರೀ ಪುರುಷರ ನಡುವೆ ಇರುವ ಜೈವಿಕ ಭಿನ್ನತೆ, ವಿಚ್ಛೇದನೆಯ ಕಾರಣವನ್ನು ಸಮರ್ಥಿಸಿಕೊಂಡರೆ, ಎರಡನೆ ಪ್ರಕರಣ ದಲ್ಲಿ ಇದೇ ಭಿನ್ನತೆ ವಿಚ್ಛೇದನೆಯ ಕಾರಣವನ್ನು ಸಮರ್ಥಿಸುವುದಿಲ್ಲ. ಎರಡೂ ನ್ಯಾಯಾಲಯಗಳು ಈ ತೀರ್ಮಾನಕ್ಕೆ ಬರುವುದಕ್ಕೆ ಅನ್ವಯಿಸಿದುದು ಔಪಚಾರಿಕ ಸಮಾನತೆಯ ತತ್ತ್ವವನ್ನೇ. ಎರಡು ಸಂದರ್ಭಗಳಲ್ಲಿ ತೀರ್ಮಾನಕ್ಕೆ ಬರುವಾಗಲೂ ಅವಲಂಬಿಸಿದ್ದು ಸ್ತ್ರೀಪುರುಷರ ನಡುವೆ ಇರುವ ಜೈವಿಕ ಭಿನ್ನತೆಯನ್ನೆ. ಆದರೆ ತಳೆದ ನಿಲುವುಗಳು ಮಾತ್ರ ಬೇರೆ ಬೇರೆ.

ಮೇಲಿನ ಪ್ರಕರಣಗಳಲ್ಲಿ ನ್ಯಾಯಾಲಯಗಳು ತಳೆದ ನಿಲುವುಗಳನ್ನು ವಿಶ್ಲೇಷಿಸಿದಾಗ, ಆಯಾ ಪ್ರಕರಣದ ವಿವರಗಳನ್ನು ಆಧರಿಸಿ ಆಯಾ ಪ್ರಕರಣಕ್ಕೆ ಅನ್ವಯಿಸಬೇಕಾದ ಸಮಾನತೆಯ ತತ್ತ್ವ

ಯಾವುದು ಎಂಬುದನ್ನು ನಿರ್ಧರಿಸಿದಾಗ ಮಾತ್ರವೇ ವಾಸ್ತವಿಕ ಸಮಾನತೆಯನ್ನು ಸಾಧಿಸಲು ಸಾಧ್ಯವಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಸಮಾನತೆ ಎಂಬುದು ಸಾದೃಶ್ಯವೂ ಅಲ್ಲ, ಭಿನ್ನತೆಯೂ ಅಲ್ಲ. ಆದರೆ ಪ್ರಶ್ನಿತ ಕಾನೂನು ಶೋಷಿತ ಗುಂಪಿಗೆ ಸೇರಿದ ಮಹಿಳೆಯ ಅಧೀನತೆಯನ್ನು ಬೆಂಬಲಿಸುತ್ತದೆಯೇ ಅಥವಾ ಅಧೀನತೆಯನ್ನು ಹೋಗಲಾಡಿಸಲು ಸಹಾಯಕವಾಗುತ್ತದೆಯೇ ಎಂಬುದು ಪ್ರಕರಣವನ್ನು ನಿರ್ಧರಿಸುವಾಗ ಗಮನ ನೀಡಬೇಕಾದ ಮುಖ್ಯ ಅಂಶವಾಗಬೇಕು. ಇಂಥ ವಿಶ್ಲೇಷಣೆ ಮಾತ್ರವೇ ನೇರ್ಪಡೆ ವ್ಯಾಖ್ಯಾನಕ್ಕೆ ದಾರಿ ಮಾಡಿಕೊಡಬಲ್ಲದು. ಈ ವ್ಯಾಖ್ಯಾನದಲ್ಲಿ ಮುಖ್ಯವಾಗುವುದು ಹಿಂದಿನಿಂದ ಮಹಿಳೆ ಒಳಗಾಗುತ್ತ ಬಂದಿರುವ ತಾರತಮ್ಯವನ್ನು ಇಂದಿನ ತೀರ್ಪು ಸ್ವಲ್ಪ ಮಟ್ಟಿಗಾದರೂ ಹೋಗಲಾಡಿಸುವ ಪ್ರಯತ್ನ ಮಾಡುತ್ತದೆಯೇ ಎಂಬುದು. ಆಗ ಮಾತ್ರ ಮಹಿಳೆಯರಿಗೆ ನ್ಯಾಯದೊರಕಿಸಲೆಂದೇ ಜಾರಿಗೊಳಿಸಿದ ಕಾನೂನುಗಳು ಅರ್ಥಪೂರ್ಣವಾಗುತ್ತವೆ ಮತ್ತು ಮಹಿಳೆಯರಿಗೆ ವಾಸ್ತವಿಕ ನ್ಯಾಯ ದೊರೆಯುವಂತಾಗುತ್ತದೆ.

**ಅಡಿಟಿಪ್ಪಣಿಗಳು**

೧. ಧರ್ಮ ಮೂಲವಂಶ, ಜಾತಿ, ಲಿಂಗ ಅಥವಾ ಜನ್ಮಸ್ಥಳದ ಆಧಾರದ ಮೇಲೆ ತಾರತಮ್ಯದ ನಿಷೇಧ

ಅ. ರಾಜ್ಯವು ಯಾರೇ ನಾಗರಿಕನ ವಿರುದ್ಧ ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಅವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾವುದೇ ತಾರತಮ್ಯವನ್ನು ಮಾಡುವಂತಿಲ್ಲ.

ಆ. ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಅವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾವನೇ ನಾಗರಿಕನು

ಎ. ಅಂಗಡಿಗಳು, ಸಾರ್ವಜನಿಕ ಉಪಹಾರ ಗೃಹಗಳು, ಹೋಟೆಲ್‌ಗಳು ಮತ್ತು ಸಾರ್ವಜನಿಕ ಮನೋರಂಜನ ಸ್ಥಳಗಳು ಇವುಗಳಿಗೆ ಪ್ರವೇಶಿಸಿಸುವ ಸಂಬಂಧದಲ್ಲಿ ಅಥವಾ

ಬಿ. ಪೂರ್ಣವಾಗಿ ಅಥವಾ ಭಾಗಶಃ ರಾಜ್ಯ ನಿಧಿಗಳಿಂದ ಪೋಷಿತವಾದ ಅಥವಾ ಸಾರ್ವಜನಿಕ ಉಪಯೋಗಕ್ಕಾಗಿ ಸಮರ್ಪಿತವಾದ ಬಾವಿಗಳನ್ನು, ಕೆರೆಗಳನ್ನು, ಸ್ನಾನಘಟ್ಟಗಳನ್ನು, ರಸ್ತೆಗಳನ್ನು ಮತ್ತು ಸಾರ್ವಜನಿಕರು ಸೇರುವ ಸ್ಥಳಗಳನ್ನು ಉಪಯೋಗಿಸುವ ಸಂಬಂಧದಲ್ಲಿ ಯಾವುದೇ ಅಸಮರ್ಥನೆ ಹೊಣೆಗಾರಿಕೆ ನಿರ್ಬಂಧಕ್ಕೆ ಅಥವಾ ಷರತ್ತಿಗೆ ಒಳಪಟ್ಟಿರುವುದಿಲ್ಲ

ಇ. ಈ ಅನುಚ್ಛೇದದಲ್ಲಿ ಇರುವ ಯಾವುದೂ ಮಹಿಳೆಯರು ಮತ್ತು ಮಕ್ಕಳಿಗೂ ವಿಶೇಷ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ.

ಈ. ಈ ಅನುಚ್ಛೇದದಲ್ಲಿ ಅಥವಾ ೨೯ನೇ ಅನುಚ್ಛೇದದ(೨)ನೇಯ ಖಂಡದಲ್ಲಿ ಇರುವುದು ಯಾವುದು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದವರ ನಾಗರಿಕರ ಯಾವುದೇ

ವರ್ಗಗಳ ಪುರೋಭಿವೃದ್ಧಿಗಾಗಿ ಅಥವಾ ಆ ಜಾತಿಗಳ ಮತ್ತು ಆ ಬುಡಕಟ್ಟುಗಳ ಸಲುವಾಗಿ ರಾಜ್ಯವು ಯಾವುದೇ ಉಪಬಂಧವನ್ನು ಮಾಡುವಂತೆ ಪ್ರತಿಬಂಧಿಸತಕ್ಕದಲ್ಲ.

೨. ಸಾರ್ವಜನಿಕ ನಿಯೋಜನೆಯ ವಿಷಯದಲ್ಲಿ ಸಮಾನಾವಕಾಶ

ಅ. ರಾಜ್ಯದ ಅಧೀನದಲ್ಲಿರುವ ಯಾವುದೇ ಪದಕ್ಕೆ ಸಂಬಂಧಿಸಿದಂತೆ ನಿಯೋಜನೆ ಅಥವಾ ನೇಮಕಾತಿಯ ವಿಷಯದಲ್ಲಿ ಎಲ್ಲ ನಾಗರಿಕರಿಗೂ ಸಮಾನ ಅವಕಾಶವಿರತಕ್ಕದ್ದು.

ಆ. ಧರ್ಮ, ಮೂಲವಂಶ, ಜಾತಿ, ಲಿಂಗ, ಸಂತತಿ, ಜನ್ಮಸ್ಥಳ, ನಿವಾಸ ಅಥವಾ ಇವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾರೇ ನಾಗರಿಕನು ರಾಜ್ಯದ ಅಧೀನದಲ್ಲಿರುವ ಯಾವುದೇ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದಂತೆ ಅನರ್ಹತೆಗೆ ಒಳಗಾಗತಕ್ಕುದಲ್ಲ ಅಥವಾ ಅವನ ವಿರುದ್ಧ ತಾರತಮ್ಯವನ್ನು ಮಾಡತಕ್ಕುದಲ್ಲ.

ಇ. ಈ ಅನುಚ್ಛೇದದಲ್ಲಿ ಇರುವುದು ಯಾವುದೋ ಒಂದು ರಾಜ್ಯ ಸರ್ಕಾರದ ಅಥವಾ ಒಕ್ಕೂಟ ರಾಜ್ಯಕ್ಷೇತ್ರದ ಅಧೀನದಲ್ಲಿರುವ ಅಥವಾ ಯಾವುದೇ ರಾಜ್ಯದ ಒಕ್ಕೂಟ ರಾಜ್ಯಕ್ಷೇತ್ರದೊಳಗಿರುವ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಅಧೀನದಲ್ಲಿರುವ ಯಾವುದೇ ವರ್ಗದ ಅಥವಾ ವರ್ಗಗಳ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದ ನೇಮಕಾತಿಯ ಬಗ್ಗೆ, ಅಂಥ ನಿಯೋಜನೆಗೆ ಅಥವಾ ನೇಮಕಾತಿಗೆ ಮುಂಚೆ ಆ ರಾಜ್ಯದಲ್ಲಿ ಅಥವಾ ಆ ಒಕ್ಕೂಟ ರಾಜ್ಯಕ್ಷೇತ್ರದಲ್ಲಿ ನಿವಾಸದ ಯಾವುದೇ ಅಗತ್ಯತೆಯನ್ನು ನಿಯಮಿಸುವ ಯಾವುದೇ ಕಾನೂನನ್ನು ಮಾಡದಂತೆ ಸಂಸತ್ತನ್ನು ಪ್ರತಿಬಂಧಿಸತಕ್ಕುದಲ್ಲ.

ಈ. ಈ ಅನುಚ್ಛೇದದಲ್ಲಿ ಇರುವುದು ಯಾವುದೂ ಯಾವುದೇ ಹಿಂದುಳಿದ ವರ್ಗದ ನಾಗರಿಕರು ರಾಜ್ಯದ ಅಧೀನದಲ್ಲಿರುವ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯವನ್ನು ಹೊಂದಿಲ್ಲವೆಂದು ರಾಜ್ಯವು ಅಭಿಪ್ರಾಯಪಟ್ಟಲ್ಲಿ ಅಂಥವರಿಗಾಗಿ ನೇಮಕಾತಿಗಳನ್ನು ಅಥವಾ ಹುದ್ದೆಗಳನ್ನು ಮೀಸಲಿಡುವುದಕ್ಕಾಗಿ ಯಾವುದೇ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸಕ್ಕುದಲ್ಲ.

೩. ಮಾರ್ಕ್‌ಗ್ಯಾಲೆಂಟರ್-ಸಿಂಬಾಲಿಕ್ ಆಕ್ಟಿವಿಸಂ : ಎ ಜುಡಿಷಿಯಲ್ ಎನ್‌ಕೌಂಟರ್ ವಿತ್ ಕೌಂಟೂರ್ಸ್ ಆಫ್ ಇಂಡಿಯಾಸ್ ಕಾಂಪನ್ಸೇಟರಿ ಡಿಸ್ಕ್ರಿಮಿನೇಷನ್ ಪಾಲಿಸಿ

೪. ನಿವೇದಿತಾ ಮೆನನ್(ಸಂ) 'ಆನ್ ವಿಮೆನ್ : ಈಕ್ವಾಲಿಟಿ ಅಂಡ್ ಕಾನ್‌ಸ್ಟಿಟ್ಯೂಷನ್, ಥ್ರೂ ದ ಲುಕಿಂಗ್ ಗ್ಲಾಸ್ ಆಫ್ ಫೆಮಿನಿಸಮ್'-ರತ್ನಕಪೂರ್ ಮತ್ತು ಬ್ರೆಂಡ ಕಾಸ್‌ಮನ್-ಥೀಮ್ಸ್ ಇನ್ ಪಾಲಿಟಿಕ್ಸ್-ಜೆಂಡರ್ ಅಂಡ್ ಪಾಲಿಟಿಕ್ಸ್ ಇನ್ ಇಂಡಿಯಾ

ಅಧ್ಯಾಯ ೩

# ವಿವಾಹ ಸಂಬಂಧೀ ಮತ್ತು ಕ್ರಿಮಿನಲ್ ಕಾನೂನುಗಳು

## ಭಾಗ ೧ ವಿವಾಹ ಸಂಬಂಧೀ ಕಾನೂನುಗಳು

- ವಿವಾಹ
- ಬಹುಪತ್ನಿತ್ವ
- ವಿವಾಹ ನೋಂದಣಿ
- ವಿವಾಹ ವಿಚ್ಛೇದನೆ
- ಜೀವನಾಂಶ
- ದತ್ತಕ ಮತ್ತು ಪೋಷಕತ್ವ

## ಭಾಗ ೨. ಕ್ರಿಮಿನಲ್ ಕಾನೂನುಗಳು

- ವರದಕ್ಷಿಣೆ
- ಕೌಟುಂಬಿಕ ಕಿರುಕುಳ
- ಅತ್ಯಾಚಾರ

# ವಿವಾಹ ಸಂಬಂಧೀ ಮತ್ತು ಕ್ರಿಮಿನಲ್ ಕಾನೂನುಗಳು

ಭಾರತದಲ್ಲಿರುವ ವಿವಿಧ ಧರ್ಮಗಳು, ಆಚರಣೆ, ಸಂಪ್ರದಾಯ, ನಂಬಿಕೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ಭಿನ್ನವಾಗುವ ಕಾರಣ, ಇವುಗಳೇ ಪ್ರಧಾನವಾಗಿರುವ ವಿವಾಹ, ವಿಚ್ಛೇದನೆ, ದತ್ತಕ, ಮಕ್ಕಳ ಅಭಿರಕ್ಷೆ, ಪೋಷಣೆ ಮತ್ತು ಆಸ್ತಿ ಹಕ್ಕುಗಳಿಗೆ ಸಂಬಂಧಿಸಿದಂತೆಯೂ ಅವುಗಳಲ್ಲಿ ಭಿನ್ನತೆಯಿದೆ. ಈ ಕಾರಣ, ಈ ವಿಷಯಗಳಿಗೆ ಸಂಬಂಧಿಸಿದಂತೆ ಎಲ್ಲ ಧರ್ಮದವರಿಗೂ ಅನ್ವಯಿಸುವ ಸಾಮಾನ್ಯ ಕಾನೂನು ಇಲ್ಲ. ಆಯಾ ಧರ್ಮಗಳಲ್ಲಿ ಜಾರಿಯಲ್ಲಿರುವ ಕಾನೂನುಗಳು ಆಯಾ ಧರ್ಮದವರಿಗೆ ಅನ್ವಯಿಸುತ್ತದೆ. ಆದರೆ ಸಿವಿಲ್ ಕಾನೂನು ಮತ್ತು ಕ್ರಿಮಿನಲ್ ಕಾನೂನುಗಳು ಮಾತ್ರ ಎಲ್ಲ ಧರ್ಮದವರಿಗೂ ಒಂದೇ ರೀತಿ ಅನ್ವಯಿಸುತ್ತದೆ. ಆದರೆ ಒಂದು ಸಮಾಜದಲ್ಲಿ ಮಹಿಳೆಯ ಸ್ಥಾನಮಾನವನ್ನು ನಿರ್ಧರಿಸುವುದು ಅವರಿಗೆ ಅನ್ವಯಿಸುವ ಅವರವರ ಧರ್ಮದ ಕಾನೂನುಗಳಲ್ಲಿ ಎಂದರೆ, ವೈಯಕ್ತಿಕ ಕಾನೂನುಗಳು, (ಸಿವಿಲ್ ಮತ್ತು ಕ್ರಿಮಿನಲ್ ಕಾನೂನುಗಳು ಅನ್ವಯವಾಗುವ ಕ್ಷೇತ್ರಗಳನ್ನು ಹೊರತುಪಡಿಸಿ, ಉಳಿದ ಕ್ಷೇತ್ರಗಳಲ್ಲಿ) ಅವಳಿಗೆ ನೀಡಿರುವ ಹಕ್ಕುಗಳು. ಇದಕ್ಕೆ ಪ್ರೇರಕವಾಗಿರುವುದು ಒಂದು ಸಮಾಜದ ಸಂದರ್ಭದಲ್ಲಿ, ಸಾಮಾಜಿಕ ಕುಟುಂಬ ರಚನೆ, ಜಾರಿಯಲ್ಲಿದ್ದ ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ ಮಹಿಳೆಗಿದ್ದ ಪಾತ್ರ ಮತ್ತು ಇವುಗಳ ಸಂದರ್ಭದಲ್ಲಿ ಅವಳು ವಹಿಸುತ್ತಿದ್ದ ಪಾತ್ರ. ಸಮಾಜದ ಮನೋಭಾವವನ್ನು ರೂಪಿಸುವಲ್ಲಿ ಮತ್ತು ಮಾನವ ಸಮುದಾಯದ ವರ್ತನೆಯ ರೀತಿಯನ್ನು ನಿರ್ಧರಿಸುವಲ್ಲಿ ಸಾಮಾಜಿಕ ಸಂಪ್ರದಾಯಗಳು ಅತ್ಯಂತ ಗಾಢವಾದ ಪ್ರಭಾವವನ್ನು ಬೀರುತ್ತವೆ. ಈ ಸಾಮಾಜಿಕ ಸಂಪ್ರದಾಯಗಳನ್ನು ರೂಢಿಗೆ ತರುವಲ್ಲಿ ಧರ್ಮದ ಪಾತ್ರ ಬಹಳ ಮಹತ್ವದ್ದು. ಧರ್ಮ ಹಾಗೂ ಸಾಮಾಜಿಕ ಸಂರಚನೆಯನ್ನು ಬೇರ್ಪಡಿಸುವುದು ಸಾಧ್ಯವಿಲ್ಲ. ಮನುಷ್ಯನ ಹುಟ್ಟು, ನಾಮಕರಣ, ವಿವಾಹ ಹಾಗೂ ಸಾವುಗಳಂಥ ವಿವಿಧ ಘಟ್ಟಗಳಲ್ಲಿ ಧರ್ಮ ಹಾಸುಹೊಕ್ಕಾಗಿರುತ್ತದೆ. ಧರ್ಮ, ಸಮಾಜದಲ್ಲಿ ಮಹಿಳೆಗೆ ಇರುವ ಸ್ಥಾನಮಾನ ಮತ್ತು ಅವಳು ವಹಿಸಬೇಕೆಂದು ನಿರೀಕ್ಷಿಸಲಾಗುವ ಪಾತ್ರಗಳಿಗೆ ನೈತಿಕ ನೆಲಗಟ್ಟನ್ನು ಒದಗಿಸಿದೆ. ಹೀಗಾಗಿ ಮುಖ್ಯವಾದ ಧಾರ್ಮಿಕ ಆಚರಣೆಗಳಲ್ಲಿ ಮಹಿಳೆ ವಹಿಸಬೇಕೆಂದು ನಿರೀಕ್ಷಿಸಲಾಗುವ ಪಾತ್ರ ಹಾಗೂ ಸಮಾನತೆಯ ಪರಿಕಲ್ಪನೆ ಇವೆರಡರ ನಡುವಿನ ಸಂಘರ್ಷ ಅನಿವಾರ್ಯವಾಗಿ ತಲೆದೋರುತ್ತದೆ.

ಹಿಂದೂ ಧರ್ಮ ಮಹಿಳೆಗೆ ಅತ್ಯುನ್ನತ ಸ್ಥಾನವನ್ನು ನೀಡಿ ಅವಳನ್ನು ಪೂಜನೀಯಳನ್ನಾಗಿಸಿದೆ. ಆದರೆ ಅದೇ ಧರ್ಮ, ಕೌಟುಂಬಿಕ ಹಾಗೂ ಸಾಮಾಜಿಕ ಸಂದರ್ಭಗಳಲ್ಲಿ ಅವಳು ವಹಿಸಬೇಕಾದ ನಿರೀಕ್ಷಿತ ಪಾತ್ರವನ್ನು ನಿಗದಿಪಡಿಸಿ ಅವಳ ಇತರ ಸಾಮರ್ಥ್ಯಗಳ ಅನಾವರಣಕ್ಕೆ ತಡೆಹಾಕಿದೆ. ಅವಳು ಯಾವಾಗಲೂ ಇತರರ ರಕ್ಷಣೆಯಲ್ಲಿರಬೇಕಾದವಳು ಎಂದಿದೆ. ಪತ್ನಿಯಾಗಿಯೂ, ಅವಳು ತನ್ನ ಧರ್ಮ, ಸಂಪ್ರದಾಯ ಹಾಗೂ ಸಾಮಾಜಿಕ ಆಚರಣೆಗಳು ಹಾಕಿಕೊಡುವ ಸೀಮಿತ ಚೌಕಟ್ಟಿನಲ್ಲಿ ಕಾರ್ಯನಿರ್ವಹಿಸಬೇಕು. ಪತಿಗಾಗಿ ಎಂಥ ತ್ಯಾಗಕ್ಕೂ ಸಿದ್ಧಳಾದ ಹಾಗು ಎಂಥದೇ ಕಷ್ಟವನ್ನು ಸಹಿಸುವ ಸತಿ ಮಾತ್ರವೇ ಆದರ್ಶಸತಿ ಎನಿಸುತ್ತಾಳೆ. ಈ ಮಾನದಂಡದಲ್ಲಿ ಸೀತೆ, ಸಾವಿತ್ರಿ ಆದರ್ಶ ಸತಿಯರು. ಯಾವುದೇ ಪ್ರತ್ಯೇಕ ವ್ಯಕ್ತಿತ್ವವಿಲ್ಲದ, ಯಾವುದೇ ಪ್ರತ್ಯೇಕ ಜೀವನೋದ್ದೇಶವಿಲ್ಲದ, ತಮ್ಮದೇ ಆದ ಯಾವುದೇ ಪ್ರತ್ಯೇಕ ಆಸೆ ಆಕಾಂಕ್ಷೆಗಳಿಲ್ಲದ ವ್ಯಕ್ತಿತ್ವವನ್ನು ಅವಳಿಂದ ಸಮಾಜ ನಿರೀಕ್ಷಿಸಿತು. ಎಲ್ಲ ಪುರಾಣಗಳೂ, ಮಹಾಕಾವ್ಯಗಳೂ ಈ ನಿರೀಕ್ಷೆಯನ್ನೇ ಪ್ರತಿಬಿಂಬಿಸಿ ಸ್ಥಿರಪಡಿಸಿದವು. ಹಾಗಾಗಿ ಹಿಂದೂ ಸ್ತ್ರೀಯ ಪರಮೋದ್ದೇಶ ವಿವಾಹ ಹಾಗೂ ತಾಯ್ತನ. ಇದನ್ನು ಮೀರಿದ ಯಾವುದೇ ಸಾಮಾಜಿಕ ಭಾಗವಹಿಸುವಿಕೆ ಅವಳಿಗಿರಲಿಲ್ಲ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಕಟ್ಟುಪಾಡುಗಳು ರೂಪುಗೊಂಡವು. ಇವೇ, ಪತಿಯ ಮರಣಾನಂತರ ಪತ್ನಿ ಸತಿ ಹೋಗುವಂಥ ರಾಕ್ಷಸೀ ಸಂಪ್ರದಾಯಕ್ಕೂ ಕಾರಣವಾದವು. ಆಗ ರಚಿತವಾದ ಕಾನೂನುಗಳಲ್ಲಿಯೂ ಸಮಾಜದಿಂದ ಒಪ್ಪಿಗೆಯಾದ ಈ ಸೀಮಿತ ಹಕ್ಕುಗಳೇ ಅವಳಿಗೆ ದೊರೆತವು. ಈ ಎಲ್ಲ ನಿರ್ಬಂಧಗಳೂ ದತ್ತಕ, ಆಸ್ತಿಹಕ್ಕು, ವೈವಾಹಿಕ ಕಟ್ಟುಪಾಡುಗಳು ಮುಂತಾದವುಗಳಿಗೆ ಅನ್ವಯಿಸುವ ಹಿಂದೂಗಳ ವೈಯಕ್ತಿಕ ಕಾನೂನುಗಳಲ್ಲಿ ಪ್ರತಿಬಿಂಬಿತವಾಗಿವೆ. ವಿಧವಾ ಪುನರ್ವಿವಾಹ ನಿರ್ಬಂಧ ನಿಷೇಧದಂಥ ಒಂದು ಪ್ರಗತಿಗಾಮಿ ಕಾನೂನು ರೂಪುಗೊಳ್ಳುವುದಕ್ಕೆ ಅಂದಿನ ಸಮಾಜದ ಮನೋಭಾವ ಅದಕ್ಕೆ ಸಿದ್ಧವಾಗಿಲ್ಲದಿದ್ದರೂ, ರಾಮಮೋಹನ ರಾಯ್ ರಂಥ ಪ್ರಗತಿಪರ ಚಿಂತನೆಯುಳ್ಳ ಸಮಾಜ ಸುಧಾರಕರು ಕಾರಣರಾದರು. ಇದು ಅಂದಿನ ಸಮಾಜದಲ್ಲಿ ಅಂತರ್ಗತವಾಗಿಯಾದರೂ, ರೂಪುಗೊಳ್ಳುತ್ತಿದ್ದ ಚಿಂತನೆಯ ದಿಕ್ಕನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಕಾನೂನು ಆಗ ಸಮಾಜ ಸುಧಾರಣೆಯ ವಾಹಕಗಳಾದವು ಎಂದರೆ ತಪ್ಪಲ್ಲ. ಬಾಲ್ಯ ವಿವಾಹ ನಿರ್ಬಂಧ ಕಾನೂನು, ಸತಿಪದ್ಧತಿ ನಿಷೇಧ ಕಾನೂನು ಹಾಗೂ ಮಹಿಳೆಯರಿಗೆ ಆಸ್ತಿಯ ಸೀಮಿತ ಹಕ್ಕು ನೀಡಿದ ಕಾಯಿದೆಗಳೂ ಸಹ ಇದಕ್ಕೆ ಉದಾಹರಣೆಗಳು. ಇವೆಲ್ಲವೂ ಸಮಾಜದ ಅಗತ್ಯದಿಂದ ರೂಪಗೊಂಡ ಕಾನೂನುಗಳಾಗಿರದೇ ಸಮಾಜ ಸುಧಾರಣೆಯ ಹಾಗೂ ಸಾಮಾಜಿಕ ಪಿಡುಗುಗಳನ್ನು ನಿವಾರಿಸುವ ಕಾನುನುಗಳಾಗಿ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಜಾರಿಗೆ ಬಂದವು. ಇದರಿಂದ ಸಾಮಾಜಿಕವಾಗಿ ಮಹಿಳೆಯ ಸ್ಥಾನಮಾನವನ್ನು ಉತ್ತಮಗೊಳಿಸುವಲ್ಲಿ ಕಾನೂನಿನ ನೆರವು ದೊರೆಯುವಂತಾಯಿತು. ಸ್ವಾತಂತ್ರ್ಯಾನಂತರ ಜಾರಿಗೆ ಬಂದ

ವರದಕ್ಷಿಣೆ ನಿಷೇಧ ಕಾನೂನು ಸಹ ಒಂದು ಸಾಮಾಜಿಕ ಪಿಡುಗನ್ನು ನಿರ್ಮೂಲನ ಮಾಡುವುದಕ್ಕಾಗಿ ಜಾರಿಗೆ ಬಂದ ಒಂದು ಸುಧಾರಣಾ ಕಾನೂನು. ಸ್ವಾತಂತ್ರ್ಯ ಪೂರ್ವದಲ್ಲಿ ಜಾರಿಯಲ್ಲಿ ಬಂದ ಮಹಿಳೆಯರಿಗೆ ಆಸ್ತಿಯ ಸೀಮಿತಿ ಹಕ್ಕಿನ ಕಾನೂನಾಗಲೀ, ಸ್ವಾತಂತ್ರ್ಯನಂತರ ಜಾರಿಯಲ್ಲಿ ಬಂದ ಮಹಿಳೆಯರಿಗೆ ಸಂಪೂರ್ಣ ಆಸ್ತಿ ಹಕ್ಕನ್ನು ನೀಡಿದ ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ ಆಗಲೀ ಅಥವಾ ಸಮಾನ ಪರಿಶ್ರಮ ಅಧಿನಿಯಮ ಅಥವಾ ಪ್ರಸೂತಿ ಸೌಲಭ್ಯ ಅಧಿನಿಯಮಗಳಾಗಲೀ ಸಂವಿಧಾನದತ್ತ ಸ್ತ್ರೀ ಪುರುಷ ಸಮಾತೆಯ ಆಶಯದ ಈಡೇರಿಕೆಗಾಗಿ ಹಾಗೂ ಬದಲಾದ ಸಮಾಜದ ಜೊತೆಯಲ್ಲಿ ಹೆಜ್ಜೆ ಹಾಕಲು ಅಗತ್ಯವಾದ ಬದಲಾವಣೆ ಗಳೊಂದಿಗೆ ರೂಪುಗೊಂಡ ಕಾನೂನುಗಳಾದುವು. ಹೀಗೆ ಕೆಲವು ಕಾನೂನುಗಳು ಸಮಾಜ ಸುಧಾರಣೆಯನ್ನು ತರಲು ಪ್ರಯತ್ನಿಸಿದರೆ ಕೆಲವು ಕಾನೂನುಗಳು ಅವುಗಳಲ್ಲಿರುವ ನಿಯಮ, ಕಟ್ಟುಪಾಡುಗಳು ಹಾಗೂ ಸೌಲಭ್ಯಗಳನ್ನು ಜಾರಿಗೆ ತರಲೆತ್ನಿಸಿದವು. ಈ ಹಿನ್ನೆಲೆಯಲ್ಲಿ ಈಗಿನ ಕಾನೂನುಗಳನ್ನು ಗಮನಿಸಿದಾಗ, ಅವುಗಳ ಸೈದ್ಧಾಂತಿಕ ನಿಲುವುಗಳು ಹಾಗೂ ಅನುಷ್ಠಾನ ಸಾಧ್ಯತೆಗಳ ನಡುವೆ ಇರುವ ಅಂತರ ಸ್ಪಷ್ಟವಾಗಿ ಗೋಚರವಾಗುತ್ತದೆ. ಹಾಗಾಗಿ ಸಂವಿಧಾನದ ಮೂಲಕ ಕಡಿದಿರಿಸಿದ ಆಧುನಿಕ ಮಹಿಳೆಯ ಬದಲಾದ ಪಾತ್ರಗಳು ಪ್ರಸ್ತುತ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭಗಳಲ್ಲಿನ ಅವರ ಸ್ಥಾನಮಾನದ ವಾಸ್ತವತೆಗೆ ಹೊಂದಿಕೊಳ್ಳಬೇಕಾಗಿದೆ. ಇವರೆಡರ ನಡುವಿನ ಅಂತರವೇ ಕಾನೂನುಗಳಲ್ಲಿ ಕೊಡಮಾಡಿರುವ ಔಪಚಾರಿಕ ಸಮಾನತೆ ವಾಸ್ತವಿಕ ಸಮಾನತೆಯಾಗಿ ಪರಿಣಮಿಸದೆ ಸೋಲುವುದಕ್ಕೆ ಕಾರಣವಾಗುತ್ತದೆ. ಈ ಪರಿಸ್ಥಿತಿಗೆ ಕಾರಣ, ಹಿಂದೆ ನೋಡಿದಂತೆ ಮಹಿಳೆಯು ನಿರ್ವಹಿಸಬೇಕೆಂದು ನಿರೀಕ್ಷಿಸಲಾಗುವ ನಿಗದಿತ ಸಿದ್ಧಪಾತ್ರಗಳು. ಇಂಥ ನಿರೀಕ್ಷೆಯ ಹಿನ್ನೆಲೆಯಲ್ಲಿ ಕೆಲಸಮಾಡುವುದು ಶತಶತಮಾನಗಳಿಂದ ಸಮಾಜದಲ್ಲಿ ಬೇರೂರಿರುವ ಪುರುಷಪ್ರಧಾನ ಚಿಂತನೆ. ಈ ಚಿಂತನೆಯ ಮೂಸೆಯಲ್ಲಿಯೇ ರೂಪುಗೊಂಡಿರುವ ಮಹಿಳೆಯರ ವ್ಯಕ್ತಿತ್ವ. ಕಾನೂನುಗಳು ಕೊಟ್ಟಿರುವ ಸ್ತ್ರೀಪುರುಷ ಸಮಾನತೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಲ್ಲಿ, ಇತರ ಅಂಶಗಳಷ್ಟೇ ಮಹಿಳೆಯರು ರೂಢಿಸಿಕೊಂಡು ಬಂದಿರುವ ಅಥವಾ ರೂಢಿಸಿಕೊಳ್ಳುವಂತೆ ಮಾಡಲಾಗಿರುವ ವ್ಯಕ್ತಿತ್ವವೂ ಕಾರಣವಾಗುತ್ತದೆ. ಇಂಥ ವ್ಯಕ್ತಿತ್ವದಿಂದ ಹೊರಬರಲು ಆಗದೆ ಇರುವುದಕ್ಕೆ ಅವರು ನಂಬಿಕೊಂಡು ಬಂದಿರುವ ನಂಬಿಕೆಗಳು, ವ್ರತನೇಮ ನಿಯಮಗಳು, ಸಮಾಜದ ಹೆದರಿಕೆ, ಬಹಿಷ್ಕಾರ ಅಥವಾ ಕುಟುಂಬದವರು ನಿರೀಕ್ಷಿಸುವ ಪತ್ನಿ ಹಾಗೂ ತಾಯಿಯ ಪಾತ್ರನಿರ್ವಹಣೆಯ ಅನಿವಾರ್ಯತೆ ಕಾರಣಗಳಾಗಬಹುದು.

ವಿಶ್ವಸಂಸ್ಥೆಯ ಒಂದು ವರದಿಯ ಪ್ರಕಾರ ವಿಶ್ವದ ಜನಸಂಖ್ಯೆಯ ಅರ್ಧದಷ್ಟು ಮಹಿಳೆಯರು. ಅವರು ಕೆಲಸದ ಒಟ್ಟು ಗಂಟೆಗಳ ಪೈಕಿ ಮೂರನೇ ಎರಡು ಗಂಟೆಗಳಷ್ಟು ಕೆಲಸವನ್ನು ನಿರ್ವಹಿಸುತ್ತಾರೆ.

ಆದರೆ ಪ್ರಪಂಚದ ಒಟ್ಟು ಆದಾಯದ ಹತ್ತನೇ ಒಂದರಷ್ಟು ಆದಾಯವನ್ನು ಮಾತ್ರ ಪಡೆಯುತ್ತಾರೆ. ಮತ್ತು ಪ್ರಪಂಚದ ಆಸ್ತಿಯ ಶೇ.೧ರಷ್ಟಕ್ಕೆ ಮಾತ್ರ ಒಡೆಯರಾಗಿದ್ದಾರೆ.

ಭಾರತದಲ್ಲಿಯೂ, ಭಾರತದ ಜನಸಂಖ್ಯೆಯ ಅರ್ಧದಷ್ಟು ಮಹಿಳೆಯರು. ಮಗಳು, ಪತ್ನಿ, ತಾಯಿ, ತಂಗಿ ಹೀಗೆ ಅವಳು ವಿವಿಧ ಪಾತ್ರಗಳನ್ನು ನಿರ್ವಹಿಸುತ್ತ, ಮಹಿಳೆ ಪುರುಷನ ಬಾಳು ಹಾಗೂ ಏಳ್ಗೆಯಲ್ಲಿ ಪೂರಕ ಪಾತ್ರವಹಿಸುತ್ತ ಬಂದಿದ್ದಾಳೆ. ಸಾಮಾಜಿಕ ಕಟ್ಟುಪಾಡುಗಳಿಂದಾಗಿ ಎರಡನೇ ಪ್ರಜೆಯೆನಿಸಿಕೊಂಡು ಪುರುಷರಿಂದ ಹಾಗೂ ಪುರುಷ ಪ್ರಧಾನ ಸಮಾಜದಿಂದ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾಳೆ. ವಿವಿಧ ಆರ್ಥಿಕ ಹಿನ್ನೆಲೆಗಳುಳ್ಳ ವಿವಿಧ ಸಾಮಾಜಿಕ ಸ್ಥಾನಮಾನಗಳನ್ನುಳ್ಳ ಎಲ್ಲ ಜಾತಿ ವರ್ಗಗಳ ಮಹಿಳೆಯರೂ ಇದಕ್ಕೆ ಒಳಗಾಗಿದ್ದಾರೆ.

ಸಂವಿಧಾನದಲ್ಲಿ ಸ್ತ್ರೀಪುರುಷರಿಗೆ ಸಮಾನತೆಯನ್ನು ನೀಡಿರುವಂತೆ ಭಾರತ ಸಂಸತ್ತಿನಿಂದ ರಚನೆಗೊಂಡ ಅನೇಕ ಕಾನೂನುಗಳಲ್ಲಿ ಈ ತತ್ತ್ವವನ್ನೇ ಅಳವಡಿಸಲಾಗಿದೆ. ಸಂಸತ್ತಿನಿಂದ ರಚನೆಯಾದ ಶಾಸನಗಳು, ಸಾಂಪ್ರದಾಯಿಕ ಕಾನೂನುಗಳಿಂದ ಭಿನ್ನವಾಗಿದೆಯೇ, ಆ ಭಿನ್ನತೆ ಮಹಿಳೆಯರ ಹಿಂದಿದ್ದ ಸ್ಥಾನಮಾನವನ್ನು ಉತ್ತಮಪಡಿಸಲು ಪೂರಕವಾಗಿದೆಯೇ ಮತ್ತು ಈ ಭಿನ್ನತೆ ಮಹಿಳೆಯರಿಗೆ ವಾಸ್ತವಿಕ ಸಮಾನತೆಯನ್ನು ನೀಡುವಲ್ಲಿ ಸಹಾಯಕವಾಗಿಯೇ ಎಂಬುದರ ಪರಿಶೀಲನೆ ಅತ್ಯಗತ್ಯ.

## ಭಾಗ ೧ ವಿವಾಹ ಸಂಬಂಧೀ ಕಾನೂನುಗಳು

### ವಿವಾಹ

ಹಿಂದಿನಿಂದ ಸಂಪ್ರದಾಯದ ರೂಪದಲ್ಲಿ ಜಾರಿಯಲ್ಲಿದ್ದ ಹಿಂದೂ ವಿವಾಹಗಳಿಗೆ ಅನ್ವಯಿಸುತ್ತಿದ್ದ ನೀತಿ ನಿಯಮಗಳು, ಕಟ್ಟುಪಾಡುಗಳು ಕ್ರೋಡೀಕೃತಗೊಂಡು ಲಿಖಿತ ಹಾಗೂ ನಿರ್ದಿಷ್ಟ ರೂಪ ಪಡೆದದ್ದು ೧೯೫೫ರಲ್ಲಿ ಹಿಂದೂ ವಿವಾಹ ಅಧಿನಿಯಮ ಜಾರಿಗೆ ಬಂದಾಗ. ಈ ಅಧಿನಿಯಮದ ಮೇಲೆ ಪಾಶ್ಚಾತ್ಯ ಪ್ರಭಾವವಿರುವುದು ಅದರಲ್ಲಿ ಒಳಗೊಂಡಿರುವ ಕೆಲವೊಂದು ಹಿಂದೂ ಸಂಪ್ರದಾಯಕ್ಕೆ ಅನ್ಯವಾದ, ಪರಿಕಲ್ಪನೆಗಳಿಂದ ಸ್ಪಷ್ಟವಾಗುತ್ತದೆ.

ಈ ಅಧಿನಿಯಮದ ಪ್ರಕಾರ ಒಂದು ವಿವಾಹ ಊರ್ಜಿತವಾಗಬೇಕಾದರೆ ಐದು ಷರತ್ತುಗಳನ್ನು ಪೂರೈಸಿರಬೇಕು.

- ಏಕಪತ್ನಿತ್ವ/ಏಕಪತಿತ್ವ
- ಸ್ವಾಸ್ಥ್ಯಚಿತ್ತವನ್ನು ಹೊಂದಿರಬೇಕು
- ಹುಡುಗಿ(ವಧು) ಕನಿಷ್ಠ ೧೮ ವರ್ಷಗಳನ್ನು, ಹುಡುಗ ಕನಿಷ್ಠ(ವರ)೨೧ ವರ್ಷಗಳನ್ನು ಪೂರೈಸಿರಬೇಕು.
- ವಧೂ ವರರು ನಿಷೇಧಿತ ಸಂಬಂಧಿಗಳಾಗಿರಬಾರದು.
- ವಧೂ ವರರು ಪರಸ್ಪರ ಸಪಿಂಡರಾಗಿರಬಾರದು.

ಕೊನೆಯ ಎರಡು ಷರತ್ತುಗಳು, ಆ ರೀತಿಯ ಸಂಬಂಧ ಬೆಳೆಸುವ ಪದ್ಧತಿ ವಧೂ ವರರ ಸಮುದಾಯದಲ್ಲಿದ್ದರೆ, ವಿವಾಹಕ್ಕೆ ಅಡ್ಡಿ ಬರುವುದಿಲ್ಲ.

ಅಧಿನಿಯಮದ(ಪ್ರಕರಣ ೫) ಈ ಉಪಬಂಧ ವಿಧವಾ ಪುನರ್ವಿವಾಹ ನಿಷೇಧವನ್ನು ಬಾಲ್ಯವಿವಾಹ ಹಾಗೂ ದ್ವಿ ಅಥವ ಬಹುಪತ್ನಿತ್ವವನ್ನು ಒಂದೇ ಬಾರಿಗೆ ನಿವಾರಿಸುವಂಥ ಪ್ರಗತಿಗಾಮೀ ಬದಲಾವಣೆಗಳನ್ನು ಜಾರಿಗೆ ತಂದಿತು. ಈ ಎಲ್ಲ ವಿಷಯಗಳಲ್ಲೂ ಮಹಿಳೆಗೆ ಪುರುಷನೊಂದಿಗೆ ಸಮಾನ ಸ್ಥಾನಮಾನವನ್ನು ನೀಡಲಾಗಿದೆ.

ಮುಸ್ಲಿಮರಲ್ಲಿ ವಿವಾಹ ವಧೂ ವರರು ಮಾಡಿಕೊಳ್ಳುವ ಒಂದು ಕರಾರು. ನ್ಯಾಯಸಮ್ಮತವಾದ ಮಕ್ಕಳನ್ನು ಪಡೆಯುವುದು ಇದರ ಉದ್ದೇಶ. ಮದುವೆಯ ಒಪ್ಪಂದಕ್ಕೆ ಒಮ್ಮೆ ಬಂದರೆಂದರೆ ಅದಕ್ಕೆ ಪವಿತ್ರ ಸ್ಥಾನವಿದೆ. ಆದರೆ ಮದುವೆಯ ಒಪ್ಪಂದಕ್ಕೆ ಬರುವಾಗಲೇ ವಧೂ ವರರಿಬ್ಬರೂ ವಿವಾಹ ಬಂಧನದ ಅವಧಿಯಲ್ಲಿನ ಅವರವರ ಷರತ್ತುಗಳನ್ನು ಎಲ್ಲ ವಿಷಯಗಳ, ಎಲ್ಲ ಹಂತಗಳ ಸಂಬಂಧದಲ್ಲಿ, ನಿಗದಿಪಡಿಸಬಹುದು. ಆದರೆ ಈ ಬಗ್ಗೆ ಯಾವುದೇ ಕ್ರೋಡೀಕೃತ ಲಿಖಿತ ಕಾನೂನು ಇಲ್ಲ.

ಮುಸ್ಲಿಂ ಸ್ತ್ರೀ ಮತ್ತು ಪುರುಷನ ನಡುವಿನ ವಿವಾಹ ಕಾನೂನಿನ ಪ್ರಕಾರ ಊರ್ಜಿತವಾಗಬೇಕಾದರೆ ಈ ಮುಂದಿನ ಷರತ್ತುಗಳನ್ನು ಪೂರೈಸಿರಬೇಕು.

- ಸ್ವಾಸ್ಥ್ಯ ಚಿತ್ತವನ್ನು ಹೊಂದಿರಬೇಕು.
- ಪ್ರೌಢಾವಸ್ಥೆಯನ್ನು ತಲುಪಿರಬೇಕು.

ಪ್ರೌಢಾವಸ್ಥೆ ಎನ್ನುವುದು ಇಲ್ಲಿ ಸಂತಾನೋತ್ಪತಿ ಮಾಡುವ ದೈಹಿಕ ಸಾಮರ್ಥ್ಯಕ್ಕೆ ಅನ್ವಯಿಸುತ್ತದೆ. ಸಾಮಾನ್ಯವಾಗಿ, ವಿರುದ್ಧವಾಗಿ ರುಜುವಾತಾದ ಹೊರತು, ೧೫ ವರ್ಷಗಳು ತುಂಬಿದ ಒಬ್ಬ ವ್ಯಕ್ತಿ ಪ್ರೌಢಾವಸ್ಥೆಯನ್ನು ತಲುಪಿದ್ದಾಳೆ/ನೆಂದು ಭಾವಿಸಲಾಗುತ್ತದೆ. ಒಬ್ಬ ಹುಡುಗನಿಗೆ ಪ್ರೌಢಾವಸ್ಥೆಯನ್ನು ತಲುಪುವ ಅತ್ಯಂತ ಕಿರಿಯ ವಯಸ್ಸು ೧೨ ವರ್ಷ ಮತ್ತು ಹುಡಿಗಿಗೆ ಒಂಬತ್ತು ವರ್ಷ ಎಂದು ಪರಿಗಣಿಸಲಾಗುತ್ತದೆ. ಪ್ರಾಪ್ತವಯಸ್ಕಳಾಗದ ಮುಸ್ಲಿಂ ಹುಡುಗಿ ಸಹ ಇದರ ಪ್ರಕಾರ ವಿವಾಹವಾಗಬಹುದು. ಆದರೆ ಇದಕ್ಕೆ ವಿವಾಹ-ಪೋಷಕನ ಅನುಮತಿ ಪಡೆಯಬೇಕಾಗುತ್ತದೆ.

ಯಾವುದೇ ಸಂದರ್ಭದಲ್ಲಿಯೂ ಯಾವುದೇ ಪದ್ಧತಿಯ ಮುಸ್ಲಿಂ ಕಾನೂನಿನ ಪ್ರಕಾರವೂ, ಮತಿವಿಕಲ ವ್ಯಕ್ತಿ(ಪುರುಷ ಅಥವಾ ಸ್ತ್ರೀ) ಅಥವಾ ವಿವಾಹವಾಗಲು ಪ್ರಾಪ್ತವಯಸ್ಕನಲ್ಲದವನು/ಳು ತನ್ನ ವಿವಾಹ-ಪೋಷಕನ ಅನುಮತಿ ಮತ್ತು ಮಧ್ಯಸ್ಥಿಕೆಯಿಲ್ಲದೆ ವಿವಾಹವಾಗುವಂತಿಲ್ಲ.

ಆದರೆ ಷಫೀ ಪದ್ಧತಿಯ ಪ್ರಕಾರ, ಹುಡುಗಿ ಮತಿವಿಕಲೆ ಅಥವಾ ಅಪ್ರಾಪ್ತವಯಸ್ಕಳು ಆಗಿರಲಿ, ಅಥವಾ ಇಲ್ಲದಿರಲಿ, ಅವಳು ಪೋಷಕನ ಅನುಮತಿ ಇಲ್ಲದೆ ವಿವಾಹವಾಗುವಂತಿಲ್ಲ. ಆದರೆ ಮೊದಲ ಬಾರಿಗೆ ಅವಳು ವಿವಾಹವಾಗುತ್ತಿದ್ದರೆ ಮಾತ್ರ ಈ ನಿಯಮ ಅನ್ವಯಿಸುವುದಿಲ್ಲ. ಇಸ್ಮಾಯಿಲಿ ಕಾನೂನಲ್ಲಿಯೂ ಇದೇ ನಿಯಮ ಜಾರಿಯಲ್ಲಿದೆ. ಎಲ್ಲ ಪಂಥಗಳ ಮುಸ್ಲಿಮರಿಗೂ ಅನ್ವಯಿಸುವ ಏಕರೂಪದ ಕಾನೂನು ಜಾರಿಯಲ್ಲಿಲ್ಲ. ಅವರು ಆ ಧರ್ಮದ ಯಾವ ಪಂಥಕ್ಕೆ ಸೇರಿದ್ದಾರೆ ಎಂಬುದನ್ನು ಅವಲಂಬಿಸಿ ಅವರಿಗೆ ಅನ್ವಯಿಸುವ ಕಾನೂನು ಸಹ ವ್ಯತ್ಯಾಸಗೊಳ್ಳುತ್ತದೆ. ಯಾರು ವಿವಾಹ- ಪೋಷಕರಾಗಿ ಕಾರ್ಯ ನಿರ್ವಹಿಸಬಹುದು ಎಂಬ ಬಗ್ಗೆಯೂ ಏಕರೂಪದ ಕಾನೂನು ಮುಸ್ಲಿಂರಲ್ಲಿ ಇಲ್ಲ. ಬೇರೆ ಬೇರೆ ಪಂಥಗಳು ಬೇರೆ ಬೇರೆ ಪದ್ಧತಿಗಳನ್ನು ಅನುಸರಿಸುತ್ತಾರೆ. ಈ ರೀತಿಯ ವಿವಾಹ ಪೋಷಕರು ಕೇವಲ ಮಧ್ಯಸ್ಥಿಕೆದಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಇಲ್ಲಿ 'ಕನ್ಯಾದಾನ' ಅಥವಾ 'ಶಾಸ್ತ್ರೋಕ್ತವಾಗಿ ವಧುವನ್ನು ಒಪ್ಪಿಸಿಕೊಡುವ' ಯಾವುದೇ ಸಂಪ್ರದಾಯವೂ ಇಲ್ಲ.

ಕ್ರೈಸ್ತ ಧರ್ಮಕ್ಕೆ ಸೇರಿದವರಲ್ಲಿ, ೧೮ ವರ್ಷಗಳ ವಯಸ್ಸು ಪೂರ್ಣಗೊಂಡ ವಧು ಮತ್ತು ೨೧ ವರ್ಷ ಪೂರ್ಣಗೊಂಡ ವರ ವಿವಾಹವಾಗಬಹುದು.

- ಬಹುಪತ್ನಿತ್ವ/ಬಹುಪತಿತ್ವಕ್ಕೆ ಇಲ್ಲಿಯೂ ಮನ್ನಣೆ ಇಲ್ಲ. ಅದನ್ನು ನಿಷೇಧಿಸಲಾಗಿದೆ.
- ವಧೂವರರು ಸ್ವಯಿಚ್ಛೆಯಿಂದ ಒಬ್ಬರನ್ನೊಬ್ಬರು ವಿವಾಹವಾಗಲು ಬುದ್ಧಿಪೂರ್ವಕವಾಗಿ ಒಪ್ಪಬೇಕು.

ಈ ಬಗ್ಗೆ ಅವರಲ್ಲಿ ವೈಯಕ್ತಿಕ ಕಾನೂನು ಇಲ್ಲಿದಿರುವುದರಿಂದ ಇಂಡಿಯನ್ ಕ್ರಿಶ್ಚಿಯನ್ ವಿವಾಹ ಅಧಿನಿಯಮದಲ್ಲಿ ಮತ್ತು ಭಾರತೀಯ ವಿಚ್ಛೇದನ ಅಧಿನಿಯಮದಲ್ಲಿ ವಿವಾಹ ಕಾನೂನನ್ನು, ವಿಶೇಷ ಅಪವಾದಗಳ ಸಹಿತವಾಗಿ ಕ್ರೋಡೀಕರಿಸಲಾಗಿದೆ.

ಕ್ರಿಶ್ಚಿಯನ್ ವಿವಾಹಗಳಿಗೆ ಹಾಗೂ ಅವರ ವೈವಾಹಿಕ ಸಮಸ್ಯೆಗಳಿಗೆ ಅನ್ವಯಿಸುವ ಅನೇಕ ಕಾನೂನುಗಳು ಜಾರಿಯಲ್ಲಿವೆ. ಅವೆಂದರೆ ಭಾರತೀಯ ಕ್ರಿಶ್ಚಿಯನ್ನರ ವಿವಾಹ ಅಧಿನಿಯಮ, ೧೮೭೨; ವಿವಾಹಗಳ ಸಕ್ರಮೀಕರಣ ಅಧಿನಿಯಮ, ೧೮೯೨; ಕೊಚಿನ್ ಕ್ರಿಶ್ಚಿಯನ್ ಸಿವಿಲ್ ವಿವಾಹ ಅಧಿನಿಯಮ, ೧೯೦೫; ಭಾರತೀಯ ವೈವಾಹಿಕ ವ್ಯಾಜ್ಯಗಳ(ಯುದ್ಧ ವಿವಾಹಗಳು) ಅಧಿನಿಯಮ ೧೯೪೮; ಮತಾಂತರ ಹೊಂದಿದವರ ವಿವಾಹ ವಿಘಟನೆ ಅಧಿನಿಯಮ, ೧೮೬೬ ಮತ್ತು ಭಾರತೀಯ ವಿಚ್ಛೇದನ ಅಧಿನಿಯಮ, ೧೮೬೯. ಹೀಗಾಗಿ ಕ್ರಿಶ್ಚಿಯನ್ನರಿಗೆ ಸಂಬಂಧಿಸಿದ ವಿವಾಹ ಕಾನೂನಿನಲ್ಲಿ ಪರಿಪೂರ್ಣತೆ ಹಾಗೂ ಏಕರೂಪತೆ ಇಲ್ಲ ಎಂದು ಅನೇಕ ವಕೀಲರು ಹಾಗೂ ನ್ಯಾಯವೇತ್ತರು ಅಭಿಪ್ರಾಯಪಡುತ್ತಾರೆ.

**ಬಹುಪತ್ನಿತ್ವ**

ಹಿಂದೂ ವಿವಾಹ ಅಧಿನಿಯಮ ೧೯೫೫ರ ಮೂಲಕ, ಅದುವರೆಗೆ ಜಾರಿಯಲ್ಲಿದ್ದ ಬಹುಪತ್ನಿತ್ವ ಅಥವಾ ಬಹುಪತಿತ್ವವನ್ನು ನಿಷೇಧಿಸಿ ಏಕಪತಿತ್ವ/ಏಕಪತ್ನಿತ್ವವನ್ನು ಊರ್ಜಿತ ವಿವಾಹದ ಅಗತ್ಯ ಷರತ್ತನ್ನಾಗಿ ವಿಧಿಸಿದ್ದು, ಹಿಂದೂ ವಿವಾಹ ಪದ್ಧತಿಯಲ್ಲಿ ತಂದ ಒಂದು ಮಹತ್ತರ ಬದಲಾವಣೆ. ಏಕೆಂದರೆ, ಬಹುಪತ್ನಿತ್ವ/ಬಹುಪತಿತ್ವವನ್ನು ಅನುಮತಿಸುವ ಯಾವುದೇ ಕಾನೂನು ವ್ಯವಸ್ಥೆಯಾಗಲಿ ಅಥವಾ ಅದನ್ನು ಒಪ್ಪಿಕೊಳ್ಳುವ ಯಾವುದೇ ಸಾಮಾಜಿಕ ವ್ಯವಸ್ಥೆಯಾಗಲೀ, ಸ್ತ್ರೀ ಪುರುಷ ಸಮಾನತೆಯನ್ನು ಸಾಧಿಸುವುದು ಸಾಧ್ಯವಿಲ್ಲ. ಭಾರತದಲ್ಲಿ ಕಳೆದ ಸುಮಾರು ಐದು ಅಥವಾ ಅದಕ್ಕೂ ಹೆಚ್ಚು ದಶಕಗಳಿಂದಲೂ ಬಹುಪತ್ನಿತ್ವ ಜಾರಿಯಲ್ಲಿದೆ. ಆದರೆ ಈಗಿನ ಸಾಮಾಜಿಕ ಒಲವು ಏಕಪತ್ನಿತ್ವದ ಕಡೆಗೇ 'ವಿವಾಹ ಎಂಬುದು ಒಬ್ಬ ಪುರುಷ ಒಬ್ಬಳು ಸ್ತ್ರೀಯೊಂದಿಗೆ ಮಾಡಿಕೊಳ್ಳುವಂಥ ಆಜೀವ ಪರ್ಯಂತವಿರುವ ಒಂದು ಬಂಧನ' ಎಂಬ ಕ್ರಿಶ್ಚಿಯನ್ನರ ವಿವಾಹ ಪರಿಕಲ್ಪನೆ, ಕ್ರೈಸ್ತ ಧರ್ಮ ಪ್ರಚಾರವಾದಂತೆ ಪ್ರಚುರಗೊಂಡಿತು. ಇದೇ ಏಕಪತ್ನಿತ್ವವನ್ನು ಕಾನೂನಿನಲ್ಲಿಯೂ ಅಳವಡಿಸಲು ಕಾರಣವೂ ಆಯಿತು. ಅಂತೆಯೇ ಭಾರತೀಯ ಕ್ರಿಶ್ಚಿಯನ್ನರ ವಿವಾಹ ಅಧಿನಿಯಮ, ೧೮೭೨, ವಿವಾಹವಾಗಲಿಚ್ಛಿಸುವ ಪುರುಷ ಮತ್ತು ಸ್ತ್ರೀ ಜೀವಂತ ಪತ್ನಿ ಅಥವಾ ಪತಿಯನ್ನು ಹೊಂದಿರಬಾರದು ಎಂದು ವಿಧಿಸುತ್ತದೆ. ಇದಕ್ಕೂ ಮುಂಚೆ ಪಾರ್ಸಿ ವಿವಾಹ ಮತ್ತು ವಿಚ್ಛೇದನ ಅಧಿನಿಯಮ ೧೮೬೫, ತನ್ನ ಪತಿ/ಪತ್ನಿ ಜೀವಂತವಿರುವಾಗಲೇ ಇನ್ನೊಬ್ಬಳೊಂದಿಗೆ/ಇನ್ನೊಬ್ಬನೊಂದಿಗೆ ಆಗುವ ವಿವಾಹವನ್ನು ಶೂನ್ಯವೆಂದು ಘೋಷಿಸುವ ಉಪಬಂಧವನ್ನು ಹೊಂದಿತ್ತು. ಹಿಂದು ವಿವಾಹ ಅಧಿನಿಯಮ ಆ ನಂತರ ೧೯೫೫ರಲ್ಲಿ ಜಾರಿಗೆ ಬಂದಿದ್ದು ದ್ವಿಪತ್ನಿತ್ವವನ್ನು ಒಂದು ಅಪರಾಧವೆಂದು ಘೋಷಿಸುತ್ತದೆ. ಇದರ ಜಾರಿಯನಂತರ, ಈ ತತ್ತ್ವ ಭಾರತದ ಜನಸಂಖ್ಯೆಯ ಶೇ.೮೮ರಷ್ಟಕ್ಕೆ ಅನ್ವಯಿಸುತ್ತದೆ. ಈ ಅಧಿನಿಯಮ ಜಾರಿಗೆ ಬರುವುದಕ್ಕೆ ಎಷ್ಟೋ ಶತಮಾನಗಳ ಮುನ್ನವೇ ಮನು ತನ್ನ ಮನುಸ್ಮೃತಿಯ IX ಅಧ್ಯಾಯದ ೮೧ನೇ ಶ್ಲೋಕದಲ್ಲಿ ಯಾವ ಸಂದರ್ಭಗಳಲ್ಲಿ ಪುರುಷ ಎರಡನೇ ವಿವಾಹವನ್ನು ಮಾಡಿಕೊಳ್ಳಬಹುದು ಎಂದು ಹೇಳಿದ್ದಾನೆ. ವಿವಾಹವಾಗಿ ಎಂಟುವರ್ಷಗಳ ನಂತರವೂ ಪತ್ನಿಯಲ್ಲಿ ಮಕ್ಕಳಾಗದಿದ್ದರೆ; ಹುಟ್ಟಿದ ಮಕ್ಕಳು ಸತ್ತು ಹೋದರೆ, ಹತ್ತುವರ್ಷದಲ್ಲಿ ಬರಿಯ ಹೆಣ್ಣುಮಕ್ಕಳನ್ನೇ ಪಡೆದರೆ, ಹನ್ನೊಂದನೇ ವರ್ಷದಲ್ಲಿ ಮತ್ತು ಪತ್ನಿ ಜಗಳಗಂಟಿಯಾಗಿದ್ದರೆ, ವಿಳಂಬ ಮಾಡದೆ ಎರಡನೆಯ ವಿವಾಹವನ್ನು ಮಾಡಿಕೊಳ್ಳಬಹುದು ಎಂದಿದ್ದಾನೆ. ಇದು ಪಿತೃಋಣವನ್ನು ತೀರಿಸಲು ಗಂಡು ಸಂತಾನವನ್ನು ಹೊಂದಿರಬೇಕೆಂಬ ಆಳವಾದ ನಂಬಿಕೆಯ ದ್ಯೋತಕವೂ ಆಗಿದೆ. ಆದರೆ ಇಲ್ಲಿ ಗಮನಿಸಬೇಕಾದುದು, ಎರಡನೆಯ ವಿವಾಹವನ್ನು ಸಕಾರಣವಾಗಿ ಮಾತ್ರವೇ ಮಾಡಿಕೊಳ್ಳಬಹುದಾಗಿತ್ತು ಎಂಬುದು. ಹಾಗೆಯೇ ದಯಾಪರಳಾದ ಹಾಗೂ ಶೀಲಸಂಪನ್ನೆಯಾದ ಪತ್ನಿ ರೋಗಿಯಾಗಿದ್ದರೆ, ಅವಳ

ಅನುಮತಿ ಪಡೆದು ಎರಡನೆಯ ವಿವಾಹವಾಗಬಹುದು ಎನ್ನುತ್ತಾನೆ. ಈ ಎರಡು ಸಂದರ್ಭಗಳಲ್ಲಿಯೂ ಮೊದಲನೆಯ ಪತ್ನಿಯನ್ನು ಅಸಡ್ಡೆ ಮಾಡುವಂತಿಲ್ಲ ಅಥವಾ ತ್ಯಜಿಸುವಂತಿಲ್ಲ. ಪತ್ನಿ ಪತಿಯನ್ನು ದ್ವೇಷಿಸುತ್ತಿದ್ದರೆ, ಆ ದ್ವೇಷವನ್ನು ಪತಿ ಒಂದು ವರ್ಷಕಾಲ ಸಹಿಸಿಕೊಳ್ಳಬೇಕು. ಒಂದು ವರ್ಷದ ನಂತರವೂ ಅವನನ್ನು ದ್ವೇಷಿಸುವುದನ್ನು ಅವಳು ಮುಂದುವರಿಸಿದರೆ, ಅವನು ಅವಳೊಂದಿಗೆ ವಾಸಿಸುವುದನ್ನು ನಿಲ್ಲಿಸಬಹುದು[೧] ಮತ್ತು ಅವಳನ್ನು ಅವಳ ಆಸ್ತಿಯಿಂದ ವಂಚಿತಳನ್ನಾಗಿ ಮಾಡಬಹುದು.[೨]

ಮನುಸ್ಮೃತಿಗೆ ಭಾಷೆ ಬರೆದವರಲ್ಲಿ ಪ್ರಮುಖರಾದ ಕುಲ್ಲುಕ ಭಟ್ಟ(ಮನ್ವರ್ಥ ಮುಕ್ತಾವಳಿ) ರುಷಿನಂದನ ಸರಸ್ವತಿ(ಮನ್ವರ್ಥ ಚಂದ್ರಿಕ) ಮತ್ತು ನಂದನಾಚಾರ್ಯ(ಮನುವ್ಯಾಖ್ಯಾನ)ರು ಇಲ್ಲಿ ಅವಳ ಆಸ್ತಿ ಎಂದರೆ ಅವಳ ಪತಿ ಅವಳಿಗೆ ಕೊಟ್ಟ ಒಡವೆಗಳು ಹಾಗೂ ಇತರ ಸಂಪತ್ತು ಎಂದು ಅರ್ಥೈಸಿದ್ದಾರೆ. ಜೊತೆಗೆ ಬೇರೆ ಬೇರೆಯಾಗಿ ವಾಸಿಸಲು ಪ್ರಾರಂಭಿಸಿದ ನಂತರವೂ ಅವಳನ್ನು ನೋಡಿಕೊಳ್ಳಬೇಕು[೩] ಎಂದೂ ಹೇಳಿದ್ದಾರೆ.

ಪತ್ನಿ ಎರಡನೆಯ ಮದುವೆಯಾಗಬಹುದಾದ ಸಂದರ್ಭಗಳನ್ನು ತಿಳಿಸುತ್ತಾ ವಶಿಷ್ಠರು, ಕನ್ಯೆಯನ್ನು ಧರ್ಮಶಾಸ್ತ್ರಗ್ರಂಥಗಳ ಪ್ರಕಾರ ಮದುವೆ ಮಾಡಿಕೊಟ್ಟಿದ್ದು ಮದುವೆ(ನಿಷೇಕದಿಂದ) ಪೂರ್ಣಗೊಳ್ಳದಿದ್ದರೆ ಅಂಥ ಪತಿ ಮೃತನಾಗಿದ್ದರೆ, ಅಂಥ ಹುಡುಗಿ ಮತ್ತೆ ವಿವಾಹವಾಗಬಹುದು ಎಂದಿದ್ದಾರೆ.

ಮನು - ಪತಿ ಪವಿತ್ರ ಕಾರ್ಯಕ್ಕಾಗಿ ವಿದೇಶಕ್ಕೆ ಹೋಗಿದ್ದರೆ ಎಂಟು ವರ್ಷಗಳ ಕಾಲ, ಕಲಿಕೆಗಾಗಿ ಅಥವಾ ಖ್ಯಾತಿಗಳಿಸುವುದಕ್ಕಾಗಿ ಹೋಗಿದ್ದರೆ, ಆರು ವರ್ಷಗಳ ಕಾಲ ಮೋಜಿಗಾಗಿ ಹೋಗದ್ದರೆ, ಮೂರುವರ್ಷಗಳ ಕಾಲ ಕಾದು ನಂತರ ಪತ್ನಿ ಇನ್ನೊಂದು ವಿವಾಹವಾಗಬಹುದು ಎಂದಿದ್ದಾನೆ. ನಾರದನು- ವಿವಾಹಕ್ಕೆ ಮುಂಚೆ ತಿಳಿದಿಲ್ಲದ ಗಂಡನ ದೋಷ ತರುವಾಯ ತಿಳಿದರೆ, ಆಕೆಯ ಬಂಧುಗಳು ಆಕೆಯನ್ನು ಇನ್ನೊಬ್ಬರೊಂದಿಗೆ ವಿವಾಹ ಮಾಡಬಹುದು. ಆಕೆಗೆ ಬಂಧುಗಳಾರೂ ಇಲ್ಲದಿದ್ದರೆ ಆಕೆ ತನ್ನಿಚ್ಛೆಯಂತೆ ಇನ್ನೊಬ್ಬರನ್ನು ವಿವಾಹವಾಗಬಹುದು ಎಂದಿದ್ದಾರೆ.

ಪತಿ ನಾಪತ್ತೆಯಾಗಿದ್ದರೆ, ಮರಣಹೊಂದಿದ್ದರೆ ಅಥವಾ ಧಾರ್ಮಿಕ ಸಂನ್ಯಾಸಿಯಾಗಿದ್ದರೆ, ನಪುಂಸಕನಾಗಿದ್ದರೆ, ಅಥವಾ ಜಾತಿಯಿಂದ ಬಹಿಷ್ಕೃತನಾಗಿದ್ದರೆ, ಅಂಥ ಸಂದರ್ಭಗಳಲ್ಲಿ ಸಹ ಪತ್ನಿ ಎರಡನೆಯ ಬಾರಿ ವಿವಾಹವಾಗಬಹುದು ಎನ್ನಲಾಗಿದೆ.

ಪತಿ/ಪತ್ನಿ ಜೀವಂತವಿದ್ದ ಅಥವಾ ಮರಣ ಹೊಂದಿದ್ದ ಸಂದರ್ಭದಲ್ಲಿ ಪತ್ನಿ/ಪತಿ ಎರಡನೆಯ ವಿವಾಹವಾಗುವುದಕ್ಕೆ ಅನುಮತಿಯೇ ಇಲ್ಲದಂಥ ಮತ್ತು ಪತಿ ಪತ್ನಿಯರ ಸಂಬಂಧವನ್ನು ಕೊನೆಗಾಣಿಸುವುದು ಸಾಧ್ಯವೇ ಇಲ್ಲದಂಥ ಕಾಲದಲ್ಲಿಯೂ ಕೆಲವೊಂದು ಸಂದರ್ಭಗಳನ್ನು ಪರಿಗಣಿಸಿ ಹಾಗೆ ವಿವಾಹವಾಗಲು

ಸ್ಮೃತಿಕಾರರು ಅವಕಾಶ ಕಲ್ಪಿಸಿದ್ದರು. ವಿವಾಹ ನಿಷೇಕದಿಂದ ಪೂರ್ಣಗೊಳ್ಳದ ಸಂದರ್ಭದಲ್ಲಿ ಮಾತ್ರ ಪತ್ನಿ ಎರಡನೆಯ ವಿವಾಹವಾಗಬಹುದೆಂದು ವಸಿಷ್ಠರು ಹೇಳಿದ್ದರೆ ಮನು ಮತ್ತು ನಾರದರು, ವಿವಾಹ ನಿಷೇಕದಿಂದ ಪೂರ್ಣಗೊಂಡಿದ್ದರೂ ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ಪತ್ನಿ ಎರಡನೆಯ ವಿವಾಹವಾಗ ಬಹುದು ಎನ್ನುವ ಮೂಲಕ ತೀರ ಕಟ್ಟುನಿಟ್ಟಾದ ನಿಯಮಗಳನ್ನು ಸ್ವಲ್ಪಮಟ್ಟಿಗೆ ಸಡಿಲಗೊಳಿಸಿದ್ದರು. ಈ ಎಲ್ಲ ಸಂದರ್ಭಗಳಲ್ಲಿ, ಎಂದರೆ ಪತಿ ಅಥವಾ ಪತ್ನಿ ಎರಡನೆಯ ವಿವಾಹಕ್ಕೆ ಅನುಮತಿ ನೀಡಲಾಗಿರುವ ಎಲ್ಲ ಸಂದರ್ಭಗಳಲ್ಲಿಯೂ, ಮೊದಲನೆಯ ವಿವಾಹ ಕೊನೆಗೊಳ್ಳುವುದಿಲ್ಲ. ವಿವಾಹ ಎಂಬುದು ಮುರಿಯಲಾರದ ಸಂಬಂಧ ಎಂಬ ನಂಬಿಕೆ ಇದಕ್ಕೆ ಕಾರಣ.

ಆದರೆ, ಆಚರಣೆಯಲ್ಲಿದ್ದ ದ್ವಿ/ಬಹುಪತ್ನಿತ್ವದಿಂದ ಏಕಪತ್ನಿತ್ವಕ್ಕೆ ಬದಲಾಗದೆ ಇರುವ ಒಂದೇ ಒಂದು ವೈಯಕ್ತಿಕ ಕಾನೂನೆಂದರೆ ಮುಸ್ಲಿಮರ ವೈಯಕ್ತಿಕ ಕಾನೂನು. ''ಟರ್ಕಿ, ಇರಾಕ್, ಇರಾನ್, ಸಿರಿಯಾ, ಟ್ಯೂನೀಸಿಯಾ, ಇಂಡೋನೇಷಿಯಾ, ಪಾಕಿಸ್ತಾನ, ಬಾಂಗ್ಲಾದೇಶದಂಥ ಬಹುಪಾಲು ಮುಸ್ಲಿಂ ದೇಶಗಳಲ್ಲಿ ದ್ವಿ/ಬಹುಪತ್ನಿತ್ವದ ದುರುಪಯೋಗ ಪಡೆಯದಂತೆ ಕಾನೂನುಗಳಲ್ಲಿ ಕೆಲವೊಂದು ಸುಧಾರಣೆಗಳನ್ನು ತಂದಿವೆ. ಆದರೆ ಬಹುಪತ್ನಿತ್ವದ ಪದ್ಧತಿ ಮುಂದುವರಿದೇ ಇರುವುದರಿಂದ ಮುಸ್ಲಿಂ ಮಹಿಳೆಯರಿಗೆ ಆಗುತ್ತಿರುವ ತೊಂದರೆಯನ್ನು ನಿವಾರಿಸುವ ಯಾವುದೇ ವಿಧಾಯೀ ಪ್ರಯತ್ನವೂ ಭಾರತದಲ್ಲಿ ನಡೆದಿಲ್ಲ.''

ಬಹುಪತ್ನಿತ್ವವನ್ನು ಸಂಪೂರ್ಣವಾಗಿ ನಿಷೇಧಿಸುವುದೊಂದೇ ಮುಸ್ಲಿಂ ಕಾನೂನನ್ನು ಸುಧಾರಿಸುವಲ್ಲಿ ಮೊದಲ ಹೆಜ್ಜೆಯಾಗಬೇಕು ಎಂದು ಸಮಾನತೆಯತ್ತ ವರದಿಯಲ್ಲಿ ಅಭಿಪ್ರಾಯಪಡಲಾಗಿದೆ. ಎರಡನೆಯದಾಗಿ, ಎರಡನೆಯ ಮದುವೆಯನ್ನು ಮಾಡಿಕೊಳ್ಳುವ ಹಕ್ಕನ್ನು, ಅದಕ್ಕೆ ನ್ಯಾಯಿಕವಾದ ಅಥವಾ ವಿಧ್ಯುಕ್ತವಾದ ಅನುಮತಿಯನ್ನು ಕಡ್ಡಾಯವಾಗಿ ಪಡೆಯಬೇಕೆಂಬ ಷರತ್ತಿಗೆ ಒಳಪಡಿಸಬೇಕು ಎಂದೂ ಅಭಿಪ್ರಾಯಪಡಲಾಗಿದೆ. ಮುಸ್ಲಿಂ ಧರ್ಮದವರೇ ಹೆಚ್ಚಿನ ಸಂಖ್ಯೆಯಲ್ಲಿರುವ ಬಹುಪಾಲು ದೇಶಗಳಲ್ಲಿ ಈ ರೀತಿಯ ನಿಯಂತ್ರಣವನ್ನು ಸಾಧಿಸಲಾಗಿದೆ. ಇರಾನ್, ಇರಾಕ್, ಸಿಂಗಪೂರ್ ಮತ್ತು ಸಿರಿಯಾ ದೇಶಗಳಲ್ಲಿ ಎರಡನೆಯ ಬಾರಿ ವಿವಾಹವಾಗಬೇಕಾದರೆ ಗಂಡಂದಿರು ನ್ಯಾಯಾಲಯದ ಅನುಮತಿ ಪಡೆಯಬೇಕು. ಅನುಮತಿ ನೀಡುವುದಕ್ಕೆ ಮುನ್ನ ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ನೋಡಿಕೊಳ್ಳುವಂಥ ಹಣಕಾಸಿನ ಸಾಮರ್ಥ್ಯ ಅವನಿಗಿದೆಯೇ ಎಂಬುದನ್ನು ನ್ಯಾಯಾಲಯ ಮನದಟ್ಟು ಮಾಡಿಕೊಳ್ಳಬೇಕು.

ಮುಸ್ಲಿಂ ದೇಶವಾದ ಪಾಕಿಸ್ತಾನದಲ್ಲಿಯೂ ಸಹ ದ್ವಿಪತ್ನಿತ್ವ ಪದ್ಧತಿ ದುರುಪಯೋಗವಾಗಬಾರದೆಂಬ ಉದ್ದೇಶದಿಂದ ಮುಸ್ಲಿಂ ಕುಟುಂಬ ಕಾನೂನುಗಳ ಅಧ್ಯಾದೇಶವನ್ನು(೧೯೬೧) ಹೊರಡಿಸುವ ಮೂಲಕ ನಿಯಂತ್ರಣ ಸಾಧಿಸಲೆತ್ನಿಸಿದೆ. ಈ ಅಧ್ಯಾದೇಶದ ೬ನೇ ಪ್ರಕರಣ ಅಸ್ತಿತ್ವದಲ್ಲಿರುವ ವಿವಾಹ

ಊರ್ಜಿತವಿರುವ ಅವಧಿಯಲ್ಲಿ ಯಾರೇ ಪುರುಷನೂ ಮಧ್ಯಸ್ಥಿಕೆ ಪರಿಷತ್ತಿನ(Arbitration council) ಪೂರ್ವಾನುಮತಿ ಪಡೆಯದೆ ವಿವಾಹವಗುವಂತಿಲ್ಲ ಎನ್ನುತ್ತದೆ. ಮಧ್ಯಸ್ಥಿಕೆ ಪರಿಷತ್ತೂ ಸಹ, ಉದ್ದೇಶಿತ ವಿವಾಹ ಅಗತ್ಯವಾದುದು ಮತ್ತು ನ್ಯಾಯಯುತವಾದುದು ಎಂದು ತನಗೆ ಮನದಟ್ಟಾದರೆ ಮಾತ್ರವೇ ಅಂಥ ವಿವಾಹಕ್ಕೆ ಅನುಮತಿ ಕೊಡಬಹುದಾಗಿರುತ್ತದೆ. ಅಂಥ ಅನುಮತಿಯನ್ನು ಪಡೆಯದೆ ಯಾರೇ ವ್ಯಕ್ತಿ ಎರಡನೆಯ ವಿವಾಹವಾದಲ್ಲಿ, ಅವನು ಒಂದು ವರ್ಷದ ಸಾದಾ ಕಾರಾವಾಸ ಅಥವಾ ೫೦೦೦ ರೂಗಳ ಜುಲ್ಮಾನೆ ಅಥವಾ ಇವೆರಡರಿಂದಲೂ ದಂಡನೀಯನಾಗುತ್ತಾನೆ. ಆದರೆ ದಂಡನೆಯನ್ನು ವಿಧಿಸಲಾಗುತ್ತದೆ ಎಂಬುದನ್ನು ತಿಳಿದಿದ್ದೂ ಕಾನೂನನ್ನು ಉಲ್ಲಂಘಿಸಲಾಗುತ್ತಿದೆ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ.[೫]

ಆದರೆ ಮುಸ್ಲಿಂ ಕಾನೂನಲ್ಲಿ ಸುಧಾರಣೆ ತರಬೇಕೆಂಬ ಅಪೇಕ್ಷೆ ಸಾಮಾನ್ಯವಾಗಿ ವ್ಯಕ್ತವಾಗಿದ್ದರೂ, ಮತ್ತು ಬಹುಪತ್ನಿತ್ವವನ್ನು ಇತರ ಬಹುಪಾಲು ಮುಸ್ಲಿಂ ದೇಶಗಳು ನಿಷೇಧಿಸಿದ್ದರೂ, ಭಾರತ ಸರ್ಕಾರ, ಈ ಬದಲಾವಣೆಗೆ ಮುಸ್ಲಿಂ ಸಮುದಾಯದ ಅಭಿಪ್ರಾಯ ಬೆಂಬಲಿಸುವುದಿಲ್ಲ ಎಂಬ ಕಾರಣದ ಮೇಲೆ ಈ ಬಗ್ಗೆ ಯಾವುದೇ ಕ್ರಮಕೈಗೊಂಡಿಲ್ಲ. ಮುಸ್ಲಿಂ ಮಹಿಳೆಯರ ಹಿತಾಸಕ್ತಿಗಳನ್ನು ಕಡೆಗಣಿಸುವುದು ಅವರಿಗೆ ಸಮಾನತೆ ಮತ್ತು ಸಾಮಾಜಿಕ ನ್ಯಾಯವನ್ನು ನಿರಾಕರಿಸಿದಂತೆ, ಆದ್ದರಿಂದ ಭಾರತದಲ್ಲಿ ಎಲ್ಲ ಸಮುದಾಯಗಳಿಗೂ ಏಕಪತ್ನಿತ್ವದ ನಿಯಮವನ್ನು ಅನ್ವಯಿಸುವ ಮೂಲಭೂತ ನೀತಿಯಲ್ಲಿ ಯಾವುದೇ ಹೊಂದಾಣಿಕೆ ಇರುವುದು ಸಾಧ್ಯವಿಲ್ಲ.[೬] ಎಂದು 'ಸಮಾನತೆಯತ್ತ' ವರದಿಯಲ್ಲಿ ಅಭಿಪ್ರಾಯಪಡಲಾಗಿದೆ. ಬಹುಪತ್ನಿತ್ವ ಮುಸ್ಲಿಂ ಸಮುದಾಯದಲ್ಲಿ ಸಾಮಾನ್ಯವಾಗಿದ್ದರೂ ಹಬೀಬುಲ್ಲಾ-ವಿ-ಶಕೀಲಾ((೧೯೮೮ ೨ ಡಿಎಂಸಿ ೧೮೮) ಪ್ರಕರಣದಲ್ಲಿ ತನ್ನ ಪತಿ ಎರಡನೆಯ ಬಾರಿ ವಿವಾಹವಾದಾಗ ಶಕೀಲಾ ತನ್ನ ಪತಿಯಿಂದ ವಿಚ್ಛೇದನ ಬಯಸಿ ನೋಟೀಸು ಕಳುಹಿಸಿದಾಗ, ಆತ ಪತ್ನಿಯನ್ನು ಬಂದು ತನ್ನ ಜೊತೆ ವಾಸಿಸುವಂತೆ ಒತ್ತಾಯಿಸಿದ. ಆದರೆ ಪತ್ನಿ ಇದಕ್ಕೆ ಒಪ್ಪಲಿಲ್ಲ. ಮುಸ್ಲಿಂ ಕಾನೂನಿನಲ್ಲಿ ಅನುಮತಿ ನೀಡಲಾದಂತೆ ಪತಿ ಎರಡನೆಯ ಬಾರಿಗೆ ಮದುವೆಯಾದ, ಶಕೀಲಾ ಜೀವನಾಂಶಕ್ಕಾಗಿ ಕ್ರಿಮಿನಲ್ ನ್ಯಾಯಾಲಯಕ್ಕೆ ಮತ್ತು ವಿಚ್ಛೇದನಕ್ಕಾಗಿ ಸಿವಿಲ್ ಕೋರ್ಟಿಗೆ ಅರ್ಜಿ ಹಾಕಿದಳು. ಕೊನೆಯಲ್ಲಿ ಸಿವಿಲ್ ನ್ಯಾಯಾಲಯ ಅವಳಿಗೆ ವಿಚ್ಛೇದನೆ ನೀಡಿತು. ಕ್ರಿಮಿನಲ್ ನ್ಯಾಯಾಲಯ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೆ ತಿಂಗಳಿಗೆ ನೂರು ರೂಗಳಂತೆ ಜೀವನಾಂಶ ಕೊಡುವಂತೆ ಆದೇಶಿಸಿತು.

ಇಲ್ಲಿ ಮುಖ್ಯವಾಗುವುದು ನ್ಯಾಯಾಲಯ ತೆಗೆದುಕೊಂಡಿರುವ ನಿಲುವು. "೧೨೫ನೇ ಪ್ರಕರಣ ಬೇರೆ ಬೇರೆ ಧರ್ಮ ಅಥವಾ ಜಾತಿಗಳಿಗೆ ಸೇರಿದ ವ್ಯಕ್ತಿಗಳ ನಡುವೆ ಯಾವುದೇ ವ್ಯತ್ಯಾಸವನ್ನು ಮಾಡುವುದಿಲ್ಲ. ಇದು ಎಲ್ಲ ಧರ್ಮಗಳಿಗೆ ಸೇರಿದ ಎಲ್ಲ ವ್ಯಕ್ತಿಗಳಿಗೆ ಅನ್ವಯಿಸುತ್ತದೆ. ಮತ್ತು ಪಕ್ಷಕಾರರ ವೈಯಕ್ತಿಕ

ಕಾನೂನಿಗೂ ಇದಕ್ಕೂ ಯಾವುದೇ ಸಂಬಂಧವಿಲ್ಲ"(ನಾನಕ್ ಚಂದ್-ವಿ- ಚಂದ್ರ ಕಿಶೋರ್ ಎಐಆರ್ ೧೯೭೦ ಎಸ್‌ಸಿ ೪೦೦) ಈ ಬಗ್ಗೆ ಶಹುಲಾಮೀದ-ವಿ-ಸುಬೈದಾ ಬೀವಿ(೧೯೭೦ ಕೇರಳಾ ಎಲ್‌ಟಿ ೪) ಪ್ರಕರಣದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ನಾಲ್ಕು ಮಂದಿ ಪತ್ನಿಯರನ್ನು ಹೊಂದಲು ಅನುಮತಿ ನೀಡುವ ವೈಯಕ್ತಿಕ ಕಾನೂನಿನ ಬಗ್ಗೆ ಕುರಾನ್ ಯಾವ ಅರ್ಥದಲ್ಲಿ ಮತ್ತು ಎಂಥ ಚಾರಿತ್ರಿಕ ಹಿನ್ನೆಲೆಯಲ್ಲಿ ಕಟ್ಟಳೆ ವಿಧಿಸಿತು ಎಂಬುದನ್ನು ಅರ್ಥಮಾಡಿಕೊಳ್ಳಬೇಕು ಎಂಬುದನ್ನು ಈ ಚರ್ಚೆ ತಿಳಿಸುತ್ತದೆ. ಅಲ್ಲದೆ "ಕುರಾನ್ ನ ನಿಜವಾದ ಅರ್ಥವನ್ನು ಗ್ರಹಿಸಿ, ಅನೇಕ ಮುಸ್ಲಿಂ ದೇಶಗಳು ವೈಯಕ್ತಿಕ ಕಾನೂನನ್ನು ಕ್ರೋಡೀರಿಸಿವೆ ಮತ್ತು ಬಹುಪತ್ನಿತ್ವವನ್ನು ಸಂಪೂರ್ಣವಾಗಿ ನಿಷೇಧಿಸಿವೆ. ಇಲ್ಲವೆ ಅತ್ಯಂತ ಕಟ್ಟುನಿಟ್ಟಾಗಿ ನಿರ್ಬಂಧಿಸಿವೆ".

ಮುಸ್ಲಿಂ ಸಮುದಾಯದಲ್ಲಿರುವ ಬಹುಪತ್ನಿತ್ವ ಪದ್ಧತಿ ಮುಸ್ಲಿಂ ಮಹಿಳೆಯರ ಪರಿಸ್ಥಿತಿಯನ್ನು ಎಷ್ಟು ಶೋಚನೀಯವನ್ನಾಗಿಸಿದೆ ಎಂಬುದು "ಮುಸ್ಲಿಂ ವಿವಾಹಗಳ ವಿಘಟನೆ ಅಧಿನಿಯಮ, ೧೯೩೯"ನ್ನು ಹೊರಡಿಸುವಾಗ ಅದಕ್ಕೆ ಇದ್ದ ಉದ್ದೇಶ ಮತ್ತು ಕಾರಣಗಳ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

"ಮುಸ್ಲಿಂ ಮಹಿಳೆಯ ಪತಿ ಅವಳನ್ನು ನೋಡಿಕೊಳ್ಳಲು ಅಲಕ್ಷ್ಯ ತೋರಿದರೆ, ಅವಳನ್ನು ಪರಿತ್ಯಜಿಸುವ ಮೂಲಕ ಅವಳ ಜೀವನವನ್ನು ದುರ್ಭರವನ್ನಾಗಿ ಮಾಡಿದರೆ, ಅವಳನ್ನು ನಿರಂತರವಾಗಿ ಕೆಟ್ಟರೀತಿಯಲ್ಲಿ ನೋಡಿಕೊಂಡರೆ, ಅಥವಾ ಅವಳ ಜೀವನೋಪಾಯಕ್ಕಾಗಿ ಯಾವುದೇ ವ್ಯವಸ್ಥೆಯನ್ನೂ ಮಾಡದೇ ನಾಪತ್ತೆಯಾದರೆ ಮತ್ತು ಇತರ ಕೆಲವು ಸಂದರ್ಭಗಳಲ್ಲಿ ತನ್ನ ಮದುವೆಯನ್ನು ವಿಘಟಿಸಲು ನ್ಯಾಯಾಲಯದಿಂದ ಡಿಕ್ರಿ ಪಡೆಯಲು ಮುಸ್ಲಿಂ ಕಾನೂನಿನ ಹನಾಫಿ ಸಂಹಿತೆಯಲ್ಲಿ ಯಾವುದೇ ಅವಕಾಶವಿಲ್ಲ. ಇಂಥ ಒಂದು ಅವಕಾಶ ಕಲ್ಪಿಸುವ ಉಪಬಂಧವಿಲ್ಲದಿರುವುದರಿಂದ ಬ್ರಿಟಿಷ್ ಭಾರತದಲ್ಲಿನ ಲೆಕ್ಕವಿಲ್ಲದಷ್ಟು ಮುಸ್ಲಿಂ ಮಹಿಳೆಯರು ಹೇಳಲಾರದಷ್ಟು ಕಷ್ಟಕ್ಕೆ ಸಿಲುಕಿದ್ದಾರೆ". ಈ ಕಾರಣಕ್ಕಾಗಿ ಮೇಲಿನ ಅಧಿನಿಯಮವನ್ನು ಜಾರಿಗೊಳಿಸಲಾಯಿತು. ಈ ಅಧಿನಿಯಮ ಮತ್ತು ೧೯೭೩ರಲ್ಲಿ ದಂಡಪ್ರಕ್ರಿಯಾ ಸಂಹಿತೆಗೆ ತಿದ್ದುಪಡಿಮಾಡಿ ಜೀವನಾಂಶದ ಉಪಬಂಧವನ್ನು ಎಲ್ಲ ಧರ್ಮದವರಿಗೂ ಅನ್ವಯಿಸುವಂತೆ ಮಾಡುವ ಮೂಲಕ ಮುಸ್ಲಿಂ ಮಹಿಳೆಯರ ಜೀವನವನ್ನೂ ಸ್ವಲ್ಪ ಮಟ್ಟಿಗೆ ಸಹನೀಯವನ್ನಾಗಿ ಮಾಡಲು ಸಹಾಯಕವಾಯಿತು ಎಂದು ಖಾತೂನ್ -ವಿ-ಮೊಹಮ್ಮದ್ ಇಬ್ರಾಹಿಂ(ಎಐಆರ್ ೧೯೮೧ ಎಸ್‌ಸಿ ೧೨೪೩) ಪ್ರಕರಣದಲ್ಲಿ ತೀರ್ಪು ನೀಡುತ್ತಾ ನ್ಯಾಯಾಧೀಶ ಫಜಲ್ ಅಲಿ ಅವರು ಅಭಿಪ್ರಾಯ ಪಟ್ಟಿದ್ದಾರೆ. (ಮೇಲಿನ ಅಧಿನಿಯಮದ ಅಡಿಯಲ್ಲಿ, ಮುಸ್ಲಿಂ ಮಹಿಳೆ, ಒಬ್ಬರಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುವ ತನ್ನ ಗಂಡನ ಮೇಲೆ ಅವನು ತನ್ನನ್ನು ನ್ಯಾಯಸಮ್ಮತವಾಗಿ ನಡೆಸಿಕೊಳ್ಳುತ್ತಿಲ್ಲವೆಂಬ ಕಾರಣದ ಮೇಲೆ ವಿಚ್ಛೇದನೆಗಾಗಿ ದಾವೆ ಹೂಡಬಹುದು)

ನಾಲ್ಕು ಮದುವೆಗಳೂ ಊರ್ಜಿತವಿರುವ ಒಬ್ಬ ಮುಸ್ಲಿಂ ಪುರುಷ ಐದನೆಯ ಮದುವೆಯನ್ನು ಮಾಡಿಕೊಂಡರೆ ಅಂಥ ವಿವಾಹ ಶಿಯಾ ಕಾನೂನಿನ ಪ್ರಕಾರ ಶೂನ್ಯವಾದರೆ, ಸುನ್ನಿ ಕಾನೂನಿನ ಪ್ರಕಾರ ಅಕ್ರಮವಾಗುತ್ತದೆ. ಮುಸ್ಲಿಂ ಮಹಿಳೆಗೆ ಮಾತ್ರ ತನ್ನ ಪತಿ ಜೀವಂತವಿರುವಾಗ ಮತ್ತೊಂದು ಮದುವೆ ಮಾಡಿಕೊಳ್ಳಲು ಅವಕಾಶವಿಲ್ಲ.ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿ ಏಕಪತ್ನಿತ್ವವನ್ನು ಕಡ್ಡಾಯ ಮಾಡಿರುವ ಬಗ್ಗೆಯೂ ಅನೇಕ ಪ್ರತಿಕ್ರಿಯೆಗಳು ಬಂದಿವೆ. ನಿಯಂತ್ರಿತ ದ್ವಿಪತ್ನಿತ್ವ ಎಂದರೆ ಮಕ್ಕಳಾಗದಿದ್ದಾಗ, ಪತ್ನಿ ಮಾನಸಿಕವಾಗಿ ಸ್ವಸ್ಥಳಿಲ್ಲದಿದ್ದಾಗ ಮತ್ತು ಇತರ ಇಂಥ ಸಂದರ್ಭಗಳಲ್ಲಿ ಪತ್ನಿಗಗೆ ವಿವಾಹ ವಿಚ್ಛೇದನೆ ಕೊಡುವ ಅಥವಾ ಅದನ್ನು ಅಕೃತಗೊಳಿಸುವ ಬದಲು, ಇಂಥ ನಿಯಂತ್ರಿತ ದ್ವಿಪತ್ನಿತ್ವ ಹಿಂದೂಗಳ ಸಾಂಪ್ರದಾಯಿಕವಾದ ಧಾರ್ಮಿಕ ಭಾವನೆಗಳು ಮತ್ತು ಆಚರಣೆಗಳಿಗೆ ಅನುಗುಣವಾಗಿರುತ್ತದಲ್ಲದೆ ಹೆಚ್ಚು ವಾಸ್ತವಿಕವಾಗಿರುತ್ತದೆ.[೬] ಮಹಾಮಹೋಪಾಧ್ಯಾಯ ಡಾ.ಪಿ.ವಿ ಕಾಣೆ ಅವರೂ ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಕೆಲವು ವರ್ಗಗಳಲ್ಲಿ, ಪೂರ್ಣವಾಗಿ ಆರ್ಥಿಕ ಕಾರಣಗಳಿಗಾಗಿ ಬಹುಪತ್ನಿತ್ವಕ್ಕೆ ಅವಕಾಶವಿರಬೇಕು. ಏಕೆಂದರೆ ಕೊನೆಯಲ್ಲಿ ಮುಖ್ಯವಾಗುವುದು ಹಿಂದೂಗಳ ಆರೋಗ್ಯ ಮತ್ತು ಸಂತೋಷ. ಆದ್ದರಿಂದ ಬಹುಪತ್ನಿತ್ವವನ್ನು ಪೂರ್ಣವಾಗಿ ನಿಷೇಧಿಸುವುದು ಯಶಸ್ವಿಯಾಗಲಾರದು ಎಂದಿದ್ದಾರೆ.

ಆದರೆ ಇಂಥ ಅಭಿಪ್ರಾಯ ಮಹಿಳೆಯರ ಹಿತಾಸಕ್ತಿಯ ದೃಷ್ಟಿಯಿಂದ ಮಾಡಲಾಗಿದೆ ಎಂಬ ತಪ್ಪು ಭಾವನೆ ಉಂಟು ಮಾಡುವುದರಿಂದ ಮತ್ತು ಮುಸ್ಲಿಂ ಕಾನೂನಿನ ಸಂದರ್ಭದಲ್ಲಿಯೂ ಇವೇ ಕಾರಣಗಳನ್ನಾಧರಿಸಿ ಬಹುಪತ್ನಿತ್ವ ಪದ್ಧತಿಯನ್ನು ಸಮರ್ಥಿಸಿಕೊಳ್ಳುವ ಸಾಧ್ಯತೆ ಇರುವುದರಿಂದ, ಅವನ್ನು ಸಂಪೂರ್ಣವಾಗಿ ಖಂಡಿಸಬೇಕಾಗುತ್ತದೆ. ಹಿಂದೂ ವಿವಾಹ ಅಧಿನಿಯಮವನ್ನು ಹೊರಡಿಸುವುದಕ್ಕೆ ತುಂಬ ಹಿಂದಿನಿಂದಲೇ ಟ್ರಿವಾಂಕೂರು ಕೊಚಿನ್ ರಾಜ್ಯದಲ್ಲಿ ಮತ್ತು ಮದ್ರಾಸು ಪ್ರಾಂತ್ಯದ ಮಲಬಾರ್ ಜಿಲ್ಲೆಯಲ್ಲಿ ಜಾರಿಯಲ್ಲಿದ್ದ ಮುರುಮಕ್ಕತ್ತಾಯಮ್ ಪದ್ಧತಿಯಡಿಯಲ್ಲಿ ಏಕಪತ್ನಿತ್ವ ಜಾರಿಯಲ್ಲಿತ್ತು. ಮುಂಬಯಿ ಪ್ರಾಂತ್ಯದಲ್ಲಿ ೧೯೪೬ರಲ್ಲಿ ಮತ್ತು ಮದರಾಸು ಪ್ರಾಂತ್ಯದಲ್ಲಿ ೧೯೪೯ರಲ್ಲಿ ಏಕಪತ್ನಿತ್ವವನ್ನು ಜಾರಿಗೊಳಿಸಲಾಯಿತು.

ಇಂದು ಜಾರಿಯಲ್ಲಿರುವ ಹಿಂದೂ ಕಾನೂನುಗಳಿಗೆ ಆಧಾರ ಗ್ರಂಥವಾಗಿರುವ ಮನು ಸ್ಮೃತಿಯಿಂದ ವಿದಿತವಾಗುವಂತೆ ಆಗ ನಿಯಂತ್ರಿತ ದ್ವಿಪತ್ನಿತ್ವಕ್ಕೆ ಅವಕಾಶವಿತ್ತು. ಹಿಂದೂ ವಿವಾಹ ಅಧಿನಿಯಮ ಜಾರಿಗೆ ಬರುವ ಮುನ್ನ ವಿವಾಹ ವಿಚ್ಛೇದನೆಗೆ ಅವಕಾಶವಿರಲಿಲ್ಲ. ಹಾಗಾಗಿ ಈಗ ಈ ಅಧಿನಿಯಮದ ಮೇರೆಗೆ ಯಾವ ಕಾರಣಗಳಿಗಾಗಿ ವಿವಾಹ ವಿಚ್ಛೇದನೆ ಪಡೆಯಬಹುದೋ ಅವುಗಳಲ್ಲಿ ಕೆಲವೊಂದು ಕಾರಣಗಳಿಗಾಗಿ

(ವಿಚ್ಛೇದನೆಯ ಪರಿಕಲ್ಪನೆಯನ್ನೇ ಪಾಪವೆಂದು ಭಾವಿಸಿದ್ದಂಥ ಕಾಲದಲ್ಲಿಯೂ) ಪತಿ ಎರಡನೆಯ ವಿವಾಹವಾಗಲು ಅವಕಾಶವಿತ್ತು. ಇದನ್ನೇ ನಿಯಂತ್ರಿತ ಬಹುಪತ್ನಿತ್ವ ಎಂದಿರುವುದು.

ಹಿಂದೂ ವಿವಾಹ ಅಧಿನಿಯಮ ೧೯೫೫ರ ೫(೧)ನೇ ಪ್ರಕರಣದ ಮೇರೆಗೆ, ಒಬ್ಬ ಹಿಂದೂ, ವಿವಾಹದ ಸಮಯದಲ್ಲಿ ಜೀವಂತ ಪತ್ನಿ ಅಥವಾ ಪತಿಯನ್ನು ಹೊಂದಿರಬಾರದು. ಹಾಗೆ ಹೊಂದಿದ್ದರೆ(ಈ ಅಧಿನಿಯಮದ ಪ್ರಾರಂಭದ ತರುವಾಯ) ಈ ಅಧಿನಿಯಮದ ೧೭ನೇ ಪ್ರಕರಣದ ಮೇರೆಗೆ ಶೂನ್ಯವಾಗುತ್ತದೆ ಮತ್ತು ಭಾರತ ದಂಡ ಸಂಹಿತೆ ೧೮೬೦ರ ೪೯೪ ಮತ್ತು ೪೯೫ನೇ ಪ್ರಕರಣಗಳು ಅನ್ವಯಿಸುತ್ತವೆ.

ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಮೇರೆಗೆ ಮೊದಲನೆಯ ಪತಿ ಅಥವಾ ಪತ್ನಿ ಜೀವಂತವಿರುವಾಗ ಎರಡನೆಯ ವಿವಾಹವನ್ನು ಮಾಡಿಕೊಂಡರೆ, ಅವಳು/ಅವನು ಏಳು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ದಂಡನಾರ್ಹನಾಗುತ್ತಾನೆ/ಳಾಗುತ್ತಾಳೆ ಮತ್ತು ಜುಲ್ಮಾನೆಗೆ ಸಹ ಬದ್ಧರಾಗಿರುತ್ತಾರೆ. ಎಂದರೆ ದ್ವಿಪತ್ನಿತ್ವ ಅಥವಾ ದ್ವಿಪತಿತ್ವ ಒಂದು ದಂಡನಾರ್ಹ ಅಪರಾಧವನ್ನಾಗಿಸಲಾಗಿದೆ.

ದ್ವಿಪತಿತ್ವ ಅಥವಾ ದ್ವಿಪತ್ನಿತ್ವ ಒಂದು ಅಪರಾಧವೆನಿಸಬೇಕಾದರೆ

- ಆರೋಪಿ ಈ ಹಿಂದೆ ವಿವಾಹವನ್ನು ಮಾಡಿಕೊಂಡಿರಬೇಕು.
- ಅವನು ಮತ್ತೊಂದು ವಿವಾಹವನ್ನು ಆಗಿರಬೇಕು.
- ಎರಡನೆಯ ವಿವಾಹದ ಸಂದರ್ಭದಲ್ಲಿ ಮೊದಲನೆಯ ಪತ್ನಿ/ಪತಿ ಜೀವಂತವಾಗಿರಬೇಕು.
- ಎರಡನೆಯ ವಿವಾಹದ ಸಮಯದಲ್ಲಿ ಮೊದಲನೆಯ ವಿವಾಹ ಊರ್ಜಿತವಾಗಿರಬೇಕು.
- ಆರೋಪಿಯ ಪತ್ನಿ/ಪತಿ ಜೀವಂತವಿರುವಾಗ ಮಾಡಿಕೊಂಡ ವಿವಾಹವೆಂಬ ಕಾರಣಕ್ಕಾಗಿ ಎರಡನೆಯ ವಿವಾಹ, ವಿವಾಹವಾದ ಪಕ್ಷಕಾರರಿಗೆ ಅನ್ವಯಿಸುವ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಶೂನ್ಯವಾಗಿರಬೇಕು.

ಈ ಅಪರಾಧದಿಂದ ತೊಂದರೆಗೊಳಗಾದ ವ್ಯಕ್ತಿ ಈ ಬಗ್ಗೆ ದೂರು ನೀಡಬಹುದು. ಇಲ್ಲಿ ತೊಂದರೆ ಗೊಳಗಾದ ವ್ಯಕ್ತಿ ಎಂದರೆ ಹಿಂದಿನ(ಮೊದಲನೆಯ) ಪತ್ನಿ ಅಥವಾ ಪತಿ. ಪತ್ನಿಯ ಸಂದರ್ಭದಲ್ಲಾದರೆ, ಅವಳ ಪರವಾಗಿ ಅವಳ ಕುಟುಂಬದ ಸದಸ್ಯರಲ್ಲೊಬ್ಬರು ದೂರು ನೀಡಬಹುದಾಗಿರುತ್ತದೆ. ಇಲ್ಲಿ ಕುಟುಂಬದ ಸದಸ್ಯರು ಎಂದರೆ, ಅವಳ ತಂದೆ, ತಾಯಿ, ಸಹೋದರ, ಸಹೋದರಿ, ಮಗ ಅಥವಾ ಮಗಳು, ತಂದೆ ಅಥವಾ ತಾಯಿಯ ಸಹೋದರ ಅಥವಾ ಸಹೋದರಿ. ಆದರೆ ಆರ್ಥಿಕವಾಗಿ ಸ್ವತಂತ್ರಳಲ್ಲದ, ಶಿಕ್ಷಣವಿಲ್ಲದ ಹಾಗೂ ಕಾನೂನು ಜ್ಞಾನವಿಲ್ಲದ ಮಹಿಳೆ ಇದಕ್ಕಾಗಿ ನ್ಯಾಯಾಲಯದ

ಮೆಟ್ಟಿಲು ಹತ್ತುವ ಸಂಭವ ಕಡಿಮೆ. ಹಾಗೆ ನ್ಯಾಯಾಲಯದ ಮೊರೆ ಹೋದ ಸಂದರ್ಭದಲ್ಲಿ ಸಹ ಸಮಾಜದಿಂದ ಹಾಗೂ ತನ್ನ ಕುಟುಂಬದ ಸದಸ್ಯರಿಂದಲೇ ಸಿಗುವ ಬೆಂಬಲ ಅತ್ಯಲ್ಪ. ಮಹಿಳೆ ಸಾರ್ವಜನಿಕವಾಗಿ ಹೊರಬರುವುದನ್ನು ಅನುಮತಿಸದ ಸಾಮಾಜಿಕ ಕಟ್ಟಳೆಗಳು ರೂಢಿಯಲ್ಲಿರುವ ಸಂದರ್ಭದಲ್ಲಿ, ನ್ಯಾಯಾಲಯದ ಅನುಮತಿ ಪಡೆದು ಬೇರೊಬ್ಬ ವ್ಯಕ್ತಿ ದೂರು ನೀಡಬಹುದಾಗಿದೆ. ದ್ವಿಪತ್ನಿತ್ವ ಒಂದು ಅಪರಾಧವಾಗಿದ್ದರೂ ಸಹ, ಅಂಥ ಅಪರಾಧ ಘಟಿಸಿದಾಗ ಬಹಳಷ್ಟು ಪ್ರಕರಣಗಳಲ್ಲಿ ಕುಟುಂಬದಲ್ಲಿ ಎಲ್ಲರೂ ರಾಜೀ ಮನೋಭಾವದವರಾಗಿರುತ್ತಾರೆ. ಆದ್ದರಿಂದ ಈ ಸಮಸ್ಯೆಯನ್ನು ಕೂಲಂಕುಷವಾಗಿ ಪರ್ಯಾಲೋಚಿಸಿದ 'ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಅಧ್ಯಯನ ಸಮಿತಿ' ದ್ವಿಪತ್ನಿತ್ವದ ಪ್ರಕರಣಗಳಲ್ಲಿ ಕಾನೂನು ಕ್ರಮ ಕೈಗೊಳ್ಳುವ ಹಕ್ಕನ್ನು ಹುಡುಗಿಯ ಕುಟುಂಬದ ಸದಸ್ಯರಲ್ಲದ ಇತರ ವ್ಯಕ್ತಿಗಳಿಗೂ ವಿಸ್ತರಿಸುವ ಸಾಧ್ಯತೆಯನ್ನು ಪರ್ಯಾಲೋಚಿಸಬೇಕೆಂಬ ಸಲಹೆಯನ್ನು ಮುಂದಿಟ್ಟಿದೆ. ಇದಕ್ಕೆ ನ್ಯಾಯಾಲಯದಿಂದ ಮುಂಚಿತವಾಗಿ ಅನುಮತಿ ಪಡೆಯಬೇಕೆಂಬ ಷರತ್ತು ಈ ಹಕ್ಕನ್ನು ದುರುಪಯೋಗಪಡಿಸಿಕೊಳ್ಳದಂತೆ ತಡೆಯುತ್ತದೆ.

ಸಮಾಜ ಸುಧಾರಣೆಯ ದೃಷ್ಟಿಯಿಂದ, ಯಾವುದೇ ಕಾನೂನಿನಂತೆ, ಈ ಉಪಬಂಧವೂ ಅತ್ಯಂತ ದುರ್ಬಲವಾದ ಮತ್ತು ವಿಫಲವಾದ ಉಪಬಂಧವಾಗಿದೆ. ಇದಕ್ಕೆ ಕಾರಣ ಹಿಂದೂ ವಿವಾಹ ಅಧಿನಿಯಮದ ೧೭ನೇ ಪ್ರಕರಣದ ಉದ್ದೇಶವನ್ನು ಮರೆತು ಅದರಲ್ಲಿ ಬಳಸಲಾದ ಪದಗಳ ಅಕ್ಷರಶಃ ವ್ಯಾಖ್ಯಾನಕ್ಕೆ ಕಟ್ಟುಬೀಳುವುದು. ಕಾನೂನಿನ ಆಶಯ ಸೋಲುವುದು ಕಾನೂನುಗಳ ಇಂಥ ಔಪಚಾರಿಕ ಅನ್ವಯದಿಂದ ಎಂಬುದು ಈ ಪ್ರಕರಣದಲ್ಲಿ ಬಳಸಲಾದ 'ಅನುಷ್ಠಾನಗೊಳಿಸಿದ'ದ ಎಂಬ ಪದದ ನಿಶ್ಚಿತ ಅರ್ಥಕ್ಕೆ ಕಟ್ಟುಬಿದ್ದು ನೀಡಿರುವ ತೀರ್ಪುಗಳಿಂದ ಸ್ಪಷ್ಟವಾಗುತ್ತದೆ.

ವಿವಾಹದ ಸಂದರ್ಭದಲ್ಲಿ 'ಅನುಷ್ಠಾನಗೊಳಿಸು' ಎಂಬ ಪದಕ್ಕೆ, ಸಂಕ್ಷಿಪ್ತ ಆಕ್ಸ್‌ಫರ್ಡ್ ನಿಘಂಟಿನಲ್ಲಿ 'ಸರಿಯಾದ ಆಚರಣೆಗಳೊಂದಿಗೆ ಮತ್ತು ವಿಧ್ಯುಕ್ತ ರೀತಿಯಲ್ಲಿ ವಿವಾಹವನ್ನು ನೆರವೇರಿಸುವುದು' ಎಂಬ ಅರ್ಥವಿದೆ. ಆದ್ದರಿಂದ ವಿವಾಹವನ್ನು ಸರಿಯಾದ ಆಚರಣೆಗಳಿಂದ ಮತ್ತು ವಿಧ್ಯುಕ್ತ ರೀತಿಯಲ್ಲಿ ಆಚರಿಸಿದ ಅಥವಾ ನೆರವೇರಿಸಿದ ಹೊರತು ವಿವಾಹವನ್ನು 'ಅನುಷ್ಠಾನಗೊಳಿಸಲಾಗಿದೆ' ಎಂದು ಹೇಳಲಾಗುವುದಿಲ್ಲ. ಆದ್ದರಿಂದ ಅಧಿನಿಯಮದ ೧೭ನೇ ಪ್ರಕರಣದ ಉದ್ದೇಶಕ್ಕಾಗಿ, ಅಧಿನಿಯಮದ ಉಪಬಂಧಗಳ ಕಾರಣದಿಂದ ಭಾರತ ದಂಡಸಂಹಿತೆಯ ೪೯೪ನೇ ಪ್ರಕರಣವು ಅನ್ವಯಿಸುವಂಥ ವಿವಾಹವು ಸರಿಯಾದ ಆಚರಣೆಗಳಿಂದ ಮತ್ತು ವಿಧ್ಯುಕ್ತ ರೀತಿಯಲ್ಲಿ ಆಚರಿಸಿದಂಥ ವಿವಾಹವಾಗಿರತಕ್ಕದ್ದು. ಭಾವುರಾವ್ -ವಿ-ಮಹಾರಾಷ್ಟ್ರ ರಾಜ್ಯ (ಎಐಆರ್ ೧೯೬೫ ಎಸ್‌ಸಿ ೧೯೬೪), ಕೇವಲರಾಮ್-ವಿ-ಎಚ್.ಪಿ ಆಡಳಿತ (ಎಐಆರ್ ೧೯೬೬ ಎಸ್‌ಸಿ ೧೫೬೪) ಮತ್ತು ಪ್ರಿಯಾಬಾಲಾ-ವಿ-ಸುರೇಶ್ ಚಂದ್ರ(ಎಐಆರ್ ೧೯೭೭ ಎಸ್‌ಸಿ ೧೧೫೩) ಪ್ರಕರಣಗಳಲ್ಲಿಯೂ ಸರ್ವೋಚ್ಚ ನ್ಯಾಯಾಲಯ ಇದೇ ನಿಲುವನ್ನು ತಳೆದಿದೆ.

ದ್ವಿಪತ್ನಿತ್ವವನ್ನು ಅಪರಾಧವನ್ನಾಗಿಸುವ ಉಪಬಂಧದಲ್ಲಿನ ಒಂದು ಪದದ ವ್ಯಾಖ್ಯಾನ ಮಹಿಳೆಗಿರುವ ಹಕ್ಕಿನಿಂದ ಅವಳನ್ನು ಹೇಗೆ ವಂಚಿತಳನ್ನಾಗಿಸಬಹುದು ಎಂಬುದಕ್ಕೆ ಇದೊಂದು ಸ್ಪಷ್ಟ ಉದಾಹರಣೆ. ಮೇಲೆ ಉದಾಹರಿಸಿದ ಪ್ರಕರಣಗಳಲ್ಲಿ ನ್ಯಾಯಾಲಯ ತಳೆದ ನಿಲುವಿನಿಂದಾಗಿ, ಮುಂದೆ ಇಂಥದೇ ಅಪರಾಧವನ್ನೆಸಗುವವರು ಕಾನೂನಿನ ಮುಷ್ಠಿಯೊಳಗೆ ಸಿಲುಕದಂತೆ ಎಚ್ಚರವಹಿಸುತ್ತಾರೆ. ಕಾನೂನನ್ನು ಉಲ್ಲಂಘಿಸಿಯೂ ಶಿಕ್ಷೆಯಿಂದ ಪಾರಾಗುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸಕ್ತ ಪ್ರಕರಣದಲ್ಲಿ ಬಳಸಿರುವ 'ಅನುಷ್ಠಾನಗೊಳಿಸಲಾದ' ಎಂಬ ಪದಕ್ಕೆ ಬದಲಾಗಿ 'ಮಾಡಿಕೊಳ್ಳಲಾದ' ಎಂಬ ಪದವನ್ನು ಪ್ರತಿಸ್ಥಾಪಿಸಬೇಕೆಂಬುದಾಗಿ ಸಲಹೆ ನೀಡಲಾಗಿತ್ತು. (ಮಜೂಮ್ ದಾರ್, ನೋಟ್ಸ್ ಆನ್ ರೀಸೆಂಟ್ ಕೇಸೆಸ್, ಬಾಂಬೆ ಲಾ ರಿಪೋರ್ಟರ್ ಸಂ.೬೮, ಪು.೫೭(ಜೆ)(೧೯೬೬)) ಭಾರತೀಯ ಮಹಿಳೆಯರ ಸ್ಥಾನಮಾನ ಅಧ್ಯಯನ ಸಮಿತಿಯೂ ಈ ಬಗ್ಗೆ ಕೂಲಂಕುಷ ಅಧ್ಯಯನ ಹಾಗೂ ಸಮೀಕ್ಷೆಗಳನ್ನು ನಡೆಸಿ 'ಅನುಷ್ಠಾನಗೊಳಿಸಲಾದ' ಎಂಬ ಪದಗಳಿಗೆ 'ವಿವಾಹ ಮಾಡಿಕೊಂಡರೆ' ಎಂಬ ಪದಗಳನ್ನು ಪ್ರತಿಸ್ಥಾಪಿಸಬೇಕೆಂದು ಸಲಹೆ ಮಾಡಿದೆ. ಅಲ್ಲದೆ 'ವಿವಾಹದ ಸಂದರ್ಭದಲ್ಲಿ ಕೆಲವೊಂದು ಅಗತ್ಯ ಆಚರಣೆಗಳನ್ನು ಮಾಡದೆ ಬಿಟ್ಟರೂ, ಅವರಿಬ್ಬರ ನಡುವೆ ಪತಿ-ಪತ್ನಿಯರ ಸಂಬಂಧವೇರ್ಪಟ್ಟಿರುವಲ್ಲಿ, ದ್ವಿಪತ್ನಿತ್ವದ ಅಪರಾಧ ಮಾಡಿಲ್ಲವೆಂದು ಅರ್ಥೈಸಬಾರದು' ಎಂಬ ವಿವರಣೆಯನ್ನು ಸೇರಿಸಬೇಕೆಂದು ಸಲಹೆ ನೀಡಿತು. ಅನೇಕ ಸಮಿತಿಗಳ ಅನೇಕ ಶಿಫಾರಸ್ಸುಗಳು ಹಾಗೂ ಸಲಹೆಗಳಿಗೆ ಒದಗಿದ ಗತಿಯೇ ಇದಕ್ಕೂ ಒದಗಿದೆ. ಆದರೆ, ಈಗೀನ ನ್ಯಾಯ ನೀಡಿಕೆಯಲ್ಲಿ ಮಹಿಳೆಯರಿಗೆ ವಾಸ್ತವಿಕ ನ್ಯಾಯ ಒದಗಿಸಬೇಕೆಂಬ ಕಳಕಳಿ ವ್ಯಕ್ತವಾಗುತ್ತಿರುವುದರಿಂದ, ಕಾನೂನಿನ ಪದ ತಾಂತ್ರಿಕವಾಗಿ ಸಂವಹಿಸುವ ಅರ್ಥಕ್ಕಿಂತ ಅದರ ಹಿಂದಿರುವ ಸುಧಾರಣಾ ಮನೋಭಾವ ಹಾಗೂ ಆಶಯಕ್ಕೆ ಹೆಚ್ಚಿನ ಮಹತ್ವ ನೀಡಿ, ಪದದ ಅರ್ಥವ್ಯಾಪ್ತಿಯನ್ನೂ ಮೀರಿ ಅರ್ಥೈಸುವಂಥ ನ್ಯಾಯಿಕ ಕ್ರಿಯಾಶೀಲತೆ(Judicial activivism) ಕೆಲಸ ಮಾಡುತ್ತಿದೆ. ದ್ವಿಪತ್ನಿತ್ವಕ್ಕೆ ಸಂಬಂಧಪಟ್ಟಂತೆ ನೀಡಲಾದ ಇತ್ತೀಚಿನ ತೀರ್ಪುಗಳಲ್ಲಿ ಇದರ ಸ್ಪಷ್ಟ ಹೊಳಪನ್ನು ಕಾಣಬಹುದು.

ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಪತ್ನಿ ಪತಿಯ ಮೇಲೆ ದ್ವಿಪತ್ನಿತ್ವದ ಆರೋಪ ಹೊರಿಸಿ ನ್ಯಾಯಾಲಯದ ಮೆಟ್ಟಿಲು ಹತ್ತುವುದು ತೀರ ಅಪರೂಪ. ಹಾಗೊಂದು ವೇಳೆ ಪ್ರಶ್ನಿಸಿದರೂ, ಕಾನೂನಿನ ತಾಂತ್ರಿಕತೆ, ಅಕ್ಷರಶಃ ವ್ಯಾಖ್ಯಾನ(ಆಶಯದ ನಿರ್ಲಕ್ಷ್ಯ), ಸಾಕ್ಷ್ಯಗಳ ಕೊರತೆ ಇವುಗಳಿಂದಾಗಿ ನ್ಯಾಯ ದೊರೆಯುವ ಸಾಧ್ಯತೆ ಅಷ್ಟರಮಟ್ಟಿಗೆ ಕಡಿಮೆ. ಆದ್ದರಿಂದ, ತನ್ನ ಪತಿ ಎರಡನೆಯ ವಿವಾಹವಾಗುತ್ತಿದ್ದಾನೆಂಬುದನ್ನು ತಿಳಿದ ಕೂಡಲೇ, ಅವನು ವಿವಾಹವಾಗದಂತೆ ನಿರ್ಬಂಧಕಾಜ್ಞೆಯನ್ನು (injunction) ಪಡೆಯುವುದು ಹೆಚ್ಚು ಸೂಕ್ತ.

ಶಕರಪ್ಪ-ವಿ-ಬಸಪ್ಪ(ಎಐಆರ್ ೧೯೬೪, ಮೈಸೂರು ಪಿ ೨೪೭) ಪ್ರಕರಣದಲ್ಲಿ ತನ್ನ ಪತಿ ಎರಡನೆಯ ವಿವಾಹವಾಗದಂತೆ ನಿರ್ಬಂಧಿಸುವ ಶಾಶ್ವತ ನಿರ್ಬಂಧಕಾಜ್ಞೆಯನ್ನು ಪಡೆಯಲು ಹಿಂದೂ ಪತ್ನಿ ಹಕ್ಕುಳ್ಳವಳಾಗಿ ದ್ದಾಳೆ ಮತ್ತು ಇಂಥ ದಾವೆಯನ್ನು ನಿರ್ದಿಷ್ಟ ಪರಿಹಾರ ಅಧಿನಿಯಮ, ೧೮೭೭ರ ಪ್ರಕರಣ ೫೪ರ ಮೇರೆಗೆ( ಈಗ ನಿರ್ದಿಷ್ಟ ಪರಿಹಾರ ಅಧಿನಿಯಮ ೧೯೬೩ರ ಪ್ರಕರಣ ೩೮) ಹೂಡಬಹುದಾಗಿದೆ ಎಂದು ಮೈಸೂರು ಉಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಆದರೆ ಉಮಾ ಪ್ರಸಾದ್ ಸಿಂಗ್ -ವಿ- ಶ್ರೀಮತಿ ರಾಧಾದೇವಿ(ಎಐಆರ್ ೧೯೬೭ ಪಾಟ್ನಾ, ಪು.೨೪೭) ಪ್ರಕರಣದಲ್ಲಿ ಎರಡನೆಯ ವಿವಾಹದ ವಿರುದ್ಧ ನಿರ್ಬಂಧಕಾಜ್ಞೆಯ ಪರಿಹಾರ ಪಡೆಯಲು ಹಿಂದೂ ವಿವಾಹ ಅಧಿನಿಯಮ, ೧೯೫೫ರ ಯಾವುದೇ ಉಪಬಂಧವೂ ಅವಕಾಶ ನೀಡುವುದಿಲ್ಲ ಎಂದು ಪಾಟ್ನಾ ಉಚ್ಚನ್ಯಾಯಾಲಯ ವಿಭಾಗೀಯ ಪೀಠ ಅಭಿಪ್ರಾಯಪಟ್ಟಿದೆ. ಎರಡನೆಯ ಪ್ರಕರಣದಲ್ಲಿ ಅಂಥ ಪರಿಹಾರವನ್ನು ಕ್ಲೇಮು ಮಾಡಲು ಹಿಂದೂ ವಿವಾಹ ಅಧಿನಿಯಮ, ೧೯೫೫ರ ಅಡಿಯಲ್ಲಿ ಅವಕಾಶವಿಲ್ಲ ಎಂದು ಹೇಳಲಾಗಿದೆಯೇ ಹೊರತು ನಿರ್ದಿಷ್ಟ ಪರಿಹಾರ ಅಧಿನಿಯಮದ ಅಡಿಯಲ್ಲಿ ಕ್ಲೇಮು ಮಾಡುವಂತಿಲ್ಲ ಎಂದು ಹೇಳಿಲ್ಲ. ಹಾಗಾಗಿ ಈ ಬಗ್ಗೆ ಸ್ಪಷ್ಟೀಕರಣವಿದ್ದರೆ, ಗೊಂದಲ ಅಥವಾ ವಾದಪತ್ರದಲ್ಲಿ ನಿರ್ದಿಷ್ಟ ಪರಿಹಾರವನ್ನು ನಿರ್ದಿಷ್ಟ ಅಧಿನಿಯಮದ ಅಡಿಯಲ್ಲಿ ಕ್ಲೇಮು ಮಾಡಿಲ್ಲ ಎಂಬ ಕಾರಣಕ್ಕೆ ಪರಿಹಾರ ದೊರೆಯದೆ ತೊಂದರೆಗೀಡಾಗುವ ಸಂಭವ ಕಡಿಮೆಯಾಗುತ್ತದೆ. ಈ ದೃಷ್ಟಿಯಿಂದ, ಹಿಂದೂ ವಿವಾಹ ಅಧಿನಿಯಮದ ಅಥವಾ ನಿರ್ದಿಷ್ಟಪರಿಹಾರ ಅಧಿನಿಯಮದ ಅಡಿಯಲ್ಲಿ ಎರಡನೆಯ ವಿವಾಹದ ವಿರುದ್ಧ ನಿರ್ಬಂಧಕಾಜ್ಞೆಯನ್ನು ನೀಡಲು ಹಿಂದೂ ವಿವಾಹ ಅಧಿನಿಯಮದ ಯಾವುದೇ ಉಪಬಂಧವೂ ನ್ಯಾಯಾಲಯವನ್ನು ತಡೆಯ ತಕ್ಕದಲ್ಲ ಎಂಬ ಬಗ್ಗೆ ಒಂದು ಉಪಬಂಧವನ್ನು ಕಲ್ಪಿಸುವುದೊಳ್ಳೆಯದು. ಈ ಬಗ್ಗೆ 'ಸಮಾನತೆಯುತ್ತ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿದೆ. ಆದರೆ ಈ ಬಗ್ಗೆ ಈವರೆಗೆ ಯಾವುದೇ ಕ್ರಮಕೈಗೊಂಡಿಲ್ಲ.

ದ್ವಿಪತ್ನಿತ್ವವನ್ನು ಪ್ರಶ್ನಿಸಿ ಹೂಡಿದ ಬಹುಪಾಲು ದಾವೆಗಳು ವಿಫಲವಾಗುವುದಕ್ಕೆ ಮುಖ್ಯ ಕಾರಣಗಳೆಂದರೆ ಮೊದಲನೆಯದಾಗಿ, ಕಾನೂನಿನ ಕ್ರಮದಿಂದ ತಪ್ಪಿಸಿಕೊಳ್ಳುವುದಕ್ಕಾಗಿಯೇ ಎರಡನೆಯ ವಿವಾಹವನ್ನು ವಿಧ್ಯುಕ್ತ ರೀತಿಯಲ್ಲಿ ಮತ್ತು ಅಗತ್ಯ ಆಚರಣೆಗಳನ್ನು ಅನುಸರಿಸದೆ ನೆರವೇರಿಸಿಕೊಳ್ಳುವುದು ಮತ್ತು ಅಂಥ ವಿವಾಹ ಕಾನೂನಿನ ತಾಂತ್ರಿಕ ವ್ಯಾಖ್ಯಾನ. ಇದರಿಂದಾಗಿ ದಾವೆ ರುಜುವಾತು ಪಡಿಸಲಾಗದ ವಿಫಲವಾಗುತ್ತದೆ.

ಎರಡನೆಯದಾಗಿ ಮತ್ತು ಬಹುಮುಖ್ಯವಾಗಿ ದಾವೆ ಹೂಡಿದ ಪತ್ನಿ(ಅಥವಾ ಅವಳ ಪರವಾಗಿ ದಾವೆ ಹೂಡಿದವರು) ಆರೋಪಿಯೊಡನೆ(ಪತಿ) ಆದ ತನ್ನ ಮೊದಲನೆ ವಿವಾಹವನ್ನು ರುಜುವಾತುಪಡಿಸಲು ವಿಫಲಳಾಗುತ್ತಾಳೆ. ಇದಕ್ಕೆ ಕಾರಣ ತನ್ನ ವಿವಾಹದ ಸಂಬಂಧದಲ್ಲಿನ ಯಾವುದೇ ದಾಖಲೆಗಳ ಕೊರತೆ.

ಹಿಂದೂ ವಿವಾಹ ಅಧಿನಿಯಮ ೧೯೫೫ರ ೮ನೇ ಪ್ರಕರಣ ಹಿಂದೂ ವಿವಾಹಗಳ ಕಡ್ಡಾಯ ನೋಂದಣಿಗೆ ಉಪಬಂಧ ಕಲ್ಪಿಸಲು ರಾಜ್ಯಸರ್ಕಾರಗಳಿಗೆ ಅಧಿಕಾರ ನೀಡುತ್ತದೆ. ದ್ವಿಪತ್ನಿತ್ವ, ಬಾಲ್ಯವಿವಾಹ, ಆಸ್ತಿ ಮುಂತಾದುವುಗಳಿಗೆ ಸಂಬಂಧಿಸಿದಂತೆ ವಿವಾಹ ನೋಂದಣಿ ಪತ್ರ ಅಧಿಕೃತ ದಾಖಲೆಯಾಗುವುದರಿಂದ ಮಹಿಳಾ ಹಕ್ಕುಗಳ ಸ್ಥಾಪನೆಯಲ್ಲಿ ಈ ಉಪಬಂಧ ಅವಳನ್ನು ಹೆಚ್ಚು ಸಬಲಳನ್ನಾಗಿಸುತ್ತದೆ. ಆದ್ದರಿಂದ ವಿವಾಹ ನೋಂದಣಿಯನ್ನು ರಾಜ್ಯಸರ್ಕಾರಗಳ ಇಚ್ಛೆಗೆ ಬಿಡದೆ, ಕಡ್ಡಾಯಗೊಳಿಸಬೇಕು ಎಂಬ ಬಹು ದಿನದ ಬೇಡಿಕೆಯನ್ನು ಈ ಹಿನ್ನೆಲೆಯಲ್ಲಿ ಪರ್ಯಾಲೋಚಿಸಬೇಕಾಗುತ್ತದೆ. ಯಾವುದೇ ಸಂಪ್ರದಾಯದ ಮತ್ತು ಆಚರಣೆಗಳ ಕೆಳಗೆ ವಿವಾಹವನ್ನು ನೆರವೇರಿಸಿದ್ದರೂ, ವಿವಾಹದ ನೋಂದಣಿ ವಿವಾಹದ ನಿರ್ಣಾಯಕ ಸಾಕ್ಷ್ಯವಾಗಬೇಕು.

ಪಾರ್ಸಿಗಳು ಮತ್ತು ಭಾರತೀಯ ಕ್ರಿಶ್ಚಿಯನ್ನರಲ್ಲಿ ವಿವಾಹದ ನೋಂದಣಿ ಕಡ್ಡಾಯ.(ಪಾರ್ಸಿ ವಿವಾಹ ಮತ್ತು ವಿಚ್ಛೇದನ ಅಧಿನಿಯಮ, ೧೯೩೬ರ ೬ನೇ ಪ್ರಕರಣ ಮತ್ತು ಭಾರತೀಯ ಕ್ರಿಶ್ಚಿಯನ್ನರ ವಿವಾಹ ಅಧಿನಿಯಮ, ೧೮೭೨ರ ೩೭ ಮತ್ತು ೬೩ನೇ ಪ್ರಕರಣಗಳು) ವಿಶೇಷ ವಿವಾಹ ಅಧಿನಿಯಮ ೧೯೫೪ರ ಅಡಿಯಲ್ಲಿ ವಿವಾಹಗಳ ನೋಂದಣಿ ಕಡ್ಡಾಯ. ಇತರ ಯಾವುದೇ ಕಾನೂನಿನ ಅಡಿಯಲ್ಲಿನ ವಿವಾಹವನ್ನು ಈ ಅಧಿನಿಯಮದ ೧೬ನೇ ಪ್ರಕರಣದ ಅಡಿಯಲ್ಲಿ ನೋಂದಣಿ ಮಾಡಬಹುದಾಗಿರುತ್ತದೆ.

ವಿವಾಹ ನೋಂದಣಿ ಕಡ್ಡಾಯವಾದಾಗ, ಕಾನೂನು ಉಪಬಂಧಗಳ ವ್ಯಾಖ್ಯಾನದ ಉಪಯೋಗ ಪಡೆದು ಕಾನೂನನ್ನು ಉಲ್ಲಂಘಿಸುವ ಪ್ರವೃತ್ತಿ ಕಡಿಮೆಯಾಗುತ್ತದೆ. ಮತ್ತು ಆ ಮೂಲಕ ದ್ವಿಪತ್ನಿತ್ವವನ್ನು ಯಶಸ್ವಿಯಾಗಿ ತಡೆಗಟ್ಟುವುದು ಸಾಧ್ಯವಾಗುತ್ತದೆ.

ವಿವಾಹ ಊರ್ಜಿತವಾಗಬೇಕಾದರೆ ಆ ವಿವಾಹ ಅದರ ಜಾತಿ ಅಥವಾ ಸಮುದಾಯದಲ್ಲಿರುವ ಸಂಪ್ರದಾಯದ ಪ್ರಕಾರ ಆಗಿರಬೇಕು. ಅದರಂತೆ ಲಾಜಾಹೋಮ, ಸಪ್ತಪದಿ ಅಥವಾ ಮತ್ತಾವುದೇ ರೂಢಿಗತ ಆಚರಣೆಯಂತೆ ಆಗಿರಬೇಕು. ಇಲ್ಲವೇ ವಿಶೇಷ ವಿವಾಹ ಅಧಿನಿಯಮದ ಅಡಿಯಲ್ಲಿ ವಿವಾಹವಾಗಿರಬೇಕು. ಇದನ್ನು 'ಸಿವಿಲ್ ವಿವಾಹ' ಎಂದೂ ಕರೆಯುತ್ತಾರೆ. ಇದರ ಅಡಿಯಲ್ಲಿ ವಿವಾಹ ಎಂದರೆ, ಸಬ್ ರಿಜಿಸ್ಟ್ರಾರರ ಕಚೇರಿಯಲ್ಲಿ ವಿವಾಹವನ್ನು ಮೂವರು ಸಾಕ್ಷಿಗಳ ಸಮ್ಮುಖದಲ್ಲಿ ನೋಂದಣಿ ಮಾಡಿಸಬೇಕು. ಈ ರೀತಿ ಸಬರಿಜಿಸ್ಟ್ರಾರರ ಮುಂದೆ ನೋಂದಣಿ ಮಾಡಿಸುವ ಮೂಲಕ ವಿವಾಹವಾಗುವುದು ೫೦ ರೂಗಳ ಛಾಪಾ ಕಾಗದದ ಮೇಲೆ ಬರೆದು ಸಹಿ ಹಾಕಿ ಸಬ್ ರಿಜಿಸ್ಟ್ರಾರ್‌ರ ಕಚೇರಿಯಲ್ಲಿ ನೋಂದಣಿ ಮಾಡಿಸುವ ಮೂಲಕ ವಿವಾಹವಾಗುವುದು ಇವೆರಡರಲ್ಲೂ ವ್ಯತ್ಯಾಸವಿದೆ.

ವಿಶೇಷ ವಿವಾಹ ಅಧಿನಿಯಮದ ಅಡಿಯಲ್ಲಿ ನೋಂದಣಿ ಮಾಡಿಸುವ ಮೂಲಕ ವಿವಾಹವಾದರೆ ಅದು ಕಾನೂನು ಸಮ್ಮತ ವಿವಾಹವೆನಿಸಿಕೊಳ್ಳುತ್ತದೆ. ಹೀಗೆ ನೋಂದಣಿ ಮಾಡಿಸಲು ಕೆಲವು ಕ್ರಮಗಳನ್ನು ಅನುಸರಿಸಬೇಕು.

* ವಿವಾಹವಾಗಬಯಸುವವರಿಬ್ಬರೂ ವಿವಾಹದ ನೋಟೀಸನ್ನು ಕೊಡಬೇಕು.
* ಈ ನೋಟೀಸನ್ನು ಕೊಡುವುದಕ್ಕೆ ಮುಂಚಿನ ಮೂವತ್ತು ದಿನಗಳಿಂದ ವಿವಾಹವಾಗಲಿರುವವರಲ್ಲಿ ಒಬ್ಬರು ವಾಸಿಸುತ್ತಿರುವ ಜಿಲ್ಲೆಯ ವಿವಾಹಗಳ ಅಧಿಕಾರಿಗೆ ಕೊಡಬೇಕು.
* ನೋಟೀಸಿನಲ್ಲಿ ವಧೂವರರ ಹೆಸರು, ಅವರ ಸ್ಥಾನಮಾನ(ಅವಿವಾಹಿತರೇ, ವಿಧವೆ/ವಿಧುರ ವಿಚ್ಛೇದನ ಪಡೆದವರೇ ಎಂಬ ಬಗೆಗೆನ ವಿವರ), ವಯಸ್ಸು, ಇಬ್ಬರ ನಿವಾಸಗಳಿರುವ ಸ್ಥಳ ಇವುಗಳ ವಿವರಗಳನ್ನು ಕೊಡಬೇಕು.

ಹೀಗೆ ನೀಡಿದ ನೋಟೀಸನ್ನು ವಿವಾಹಗಳ ಅಧಿಕಾರಿ ಕಚೇರಿಯ ಎದ್ದು ಕಾಣುವ ಸ್ಥಳದಲ್ಲಿ ಸೂಚನಾ ಫಲಕದಲ್ಲಿ ಅಂಟಿಸಿ ಪ್ರದರ್ಶಿಸುತ್ತಾರೆ. ಇದರ ಉದ್ದೇಶ ಅಂಥ ವಿವಾಹಕ್ಕೆ ಆಕ್ಷೇಪಣೆ ಇದ್ದಲ್ಲಿ ಅದನ್ನು ಸಲ್ಲಿಸಲಿ ಎಂಬುದು. ವಧು ವರರಿಬ್ಬರೂ ವಿವಾಹ ನೆರವೇರಿಕೆಯ ಸಮಯದಲ್ಲಿ ಪ್ರತ್ಯೇಕವಾಗಿ ಘೋಷಣೆಗಳನ್ನು ದಾಖಲು ಮಾಡಬೇಕು. ಅದರಲ್ಲಿಯೂ ಅವರ ಹೆಸರು, ಸ್ಥಾನಮಾನ, ವಯಸ್ಸುಗಳನ್ನು ನಮೂದಿಸಿರಬೇಕು. ಹೀಗೆ ನೀಡಿದ ವಿವರಗಳಲ್ಲಿ ಸುಳ್ಳು ಮಾಹಿತಿಯನ್ನು ನೀಡಿರುವಲ್ಲಿ ಅದು ಅಪರಾಧ ವಾಗುತ್ತದೆ. ಮದುವೆಯಾಗುವ ವಧೂ ವರ ಇಬ್ಬರೂ ಇಬ್ಬರಿಗೂ ಅರ್ಥವಾಗುವ ಭಾಷೆಯಲ್ಲಿ "ನಾನು ನಿನ್ನನ್ನು ಕಾನೂನು ಸಮ್ಮತ ಗಂಡನೆಂದು/ಹೆಂಡತಿಯೆಂದು ಸ್ವೀಕರಿಸಿದ್ದೇನೆ" ಎಂದು ವಿವಾಹಗಳ ಅಧಿಕಾರಿ ಹಾಗೂ ಮೂವರು ಸಾಕ್ಷಿಗಳ ಸಮ್ಮುಖದಲ್ಲಿ ಹೇಳಬೇಕು. ಯಾವುದೇ ಪದ್ಧತಿಯನ್ನು ಅಥವಾ ಸಾಂಪ್ರದಾಯಿಕ ಆಚರಣೆಯನ್ನು ಆಚರಿಸಿ ವಿವಾಹವನ್ನು ನೇರವೇರಿಸಿದ್ದರೂ, ವಿವಾಹವನ್ನು ನೋಂದಾಯಿಸಿಲು ಮೇಲಿನ ಕ್ರಮವನ್ನು ಕಡ್ಡಾಯವಾಗಿ ಪಾಲಿಸಬೇಕು. ಈ ಬಗೆಯಲ್ಲಿ ವಿವಾಹವನ್ನು ನೆರವೇರಿಸಿದ ನಂತರ, ವಿವಾಹಗಳ ಅಧಿಕಾರಿಯು, ವಿವಾಹಗಳ ಪ್ರಮಾಣ ಪತ್ರ ಪುಸ್ತಕದಲ್ಲಿ ವಿವಾಹದ ಪ್ರಮಾಣಪತ್ರವನ್ನು ನಿಗದಿಪಡಿಸಿದ ನಮೂನೆಯಲ್ಲಿ ನಮೂದಿಸುತ್ತಾರೆ. ಇದಕ್ಕೆ ವಿವಾಹಗಳ ಅಧಿಕಾರಿ, ವಧು, ವರ ಹಾಗೂ ಹಾಜರಿದ್ದ ಮೂವರು ಸಾಕ್ಷಿಗಳು ಸಹಿಮಾಡಬೇಕು. ಈ ಪ್ರಮಾಣ ಪತ್ರ ವಿವಾಹದ ನಿರ್ಣಾಯಕ ಸಾಕ್ಷ್ಯ. ಯಾರು ಬೇಕಾದರೂ ಅರ್ಜಿಸಲ್ಲಿಸಿ ನಿಗದಿತ ಶುಲ್ಕವನ್ನು ತುಂಬುವ ಮೂಲಕ ವಿವಾಹ ಪ್ರಮಾಣ ಪತ್ರದ ಪ್ರಮಾಣೀಕೃತ ಪ್ರತಿಯನ್ನು ಪಡೆಯಬಹುದು.

(ಈ ಅಧಿನಿಯಮದ ಅಡಿಯಲ್ಲಲ್ಲದೆ, ಯಾವುದೇ ಧರ್ಮದ ಯಾವುದೇ ಸಂಪ್ರದಾಯವನ್ನು ಅನುಸರಿಸಿ ಮದುವೆಯಾದವರೂ, ಮದುವೆಯ ನಂತರವೂ ಯಾವುದೇ ಸಮಯದಲ್ಲಿ ವಿವಾಹದ ನೋಂದಣಿ ಮಾಡಿಸಬಹುದು.) ರಾಜ್ಯದ ಪ್ರತಿಯೊಬ್ಬ ವಿವಾಹಗಳ ಅಧಿಕಾರಿಯೂ ನಿಗದಿಪಡಿಸಿದ ಅವಧಿಯ ಅಂತರಗಳಲ್ಲಿ ವಿವಾಹ ಪ್ರಮಾಣಪತ್ರಗಳ ಪುಸ್ತಕದಲ್ಲಿ ಮಾಡಿದ ನಮೂದುಗಳ ಯಥಾಪ್ರತಿಯನ್ನು

ನಿಗದಿಪಡಿಸಿದ ನಮೂನೆಗಳಲ್ಲಿ ರಾಜ್ಯದ ಜನನ ಮರಣ ಮತ್ತು ವಿವಾಹಗಳ ರಿಜಿಸ್ಟಾರ್ ಜನರಲ್ಲರಿಗೆ ಕಳುಹಿಸುತ್ತಾರೆ.

ಇದು 'ರಿಜಿಸ್ಟರ್ಡ್ ವಿವಾಹ' ಅಥವಾ ಸಾಮಾನ್ಯವಾಗಿ ತಿಳಿದಿರುವ 'ಸಿವಿಲ್ ವಿವಾಹ'ವನ್ನು ನೋಂದಣಿ ಮಾಡುವ ವಿಧಾನ. ಬಹಳಷ್ಟು ಮಹಿಳೆಯರಿಗೆ ಈ ಸರಳವಾದ ಕಾನೂನು ಕ್ರಮದ ಅರಿವಿಲ್ಲ. ಪತಿಪತ್ನಿಯರಲ್ಲಿ ಯಾವುದೇ ವಿವಾದಗಳು ಇಲ್ಲದಿರುವವರೆಗೆ, ವಿವಾಹ ಬಂಧನ ಊರ್ಜಿತವಾಗಿರುವವರೆಗೆ ಕಾನೂನಿನ ಈ ಕ್ರಮವನ್ನು ಪಾಲಿಸುವುದರ ಮಹತ್ವ ಪ್ರಸ್ತುತವಾಗುವುದಿಲ್ಲ. ಆದರೆ ಯಾವುದೇ ಕಾರಣಕ್ಕೆ ವಿವಾಹ ಮುರಿದು ಬಿದ್ದರೆ, ಪತಿ ಪತ್ನಿಯನ್ನು ತ್ಯಜಿಸಿದರೆ, ವಿಚ್ಛೇದನೆ ನೀಡಿದರೆ ಅಥವಾ ಪತಿಯ ಮರಣ ಉಂಟಾದರೆ, ಆ ಸಂದರ್ಭದಲ್ಲಿ ನೋಂದಣಿಯ ಮಹತ್ವ ತಿಳಿಯುತ್ತದೆ. ಏಕೆಂದರೆ ಜೀವನಾಂಶವನ್ನು ಕೇಳುವ ಹಕ್ಕು, ಮಕ್ಕಳ ಔರಸತ್ವದ ಪ್ರಶ್ನೆ ಹಾಗೂ ಆಸ್ತಿಹಕ್ಕುಗಳ ಪ್ರಶ್ನೆ ಉಂಟಾಗು ವುದು ಇಂಥ ಸಂದರ್ಭಗಳಲ್ಲಿ. ಇದಾವುದನ್ನು ಪಡೆಯಬೇಕಾದರೂ ಪತ್ನಿ ತಾನು ಮೃತನ ಕಾನೂನು ಮಾನ್ಯ ಪತ್ನಿ ಎಂಬುದನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತು ಪಡಿಸಬೇಕಾಗುತ್ತದೆ.

ಮಹಿಳೆ ಕಾನೂನು ರೀತ್ಯಾ ಪತ್ನಿಯ ಸ್ಥಾನವನ್ನು ಪಡೆದಿಲ್ಲವಾದರೆ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿ ಜೀವನಾಂಶ ಪಡೆಯಲು ಅವಳು ಅನರ್ಹಳಾಗುತ್ತಾಳೆ. ಆದರೆ ಅವಳ ಮಕ್ಕಳಿಗಾಗಿ ಜೀವನಾಂಶವನ್ನು ಪಡೆಯಬಹುದು.

ಇಂಥ ಮೋಸಕ್ಕೆ ಸಾಮಾನ್ಯವಾಗಿ ಬಲಿಯಾಗುವವರು ಗ್ರಾಮೀಣ ಮಹಿಳೆಯರು. ಅನೇಕ ವೇಳೆ ಅವರ ಮದುವೆಗೆ ಯಾವುದೇ ಪುರಾವೆ ಇಲ್ಲ ಎಂಬ ಕಾರಣದ ಮೇಲೆ ಅವರನ್ನು ಆಸ್ತಿ ಹಕ್ಕಿನಿಂದಲೂ ವಂಚಿತರನ್ನಾಗಿಸಿ, ಅವರಿಗೆ ಕಾನೂನುಬದ್ಧವಾಗಿ ಸಿಗಬೇಕಾದ ಆಸ್ತಿ ಸಿಗದಂತೆ ಮಾಡಿರುವ ಪ್ರಕರಣಗಳಿವೆ. ನಡೆದ ವಿವಾಹಕ್ಕೆ ಪುರಾವೆ ಇಲ್ಲ ಎಂಬ ಕಾರಣಕ್ಕೇ ಪೋಲೀಸರಾಗಲೀ ಮಹಿಳಾ ಸಂಘಟನೆಗಳಾಗಲೀ ಅನೇಕ ವೇಳೆ ಮೋಸ ಮಾಡಿದ ಪುರುಷರ ವಿರುದ್ಧ ಕ್ರಮ ಕೈಗೊಳ್ಳುವುದು ಸಾಧ್ಯವಾಗಿಲ್ಲ. ಈ ಎಲ್ಲ ಅಕ್ರಮ ಅನ್ಯಾಯಗಳಿಗೆ ತಡೆಹಾಕುವ ದೃಷ್ಟಿಯಿಂದ ವಿವಾಹ ನೋಂದಣಿಯನ್ನು ಕಡ್ಡಾಯ ಮಾಡಬೇಕೆಂಬುದು ಮಹಿಳಾವಾದಿಗಳ ಹಾಗೂ ಮಹಿಳಾ ಸಂಘಟನೆಗಳ ಕೋರಿಕೆ. ಈಗ ಮತ್ತೆ ಈ ಬಗ್ಗೆ ಸರ್ಕಾರದ ಮೇಲೆ ಒತ್ತಡ ತರುತ್ತಿದ್ದಾರೆ. ಹೀಗಾಗಿ ವಿವಾಹ ನೋದಂಣಿಯನ್ನು ಕಡ್ಡಾಯಗೊಳಿಸುವತ್ತ ಸರ್ಕಾರ ಗಮನ ಹರಿಸಿದೆ ಈಗಾಗಲೇ ಕೇರಳ ಮತ್ತು ಮಹಾರಾಷ್ಟ್ರಗಳಲ್ಲಿ ವಿವಾಹ ನೋಂದಣಿ ಕಡ್ಡಾಯವಾಗಿದೆ. ಕರ್ನಾಟಕ ಈ ಕಾನೂನನ್ನು ಜಾರಿಗೊಳಿಸಿದರೆ, ರಾಷ್ಟ್ರದಲ್ಲಿ ಇಂಥ ಕಾನೂನನ್ನು ಜಾರಿಗೊಳಿಸಿದ ಮೂರನೇ ರಾಜ್ಯವಾಗುತ್ತದೆ. ಈ ಕಾನೂನು ಜಾರಿಯಲ್ಲಿ ಬಂದಾಗ, ತಮ್ಮ ವಿವಾಹವನ್ನು ನೋಂದಾಯಿಸುವಂತೆ ಮಹಿಳೆಯರು ಒತ್ತಡ ಹೇರಬಹುದು. ಈ ಕ್ರಮ ಮಹಿಳೆಯರ ಹಕ್ಕುಗಳನ್ನು ರಕ್ಷಿಸುವುದರ ಜೊತೆಗೆ,

ದ್ವಿಪತ್ನಿತ್ವ ಅಥವಾ ಬಹುಪತ್ನಿತ್ವವನ್ನು ತಡೆಗಟ್ಟುವಲ್ಲಿ ಸಹಾಯಕವಾಗುತ್ತದೆ ಮತ್ತು ಮೊದಲನೆ ಪತ್ನಿಯಾಗಿ, ತನ್ನ ಹಕ್ಕುಗಳನ್ನು ಚಲಾಯಿಸಲು 'ನೋಂದಣಿ ಪತ್ರ' ವಿವಾಹದ ಪುರಾವೆಯನ್ನು ಒದಗಿಸುತ್ತದೆ.

**ವಿವಾಹ ವಿಚ್ಛೇದನೆ**

ವಿವಾಹ ವಿಚ್ಛೇದನೆ ಈಗಿನ ಸಮಾಜದಲ್ಲಿ ತೀರ ಪರಿಚಿತವಾದ ಒಂದು ಪರಿಕಲ್ಪನೆ ಈ ವ್ಯವಸ್ಥೆ ಹೊಂದಾಣಿಕೆಯಿಲ್ಲದ ಪತಿಪತ್ನಿಯರಿಗೆ ಬೇರ್ಪಡಲು ಒಂದು ಅವಕಾಶವನ್ನು ಕಲ್ಪಿಸಿ, ಹೊಸಜೀವನವನ್ನು ಪ್ರಾರಂಭಿಸಲು ಅನುಕೂಲ ಮಾಡಿಕೊಡುತ್ತದೆ. ಈ ದೇಶದ ಬಹುಪಾಲು ಜನರು, ಪತಿ ಪತ್ನಿಯರ ನಡುವಿನ ಸಂಬಂಧ ಜೀವನಪರ್ಯಂತ ಇರುವಂಥ ಸಂಬಂಧ ಎಂದೇ ನಂಬಿದ್ದಾರೆ. ಮತ್ತು ಅಂಥ ವ್ಯವಸ್ಥೆಯಲ್ಲಿಯೇ ನಂಬಿಕೆಯಿರಿಸಿದ್ದಾರೆ. ಕಾನೂನಿನಲ್ಲಿ ವಿಚ್ಛೇದನೆ ಪಡೆಯಲು ಅವಕಾಶ ಕಲ್ಪಿಸಿದ್ದರೂ, ಆ ಅವಕಾಶದ ಪ್ರಯೋಜನವನ್ನು ಪಡೆಯುವವರು ಅಲ್ಪಸಂಖ್ಯೆಯಲ್ಲಿದ್ದಾರೆ. ಕಾನೂನಿನ ಈ ಉಪಯೋಗ ಪಡೆಯುವುದು, ಜನ ಎಷ್ಟರಮಟ್ಟಿಗೆ ಅಕ್ಷರಸ್ಥರು, ಕಾನೂನಿನ ನೆರವನ್ನು ಪಡೆಯಬಲ್ಲವರು, ವಿಚ್ಛೇದನೆಯ ನಂತರ ಮಹಿಳೆಯರಾದರೆ, ಎಷ್ಟು ಪ್ರಮಾಣದಲ್ಲಿ ಸ್ವಾವಲಂಬಿಗಳು(ಆರ್ಥಿಕವಾಗಿ ಹಾಗೂ ಮಾನಸಿಕವಾಗಿ) ಮುಂತಾದ ಅಂಶಗಳನ್ನು ಅವಲಂಬಿಸಿರುತ್ತದೆ. ಈ ಅಂಶಗಳು ವಿಚ್ಛೇದನೆ ಪಡೆಯುವರ ಸಂಖ್ಯೆಯನ್ನು ಸೀಮಿತಗೊಳಿಸುತ್ತದಾದರೂ, ಪ್ರಾಚೀನ ಹಿಂದೂ ಕಾನೂನಿನಲ್ಲಿ ಇಲ್ಲದಿದ್ದ, ಪಾಶ್ಚಾತ್ಯರಿಂದ ಆಮದು ಮಾಡಿಕೊಂಡಂಥ ಈ ಪರಿಕಲ್ಪನೆ ಹುಟ್ಟು ಹಾಕುವ ಸಮಸ್ಯೆಗಳು ಹಾಗೂ ಉಂಟುಮಾಡುವ ಸಾಮಾಜಿಕ ಏರುಪೇರುಗಳು ಊಹೆಗೂ ನಿಲುಕದ್ದು. ಆದರೆ ಈ ಸಮಸ್ಯೆಗಳು ಹಾಗೂ ಪಲ್ಲಟಗಳು ಸಮಾಜದ ಬದಲಾವಣೆಯ ಎಲ್ಲ ಹಂತಗಳಲ್ಲಿ ಆಗಿರುವಂತೆ ಬಹಳಷ್ಟು ಸಂದರ್ಭಗಳಲ್ಲಿ ಮತ್ತೆ ಮಹಿಳೆಗೇ ಪ್ರತಿಕೂಲವಾಗಿ ಪರಿಣಮಿಸುವುದು ವಿಪರ್ಯಾಸವಾದರೂ ಸತ್ಯ. ಮಹಿಳೆಯ ಸಾಮಾಜಿಕ ಸ್ಥಾನಮಾನವಾಗಲೀ, ಆರ್ಥಿಕ ಪರಿಸ್ಥಿತಿಯಾಗಲೀ ಗಣನೀಯವಾಗಿ ಸುಧಾರಿಸದ ಸಮಾಜದಲ್ಲಿ ವಿಚ್ಛೇದನೆಯಂಥ ಯಥಾವತ್ತಾಗಿ ಆಮದು ಮಾಡಿಕೊಂಡ ಒಂದು ಅವಕಾಶ ಮಹಿಳೆಯನ್ನು ಎಲ್ಲಿಂದ ಎಲ್ಲಿಗೆ ಒಯ್ಯಬಹುದು ಎಂಬುದು ಆ ವ್ಯವಸ್ಥೆಯಿಂದಾಗುವ ತರುವಾಯದ ಪರಿಣಾಮಗಳ ಅಗಾಧತೆಯನ್ನು ನೋಡಿದಾಗ ಅರಿವಾಗದೆ ಇರದು. ಈ ಸಮಸ್ಯೆಗಳ ಅಧ್ಯಯನಕ್ಕೆ ಪ್ರಾಚೀನ ಹಿಂದೂ ಕಾನೂನುಗಳಲ್ಲಿದ್ದ ವಿವಾಹದ ಪರಿಕಲ್ಪನೆ, ಅದರ ಹಿಂದಿದ್ದ ತತ್ವಗಳನ್ನು ಅರ್ಥಮಾಡಿಕೊಳ್ಳುವುದು ಅತ್ಯಗತ್ಯ.

ಹಿಂದೂ ಕಾನೂನುಗಳ ಕ್ರೋಢೀಕರಣಕ್ಕೆ ಮುನ್ನ ಜಾರಿಯಲ್ಲಿದ್ದ ಸಾಂಪ್ರದಾಯಿಕ ಹಾಗೂ ಶಾಸ್ತ್ರ ಗ್ರಂಥಗಳಲ್ಲಿ ನಿರೂಪಿತವಾಗಿದ್ದ ಕಾನೂನುಗಳಲ್ಲಿ ವಿವಾಹ ಪತಿಪತ್ನಿಯರನ್ನು ಕೊನೆಯವರೆಗೆ ಬಂಧಿಸುವ ಒಂದು ಪವಿತ್ರ ಬಂಧನ.

ಮನುಸ್ಮೃತಿಯ **IX** ಅಧ್ಯಾಯದ ೯೫, ೧೦೧ ಮತ್ತು ೧೦೨ನೇ ಶ್ಲೋಕಗಳು ಹಿಂದೂ ವಿವಾಹ ಪರಿಕಲ್ಪನೆಯಲ್ಲಿ ಅಂತರ್ಗತವಾಗಿರುವ ತತ್ತ್ವದ ಸಾರವನ್ನು ಒಳಗೊಂಡಿವೆ.

**IX** ೯೫ : ಪತಿ ತನ್ನ ಪತ್ನಿಯನ್ನು ದೇವರುಗಳಿಂದ ಸ್ವೀಕರಿಸುತ್ತಾನೆ. ಅವನು ದೇವರಿಗೆ ಒಪ್ಪಿಗೆಯಾದುದನ್ನು ಮಾಡುತ್ತಾನೆಯೇ ಹೊರತು ತನ್ನಿಚ್ಛೆಯ ಪ್ರಕಾರ ಅವಳನ್ನು ವಿವಾಹವಾಗುವುದಿಲ್ಲ. ಅವಳು ಅವನಿಗೆ ನಿಷ್ಠೆಯಿಂದ ಇರುವವರೆಗೆ ಅವನು ಅವಳನ್ನು ಯಾವಾಗಲೂ ನೋಡಿಕೊಳ್ಳಬೇಕು.

**IX** ೧೦೨ : ವಿವಾಹದ ಮೂಲಕ ಒಂದಾದ ಸ್ತ್ರೀ ಮತ್ತು ಪುರುಷ ಬೇರೆಯಾಗದಿರಲು ಸತತವಾಗಿ ಪ್ರಯತ್ನಿಸಲಿ ಮತ್ತು ಪರಸ್ಪರ ನಿಷ್ಠೆಯನ್ನು ಉಲ್ಲಂಘಿಸದಿರಲಿ.

**IX** ೧೦೧ : ಪರಸ್ಪರ ನಿಷ್ಠೆ ಸಾಯುವವರೆಗೆ ಮುಂದುವರಿಯಲಿ ಪತಿ ಮತ್ತು ಪತ್ನಿಯರ ನಡುವೆ ಇರಬೇಕಾದ ಅತ್ಯುತ್ಕೃಷ್ಟವಾದ ಧರ್ಮದ ಸಾರವೇ ಇದು.

ಆನಂತರದ ಕಾನೂನುಗಳಲ್ಲಿ ಏನೆಲ್ಲ ಬದಲಾವಣೆಗಳನ್ನು ತರಲಾಗಿದ್ದರೂ ಪರಸ್ಪರ ನಿಷ್ಠೆ ಎಂಬುದು ಇಂದಿಗೂ ಪತಿ-ಪತ್ನಿಯರು ಒಂದಾಗಿರಲು ಕಾರಣವಾಗಿರುವ, ಮುಂದೆ ಅನೇಕ ಪೀಳಿಗೆಗಳವರೆಗೂ ಕಾರಣವಾಗುವ ಅತ್ಯುತ್ಕೃಷ್ಟವಾದ ಮೌಲ್ಯ ಎಂಬುದರಲ್ಲಿ ಎರಡು ಮಾತಿಲ್ಲ. ಸಾಧು-ವಿ-ಜಗದೀಶ್ (ಎಐಆರ್ ೧೯೬೯, ಪಿ ಮತ್ತು ಎಚ್ , ೧೩೯) ಪ್ರಕರಣದಲ್ಲಿ ಆಗ ನ್ಯಾಯಾಧೀಶರಾಗಿದ್ದ ಸರ್ಕಾರಿಯಾ ಹೇಳಿದ ಮಾತುಗಳು ಗಮನಿಸುವಂಥದ್ದಾಗಿದೆ.

ವಿವಾಹದ ಸ್ಥಿರತೆ ಮೂರು ಕಂಬಗಳ ಮೇಲೆ ನಿಂತಿದೆ. ಅವೆಂದರೆ, ಪರಸ್ಪರ ವಿಶ್ವಾಸ, ಪರಸ್ಪರ ಗೌರವ ಮತ್ತು ಇಬ್ಬರ ನಡುವೆ ಇರುವ ಸಹಾನುಭೂತಿ. ಈ ಮೂರರ ಪೈಕಿ ವೈವಾಹಿಕ ಗೃಹದ ಉಳಿವಿಗೆ ಅತಿ ಮುಖ್ಯವಾದುದು ವಿಶ್ವಾಸ. ಜಾರ್ಜ್‌ಮ್ಯಾಕ್ ಡೊನಾಲ್ಡ್ ಹೇಳಿರುವಂತೆ, "ತನ್ನಲ್ಲಿ ವಿಶ್ವಾಸವಿರಿಸಿದ್ದಾನೆ ಎಂಬುದು ಪ್ರೀತಿಸಲ್ಪಡುವುದಕ್ಕಿಂತ ಹೆಚ್ಚಿನ 'ಅಭಿನಂದನೆ'. ವಿಶ್ವಾಸ ವಿಶ್ವಾಸವನ್ನು ಮೂಡಿಸುತ್ತದೆ. ಅನಮಾನ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ."

ಡಂಕನ್ ಎಂ ಡೆರೆಟ್ ತನ್ನ "ದಿ ಡೆತ್ ಆಫ್ ಮ್ಯಾರೇಜ್ ಲಾ" ಎಂಬ ಕೃತಿಯಲ್ಲಿ ಇದೇ ಅಭಿಪ್ರಾಯ ವನ್ನೇ ವ್ಯಕ್ತಪಡಿಸಿದ್ದಾನೆ. ಹಿಂದೂ ವಿವಾಹ ಅಧಿನಿಯಮದ ಮೂಲಕ ಮಾಡಲಾಗಿದೆಯೆನ್ನಲಾದ ಪ್ರಗತಿಪರ ಬದಲಾವಣೆಗಳಲ್ಲಿ ಪತಿಪತ್ನಿಯರ ವಿಚ್ಛೇದನೆಗೆ ಅವಕಾಶ ಕಲ್ಪಿಸಿರುವುದೂ ಒಂದು. ಈ ಅವಕಾಶ ಮಹಿಳೆಯ ಸ್ಥಾನಮಾನದಲ್ಲಿ ತರುವ ಸುಧಾರಣೆಯ ದೃಷ್ಟಿಯಿಂದ ಈ ಬದಲಾವಣೆಯನ್ನು ವಿಶ್ಲೇಷಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಡಂಕನ್ ಎಂ ಡೆರೆಟ್‌ನ ಅಭಿಪ್ರಾಯವನ್ನು ಗಮನಿಸಬಹುದಾಗಿದೆ.

"ಕಾನೂನನ್ನು ಉತ್ತಮವಾಗಿ ಬಳಸಿಕೊಳ್ಳಬಹುದಾದವರು ಕೆಲವೇ ಮಂದಿ. ಅವರ ಅನುಕೂಲಕ್ಕಾಗಿ ಬದಲಾವಣೆ ಮಾಡಲಾದ ಕಾನೂನುಗಳನ್ನು ಅನುಸರಿಸುವ ಉಳಿದ ಶೇ.೯೦ರಷ್ಟು ಹಿಂದೂಗಳು ಇಂದಿಗೂ ಕಾನೂನನ್ನು ಧರ್ಮದೊಂದಿಗೆ ಸಮೀಕರಿಸಿ ಆದರ್ಶಪ್ರಾಯವಾದ ವ್ಯವಸ್ಥೆಯೆಂದು ಕಾಣುತ್ತಾರೆ.

೧. ಕಾನೂನು ಹಾಗೂ ಧರ್ಮಗಳೆರಡನ್ನೂ ಬೇರ್ಪಡಿಸಲು ಅವರು ಸಿದ್ಧರಿಲ್ಲ. ಹಾಗೂ

೨. ಕಾನೂನನ್ನು ಗಂಭೀರವಾಗಿ ಪರಿಗಣಿಸಲು(ಅದು ಅವರಿಗೆ ನಗದು ಅಥವಾ ಅದಕ್ಕೆ ಸಮನಾದ ಲಾಭವನ್ನು ತರುವ ಸಂದರ್ಭಗಳನ್ನೂ ಹೊರತುಪಡಿಸಿ) ಅಥವಾ ಅದರ ಬಗ್ಗೆ ಯೋಚಿಸಲು ಅಥವಾ ಅದು ತರುವ ಬದಲಾವಣೆಗಳಿಗೆ ನೈತಿಕವಾಗಿ ತಾವು ಬದ್ಧರು ಎಂದುಕೊಳ್ಳಲು ಅವರು ಸಿದ್ಧರಿಲ್ಲ. ಆ ಶೇ.೯೦ ಭಾಗದ ಜನರಿಗೆ ಇಂದಿಗೂ ಧರ್ಮ ಸಾಮಾಜಿಕವಾಗಿ ತಮ್ಮನ್ನು ತಾವು ಗುರುತಿಸಿ ಕೊಳ್ಳುವ ಹಾಗೂ ಸಂಬಂಧ ಕಲ್ಪಿಸಿಕೊಳ್ಳುವ ಸಾಧನವಾಗಿದೆ."

"ಈ ಆಧಾರದ ಮೇಲೆ ವಿವಾಹ ಒಂದು ಸಂಸ್ಕಾರ ಎಂಬುದನ್ನು ಒಪ್ಪಿಕೊಳ್ಳುವುದು ಅವರವರ ವೈಯಕ್ತಿಕ ಪ್ರಜ್ಞೆಗೆ ಬಿಟ್ಟ ವಿಚಾರವಾಗಿದೆ. ಹಾಗೆ ಒಪ್ಪಿಕೊಂಡರೆ, ವಾಸ್ತವವಾಗಿ ವಿಚ್ಛೇದನೆ ಜಾರಿಯಲ್ಲಿದ್ದರೂ ಆಂತರಿಕವಾಗಿ ಅದನ್ನು ಒಪ್ಪಿಕೊಳ್ಳುವುದಿಲ್ಲ. ಉಳಿದ ಶೇ.೧೦ರಷ್ಟು ಜನರೂ ವಿವಾಹವನ್ನು ತಮ್ಮ ಮಟ್ಟಿಗೆ ಹಾಗೂ ತಮಗಿಂತ ಹೆಚ್ಚಾಗಿ ಇತರರ ಮಟ್ಟಿಗೆ ವಿವಾಹವನ್ನು ಸಂಸ್ಕಾರ ಎಂದೇ ಕಂಡರೂ, ವಿಚ್ಛೇದನೆಯನ್ನು ತೀರ ಹೊಂದಾಣಿಕೆಯಿಲ್ಲದ ವಿವಾಹಗಳಿಗೆ ಪರಿಹಾರವೆಂದು ಪರಿಗಣಿಸುತ್ತಾರೆ. ತೊಂದರೆಯಲ್ಲಿರುವವರೆಗೆ ಇದನ್ನು ಅನ್ವಯಿಸಬೇಕಾದುದು ಧರ್ಮಸಮ್ಮತ ಮಾರ್ಗವೆಂಬುದಕ್ಕಾಗಿ ಅಲ್ಲ, ಚಿಕಿತ್ಸೆ ಎಂದು ಅನ್ವಯಿಸಬೇಕಾಗುತ್ತದೆ ಎಂದು ಭಾವಿಸುತ್ತಾರೆ."

"ಹಿಂದೂಗಳಲ್ಲಿ ಬಹುಪಾಲು ಮಂದಿ, ಮುಸ್ಲಿಂರಂತಲ್ಲದೆ ವಿವಾಹವನ್ನು ಎಲ್ಲ ದೃಷ್ಟಿಯಿಂದಲೂ ಕೊನೆಗೊಳಿಸಲಾಗದ ಜೀವನ ಪರ್ಯಂತ ಇರುವಂಥ ಬಂಧನ ಎಂದು ಪರಿಗಣಿಸುತ್ತಾರೆ. ಹೀಗೆ ಪರಿಗಣಿಸದಿದ್ದಲ್ಲಿ ಅವರ ಸಾಮಾಜಿಕ ವ್ಯವಸ್ಥೆ ಕುಸಿಯುತ್ತದೆ."

ಧರ್ಮಶಾಸ್ತ್ರಗಳು ನಿರೂಪಿಸಿರುವಂಥ ಪತಿಪತ್ನಿಯರ ಪವಿತ್ರ, ಶಾಶ್ವತ ಹಾಗೂ ಕೊನೆಗೊಳಿಸಲಾಗದಂಥ ಸ್ವರೂಪದ ಈ ಸಂಬಂಧ ಇಂದಿಗೂ ಸಮಾಜದ ಗಣನೀಯ ಭಾಗಕ್ಕೆ ಮಾನ್ಯವಾದುದಾಗಿದೆ. ಹೊಂದಾಣಿಕೆಯೇ ಇಲ್ಲದ ಪತಿ ಪತ್ನಿಯರಿಗೆ ವಿಚ್ಛೇದನ ಒಂದು ಮುಕ್ತಿಮಾರ್ಗದಂತೆ ಕಂಡರೂ, ಪತಿ ಪತ್ನಿಯರ ಸಂಬಂಧದಿಂದ ಜನಿಸಿದ ಮಕ್ಕಳ ನಡುವೆ ಏರ್ಪಡುವ ಅಣ್ಣತಮ್ಮಂದಿರ, ಅಕ್ಕತಂಗಿಯರ ಹಾಗೂ ಅಣ್ಣತಂಗಿಯರ ಸಂಬಂಧವಾಗಲಿ, ತಂದೆತಾಯಿಯರಿಗೆ ಮಕ್ಕಳೊಡನೆ ಇರುವ ಸಂಬಂಧವಾಗಲೀ ಕೊನೆಗೊಳ್ಳುವುದಿಲ್ಲ. ವಿಚ್ಛೇದನೆ ದೊರೆತ ಮೇಲೂ ಈ ಸಂಬಂಧಗಳು ಮುಂದುವರಿಯುತ್ತವೆ.

ವಿಚ್ಛೇದನೆ ಪತಿ ಪತ್ನಿಯರಿಗೆ ಇನ್ನೊಂದು ವಿವಾಹವಾಗಲು ಕೊಡುವ ರಹದಾರಿಯಷ್ಟೆ. ಧಾರ್ಮಿಕ ಹಿಂದೂ ಕಾನೂನಿನಲ್ಲಿ ಯಾವುದೇ ಸಂದರ್ಭದಲ್ಲಿಯೂ ವಿಚ್ಛೇದನೆಗೆ ಅವಕಾಶ ಕಲ್ಪಿಸಿರಲಿಲ್ಲವಾದ್ದರಿಂದ, ಶೃತಿಗಳು ಯಾವ ಸಂದರ್ಭಗಳಲ್ಲಿ ಪತಿ ಅಥವಾ ಪತ್ನಿ ಎರಡನೇ ವಿವಾಹವಾಗಬಹುದು ಎಂಬುದನ್ನು ತಿಳಿಸುತ್ತದೆ.

ವಿಚ್ಛೇದನೆಯ ಅವಕಾಶಕ್ಕಾಗಿ ಕಲ್ಪಿಸಿರುವ ಉಪಬಂಧ ಪರಿಹಾರವಾಗುವ ಬದಲು ಸಾಮಾಜಿಕ ಪಿಡುಗೇ ಆಗಬಹುದು ಎಂಬ ಭಯವಿರುವುದರಿಂದ ಸಮಾಜ ಅದನ್ನು ಸ್ವಾಗತಿಸಿಲ್ಲದೆಯೂ ಇರಬಹುದು.

ವಿಚ್ಛೇದನೆಯ ಅವಕಾಶ ಮೇಲ್ನೋಟಕ್ಕೆ ಮಹಿಳಾ ಮುಕ್ತಿ ಮಾರ್ಗವೆಂದು ಕಾಣಬಹುದಾದರೂ, ಮತ್ತೆ ಅದು ಪುರುಷರ ಕೈಯಲ್ಲಿ ಶೋಷಣೆಯ ಸಾಧನವಾಗಿರುವುದನ್ನು ಅಲ್ಲಗಳೆಯಲಾಗದು.

ಹಿಂದೂ ವಿವಾಹ ಅಧಿನಿಯಮ ೧೩ಆರ ಮೇರೆಗೆ ಯಾವ ಕಾರಣಗಳಿಗಾಗಿ ವಿಚ್ಛೇದನೆ ದೊರೆಯುತ್ತದೆಯೋ ಅವೇ ಕಾರಣಗಳಿಗಾಗಿ ಹಿಂದೂ ಧರ್ಮ ಶಾಸ್ತ್ರದಲ್ಲಿ ಎರಡನೇ ವಿವಾಹವಾಗಲು(ಪತಿ/ಪತ್ನಿ ಜೀವಂತವಿದ್ದಾಗಲೂ) ಅವಕಾಶ ಕಲ್ಪಿಸಲಾಗಿತ್ತು. ಮೊದಲನೆಯ ಹೆಂಡತಿ, ಆ ಸಂದರ್ಭಗಳಲ್ಲಿ ಸಮಾಜದ ಹೊರೆಯಾಗದೆ ಪತಿಯ ಜವಾಬ್ದಾರಿಯಾಗಿರುತ್ತಿದ್ದಳು. ಪತಿಯ ವೈಯಕ್ತಿಕ ಜವಾಬ್ದಾರಿಯಿಂದಾಗಿ, ಸಾಮಾನ್ಯವಾಗಿ ಆರ್ಥಿಕ ಸ್ವಾವಲಂಬನೆಯಿಲ್ಲದ, ಪತ್ನಿಯ ಸ್ಥಾನಕ್ಕೆ ಭದ್ರತೆಯಿರುತ್ತಿತ್ತು. ಈಗ ಆರ್ಥಿಕವಾಗಿ ಸ್ವಾವಲಂಬಿಯಾಗದ ಪತ್ನಿಗೆ ವಿಚ್ಛೇದನಾ ಕಾನೂನಿನ ಅಡಿಯಲ್ಲಿ ಜೀವನೋಪಾಯಕ್ಕೆ ಬೇಕಾದ ಆರ್ಥಿಕ ನೆರವು ದೊರೆತರೂ ಸಾಮಾಜಿಕ ಭದ್ರತೆಯ ಕೊರತೆಯನ್ನು ಅವಳು ಎದುರಿಸಬೇಕಾಗುತ್ತದೆ. ಈ ಭದ್ರತೆಯ ಕೊರತೆ ಉಂಟುಮಾಡುವ ಆನುಷಂಗಿಕವಾದ ಸಾಮಾಜಿಕ ಸಮಸ್ಯೆಗಳು ಹಲವಾರು. ಇಷ್ಟಾದರೂ ಆಧುನಿಕವಾದ, ಬದಲಾಗುತ್ತಿರುವ ಸಮಾಜದಲ್ಲಿ ವಿಚ್ಛೇದನೆಯ ಅವಕಾಶ ಬಹಳ ಮಹತ್ವವುಳ್ಳದ್ದು. ಯಾವುದೇ ಕಾನೂನು, ಅದು ದುರುಪಯೋಗವಾಗದಿದ್ದಲ್ಲಿ ಸಮಾಜ ಸುಧಾರಣೆಯ ಹಾಗೂ ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲದು. ಆದ್ದರಿಂದ ಈ ಒಂದು ಅವಕಾಶದ ನಕಾರಾತ್ಮಕ ಗುಣಗಳೇನೇ ಇದ್ದರೂ ಅದರ ಪ್ರಯೋಜನ ಪಡೆಯುವಂಥ ಹಾಗೂ ಪ್ರಗತಿಪರ ಎನ್ನಲಾಗುವ ಒಂದು ಉಪಬಂಧದಿಂದಾಗಿ ಮಹಿಳೆಯರು ಬೀದಿಗೆ ಬೀಳದಂಥ ಸಾಮಾಜಿಕ ಪರಿಸರ ನಿರ್ಮಾಣವಾಗಬೇಕು. ಡಾ.ಎನ್.ಜಿ.ದಸ್ತಾನೆ-ವಿ-ಶ್ರೀಮತಿ ಎಸ್. ದಸ್ತಾನೆ(ಎಐಆರ್ ೭೫ ಎಸ್‌ಸಿ ೧೫೩೪) ಪ್ರಕರಣದಲ್ಲಿ ನ್ಯಾಯಮೂರ್ತಿ ಸನ್ಮಾನ್ಯ ವಿ.ವಿ.ಚಂದ್ರಚೂಡ್ ಅವರು ಹೇಳಿರುವಂತೆ "ವಿವಾಹವಾಗಬೇಕೇ ಆಗಬಾರದೆ, ಆಗುವುದಾದರೆ ಯಾರನ್ನು ಎಂಬುದು ಖಾಸಗಿ ವಿಷಯ. ಆದರೆ, ವಿವಾಹ ಬಂಧನವನ್ನು ಮುರಿಯುವುದು ಖಾಸಗಿ ವಿಷಯವಲ್ಲ. ಏಕೆಂದರೆ, ವಿವಾಹ

ವ್ಯವಸ್ಥೆಯಲ್ಲಿ ಸಮಾಜಕ್ಕೆ ಆಸಕ್ತಿಯಿದೆ. ಆದ್ದರಿಂದಲೇ ಕಾನೂನಿನ ದೃಷ್ಟಿಯಲ್ಲಿ ತಪ್ಪುಮಾಡುವ ಪತಿ/ಪತ್ನಿಯನ್ನು ಕೇವಲ `ತಪ್ಪಿತಸ್ಥ`ನೆಂದು ಪರಿಗಣಿಸದೆ 'ಅಪರಾಧಿ'ಯೆಂದು ಪರಿಗಣಿಸಲಾಗುತ್ತದೆ.''

ಭಾರತದಲ್ಲಿ ಜಾರಿಯಲ್ಲಿರುವ ವೈಯಕ್ತಿಕ ಕಾನೂನುಗಳಲ್ಲಿಯೂ ದೋಷದ ಆಧಾರ ಮೇಲೆ ಮಾತ್ರವೇ ವಿಚ್ಛೇದನೆಗೆ ಅವಕಾಶ ಕಲ್ಪಿಸಲಾಗಿದೆ. ಪರಸ್ಪರ ದೋಷಾರೋಪಣೆ ಮಾಡದೆಯೇ ವಿಚ್ಛೇದನೆ ಪಡೆಯುವ ಒಂದೇ ವಿಧಾನವೆಂದರೆ 'ಪರಸ್ಪರ ಸಮ್ಮತಿ'(Mutual consent)ಯ ಆಧಾರದ ಮೇಲೆ ಪಡೆಯುವ ವಿಚ್ಛೇದನೆ. ಆದರೆ ಈ ಅವಕಾಶ ಎಲ್ಲ ವೈಯಕ್ತಿಕ ಕಾನೂನುಗಳ ಅಡಿಯಲ್ಲಿ ಲಭ್ಯವಿಲ್ಲ. ಹಿಂದೂ ವಿವಾಹ ಅಧಿನಿಯಮ, ವಿಶೇಷ ವಿವಾಹ ಅಧಿನಿಯಮ ಮತ್ತು ಪಾರ್ಸಿ ವಿವಾಹ ಮತ್ತು ವಿಚ್ಛೇದನ ಅಧಿನಿಯಮಗಳ ಅಡಿಯಲ್ಲಿ ಪರಸ್ಪರ ಸಮ್ಮತಿಯ ಮೇರೆಗೆ ವಿಚ್ಛೇದನೆ ಪಡೆಯುವ ಅವಕಾಶವಿದೆ. ಪತಿಪತ್ನಿಯರಿಬ್ಬರೂ ಒಟ್ಟಿಗೆ ಬಾಳುವುದು ತಮಗೆ ಸಾಧ್ಯವಿಲ್ಲವೆಂಬುದಾಗಿ ಘೋಷಿಸಿ ವಿಚ್ಛೇದನೆಗೆ ಸಮ್ಮತಿಸಿದರೆ ಅವರಿಗೆ ಈ ಅವಕಾಶ ಲಭ್ಯವಿರುತ್ತದೆ. ಈ ಕಾರಣದ ಮೇಲೆ ವಿಚ್ಛೇದನೆಗಾಗಿ ಅರ್ಜಿಸಲ್ಲಿಸುವ ಮುನ್ನ ಒಂದು ವರ್ಷದ ಕಾಲ ಅವರಿಬ್ಬರೂ ಪ್ರತ್ಯೇಕವಾಗಿ ವಾಸಿಸುತ್ತಿರಬೇಕು. ಹೊಂದಾಣಿಕೆಯಿಲ್ಲದೆ ವಿಚ್ಛೇದನೆ ಬಯಸುವ ಪತಿಪತ್ನಿಯರು ಮತ್ತೊಮ್ಮೆ ಯೋಚಿಸಲಿ ಎಂಬ ಉದ್ದೇಶದಿಂದ ಹಿಂದೂ ವಿವಾಹ ಅಧಿನಿಯಮ ಮತ್ತು ವಿಶೇಷ ವಿವಾಹ ಅಧಿನಿಯಮಗಳ ಅಡಿಯಲ್ಲಿ ವಿಚ್ಛೇದನೆ ಕೋರುವ ಅರ್ಜಿಯನ್ನು ಆರು ತಿಂಗಳ ಕಾಲ ವಿಲೆ ಮಾಡಲಾಗುವುದಿಲ್ಲ. ಭಾರತೀಯ ವಿಚ್ಛೇದನೆ ಅಧಿನಿಯಮದ ಮೇರೆಗೆ(ಕ್ರಿಶ್ಚಿಯನ್ನರಿಗೆ) 'ಪರಸ್ಪರ ಒಪ್ಪಿಗೆ'ಯ ವಿಚ್ಛೇದನೆಗೆ ಅವಕಾಶವಿಲ್ಲ. ಆದರೆ ದಂಪತಿಯರು ಯಾವುದೇ ಧರ್ಮಕ್ಕೆ ಸೇರಿರಲಿ ಮತ್ತು ಯಾವುದೇ ರೀತಿಯಲ್ಲಿ ವಿವಾಹವಾಗಿರಲಿ ಅವರಿಗೆ 'ಪರಸ್ಪರ ಸಮ್ಮತಿ'ಯ ವಿಚ್ಛೇದನೆಗೆ ಅವಕಾಶವಿರಬೇಕು ಎಂದು ರೇನಾಲ್ಡ್ ರಾಜಮಣಿ-ವಿ-ಯೂನಿಯನ್ ಆಫ್ ಇಂಡಿಯಾ ಮತ್ತು ಇತರರು(೧೯೮೨, ಎಸ್‌ಸಿಸಿ ೪೭೪) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದಿದೆ. ಮುಸ್ಲಿಂ ವಿವಾಹ ವಿಘಟನಾ ಅಧಿನಿಯಮದ ಅಡಿಯಲ್ಲಿ ಈ ರೀತಿಯ ವಿಚ್ಛೇದನೆಗೆ ಅವಕಾಶವಿಲ್ಲ. ಆದರೆ ಕ್ರೋಡೀಕರಿಸಿಲ್ಲದ ಮುಸ್ಲಿಂ ಕಾನೂನಿನ ಅಡಿಯಲ್ಲಿ ಇದಕ್ಕೆ ಅವಕಾಶವಿದೆ.

ಆದರೆ ಯಾವುದೇ ಕಾನೂನಿನ ಅಡಿಯಲ್ಲಿಯೂ, ಪತಿ ಅಥವಾ ಪತ್ನಿ ತನ್ನ ಪತ್ನಿ ಅಥವಾ ಪತಿಯೊಡನೆ ಬಾಳುವುದು ತನಗೆ ಇಷ್ಟವಿಲ್ಲವೆಂಬ ಕಾರಣದ ಮೇಲೆ ಮಾತ್ರವೇ ನ್ಯಾಯಾಲಯದ ಮೆಟ್ಟಿಲು ಹತ್ತಿ ವಿಚ್ಛೇದನೆ ನೀಡುವಂತೆ ಒತ್ತಾಯಿಸಲು ಅವಕಾಶವಿಲ್ಲ. ಆದರೆ ಕೆಲವು ಅಪರೂಪದ ಸನ್ನಿವೇಶಗಳಲ್ಲಿ, ಪ್ರಕರಣದ ವಿವರಗಳನ್ನು ಅವಲಂಬಿಸಿ, ಹೊಂದಾಣಿಯಾಗಲು ಸಾಧ್ಯವೇ ಇಲ್ಲದಂಥ ಭಿನ್ನಾಭಿಪ್ರಾಯಗಳಿರುವಂಥ ಪ್ರಕರಣಗಳಲ್ಲಿ ಸರ್ವೋಚ್ಚನ್ಯಾಯಾಲಯ ವಿಚ್ಛೇದನೆಯನ್ನು ನೀಡಿದೆ. ಭಾರತದ ಸಂವಿಧಾನದ

೧೪೨ನೇ ಅನುಚ್ಛೇದದ ಮೇರೆಗೆ ಸರ್ವೋಚ್ಚ ನ್ಯಾಯಾಲಯ ಈ ಅಧಿಕಾರವನ್ನು ಚಲಾಯಿಸಬಹುದಾಗಿದೆ. ನ್ಯಾಯ ಒದಗಿಸುವ ದೃಷ್ಟಿಯಿಂದ ಇಂಥ ಒಂದು ನ್ಯಾಯಸಮ್ಮತವಾದ ಪರಿಹಾರವನ್ನು ಕೊಡಲು ಸರ್ವೋಚ್ಚ ನ್ಯಾಯಾಲಯಕ್ಕೆ ಈ ಅಧಿಕಾರವನ್ನು ಈ ಅನುಚ್ಛೇದ ನೀಡುತ್ತದೆ. ಆದರೆ ಉಚ್ಚನ್ಯಾಯಾಲಯಗಳಿಗೆ ಅಥವಾ ಅಧೀನ ನ್ಯಾಯಾಲಯಗಳಿಗೆ ಈ ಅಧಿಕಾರವಿಲ್ಲ. ಇದು ಸರ್ವೋಚ್ಚ ನ್ಯಾಯಾಲಯ ಅಪರೂಪವಾಗಿ ಚಲಾಯಿಸುವ ಅಧಿಕಾರವೇ ವಿನಃ ಪಕ್ಷಕಾರರು ಅದನ್ನು ಹಕ್ಕು ಎಂಬಂತೆ ಬೇಡುವಂತಿಲ್ಲ. ಭಾರತೀಯ ಸಂದರ್ಭದಲ್ಲಿ, ವಿವಾಹ ಸಂಬಂಧ ಸರಿಪಡಿಸಲಾಗದಂತೆ ಮುರಿದುಬಿದ್ದಿದೆ ಎಂಬುದು ವಿಚ್ಛೇದನೆ ಪಡೆಯಲು ಒಂದು ಕಾರಣವಾಗಬೇಕೆ ಮತ್ತು ಅದು ಮಹಿಳೆಯರಿಗೆ ಪ್ರತಿಕೂಲವಾಗಿ ಪರಿಣಮಿಸುವುದಿಲ್ಲವೆ ಎಂಬುದು ಇಂದಿಗೂ ಚರ್ಚಾಸ್ಪದವಾದ ವಿಷಯವೇ ಆಗಿದೆ.

ಭಾರತದಲ್ಲಿ ವಾಸಿಸುವ ವ್ಯಕ್ತಿ ಯಾವುದೇ ಧರ್ಮಕ್ಕೆ ಸೇರಿದ್ದರೂ ಇತರ ಯಾವುದೇ ಧರ್ಮಕ್ಕೆ ಸೇರಿದವಳನ್ನು ಅಥವಾ ಸೇರಿದವನನ್ನು ವಿವಾಹವಾಗಲು ಅವಕಾಶಕಲ್ಪಿಸುವ ಒಂದೇ ಒಂದು ಕೇಂದ್ರ ಅಧಿನಿಯಮವೆಂದರೆ ೧೯೫೪ರಲ್ಲಿ ಜಾರಿಯಲ್ಲಿ ಬಂದ ವಿಶೇಷ ವಿವಾಹ ಅಧಿನಿಯಮ. ಈ ಅಧಿನಿಯಮದ ಅಡಿಯಲ್ಲಿ ವಿವಾಹವಾದ ಎಲ್ಲರಿಗೂ(ಒಂದೇ ಧರ್ಮಕ್ಕೆ ಸೇರಿದ್ದರೂ) ಈ ಕಾನೂನು ಅನ್ವಯವಾಗುತ್ತದೆ.

ಹಿಂದೂ ವಿವಾಹ ಅಧಿನಿಯಮ ೧೯೫೫ ಹಾಗೂ ವಿಶೇಷ ವಿವಾಹ ಅಧಿನಿಯಮ ೧೯೫೪ ಇವೆರಡರ ಅಡಿಯಲ್ಲಿ ಪತಿಪತ್ನಿಯರಿಬ್ಬರೂ ಸಮಾನ ಕಾರಣಗಳ ಮೇಲೆ ವಿಚ್ಛೇದನೆ ಪಡೆಯಬಹುದಾಗಿದೆ. ಹಿಂದೂ ಕಾನೂನಿನ ಅಡಿಯಲ್ಲಿ ಪತಿ ಅಥವಾ ಪತ್ನಿ ಬೇರೆ ಧರ್ಮಕ್ಕೆ ಮತಾಂತರಗೊಂಡಿದಾನೆ/ಳೆ ಎಂಬ ಕಾರಣದ ಮೇಲೆ ವಿಚ್ಛೇದನೆ ಪಡೆಯಲು ಅವಕಾಶವಿದೆ. ಆದರೆ ವಿಶೇಷ ವಿವಾಹ ಅಧಿನಿಯಮ ಅಂತರಧರ್ಮೀಯ ವಿವಾಹಗಳಿಗೂ ಅನ್ವಯಿಸುವುದರಿಂದ, ಈ ಕಾರಣದ ಮೇಲೆ ವಿಚ್ಛೇದನೆ ಪಡೆಯುವುದು ಸಾಧ್ಯವಿಲ್ಲ.

ವಿಚ್ಛೇದನೆ ವಿವಾಹವನ್ನು ಅಂತಿಮವಾಗಿ ಅಂತ್ಯಗೊಳಿಸುತ್ತದೆ. ಹಿಂದೂ ವಿವಾಹ ಅಧಿನಿಯಮ, ೧೯೫೫ ಹಿಂದೂಗಳ ವಿವಾಹ ವಿಚ್ಛೇದನ ಕಾನೂನನ್ನು ಕ್ರೋಢೀಕರಿಸಿದೆ. ಅಧಿನಿಯಮದ ೧೩ ಮತ್ತು ೧೩-ಬಿ ಪ್ರಕರಣಗಳಲ್ಲಿ ವಿಚ್ಛೇದನೆ ಪಡೆಯಬಹುದಾದ ಕಾರಣಗಳನ್ನು ನಿರೂಪಿಸಲಾಗಿದೆ. ಅವೆಂದರೆ,

೧. ಪತಿಯ ವ್ಯಭಿಚಾರ

೨. ಪತಿಯ ಕ್ರೌರ್ಯ

೩. ಎರಡು ವರ್ಷಗಳಿಗೆ ಕಡಿಮೆಯಿಲ್ಲದಂತೆ ಪತಿಯಿಂದ ಪರಿತ್ಯಾಗ.

೪. ಬೇರೆ ಧರ್ಮಕ್ಕೆ ಪತಿಯ ಮತಾಂತರ

೫. ಪತಿಯ ಮತಿವಿಕಲ್ಪ ಅಥವಾ ಅಸ್ವಸ್ಥಚಿತ್ತತೆ.

೬. ಪತಿಯ ಸೋಂಕು ಸ್ವರೂಪದ ಅಥವಾ ವಾಸಿಯಾಗದ ಕೃಷ್ಠ ರೋಗ

೭. ಪತಿಯ ಗುಹ್ಯರೋಗ

೮. ಸಂನ್ಯಾಸ ಸ್ವೀಕಾರ

೯. ಏಳು ವರ್ಷಗಳು ಅಥವಾ ಅದಕ್ಕೂ ಹೆಚ್ಚು ವರ್ಷಗಳಿಂದ ನಾಪತ್ತೆಯಾಗಿರುವುದು(ಅವನು ಮರಣ ಹೊಂದಿದ್ದಾನೆ ಎಂಬ ಪೂರ್ವಬಾವನೆ)

ಹಿಂದೂ ವಿವಾಹವನ್ನು ಈ ಅಧಿನಿಯಮದ ಸಂಬಂಧಪಟ್ಟ ಪ್ರಕರಣಗಳ ಅಡಿಯಲ್ಲಿ ನ್ಯಾಯಾಲಯದಿಂದ ಡಿಕ್ರಿ ಪಡೆಯದೆ ವಿಘಟಿಸುವುದಕ್ಕೆ ಅವಕಾಶವಿಲ್ಲ ಎಂಬುದು ಬಹುಮುಖ್ಯವಾದ ಅಂಶ. ಆದರೆ ಅಧಿನಿಯಮದ ೨೯(೨)ನೇ ಪ್ರಕರಣ ಹಿಂದೂ ವಿವಾಹವನ್ನು ವಿಘಟನೆಗೊಳಿಸಲು ಯಾವುದೇ ರೂಢಿಗತ ಆಚರಣೆಯಲ್ಲಿ ಅವಕಾಶವಿದಲ್ಲಿ ಹಾಗೆ ಮಾಡಲು ಅಧಿನಿಯಮ ಅಡ್ಡಿ ಬರುವುದಿಲ್ಲ.

ಮೇಲೆ ಹೇಳಲಾದ ಕಾರಣಗಳ ಜೊತೆಗೆ ಮತ್ತೆರಡು ಕಾರಣಗಳ ಮೇಲೆ ವಿಚ್ಛೇದನೆ ಪಡೆಯಬಹುದಾಗಿದೆ. ಅವೆಂದರೆ-

- ನ್ಯಾಯಿಕ ಬೇರ್ಪಡೆಗಾಗಿ ಡಿಕ್ರಿ ನೀಡಿದ ನಂತರ ಒಂದು ವರ್ಷ ಅಥವಾ ಅದಕ್ಕೂ ಹೆಚ್ಚಿನ ಅವಧಿಯ ನಂತರವೂ ಪತಿ ಪತ್ನಿಯರ ನಡುವೆ ಸಹವಾಸ ಏರ್ಪಡದೆ ಇರುವುದು.
- ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆಯ ಡಿಕ್ರಿಯನ್ನು ನೀಡಿದ ನಂತರ ಒಂದು ವರ್ಷ ಅಥವಾ ಅದಕ್ಕೂ ಹೆಚ್ಚಿನ ಅವಧಿಯಲ್ಲಿ ಪತಿ ಪತ್ನಿಯರಲ್ಲಿ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆಯಾಗದಿರುವುದು.

ಈ ಎಲ್ಲ ಕಾರಣಗಳು ಪತಿಪತ್ನಿಯರಿಬ್ಬರಿಗೂ ದೊರೆಯುತ್ತದೆ ವಿಚ್ಛೇದನೆ ಪಡೆಯಲು, ಆದರೆ ಹಿಂದೂ ಮಹಿಳೆಗೆ ಅಧಿನಿಯಮ ೧೩(೨)ನೇ ಪ್ರಕರಣದ ಮೇರೆಗೆ ಇರುವ ಪ್ರತ್ಯೇಕ ಕಾರಣಗಳೆಂದರೆ

೧. ೧೯೫೫ರ ಅಧಿನಿಯಮದ ಪ್ರಾರಂಭಕ್ಕೆ ಮುನ್ನ ಊರ್ಜಿತವಿರುವ ಪತಿಯ ವಿವಾಹ

೨. ಪತಿ ವಿವಾಹದ ನಂತರ ಅತ್ಯಾಚಾರ, ಪುಂಮೈಥುನ ಅಥವಾ ಪಶುತ್ವದ ದೋಷಿಯಾಗಿದ್ದಾನೆಂದು ಕಂಡುಬಂದಿರುವುದು.

೩. ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ, ೧೯೫೬ರ ೧೮ನೇ ಪ್ರಕರಣ ಅಥವಾ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೆ ನೀಡಿದ ಜೀವನಾಂಶದ ಡಿಕ್ರಿಯನ್ನು ಪಾಲಿಸಲು ಪತಿ ತಪ್ಪಿರುವುದು.

೪. ಪತ್ನಿಯ ವಿವಾಹವನ್ನು ಅವಳು ೧೫ ವರ್ಷ ವಯಸ್ಸನ್ನು ಪೂರೈಸುವುದಕ್ಕೆ ಮುನ್ನ ಅನುಷ್ಠಾನಗೊಳಿಸಲಾಗಿದ್ದು, ೧೫ ವರ್ಷಗಳು ಪೂರ್ಣಗೊಂಡ ತರುವಾಯ ಆದರೆ ೧೮ ವರ್ಷಗಳನ್ನು ತಲುಪುವುದಕ್ಕೆ ಮುನ್ನ ನಿರಾಕರಿಸುವುದು

ಮೇಲಿನ ನಾಲ್ಕು ಕಾರಣಗಳು ಮಹಿಳೆಗೆ ಮಾತ್ರವೇ ಲಭ್ಯವಿರುವಂಥ ಕಾರಣಗಳು.

ಎಲ್ಲ ಧರ್ಮಗಳ ವಿವಾಹ ಕಾನೂನಗಳಲ್ಲಿಯೂ ಕ್ರೌರ್ಯ ಹಾಗೂ ಪರಿತ್ಯಾಗಗಳ ಮೇರೆಗೆ ವಿಚ್ಛೇದನೆ ಪಡೆಯಲು ಅವಕಾಶವಿದೆ. ಆದರೆ ಕ್ರಿಶ್ಚಿಯನ್ನರಿಗೆ ಅನ್ವಯಿಸುವ ಭಾರತೀಯ ವಿಚ್ಛೇದನಾ ಅಧಿನಿಯಮದ ಅಡಿಯಲ್ಲಿ ಮಾತ್ರ ಕ್ರೌರ್ಯ ಅಥವಾ ಪರಿತ್ಯಾಗದ ಒಂದೇ ಕಾರಣದ ಮೇಲೆ ಪತ್ನಿ ಪತಿಯಿಂದ ವಿಚ್ಛೇದನೆ ಪಡೆಯಲು ಸಾಧ್ಯವಿಲ್ಲ. ಪತ್ನಿ ಪತಿಯಿಂದ ವಿಚ್ಛೇದನೆ ಪಡೆಯಲು ತನ್ನ ಗಂಡನ ಎರಡು ಅಪರಾಧಗಳನ್ನು ಸಾಬೀತುಪಡಿಸಬೇಕು. ಪರಿತ್ಯಾಗದೊಂದಿಗೆ ವ್ಯಭಿಚಾರ ಅಥವಾ ಕ್ರೌರ್ಯದೊಂದಿಗೆ ವ್ಯಭಿಚಾರ. ಆದರೆ ಕ್ರಿಶ್ಚಿಯನ್ ಪುರುಷ ತನ್ನ ಪತ್ನಿಯ ವ್ಯಭಿಚಾರವನ್ನು ಸಾಬೀತುಪಡಿಸಿದರೆ ಸಾಕು ವಿಚ್ಛೇದನೆ ಪಡೆಯಬಹುದು. ಆದರೆ ಕ್ರಿಶ್ಚಿಯನ್ ಪತ್ನಿ ಮಾತ್ರ ತನ್ನ ಗಂಡನ ವ್ಯಭಿಚಾರದೊಂದಿಗೆ ಮತ್ತೊಂದು ಅಪರಾಧವನ್ನೂ(ಕ್ರೌರ್ಯ, ಪರಿತ್ಯಾಗ, ದ್ವಿಪತ್ನಿತ್ವ) ರುಜುವಾತುಪಡಿಸಬೇಕು.

ಅನೇಕ ಸಂದರ್ಭಗಳಲ್ಲಿ, ಭಾರತೀಯ ವಿಚ್ಛೇದನಾ ಅಧಿನಿಯಮದ ೧೦ನೇ ಪ್ರಕರಣವನ್ನು ಅದು ಲಿಂಗ ಮತ್ತು ಧರ್ಮದ ಆಧಾರದ ಮೇಲೆ ಸ್ತ್ರೀಪುರುಷರ ನಡುವೆ ತಾರತಮ್ಯವೆಸಗುವುದೆಂಬ ಕಾರಣಕ್ಕೆ ಪ್ರಶ್ನಿಸಲಾಗಿದೆ. ಇಪ್ಪತ್ತೊಂದನೇ ಶತಮಾನದಲ್ಲಿಯೂ ಇಂಥ ತಾರತಮ್ಯ ಮುಂದುವರೆದಿರುವುದು ವಿಪರ್ಯಾಸ.

ಭಾರತೀಯ ವಿಚ್ಛೇದನಾ ಅಧಿನಿಯಮ ೧೮೬೯ ಅನ್ನು ಇಂಗ್ಲೀಷ್ ವೈವಾಹಿಕ ವ್ಯಾಜ್ಯಗಳ ಅಧಿನಿಯಮ ೧೮೫೭ರ ಮಾದರಿಯಲ್ಲಿ ರೂಪಿಸಲಾದುದು. ಇದರ ಉದ್ದೇಶ ಭಾರತದಲ್ಲಿ ನೆಲಸಿದ್ದ ಬ್ರಿಟಿಷರು ಮತ್ತು ಯೂರೋಪಿಯನ್ನರಿಗೆ ಇಂಗ್ಲಿಷ್ ವೈವಾಹಿಕ ವ್ಯಾಜ್ಯಗಳ ಅಧಿನಿಯಮ ೧೮೫೭ರ ಉಪಬಂಧಗಳ ಅನ್ವಯವನ್ನು ವಿಸ್ತರಿಸುವುದು. ಈ ಇಂಗ್ಲಿಷ್ ಅಧಿನಿಯಮ ಇಂಗ್ಲೆಂಡಿನಲ್ಲಿ ಅನೇಕ ತಿದ್ದುಪಡಿಗಳಿಗೆ ಒಳಗಾಗಿದೆ. ೧೯೨೩ರಷ್ಟು ಹಿಂದೆಯೇ ಇದಕ್ಕೆ ತಿದ್ದುಪಡಿ ಮಾಡಿ ವ್ಯಭಿಚಾರವನ್ನು ವಿಚ್ಛೇದನೆ ಪಡೆಯಲು ಒಂದು ಸ್ವತಂತ್ರ ಕಾರಣವನ್ನಾಗಿ ಮಾಡಲಾಯಿತು. ಹೀಗಾಗಿ ಅಲ್ಲಿ ಮಹಿಳೆ ವ್ಯಭಿಚಾರದ ಜೊತೆಗೆ ಇನ್ನೊಂದು ಅಪರಾಧವನ್ನು ಸಾಬೀತುಪಡಿಸುವ ಅಗತ್ಯವಿಲ್ಲದಾಗಿದೆ. ೧೯೩೭ರಲ್ಲಿ ವಿಚ್ಛೇದನೆ ಪಡೆಯಲು ಮತ್ತೆ ಮೂರು ಕಾರಣಗಳನ್ನು ಸೇರಿಸಲಾಯಿತು. ಅವೆಂದರೆ, ಪರಿತ್ಯಾಗ, ಕ್ರೌರ್ಯ ಮತ್ತು ಹುಚ್ಚು. ಇವು ಮೂರನ್ನು ಪ್ರತ್ಯೇಕ ಕಾರಣಗಳನ್ನಾಗಿ ಮಾಡಲಾಯಿತು. ೧೯೬೯ರಲ್ಲಿ ವಿಚ್ಛೇದನಾ

ಸುಧಾರಣೆಗಳ ಅಧಿನಿಯಮವನ್ನು ಜಾರಿಗೊಳಿಸಿ, ಹೊಂದಾಣಿಕೆಯಾಗದ ರೀತಿಯಲ್ಲಿ ಮುರಿದುಬಿದ್ದ ಮದುವೆಯನ್ನೇ ವಿಚ್ಛೇದನೆ ಪಡೆಯಲು ಒಂದು ಸ್ವತಂತ್ರ ಕಾರಣವನ್ನಾಗಿ ಸೇರಿಸಲಾಯಿತು. ೧೯೭೩ರಲ್ಲಿ ಕ್ರೋಢೀಕೃತ ವೈವಾಹಿಕ ವ್ಯಾಜ್ಯಗಳ ಅಧಿನಿಯಮವನ್ನು ಜಾರಿಗೊಳಿಸಲಾಯತು. ಆದರೆ ೧೮೫೭ ಇಂಗ್ಲಿಷ್ ಅಧಿನಿಯಮವನ್ನು ಆಧರಿಸಿ ೧೮೬೯ರಲ್ಲಿ ಜಾರಿಗೊಳಿಸಿದ ಮತ್ತು ಭಾರತದಲ್ಲಿ ಕ್ರಿಶ್ಚಿಯನ್ನರಿಗೆ ಅನ್ವಯಿಸುವ ಭಾರತೀಯ ವಿಚ್ಛೇದನಾ ಅಧಿನಿಯಮ ಮಾತ್ರ ಯಾವುದೇ ತಿದ್ದುಪಡಿಯಾಗದೆ ಬದಲಾದ ಸಾಮಾಜಿಕ ಪರಿಸರಕ್ಕೆ ಸ್ಪಂದಿಸದೆ ಅದೇ ರೂಪವನ್ನು ಹೊಂದಿದೆ. ವೈವಾಹಿಕ ವ್ಯಾಜ್ಯಗಳ ಅಧಿನಿಯಮ ೧೯೩೭ರ ಇಂಗ್ಲಿಷ್ ಅಧಿನಿಯಮದಲ್ಲಿ ಸೇರಿಸಲಾದ ವಿಚ್ಛೇದನೆಯ ಕಾರಣಗಳನ್ನು ಅನಂತರದ ಪಾರ್ಸಿ ವಿವಾಹ ಮತ್ತು ವಿಚ್ಛೇದನಾ ಅಧಿನಿಯಮ, ೧೯೩೭, ವಿಶೇಷವಿವಾಹ ಅಧಿನಿಯಮ, ೧೯೫೪ ಮತ್ತು ಹಿಂದೂ ವಿವಾಹ ಅಧಿನಿಯಮ ೧೯೫೫ರಲ್ಲಿ ಅಳವಡಿಸಿಕೊಳ್ಳಲಾಗಿದೆ. ಆದರೆ ಭಾರತೀಯ ವಿಚ್ಛೇದನಾ ಅಧಿನಿಯಮದ ೧೦ನೇ ಪ್ರಕರಣದಲ್ಲಿ ಹೇಳಲಾದ ಕಾರಣ ಮಾತ್ರ ಬದಲಾಗದೆ ಹಾಗೇ ಉಳಿದಿದೆ. ಇದೇ ಅಧಿನಿಯಮದ ೭ನೇ ಪ್ರಕರಣ, ಇಂಗ್ಲಿಷ್ ವೈವಾಹಿಕ ನ್ಯಾಯಾಲಯಗಳ ಎಲ್ಲ ಕಾನೂನುಗಳು ಹಾಗೂ ವ್ಯವಹರಣೆಗಳು ಭಾರತೀಯ ಶಾಸನದಲ್ಲಿ ತಾನಾಗಿಯೇ ಸೇರ್ಪಡೆಯಾಗಬೇಕೆಂದು ಉಪಬಂಧ ಕಲ್ಪಿಸುತ್ತದೆ. ಆದರೆ "ಇನ್ನೊಂದು ದೇಶದ ಕಾನೂನಿನಲ್ಲಾದ ಬದಲಾವಣೆಯನ್ನು ಈ ದೇಶದ ಕಾನೂನಿನಲ್ಲಿ ಒಂದು ಭಾಗವನ್ನಾಗಿ ಸೇರಿಸಲಾಗದು. ವಿಚ್ಛೇದನೆ ಅಥವಾ ವಿವಾಹ ವಿಘಟನೆಯ ವಿಷಯದಲ್ಲಿ, ಭಾರತೀಯ ವಿಚ್ಛೇದನಾ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಇಂಗ್ಲಿಷ್ ವೈವಾಹಿಕ ನ್ಯಾಯಾಲಯಗಳ ತತ್ವಗಳು ಹಾಗೂ ಆಚರಣೆಗಳಿಗೆ ಹೊಂದಾಣಿಕೆಯಾಗವಂತಿರಬೇಕು ಎಂದು ಮಾತ್ರ ಉಪಬಂಧ ಕಲ್ಪಿಸುತ್ತದೆ ಎಂದು ಟಿ.ಎಂ.ಬಾಷಿಯಮ್ -ವಿ-ಎಂ.ವಿಕ್ಟರ್ (ಎಐಆರ್ ೧೯೭೦ ಮದ್ರಾಸ್ ೧೨) ಪ್ರಕರಣದಲ್ಲಿ ಮದ್ರಾಸ್ ಉಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಹೀಗಾಗಿ ಯಾವುದೇ ಬದಲಾವಣೆಯನ್ನು ಶಾಸನಾತ್ಮಕ ಸುಧಾರಣೆಯ ಮೂಲಕ ಅಥವಾ ನ್ಯಾಯಿಕ ನಿರ್ದೇಶನಗಳ ಮೂಲಕ ಮಾತ್ರವೇ ತರಬೇಕಾಗುತ್ತದೆ.

ಇತರ ಧರ್ಮಗಳು ಹಾಗೂ ಕ್ರಿಶ್ಚಿಯನ್ನರ ವಿಚ್ಛೇದನಾ ಹಕ್ಕುಗಳ ನಡುವೆ ತಾರತಮ್ಯವೆಸಗುವಂಥ ಭಾರತೀಯ ವಿಚ್ಛೇದನಾ ಅಧಿನಿಯಮದಲ್ಲಿನ ಎರಡು ಉಪಬಂಧಗಳೆಂದರೆ ಕ್ರಿಶ್ಚಿಯನ್ನರಲ್ಲಿ

೧. ೨೨ನೇ ಪ್ರಕರಣದ ಮೇರೆಗೆ ಪರಿತ್ಯಜನೆ ನ್ಯಾಯಿಕ ಬೇರ್ಪಡೆ ಪಡೆಯಲು ಪತಿಪತ್ನಿಯರಿಗೆ ಒಂದು ಕಾರಣವಾಗುತ್ತದೆಯೇ ವಿನಃ ವಿಚ್ಛೇದನೆ ಪಡೆಯಲು ಅಲ್ಲ ಎಂಬುದು.

೨. ಪರಸ್ಪರ ಒಪ್ಪಿಗೆಯ ಮೇಲೆ ವಿಚ್ಛೇದನೆ ಪಡೆಯಲು ಪತಿಪತ್ನಿಯರಿಗೆ ಅವಕಾಶವಿಲ್ಲದಿರುವುದು.

ಈ ದೇಶದಲ್ಲಿ ಜಾರಿಯಲ್ಲಿರುವ ಎಲ್ಲ ಇತರ ವೈವಾಹಿಕ ಕಾನೂನುಗಳ ಅಡಿಯಲ್ಲಿಯೂ, ಪರಿತ್ಯಜನೆ

ವಿಚ್ಛೇದನೆ ಪಡೆಯಲು ಒಂದು ಕಾರಣವಾಗುತ್ತದೆ ಹಾಗೂ ಪರಸ್ಪರ ಒಪ್ಪಿಗೆಯ ವಿಚ್ಛೇದನೆಗೆ ಅವಕಾಶ ಕಲ್ಪಿಸುತ್ತದೆ.

ಶ್ರೀ ಶ್ರೀನಿವಾಸ ಥಿಯೇಟರ್ ಮತ್ತು ಇತರರು ಇತ್ಯಾದಿ-ವಿ-ತಮಿಳುನಾಡು ಸರ್ಕಾರ ಮತ್ತು ಇತರರು (ಎಐಆರ್ ೧೯೯೨, ಎಸ್‌ಸಿ ೯೯೯: ಜೆಟಿ(೧೯೯೨) ೨ ಎಸ್‌ಸಿ ೩೧೨ : (೧೯೯೨) ೨ ಎಸ್‌ಸಿಸಿ ೬೪೩: ೧೯೯೨ ಎಸ್‌ಸಿಡಬ್ಲ್ಯು ೮೯೯) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಲಯ, ಭಾರತದ ಎಲ್ಲೆಯೊಳಗೆ ಯಾವುದೇ ವ್ಯಕ್ತಿಯನ್ನೂ ಕಾನೂನಿನಿಂದ ಸಮಾನ ರಕ್ಷಣೆ ಹಾಗೂ ಕಾನೂನಿನ ಮುಂದೆ ಸಮಾನತೆಯ ಹಕ್ಕುಗಳಿಂದ ವಂಚಿತರನ್ನಾಗಿಸಲಾಗದು ಎಂದು ಭಾರತದ ಸಂವಿಧಾನದ ೧೪ನೇ ಅನುಚ್ಛೇದ ಹೇಳುತ್ತದೆ. ಆದ್ದರಿಂದ ಅಂಥ ಸಮಾಜ ನಿರ್ಮಾಣದತ್ತ ದೇಶ ಗಮನಹರಿಸಬೇಕು ಎಂದು ಅಭಿಪ್ರಾಯಪಟ್ಟಿದೆ. ಮತ್ತೊಂದು ಪ್ರಕರಣದಲ್ಲಿ ನ್ಯಾಯಮೂರ್ತಿ ಚಿನ್ನಪ್ಪ ರೆಡ್ಡಿ ಅವರು 'ಪರಸ್ಪರ ಒಪ್ಪಿಗೆಯ ಮೇರೆಗೆ ವಿಚ್ಛೇದನೆ ಪಡೆಯುವ ಹಕ್ಕು ಎಲ್ಲ ದಂಪತಿಗಳಿಗೂ, ಅವರು ಯಾವುದೇ ಧರ್ಮಕ್ಕೆ ಸೇರಿದ್ದರೂ ಇರಬೇಕು' ಎಂಬ ವಾದವನ್ನು ಒಪ್ಪುತ್ತಾ ಹೇಳಿರುವ ಇತರ ಮಾತುಗಳು ಅತ್ಯಂತ ಗಮನಾರ್ಹವಾದವು ಮತ್ತು ಅತ್ಯಂತ ಮೌಲಿಕವಾದುವು. ವೈವಾಹಿಕ ಸಂಬಂಧದ ಚರಿತ್ರೆಯೆಂದರೆ ಸಾಂಪ್ರದಾಯಿಕ ಮತ್ತು ಪಾವಿತ್ರ್ಯತೆ ಎಂಬ ನೆಲೆಗಳಿಂದ ವಾಸ್ತವತೆ ಮತ್ತು ಕರಾರುಗಳ ಕಡೆಗೆ ಆದ ಒಂದು ಆಂದೋಲನ. ಆದರೆ ಈಗಲೂ ಪ್ರಪಂಚ ಪುರುಷ ಪ್ರಧಾನವಾದ ಪ್ರಪಂಚವೇ ಮತ್ತು ಕಾನೂನುಗಳು ಸಹ ಪುರುಷ ನಿರ್ಮಿತವಾದವುಗಳೇ. ಆದ್ದರಿಂದ ಪರಸ್ಪರ ಒಪ್ಪಿಗೆಯ ಮೇರೆಗೆ ದೊರೆಯುವ ವಿಚ್ಛೇದನೆ ದಂಪತಿಗಳು ಯಾವುದೇ ಧರ್ಮಕ್ಕೆ ಸೇರಿರಲಿ ಯಾವುದೇ ರೀತಿಯಲ್ಲಿ ವಿವಾಹವಾಗಿರಲಿ ಎಲ್ಲರಿಗೂ ದೊರೆಯಬೇಕು. ಬೇರೆಯಾಗಲು ಇಚ್ಛಿಸುವ ಸ್ತ್ರೀಪುರುಷರನ್ನು ಒಂದಾಗುವಂತೆ ಯಾವುದೇ ಕಾನೂನು ಒತ್ತಾಯಿಸಬಾರದು.. ಮಹಿಳೆಯರಿಗೆ ರಕ್ಷಣೆ ದೊರೆಯಬೇಕು. ನಮ್ಮ ಸಮಾಜ ಇಂದಿಗೂ ವಿಚ್ಛೇದಿತ ಮಹಿಳೆಯನ್ನು ತಿರಸ್ಕಾರದಿಂದ ಕಾಣುತ್ತದೆ. ವಿಚ್ಛೇದನೆ ಪಡೆದ ಮಹಿಳೆಯರನ್ನು ಇಂದಿಗೂ ಅನುಮಾನದಿಂದ ನೋಡಲಾಗುತ್ತದೆ. ಆದ್ದರಿಂದ ವಿಚ್ಛೇದನೆ ಪಡೆದ ಮಹಿಳೆಯ ಬಾಳು ದುಸ್ತರವಾಗುತ್ತದೆ. ಆದ್ದರಿಂದ ವಿಚ್ಛೇದನೆ ನೀಡುವ ಕಾನೂನೇ ಅವಳಿಗೆ ಸ್ವಲ್ಪಮಟ್ಟಿಗಿನ ಆರ್ಥಿಕ ಸ್ವಾವಲಂಬನೆಯನ್ನು ಒದಗಿಸಬೇಕಾಗುತ್ತದೆ. ಪ್ರತಿಯೊಂದು ವಿಚ್ಛೇದನೆಯೂ ಒಂದು ಸಮಸ್ಯೆಯನ್ನು ಪರಿಹರಿಸಿದರೆ ಮತ್ತೊಂದು ಸಮಸ್ಯೆಯನ್ನು ಹುಟ್ಟುಹಾಕುತ್ತದೆ... ವಿಚ್ಛೇದನೆಯ ಕಾನೂನು ಯಶಸ್ವಿಯಾಗಬೇಕಾದರೆ, ಪತ್ನಿಯರಿಗೆ ಆರ್ಥಿಕ ಸ್ವಾವಲಂಬನೆಗೆ ಉಪಬಂಧ ಕಲ್ಪಿಸಬೇಕು. ತಪ್ಪು ಪತ್ನಿಯದೇ ಆಗಿದ್ದರೂ ಅವಳ ಹಿತಾಸಕ್ತಿಗಳನ್ನು ಕಾನೂನು ರಕ್ಷಿಸುವುದು ಅಗತ್ಯವಾಗುತ್ತದೆ. ಇಲ್ಲದಿದ್ದರೆ ಅವಳು ನಿರ್ಗತಿಕಳಾಗುತ್ತಾಳೆ ಹಾಗೂ

ಸಮಾಜಕ್ಕೆ ಹೊರೆಯಾಗುತ್ತಾಳೆ." ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಲ್ಲದ ಸಮಾಜದಲ್ಲಿ 'ವಿಚ್ಛೇದನೆ' ಮಹಿಳೆಯರಿಗೆ ಒಡ್ಡಬಹುದಾದ ಅಪಾಯವನ್ನೇ ಈ ಅಭಿಪ್ರಾಯವೂ ಧ್ವನಿಸುತ್ತದೆ.

ಸರ್ವೋಚ್ಚ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ವೈವಾಹಿಕ ಕಾನೂನುಗಳ ಸಮಗ್ರ ಸುಧಾರಣೆಗೆ ಶಿಫಾರಸ್ಸು ಮಾಡಿದೆ. ಪರಸ್ಪರ ಸಮ್ಮತಿ ವಿಚ್ಛೇದನೆ ಮತ್ತು ಮರುಹೊಂದಾಣಿಕೆಯಾಗದಂತೆ ಮುರಿದುಬಿದ್ದ ವಿವಾಹದ ಕಾರಣ ವಿಚ್ಛೇದನೆಯ ಅವಕಾಶಗಳನ್ನು ಕಲ್ಪಿಸಬೇಕೆಂದು ಅಭಿಪ್ರಾಯಪಟ್ಟಿದೆ. ಹಾಗೂ ಈ ಬಗ್ಗೆ ಶಾಸಕಾಂಗ ಕ್ರಮಕೈಗೊಳ್ಳಬೇಕೆಂದು ಒತ್ತಾಯವನ್ನೂ ಮಾಡಿದೆ.

**ಕ್ರೌರ್ಯ** : ಮುಸಲ್ಮಾನರಲ್ಲಿ, ಮುಸ್ಲಿಂ ವಿವಾಹಗಳ ವಿಘಟನಾ ಅಧಿನಿಯಮ ೧೯೩೯ರ ಮೇರೆಗೆ, ಕ್ರೌರ್ಯದ ಕಾರಣದ ಮೇಲೆ ವಿಚ್ಛೇದನೆ ಪಡೆಯುವ ಅವಕಾಶ ಮುಸ್ಲಿಂ ಪತ್ನಿಯರಿಗೆ ಮಾತ್ರ ಲಭ್ಯ.

ಹಿಂದೂ ವಿವಾಹ ಅಧಿನಿಯಮದ ಮೇರೆಗೆ ಕ್ರೌರ್ಯದ ಕಾರಣದ ಮೇಲೆ ವಿಚ್ಛೇದನೆ ಅಥವಾ ನ್ಯಾಯಿಕ ಬೇರ್ಪಡೆ ಪಡೆಯಲು ಅವಕಾಶವಿದ್ದರೂ, ಕ್ರೌರ್ಯವನ್ನು ಎಲ್ಲಿಯೂ ಪರಿಭಾಷಿಸಿಲ್ಲ. ಆದರೆ ಕ್ರೌರ್ಯ ಎಂಬ ಅಭಿವ್ಯಕ್ತಿ ಪತಿಯ ದೈಹಿಕ ಹಿಂಸೆಯ ಕೃತ್ಯಗಳನ್ನಷ್ಟೇ ಅಲ್ಲದೆ, ಪತಿಯೊಡನೆ ಬಾಳುವುದು ಅಪಾಯಕಾರಿ ಎಂಬ ಭಯವನ್ನು ಪತ್ನಿಯ ಮನಸ್ಸಿನಲ್ಲಿ ಉಂಟುಮಾಡುವಂಥ ಪತಿಯ ಇನ್ನಿತರ ವರ್ತನೆ, ಮಾತು ಹಾಗೂ ಕೃತ್ಯಗಳನ್ನೂ ಒಳಗೊಳ್ಳುತ್ತದೆ. ಆದರೆ ಮುಸ್ಲಿಂ ಕಾನೂನಿನಲ್ಲಿ ಕ್ರೌರ್ಯವನ್ನು ಈ ಮುಂದಿನಂತೆ ಸ್ಪಷ್ಟವಾಗಿ ಪರಿಭಾಷಿಸಲಾಗಿದೆ.

- ದೈಹಿಕವಾಗಿ ಅಥವಾ ಅನ್ಯಥಾ ಹಿಂಸಿಸುವ ಮೂಲಕ ಪದೇ ಪದೇ ಆಕ್ರಮಣ ಮಾಡಿ ಪತ್ನಿಯರ ಜೀವನವನ್ನು ಅಸಹನೀಯವನ್ನಾಗಿ ಮಾಡುವುದು.
- ಒಳ್ಳೆಯ ಹೆಸರಿಲ್ಲದ ಮಹಿಳೆಯ ಸಹವಾಸ ಬೆಳೆಸುವುದು ಅಥವಾ ಅನೈತಿಕ ಜೀವನವನ್ನು ನಡೆಸುವುದು.
- ಅನೈತಿಕ ಜೀವನ ನಡೆಸುವಂತೆ ಪತ್ನಿಯನ್ನು ಬಲಾತ್ಕರಿಸುವುದು.
- ಅವಳ ಆಸ್ತಿಯನ್ನು ವಿಲೆಮಾಡಲು ಪ್ರಯತ್ನಿಸುವುದು ಅಥವಾ ಅದರಲ್ಲಿ ಅವಳಿಗಿರುವ ಹಕ್ಕುಗಳನ್ನು ಚಲಾಯಿಸದಂತೆ ತಡೆಯುವುದು.
- ಧಾರ್ಮಿಕ ಕ್ರಿಯೆ ಅಥವಾ ಆಚರಣೆಯನ್ನು ಮಾಡದಂತೆ ತಡೆಯುವುದು
- ಅನೇಕ ಪತ್ನಿಯರನ್ನುಳ್ಳ ಪತಿ ಎಲ್ಲರನ್ನೂ ಈ ಸಂಬಂಧವಾಗಿ ಕುರಾನ್ ನಲ್ಲಿ ಹೇಳಿರುವಂತೆ ಸಮಾನವಾಗಿ ನೋಡಿಕೊಳ್ಳದಿರುವುದು.

ಹಿಂದೂ ಕಾನೂನಿನಲ್ಲಿ ಈ ರೀತಿಯ ಸ್ಪಷ್ಟ ಪರಿಭಾಷೆ ಇಲ್ಲದಿದ್ದರೂ ನ್ಯಾಯಾಲಯಗಳು ನೀಡಿರುವ ತೀರ್ಪುಗಳನ್ನಾಧರಿಸಿ ಈ ಮುಂದೆ ಹೇಳಿದಂಥ ರೀತಿಯ ಕೃತ್ಯಗಳನ್ನು ಕ್ರೌರ್ಯದ ಪರಿಧಿಯಲ್ಲಿ ತರಬಹುದು.

- ಪತ್ನಿಗೆ ಮಾಡುವ ಅಪಮಾನ ಅಥವಾ ಬೈಗುಳಗಳು ಅಥವಾ ಅವಳಿಗೆ ನೀಡುವ ಕಿರುಕುಳ.
- ಊಟ, ಔಷಧಿಯನ್ನು ಕೊಡಲು ನಿರಾಕರಿಸುವುದು ಅಥವಾ ಕೊಡದೆಯೇ ಇರುವುದು. ಅವಳನ್ನು ಹೊರಹಾಕುವುದು ಅಥವಾ ಅವಳ ಬಂಧುಗಳನ್ನು ಭೇಟಿಯಾಗದಂತೆ ತಡೆಯುವುದು.
- ಅವಳೊಡನೆ ಕಾರಣವಿಲ್ಲದೆ ದೈಹಿಕ ಸಂಪರ್ಕ ನಿಲ್ಲಿಸುವುದು, ಹಿಂಸೆಯ ಹೆದರಿಕೆ ಹಾಕುವುದು, ಅತಿಯಾಗಿ ಕೆಲಸ ಮಾಡಿಸುವುದು.
- ಬೇರೆ ಸ್ತ್ರೀಯರೊಡನೆ ಸಂಪರ್ಕ ಮಾಡುವುದು. ಅಲಕ್ಷ್ಯ ತೋರುವುದು, ಅವಳ ಅಸ್ತಿತ್ವವನ್ನು ಕಡೆಗಣಿಸುವುದು.
- ವರದಕ್ಷಿಣೆ ಬೇಡುವುದು
- ಪತ್ನಿಯ ಈ ಕೆಳಗಿನ ವರ್ತನೆಯೂ ಪತಿಗೆ ಕ್ರೌರ್ಯವೆನಿಸಿಕೊಳ್ಳುತ್ತದೆ.
- ಬಿಡದೆ ತಪ್ಪು ಹುಡುಕುವ ಮತ್ತು ಜಗಳವಾಡುವ ಸ್ವಭಾವ.
- ವಿವಾಹ ಬಾಹಿರ ಸಂಬಂಧ ಹೊಂದಿರುವನೆಂದು ಸುಳ್ಳು ಆರೋಪ ಹೊರಿಸುವುದು.

ಪತ್ನಿಯ ಈ ಕೆಳಗಿನ ವರ್ತನೆ ಕ್ರೌರ್ಯದ ಪರಿಧಿಯಲ್ಲಿ ಬರುವುದಿಲ್ಲ ಎನ್ನಬಹುದು.

- ಇತರ ಪುರುಷರೊಡನೆ ಸಲುಗೆಯಿಂದಿವ ವರ್ತನೆ ಇಂಥ ಸಲುಗೆಯ ವರ್ತನೆ ಗಂಡನ ಆರೋಗ್ಯಕ್ಕೆ ಹಾನಿಯುಂಟು ಮಾಡುವಂಥದ್ದಾಗಿರಬಾರದು.
- ಜಗಳವಾಡುವ ವರ್ತನೆ, ಅಂಥ ಜಗಳಕ್ಕೆ ಕಾರಣ ಗಂಡನೇ ಆಗಿರುವುದು.
- ಪತ್ನಿ ಜಗಳವಾಡುವ ಸ್ವಭಾವದವಳಾಗಿದ್ದರೂ, ಅಂಥ ಜಗಳದಿಂದ ಗಂಡನ ದೈಹಿಕ, ಮಾನಸಿಕ ಆರೋಗ್ಯ ಕೆಡದಿದ್ದರೆ, ಅಂಥ ವರ್ತನೆ
- ಮನೆಗೆಲಸದಲ್ಲಿ ಆಸಕ್ತಿವಹಿಸದಿರುವ ಅಥವಾ ಅತ್ತೆ ಮಾವಂದಿರಿಗೆ ಗೌರವ ತೋರದಿರುವ ವರ್ತನೆ.

ನ್ಯಾಯಾಲಯಗಳು ಆಯಾ ಪ್ರಕರಣಗಳ ವಿವರಗಳನ್ನಾಧರಿಸಿ ನೀಡಿರುವ ತೀರ್ಪುಗಳ ಆಧಾರದಿಂದ ಸ್ಥೂಲವಾಗಿ ಕ್ರೌರ್ಯವೆನಿಸುವ ವರ್ತನೆಗಳನ್ನು ಪಟ್ಟಿಮಾಡಲಾಗಿದೆ. ಪ್ರಕರಣಗಳ ವಿವರಗಳನ್ನವಲಂಬಿಸಿ

ಇವುಗಳಲ್ಲಿ ಸೇರ್ಪಡೆಯಾಗಿಲ್ಲದ ಅನೇಕ ವರ್ತನೆಗಳು ಕ್ರೌರ್ಯವೆನಿಸಬಹುದು. ಹಾಗೂ ಇದರಲ್ಲಿ ಸೇರ್ಪಡೆಯಾಗಿರುವ ಕೆಲವು ವರ್ತನೆಗಳು ಕ್ರೌರ್ಯವೆನಿಸದೆಯೂ ಇರಬಹುದು. ಆರ್ಥಿಕವಾಗಿ ಸ್ವಾವಲಂಬಿಯಾದ ಮಹಿಳೆಗೆ ವಿಚ್ಛೇದನೆಯ ಮೂಲಕ ಕೌಟುಂಬಿಕ ಕ್ರೌರ್ಯದಿಂದ ಸಿಗುವ ಬಿಡುಗಡೆ ನಿಜವಾಗಿಯೂ ತುಂಬ ಮಹತ್ವದ್ದಾಗುತ್ತದಲ್ಲದೆ ಸ್ತ್ರೀ ಪುರುಷ ಸಮಾನತೆಯನ್ನು ತರುವುದರೆಡೆಗೆ ಇಟ್ಟ ಮಹತ್ವದ ಹೆಜ್ಜೆಯಾಗುತ್ತದೆ. ಹಿಂದೂ ವಿವಾಹ ಅಧಿನಿಯಮದಲ್ಲಿ ಕೌಟುಂಬಿಕ ಹಿಂಸೆಯ ಆಧಾರದ ಮೇಲೆ ಯಾವುದೇ ವೈವಾಹಿಕ ಪರಿಹಾರವನ್ನು ಪಡೆಯಲು ಸಾಧ್ಯವಿಲ್ಲ. ಆದರೆ ಹಿಂಸೆಯ ಕೃತ್ಯಗಳು ಕ್ರೌರ್ಯವೆನಿಸಿಕೊಳ್ಳುವುದರಿಂದ ಕ್ರೌರ್ಯದ ಕಾರಣದ ಮೇಲೆ ವಿಚ್ಛೇದನೆ ಹಾಗೂ ನ್ಯಾಯಿಕ ಬೇರ್ಪಡೆಯಂಥ ಪರಿಹಾರಗಳನ್ನೂ ಪಡೆಯಬಹುದಾಗಿದೆ. ಅಲ್ಲದೆ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆಗಾಗಿ ಪತಿ ಹಾಕಿರುವ ಅರ್ಜಿಯನ್ನು ಪತ್ನಿ ಕ್ರೌರ್ಯದ ಕಾರಣ ನೀಡಿ ವಿರೋಧಿಸಲು ಅವಕಾಶವಿರುತ್ತದೆ.

**ವ್ಯಭಿಚಾರ :** ವಿವಾಹ ಸಂಬಂಧದ ತಳಪಾಯವೇ ನಂಬಿಕೆ, ವಿಶ್ವಾಸ ಪರಸ್ಪರ ಗೌರವ. ವ್ಯಭಿಚಾರ ಈ ಅಡಿಪಾಯಕ್ಕೆ ಕೊಡಲಿಯೇಟು ಹಾಕಿ ಸಮಾಜದ ಮೂಲಭೂತ ಘಟಕವಾದ ಕುಟುಂಬ ವ್ಯವಸ್ಥೆಯನ್ನು ಏರುಪೇರು ಮಾಡುವಂಥದ್ದು. ಒಂದು ಆರೋಗ್ಯಕರ ಸಮಾಜಕ್ಕೆ ಆ ಸಮಾಜದ ಘಟಕಗಳಾದ ಕುಟುಂಬಗಳ ನೆಮ್ಮದಿ ಕಾರಣವಾಗುತ್ತದೆ ಎಂಬುದನ್ನು ಸಮಾಜ ಶಾಸ್ತ್ರಜ್ಞರೂ ಒಪ್ಪಿಕೊಂಡಿರುವಂಥ ಮಾತು. ವ್ಯಭಿಚಾರ ಕುಟುಂಬದ ಹಾಗೂ ಮೂಲತಃ ಪತಿಪತ್ನಿಯರ ಸಂಬಂಧವನ್ನು ಕೆಡಿಸುವಂಥ ಕೃತ್ಯ. ಹಾಗಾಗಿ ಇದು ವಿಚ್ಛೇದನೆ ಪಡೆಯಲು ಹಿಂದೂ ವಿವಾಹ ಕಾನೂನು, ವಿಶೇಷ ವಿವಾಹ ಅಧಿನಿಯಮ ಹಾಗೂ ಪಾರ್ಸಿ ವಿವಾಹ ಹಾಗೂ ವಿಚ್ಛೇದನ ಅಧಿನಿಯಮಗಳ ಅಡಿಯಲ್ಲಿ ಒಂದು ಕಾರಣ. ಕ್ರಿಶ್ಚಿಯನ್ನರಿಗೆ ಅನ್ವಯಿಸುವ ಭಾರತೀಯ ವಿಚ್ಛೇದನಾ ಅಧಿನಿಯಮದ ಅಡಿಯಲ್ಲಿ ಪತ್ನಿ ಪತಿಯ 'ವ್ಯಭಿಚಾರ'ದ ಒಂದೇ ಕಾರಣಕ್ಕೆ ವಿಚ್ಛೇದನೆ ಪಡೆಯಲು ಸಾಧ್ಯವಿಲ್ಲ ಅದರೊಡನೆ ಪತಿಯ ಇನ್ನೊಂದು ಅಪರಾಧವನ್ನು ರುಜುವಾತುಪಡಿಸಬೇಕು.(ಹಿಂದೆ ಚರ್ಚಿಸಲಾಗಿದೆ) ಇದೇ ಅಧಿನಿಯಮದ ೩೪ನೇ ಪ್ರಕರಣದ ಅಡಿಯಲ್ಲಿ ಪತಿ, ತನ್ನ ಪತ್ನಿಯೊಂದಿಗೆ ಅನೈತಿಕ ವ್ಯವಹಾರದಲ್ಲಿ ತೊಡಗಿದ ಕಾರಣಕ್ಕಾಗಿ ಆ ವ್ಯಕ್ತಿಯಿಂದ ಪರಿಹಾರವನ್ನು ಪಡೆಯಬಹುದಾಗಿದೆ. ಮುಸ್ಲಿಂ ಧರ್ಮೀಯರಿಗೆ ಅನ್ವಯಿಸುವ ಮುಸ್ಲಿಂ ವಿವಾಹಗಳ ವಿಘಟನಾ ಅಧಿನಿಯಮದ ಮೇರೆಗೆ ಪತಿ ಅಥವಾ ಪತ್ನಿಯ ವ್ಯಭಿಚಾರದ ಕಾರಣದ ಮೇಲೆ ಪತ್ನಿ ಅಥವಾ ಪತಿ ವಿಚ್ಛೇದನೆ ಪಡೆಯಲು ಅವಕಾಶವಿಲ್ಲ.

ವ್ಯಭಿಚಾರದ ಕಾರಣದ ಮೇಲೆ ವಿಚ್ಛೇದನೆ ಅಥವಾ ಪರಿಹಾರ ಪಡೆಯುವುದು ಸಿವಿಲ್ ಕಾನೂನಿನ ಮೇರೆಗೆ ಪಡೆಯುವ ಪರಿಹಾರಗಳು. ಕ್ರಿಮಿನಲ್ ಕಾನೂನಿನ ಮೇರೆಗೆ ಇದು ಒಂದು ಅಪರಾಧವೂ ಹೌದು. ಭಾರತದಂಡ ಸಂಹಿತೆಯ ೪೯೭ನೇ ಪ್ರಕರಣದ ಪ್ರಕಾರ ಇದು ಒಂದು ದಂಡನೀಯ ಅಪರಾಧ.

ವ್ಯಭಿಚಾರವನ್ನು ಮಾಡುವವನು ಪುರುಷ ಮಾತ್ರ ಎಂಬ ಪೂರ್ವಭಾವನೆಯೊಡನೆ ಈ ಪ್ರಕರಣ ರೂಪುಗೊಂಡಿದೆ. ಭಾರತ ದಂಡ ಸಂಹಿತೆಗೆ ಜಾರಿಗೆ ಬಂದಾಗ ಎಂದರೆ ೧೮೬೦ರಲ್ಲಿ(ಸುಮಾರು ನೂರನಲವತ್ತು ವರ್ಷಗಳಷ್ಟು ಹಿಂದೆ) ಇದ್ದ ಕಾನೂನು ಇದು. ಆಗ ಮಹಿಳೆಯ ಶಿಕ್ಷಣ, ಸ್ಥಾನಮಾನ, ಉದ್ಯೋಗಾವಕಾಶಗಳನ್ನು ಗಮನಿಸಿದರೆ, ಅವಳ ಜೀವನ ಮನೆಯ ನಾಲ್ಕು ಗೋಡೆಗಳೊಳಗೆ ಸೀಮಿತವಾಗಿದ್ದು, ಅವಳಿಗೆ ಪರಪುರುಷ ಸಂಪರ್ಕ ಸಾಧ್ಯತೆಗಳು ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಿದ್ದುದರಿಂದ ವ್ಯಭಿಚಾರ ಕೇವಲ ಪುರುಷನಿಂದಷ್ಟೇ ನಡೆಯುತ್ತದೆ ಎಂಬ ಪೂರ್ವಭಾವನೆಗೆ ಆಧಾರವಿತ್ತು. ಅಲ್ಲದೆ ಮಹಿಳೆ ಸತೀಸಾವಿತ್ರಿಯಂತೆ ಪತಿವ್ರತೆಯಾಗಿ ಹಾಗೂ ಗಂಡನಿಗೆ ವಿಧೇಯಳಾಗಿ ಇರಬೇಕೆಂಬ ಆದರ್ಶ ಪತ್ನಿಯ ವ್ಯಕ್ತಿತ್ವವನ್ನು ಅವಳಿಗೆ ಆರೋಪಿಸಲಾಗಿತ್ತು. ಶೀಲದ ಎಲ್ಲ ಮಾನದಂಡಗಳೂ ಮಹಿಳೆಗೆ ಮಾತ್ರ ಅನ್ವಯವಾಗುತ್ತಿತ್ತು. ಸಮಾಜ ಹೆಣ್ಣಿಗೆ ವಿಧಿಸುವ ಎಲ್ಲ ಕಟ್ಟುಕಟ್ಟಳೆಗಳಿಂದಲೂ ಪುರುಷನಿಗೆ ಮೊದಲಿನಿಂದಲೂ ವಿನಾಯಿತಿಯಿತ್ತು. ಈ ಪ್ರಕರಣ, ಸಮಾಜ ಮಹಿಳೆಯಿಂದ ನಿರೀಕ್ಷಿಸುತ್ತಿದ್ದ ಆದರ್ಶ ಪತ್ನಿಯ ವರ್ತನೆ ಹಾಗೂ ಪುರುಷನಿಗಿದ್ದ ಸ್ವಾತಂತ್ರ್ಯದ ಕಲ್ಪನೆಯ ಜೊತೆಗೆ ಕಾನೂನು ರಚನೆಯಲ್ಲಿ ಅಂತರ್ಗತವಾಗಿರುವ ಪುರುಷ ಪ್ರಧಾನ ಚಿಂತನೆಯನ್ನೂ ಎತ್ತಿ ತೋರಿಸುತ್ತದೆ.

ಸೌಮಿತ್ರಿ ವಿಷ್ಣು -ವಿ- ಭಾರತ ಸರ್ಕಾರ ಮತ್ತು ಇತರರು (೧೯೮೫ ಎಸ್‌ಯುಪಿಪಿ ಎಸ್‌ಸಿಸಿ ೧೧೧) ಮತ್ತು ವಿ.ರೇವತಿ-ವಿ- ಯೂನಿಯನ್ ಆಫ್ ಇಂಡಿಯಾ((೧೯೮೮) ೨ ಎಸ್‌ಸಿಸಿ ೭೨) ಪ್ರಕರಣಗಳಲ್ಲಿ ಈ ಉಪಬಂಧಗಳನ್ನು ಪ್ರಶ್ನಿಸಲಾಯಿತು.

ಮೊದಲನೆಯ ಪ್ರರಣದಲ್ಲಿ ವಾದಿಯ ಪರವಾಗಿ ವಾದಿಸಿದ ಶ್ರೀಮತಿ ನಳಿನಿ ಚಿದಂಬರಂ ಎತ್ತಿದ ಪ್ರಶ್ನೆಗಳು ಮೂರು

೧. ೪೯೭ ನೇ ಪ್ರಕರಣ[1] ವ್ಯಭಿಚಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲು ಪತಿಗೆ ಹಕ್ಕು ನೀಡುತ್ತದೆ. ಆದರೆ ತನ್ನ ಪತಿಯೊಡನೆ ವ್ಯಭಿಚಾರ ನಡೆಸಿದ ವ್ಯಭಿಚಾರಿಣಿಯ ವಿರುದ್ಧ ಕಾನೂನು ಕ್ರಮಕೈಗೊಳ್ಳಲು ಪತ್ನಿಗೆ ಹಕ್ಕು ನೀಡುವುದಿಲ್ಲ.

೨. ಇತರ ಮಹಿಳೆಯೊಡನೆ ವ್ಯಭಿಚಾರ ನಡೆಸಿದ ಪತಿಯ ವಿರುದ್ಧ ಕ್ರಮಕೈಗೊಳ್ಳಲು ಪತ್ನಿಗೆ ಯಾವುದೇ ಹಕ್ಕು ನೀಡುವುದಿಲ್ಲ.

೩. ಈ ಪ್ರಕರಣ ಅವಿವಾಹಿತ ಮಹಿಳೆಯೊಡನೆ ಹೊಂದಿರುವ ಲೈಂಗಿಕ ಸಂಬಂಧಗಳ ಬಗ್ಗೆ ಯಾವುದೇ ಉಪಬಂಧವನ್ನು ಹೊಂದಿಲ್ಲ. ಮತ್ತು ಇದರಲ್ಲಿ ಪತ್ನಿಯ ವಿರುದ್ಧ ಪತಿಯಾಗಲೀ, ಪತಿಯ ವಿರುದ್ಧ ಪತ್ನಿಯಾಗಲೀ ಕಾನೂನು ಕ್ರಮಕೈಗೊಳ್ಳಲು ಅವಕಾಶವಿಲ್ಲ.

ಮೇಲೆ ಉಲ್ಲೇಖಿಸಿದ ಎರಡನೇ ಪ್ರಕರಣದಲ್ಲಿ ಪ್ರಶ್ನಿಸಲಾಗಿರುವುದು ಭಾರತ ದಂಡಸಂಹಿತೆಯ ೧೯೮ನೇ ಪ್ರಕರಣವನ್ನು[೮]. ಈ ಪ್ರಕರಣ ೪೯೭ ಮತ್ತು ೧೯೮ನೇ ಪ್ರಕರಣಗಳ ಮೇರೆಗೆ ಅಪರಾಧವೆನಿಸುವ ಕೃತ್ಯಗಳ ಬಗ್ಗೆ ಬಾಧಿತನಾದ ವ್ಯಕ್ತಿಯ ಹೊರತು ಬೇರೆಯವರು ದೂರು ನೀಡಿದರೆ ಯಾವುದೇ ನ್ಯಾಯಾಲಯ ಅಂಥ ಅಪರಾಧದ ಸಂಜ್ಞಾನವನ್ನು ತೆಗೆದುಕೊಳ್ಳುವಂತಿಲ್ಲ ಮತ್ತು ಹಾಗೆ ಬಾಧಿತನಾದ ವ್ಯಕ್ತಿ ಪತಿಯೇ ಆಗಿರಬೇಕು(ಅಗಿರುತ್ತಾನೆ) ಎಂದು ವಿಧಿಸುತ್ತದೆ.

ಭಾರತ ದಂಡಸಂಹಿತೆಯ ೪೯೭ನೇ ಪ್ರಕರಣ ಮೇಲ್ನೋಟಕ್ಕೆ ಮಹಿಳೆಯರಿಗೆ ಅನುಕೂಲಕರವಾಗಿದೆಯೆಂದೂ ಕಂಡರೂ, ಕೂಲಂಕುಷವಾಗಿ ಪರಿಶೀಲಿಸಿದರೆ, ಮಹಿಳೆಯರನ್ನು ತಮ್ಮ ಚರಾಸ್ತಿಗಳೆಂದು ಪರಿಗಣಿಸುವಂಥ ಭಾವನೆಯಿಂದ ಹೊರಹೊಮ್ಮಿದ ಪುರುಷ ಪ್ರಧಾನ ಚಿಂತನೆಯುಳ್ಳ ಉಪಬಂಧವಿದು ಎಂಬುದು ಗೋಚರವಾಗದಿರದು. ಆದ್ದರಿಂದ ಇದು ಲಿಂಗತಾರತಮ್ಯವುಳ್ಳ ನಿರಂಕುಶ ಶಾಸನ ರಚನೆಯ ಪುರುಷ ಪ್ರಾಧ್ಯಾನ್ಯತೆಯಿಂದ ಕೂಡಿದ ಪ್ರಕರಣ ಎಂದು ವಾದಿಸಲಾಯಿತು. ಈ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವ ಅಗತ್ಯವಿದೆ.

**ಪರಿತ್ಯಾಗ :** ಹಿಂದೂ ವಿವಾಹ ಅಧಿನಿಯಮ, ೧೯೫೫ರ ೧೩ನೇ ಪ್ರಕರಣ ಪತಿ ಅಥವಾ ಪತ್ನಿ ವಿಚ್ಛೇದನೆ ಪಡೆಯಲು ಒದಗಿಬರುವ ಕಾರಣಗಳನ್ನು ನಿರೂಪಿಸುತ್ತದೆ. ಅವುಗಳಲ್ಲಿ ಪತಿ ಅಥವಾ ಪತ್ನಿಯಿಂದ ವಿಚ್ಛೇದನೆ ಪಡೆಯಲು ಪರಿತ್ಯಾಗ ಒಂದು ಕಾರಣವಾಗುತ್ತದೆ. ವಿಚ್ಛೇದನೆ ಕೋರಿ ಅರ್ಜಿಯನ್ನು ಸಲ್ಲಿಸುವ ಪಕ್ಷಕಾರನನ್ನು(ಪತಿ/ಪತ್ನಿ) ಅರ್ಜಿಯ ದಿನಾಂಕಕ್ಕೆ ಹಿಂದೆ ಎರಡು ವರ್ಷಗಳ ನಿರಂತರ ಅವಧಿಯಷ್ಟು ಕಾಲ ಪ್ರತಿಪಕ್ಷಕಾರ(ಪತ್ನಿ/ಪತಿ) ಪರಿತ್ಯಜಿಸಿದ್ದರೆ, ಆ ಕಾರಣದ ಮೇಲೆ ಅರ್ಜಿದಾರ ವಿಚ್ಛೇದನೆಯನ್ನು ಕೋರಬಹುದು. ಸೂಕ್ತ ಕಾರಣವಿಲ್ಲದೆ ಅಥವಾ ಪತಿ/ಪತ್ನಿಯ ಒಪ್ಪಿಗೆ ಇಲ್ಲದೆ ಅಥವಾ ಇಚ್ಛೆಗೆ ವಿರುದ್ಧವಾಗಿ ಮಾಡಿದ ಪರಿತ್ಯಾಗವನ್ನು ಈ ಪ್ರಕರಣದ ಅಡಿಯಲ್ಲಿ ಪರಿತ್ಯಾಗ ಎಂದು ಪರಿಗಣಿಸಲಾಗುತ್ತದೆ. ಇದರಲ್ಲಿ ವಿರೋಧ ಪಕ್ಷಕಾರನು ತೋರಿಸಿದ ಅಲಕ್ಷ್ಯವೂ ಸೇರುತ್ತದೆ. ಈ ಕಾರಣದ ಮೇಲೆ ಪತಿ ಪತ್ನಿಯರಿಬ್ಬರೂ ವಿಚ್ಛೇದನೆಯನ್ನು ಪಡೆಯಬಹುದಾಗಿದೆ. ಕ್ರಿಶ್ಚಿಯನ್ನರಿಗೆ ಅನ್ವಯಿಸುವ ಭಾರತೀಯ ವಿಚ್ಛೇದನಾ ಅಧಿನಿಯಮದ ಮೇರೆಗೆ ಈ ಕಾರಣ ಪತ್ನಿಯರಿಗೆ ಮಾತ್ರ ಲಭ್ಯ. ಆದರೆ ಪರಿತ್ಯಜನೆಯ ಕಾರಣದ ಜೊತೆಗೆ ಪತ್ನಿ ಪತಿಯ ವ್ಯಭಿಚಾರವನ್ನು ರುಜುವಾತುಪಡಿಸಬೇಕಾಗುತ್ತದೆ. ಪರಿತ್ಯಜನೆಯ ಒಂದೇ ಕಾರಣವನ್ನು ತೋರಿಸಿ ಪತ್ನಿ ನ್ಯಾಯಿಕ ಬೇರ್ಪಡೆಯನ್ನು ಪಡೆಯಬಹುದಷ್ಟೆ. ಮುಸಲ್ಮಾನರಲ್ಲಿ ಈ ಕಾರಣದ ಮೇಲೆ ಪತ್ನಿಯರು ಮಾತ್ರ ವಿಚ್ಛೇದನೆ ಪಡೆಯಬಹುದು. ಆದರೆ ಪತಿ ಪತ್ನಿಯನ್ನು ನಾಲ್ಕು ವರ್ಷಗಳಿಗೂ ಮೇಲ್ಪಟ್ಟು ಪರಿತ್ಯಜಿಸಿರಬೇಕು. ಆದರೆ ಈ ಕಾರಣಕ್ಕಾಗಿ ದೊರೆತ ವಿಚ್ಛೇದನೆಯು ಡಿಕ್ರಿ ಮೊದಲ ಆರು ತಿಂಗಳವರೆಗೆ ಜಾರಿಗೆ ಬರುವುದಿಲ್ಲ. ಈ ಆರು ತಿಂಗಳ ಅವಧಿಯಲ್ಲಿ ಪತಿ ತಾನೇ

ಖುದ್ದಾಗಿ ಅಥವಾ ವಕೀಲನ ಮೂಲಕ ಹಾಜರಾಗಿ ತಾನು ತನ್ನ ದಾಂಪತ್ಯ ಕರ್ತವ್ಯಗಳನ್ನು ನಿರ್ವಹಿಸಲು ಸಿದ್ಧನಿದ್ದೇನೆ ಎಂಬುದನ್ನು ನ್ಯಾಯಾಲಯಕ್ಕೆ ಮನದಟ್ಟಾಗುವಂತೆ ನಿರೂಪಿಸಿದರೆ, ವಿಚ್ಛೇದನೆಯ ಡಿಕ್ರಿಯನ್ನು ತಳ್ಳಿಹಾಕಲಾಗುತ್ತದೆ.

ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದಲ್ಲಿ ೧೯೫೬ರ ಅಡಿಯಲ್ಲಿ ಪತಿ ಪತ್ನಿಯನ್ನು ವಿನಾಕಾರಣ ತ್ಯಜಿಸಿದರೆ ಅದು ವೈವಾಹಿಕ ಕರ್ತವ್ಯಗಳ ಉಲ್ಲಂಘನೆಯಾಗುತ್ತದೆ. (ಪ್ರಕರಣ ೧೮(೨)(ಎ))[೯] ಈ ಪ್ರಕರಣದ ಪ್ರಕಾರ, ವೈವಾಹಿಕ ಪರಿಹಾರಕ್ಕಾಗಿ (ವಿಚ್ಛೇದನೆ, ದಾಂಪತ್ಯ ಹಕ್ಕುಗಳ ಪೂರ್ವ ಸ್ಥಿತಿ ಸ್ಥಾಪನೆ, ನ್ಯಾಯಿಕ ಬೇರ್ಪಡೆ) ದಾವೆ ಹೂಡದೆಯೇ, ಪತಿಯಿಂದ ಸ್ವತಂತ್ರವಾಗಿ ಜೀವಿಸಲು ಮತ್ತು ಜೀವನಾಂಶವನ್ನು ಕೋರಲೂ ಹಕ್ಕುಳ್ಳವಳಾಗಿರುತ್ತಾಳೆ.

ಮನುಸ್ಮೃತಿಯ IXನೇ ಅಧ್ಯಾಯದ ೭೭ನೇ ಶ್ಲೋಕದಲ್ಲಿ ಜೀವನಾಂಶದ ಬಗ್ಗೆ ಹೇಳಲಾಗಿದೆ. ಹಿಂದೂ ಧರ್ಮಶಾಸ್ತ್ರದ ಪ್ರಕಾರ ವಿವಾಹ ಪತಿ ಪತ್ನಿಯರ ನಡುವೆ ಕೊನೆಗೊಳಿಸಲಾಗದ ಒಂದು ಸಂಬಂಧವಾದ್ದರಿಂದ ಪತ್ನಿಯನ್ನು ಅವಳ ಕೊನೆಗಾಲದವರೆಗೆ ನೋಡಿಕೊಳ್ಳುವುದು ಪತಿಯ ಕರ್ತವ್ಯವಾಗಿರುತ್ತದೆ. ಮನುಸ್ಮೃತಿಯಲ್ಲಿ ಪತ್ನಿಯನ್ನು ಪತಿ ಪರಿತ್ಯಜಿಸಬಹುದೆಂದು ಹೇಳಲಾದ ಒಂದೇ ಸಂದರ್ಭ ಎಂದರೆ ಪತಿಯನ್ನು ಪತ್ನಿ ದ್ವೇಷಿಸಿದಾಗ.

"ಪತಿ ತನ್ನನ್ನು ದ್ವೇಷಿಸುವ ಪತ್ನಿಯನ್ನು ಒಂದು ವರ್ಷ ಸಹಿಸಿಕೊಳ್ಳಬೇಕು. ಒಂದು ವರ್ಷ ಕಳೆದ ನಂತರ(ಅವಳು ಅವನನ್ನು ದ್ವೇಷಿಸುವುದನ್ನು ಮುಂದುವರೆಸಿದರೆ) ಅವನು ಅವಳೊಡನೆ ವಾಸಿಸುವುದುನ್ನು ನಿಲ್ಲಿಸಬಹುದು ಮತ್ತು ಆಸ್ತಿಯಿಂದ ಅವಳನ್ನು ವಂಚಿತಳನ್ನಾಗಿಸಬಹುದು." ಮನುಸ್ಮೃತಿಗೆ ಮೀಮಾಂಸ ಗ್ರಂಥಗಳನ್ನು ರಚಿಸಿದಂಥ ಕುಲ್ಲುಕ ಭಟ್ಟ, ರಾಘವೇಂದ್ರ ಸರಸ್ವತಿ ಹಾಗೂ ನಂದನಾಚಾರರ್ಯರು 'ಪತ್ನಿಯ ಆಸ್ತಿ ಎಂದರೆ ಪತಿ ಅವಳಿಗೆ ಕೊಟ್ಟ ಒಡವೆಗಳು ಹಾಗೂ ಸಂಪತ್ತು' ಎಂದು ವಿವರಿಸುತ್ತಾರೆ.[೧೦] ಇದರ ಜೊತೆಗೆ, ಪ್ರತ್ಯೇಕವಾಗಿ ಜೀವಿಸಲು ಪ್ರಾರಂಭಿಸಿದ ನಂತರವೂ ಅವಳನ್ನು ನೋಡಿಕೊಳ್ಳಬೇಕು ಎಂದೂ ಸೇರಿಸುತ್ತಾರೆ. ಪತಿಯೇ ಆಕೆಯನ್ನು ಪರಿತ್ಯಜಿಸಿದ್ದರೂ, ಪರಿತ್ಯಜಿಸಿದ ನಂತರವೂ ಅವಳನ್ನು ನೋಡಿಕೊಳ್ಳುವುದು ಪತಿಯ ಧರ್ಮವಾಗಿರುತ್ತದೆ.

**ಜೀವನಾಂಶ :** ಹಿಂದೂ, ಕ್ರಿಶ್ಚಿಯನ್ನರು ಹಾಗೂ ಪಾರ್ಸಿಗಳಿಗೆ ಅನ್ವಯಿಸುವ ವೈಯಕ್ತಿಕ ಕಾನೂನುಗಳ ಅಡಿಯಲ್ಲಿ ವೈವಾಹಿಕ ವ್ಯಾಜ್ಯದ ವಿಚಾರಣೆಯ ಕಾಲದಲ್ಲಿ ಹಾಗೂ, ವ್ಯಾಜ್ಯ ಇತ್ಯಾರ್ಥಗೊಂಡ ನಂತರ - ಎರಡೂ ಸಂದರ್ಭಗಳಲ್ಲಿ ಹಿಂದೂ ಮಹಿಳೆ ತನ್ನ ಪತಿಯಿಂದ ಜೀವನಾಂಶ ಕೋರಬಹುದಾಗಿದೆ. ಆದರೆ ಮುಸ್ಲಿಂ ಪತ್ನಿ ಈ ಮೇಲಿನ ವೈಯಕ್ತಿಕ ಕಾನೂನುಗಳ ಅಡಿಯಲ್ಲಿ ದೊರೆಯುವಂತೆ ಜೀವನಾಂಶ

ಪಡೆಯಲು ಅವಕಾಶವಿಲ್ಲ. ಅವಳು ಮುಸ್ಲಿಂ ಮಹಿಳೆಯರ (ವಿಚ್ಛೇದನಾ ನಂತರ ಹಕ್ಕುಗಳ ರಕ್ಷಣೆ) ಅಧಿನಿಯಮ, ೧೯೮೬ರ ಅಡಿಯಲ್ಲಿ ಜೀವನಾಂಶವನ್ನು ಕೋರಬಹುದು. ಈ ವೈಯಕ್ತಿಕ ಕಾನೂನುಗಳ ಅಡಿಯಲ್ಲಿ ಮಹಿಳೆ ಮಗಳು, ಪತ್ನಿ ಅಥವಾ ತಾಯಿ ಯಾರೇ ಆಗಿದ್ದರೂ ಅವಳಿಗೆ ಜೀವನಾಂಶ ದೊರೆಯುತ್ತದೆ. ಈ ಹಕ್ಕಗಳನ್ನು ಅವರು ತಮ್ಮ ಜೀವಿತದ ವಿವಿಧ ಹಂತಗಳಲ್ಲಿ ಎಂದರೆ ವಿವಾಹಕ್ಕೆ ಮುನ್ನ, ವಿವಾಹಾನಂತರ, ವಿಚ್ಛೇದನೆಯ ನಂತರ, ಪತಿಯ ಮರಣಾನಂತರ, ಹೊಂದಿರುತ್ತಾರೆ. ಈ ಹಕ್ಕುಗಳು ಅವರವರ ವೈಯಕ್ತಿಕ ಕಾನೂನುಗಳಿಗೆ ಅನುಸಾರವಾಗಿ ವ್ಯತ್ಯಾಸಗೊಳ್ಳುತ್ತವೆ.

ಹಿಂದೂ ಧರ್ಮಶಾಸ್ತ್ರದಲ್ಲಿ ನಿರೂಪಿತವಾಗಿದ್ದ(ಕ್ರೋಡೀಕರಣಕ್ಕೆ ಮುನ್ನ ಜಾರಿಯಲ್ಲಿದ್ದ) ಕಾನೂನಿನ ಪ್ರಕಾರ, ಕುಟುಂಬದ ಯಜಮಾನ ಹೆಣ್ಣು ಮಕ್ಕಳನ್ನು ಅವರು ವಿವಾಹವಾಗುವವರೆಗೆ ನೋಡಿಕೊಳ್ಳುವುದಕ್ಕೆ ಬದ್ಧವಾಗಿರುತ್ತಿದ್ದರು. ಪತ್ನಿಯನ್ನು ವೈವಾಹಿಕ ಬಂಧನ ಮುಂದುವರಿಯುವವರೆಗೆ(ಆಜೀವ ಪರ್ಯಂತ) ಪತಿ ಹಾಗೂ ತಾಯಿಯನ್ನು ನೋಡಿಕೊಳ್ಳಲು ಮಕ್ಕಳು ಬದ್ಧರಾಗಿರುತ್ತಿದ್ದರು.

ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ ೧೯೫೬ರ ಅಡಿಯಲ್ಲಿ ಪತ್ನಿ, ವಿಧವೆಯಾದ ಸೊಸೆ, ಮಕ್ಕಳು ಹಾಗೂ ವಯಸ್ಸಾದ ತಂದೆತಾಯಿಯರಿಗೆ ಜೀವನಾಂಶದ ಸೌಲಭ್ಯವನ್ನು ಕಲ್ಪಿಸಲಾಗಿದೆ. ಹಿಂದೂ ವಿವಾಹ ಅಧಿನಿಯಮದಲ್ಲೂ ವಿವಾಹಕ್ಕೆ ಸಂಬಂಧಿಸಿದ ವಿವಾದದ ವಿಚಾರಣೆ ನಡೆಯುತ್ತಿರುವಾಗ ಹಾಗೂ ಅಂತಿಮವಾಗಿ ಇತ್ಯರ್ಥಗೊಂಡ ನಂತರ ಹಿಂದೂ ಪತಿ/ಪತ್ನಿಯರು ಜೀವನಾಂಶಕ್ಕೆ ಹಕ್ಕುಳ್ಳವರಾಗಿರುತ್ತಾರೆ. ಇತರ ಸಂದರ್ಭಗಳಲ್ಲಿ ೧೯೫೬ರ ಅಧಿನಿಯಮ ೧೮ ರಿಂದ ೨೮ನೇ ಪ್ರಕರಣಗಳು ಜೀವನಾಂಶದ ಹಕ್ಕುಗಳ ಬಗ್ಗೆ ಉಪಬಂಧ ಕಲ್ಪಿಸುತ್ತವೆ.

ಮೇಲಿನ ಎರಡು ಅಧಿನಿಯಮಗಳಲ್ಲದೆ, ಭಾರತ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿಯೂ ಮಹಿಳೆ ಜೀವನಾಂಶವನ್ನು ಪಡೆಯಬಹುದು. ಇದು ಅವರ ಜೀವನ ನಿರ್ವಹಣೆಗೆ ಸಾಕಾಗುವಷ್ಟು ಪರಿಹಾರ ನೀಡದಿದ್ದರೂ ಅವರು ನಿರ್ಗತಿಕರಾಗದಂತೆ ನೋಡಿಕೊಳ್ಳುವ ಒಂದು ಅವಕಾಶವನ್ನು ಕಲ್ಪಿಸುತ್ತದೆ. ಇದು ವೈಯಕ್ತಿಕ ಕಾನೂನುಗಳಂತಲ್ಲದೆ, ಭಾರತದ ಎಲ್ಲ ನಾಗರಿಕರಿಗೂ ಅನ್ವಯವಾಗುತ್ತದೆ. ಈ ಪ್ರಕರಣದ ಅಡಿಯಲ್ಲಿ ದೊರೆಯುವ ಜೀವನಾಂಶದ ಮೊತ್ತ ಇಲ್ಲಿಯವರೆಗೆ ಕೇವಲ ೫೦೦ರೂಗಳಾಗಿತ್ತು. ಅನೇಕ ದಶಕಗಳಿಂದಲೂ ಈ ಮೊತ್ತದಲ್ಲಿ ಏರಿಕೆಯಾಗಿರಲಿಲ್ಲ, ಈಗ ಇತ್ತೀಚಿಗೆ ಗರಿಷ್ಠ ಮೊತ್ತದ ಮೊಬಲಗನ್ನು ಹೆಚ್ಚಿಸಲಾಗಿದೆ. ಹಿಂದೂ ವಿವಾಹ ಅಧಿನಿಯಮ, ೧೯೫೫ರ ಅಡಿಯಲ್ಲಿ ವಿವಾಹಿತ ಮಹಿಳೆಯಷ್ಟೇ ಜೀವನಾಂಶ ಕ್ಲೇಮು ಮಾಡುವ ಹಕ್ಕು ಹೊಂದಿರುತ್ತಾಳೆ. ಇಲ್ಲಿ ಪತಿ ಪತ್ನಿಯರಿಬ್ಬರಿಗೂ ಈ ಹಕ್ಕು ಲಭ್ಯ. ಜೀವನಾಂಶವನ್ನು ಅವರು ವಿವಾಹ ಸಂಬಂಧಿ ದಾವೆಯ ಸಂಬಂಧದಲ್ಲಿ ವ್ಯಾಜ್ಯ ಕಾಲದಲ್ಲಿ ಹಾಗೂ ಅಂತಿಮ ಇತ್ಯರ್ಥದ ನಂತರ ಪರಿಹಾರವಾಗಿ ಪಡೆಯುತ್ತಾರೆ.

ಆದರೆ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ, ೧೯೫೬ರ ಅಡಿಯಲ್ಲಿ ಜೀವನಾಂಶ ಪಡೆಯಲು ಮಹಿಳೆಗೆ ಕಲ್ಪಿಸಿರುವ ಉಪಬಂಧಗಳು ಕೇವಲ ಪತ್ನಿಯರಿಗೆ ಮಾತ್ರ ಅನ್ವಯವಾಗುತ್ತದೆ ಮತ್ತು ಜೀವನಾಂಶಕ್ಕಾಗಿ ವಿವಾಹ ಸಂಬಂಧದ ಯಾವುದೇ ದಾವೆ ಹೂಡದೆಯೇ ಪ್ರತ್ಯೇಕವಾಗಿ ದಾವೆ ಹೂಡಬಹುದಾಗಿದೆ. ಅಧಿನಿಯಮದ ೧೮ನೇ ಪ್ರಕರಣದ ಮೇರೆಗೆ ಜೀವನಾಂಶ ಪಡೆಯುವ ಹಕ್ಕನ್ನು ಮಹಿಳೆ ಬಿಟ್ಟುಕೊಡದೆಯೇ ಪ್ರತ್ಯೇಕವಾಗಿ ಜೀವಿಸುವ ಹಕ್ಕನ್ನು ಹೊಂದಿರುತ್ತಾಳೆ. ಈ ಮುಂದಿನ ಸಂದರ್ಭಗಳಲ್ಲಿ ಎಂದರೆ-

೧. ಪತಿ ಪತ್ನಿಯನ್ನು ಪರಿತ್ಯಜಿಸಿ ದೋಷಿ ಎನಿಸಿದ್ದರೆ.

೨. ಅವಳನ್ನು ಅವನು ಕ್ರೌರ್ಯದಿಂದ ನಡೆಸಿಕೊಂಡಿದ್ದರೆ.

೩. ಪತಿ ಸಾಂಕ್ರಮಿಕ ಕುಷ್ಠ ರೋಗದಿಂದ ನರಳುತ್ತಿದ್ದರೆ.

೪. ಜೀವಂತ ಪತ್ನಿ ಇದ್ದರೆ,

೫. ಉಪಪತ್ನಿಯನ್ನು ಅದೇ ಮನೆಯಲ್ಲಿ ಇರಿಸಿಕೊಂಡಿದ್ದರೆ,

೬. ಪತಿ ಇತರ ಧರ್ಮಕ್ಕೆ ಮತಾಂತರ ಹೊಂದಿದ್ದರೆ.

೭. ಪ್ರತ್ಯೇಕವಾಗಿ ವಾಸಿಸುವುದಕ್ಕೆ ಪತ್ನಿಗೆ ಸಮರ್ಥನೀಯವಾದ ಬೇರೆ ಯಾವುದೇ ಕಾರಣವಿದ್ದರೆ, ಪತ್ನಿ ಪ್ರತ್ಯೇಕವಾಗಿ ವಾಸಿಸಿಯೂ ಜೀವನಾಂಶಕ್ಕೆ ಹಕ್ಕುಳ್ಳವಳಾಗಿರುತ್ತಾಳೆ.

ಹಿಂದೂ ಕಾನೂನು ಪತಿ ಪತ್ನಿಯರಿಗೆ ವೈವಾಹಿಕ ಕರ್ತವ್ಯಗಳನ್ನು ವಿಧಿಸುತ್ತದೆ. ಪತಿ ಹೇಗೇ ಇರಲಿ, ಎಲ್ಲೇ ಇರಲಿ ಅವನನ್ನು ಪತ್ನಿ ಅನುಸರಿಸಬೇಕು, ಅವನ ಜೊತೆಯಲ್ಲಿ ಒಂದೇ ಸೂರಿನ ಅಡಿಯಲ್ಲಿ ಇರಲಿ ಎಂದೇ ಪತ್ನಿಯ ಕರ್ತವ್ಯಗಳನ್ನು ಹಾಗೂ ಅವಳ ನೆಲೆಯನ್ನು ವಿಧಿಸುತ್ತಾ ಬಂದಿದೆ. ಆದರೆ ಬದಲಾಗುತ್ತಿರುವ ಸಾಮಾಜಿಕ ಸಂದರ್ಭಗಳಿಗನುಸಾರವಾಗಿ ಮಹಿಳೆಯ ಈ ಸ್ಥಾನಮಾನವೂ ಬದಲಾಗುತ್ತಾ ಬಂದಿದೆ. ಸ್ವಾತಂತ್ರ್ಯಾನಂತರ ಮಹಿಳೆಯ ಕಾನೂನಿನ ಸ್ಥಾನಮಾನವನ್ನು ಇನ್ನೂ ಉತ್ತಮಗೊಳಿಸುವ ಪ್ರಯತ್ನಗಳು ನಡೆದವು. ಹಿಂದಿನ ಹಿಂದೂ ಕಾನೂನು ಮಹಿಳೆಯರ ಮೇಲೆ ವಿಧಿಸಿದ್ದ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಸಡಿಲಗೊಳಿಸಿ, ಪುರುಷನಿಗೆ ಸಮಾನವಾಗಿ ಬಾಳುವ ಹಕ್ಕನ್ನು ಅವಳಿಗೆ ಕಲ್ಪಿಸಿಕೊಡುವ ಅಗತ್ಯವನ್ನು ಶಾಸನಾಂಗ ಕಂಡುಕೊಂಡಿತು. ಇದರ ಫಲವಾಗಿ ಮಹಿಳೆಯರ ಹಕ್ಕುಗಳನ್ನು ವಿಸ್ತರಿಸುವ ಹಾಗೂ ಪತ್ನಿಯನ್ನು ಪತಿಯ ಪೀಡನೆಯಿಂದ ರಕ್ಷಿಸುವ ಉದ್ದೇಶದಿಂದ ಈ ಅಧಿನಿಯಮವನ್ನು ಜಾರಿಗೊಳಿಸಲಾಯಿತು. ಹಿಂದೂ ಮಹಿಳೆಗೆ ಈ ಅಧಿನಿಯಮ ನೀಡಿರುವ, ಪತಿಯಿಂದ ಪ್ರತ್ಯೇಕವಾಗಿ ವಾಸಿಸುವ ಹಾಗೂ ಹಾಗೆ ಪ್ರತ್ಯೇಕವಾಗಿ ವಾಸಿಸಿಯೂ ಜೀವನಾಂಶವನ್ನು ಪಡೆಯುವ ಹಕ್ಕನ್ನು

ಉಳಿಸಿಕೊಳ್ಳುವ ಹಕ್ಕು ಅವರೆಗೆ ಸಾಮಾಜಿಕವಾಗಿ ಒಪ್ಪಿಗೆಯಾಗಿದ್ದ 'ಹಿಂದೂ ಪತ್ನಿ'ಯ ಸಾಂಪ್ರದಾಯಿಕ ಕಲ್ಪನೆಗೆ ವಿರುದ್ಧವಾಗಿತ್ತು. ಹಾಗಾಗಿ ಈ ಉಪಬಂಧ ಈ ರೂಢಿಗತ ಕಲ್ಪನೆಯಲ್ಲಿ ಮೂಲಭೂತ ಬದಲಾವಣೆಯನ್ನು ಉಂಟುಮಾಡಿತಲ್ಲದೆ ಸ್ತ್ರೀಪುರುಷ ಸಮಾನತೆಗೆ ಅಡಿಪಾಯವನ್ನು ಹಾಕಿತೆನ್ನಬಹುದು. ಈ ಪ್ರಕರಣದ ೩ನೇ ಉಪಪ್ರಕರಣದಲ್ಲಿ "ಹಿಂದೂ ಪತ್ನಿ ನಡತೆಗೆಟ್ಟಿದ್ದರೆ ಅಥವಾ ಬೇರೊಂದು ಧರ್ಮಕ್ಕೆ ಮತಾಂತರ ಹೊಂದಿದ ಕಾರಣದಿಂದ ಹಿಂದೂವಾಗಿರುವುದು ನಿಂತುಹೋಗಿದ್ದರೆ ಪ್ರತ್ಯೇಕವಾಸದ ಮನೆ ಮತ್ತು ಜೀವನಾಂಶಕ್ಕೆ ಹಕ್ಕುಳ್ಳವಳಾಗಿರುವುದಿಲ್ಲ" ಎಂದು ಹೇಳಲಾಗಿದೆ. ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿಯೂ ವಿಚ್ಛೇದನೆಯ ನಂತರ ಪತಿಯಿಂದ ಜೀವನಾಂಶ ಪಡೆಯಲು ಮಹಿಳೆಗೆ ಅವಳ 'ನಡತೆ' ನಿರ್ಣಾಯಕ ಅಂಶವಾಗುತ್ತದೆ. ಜೀವನಾಂಶ ಮುಂದುವರಿಕೆಗೆ ಅವಳಿಗಿರುವ ಹಣದ ಅಗತ್ಯಕ್ಕಿಂತ ಅವಳ ನಡತೆ ಮುಖ್ಯವಾಗುತ್ತದೆ. ವಿವಾಹ ಊರ್ಜಿತವಿದ್ದಷ್ಟು ಕಾಲ ಪತ್ನಿ ಆ ಮನೆಗಾಗಿ ಶ್ರಮಿಸಿದ್ದಳು ಎಂಬುದು ಇಲ್ಲಿ ಗೌಣವಾಗಿಬಿಡುತ್ತದೆ. ಕುಟುಂಬ ಸುಸೂತ್ರವಾಗಿ ಮುಂದುವರಿಯಲು ಇಬ್ಬರ ಸಮಪಾಲು, ಸಮಾನಶ್ರಮ ಅಗತ್ಯ. ಇಲ್ಲಿರುವುದು ಪರಸ್ಪರ ಅವಲಂಬನೆ. ಆದರೆ ನಮ್ಮ ವೈವಾಹಿಕ ಕಾನೂನುಗಳಾವುವೂ ಈ ಸಂಬಂಧವನ್ನು ಈ ದೃಷ್ಟಿಯಿಂದ ನೋಡಿಲ್ಲ. ಹಾಗಾಗಿಯೇ ವಿವಾಹ ಮುರಿದ ನಂತರ ಮನೆಯ ಆಸ್ತಿಯಲ್ಲಿ ಅವಳಿಗೆ ಯಾವುದೇ ಹಕ್ಕಿಲ್ಲ. ಅವಳು ಆ ಮನೆಗಾಗಿ ಪಟ್ಟ ಶ್ರಮವನ್ನು ಅಥವಾ ನೀಡಿದ ಕೊಡುಗೆಯನ್ನು ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಈ ಎಲ್ಲ ಶ್ರಮಕ್ಕೆ 'ಕರ್ತವ್ಯ'ವೆಂದು ಕರೆದು ಇತಿಶ್ರೀ ಹಾಡಿಬಿಡಲಾಗುತ್ತದೆ. ಅಂತೆಯೇ ಪುರುಷನಿಗೆ ಮುಖ್ಯವಾಗದ 'ಶೀಲ' ಮಹಿಳೆಗೆ ಮಾತ್ರ ಅವಳ ಹಕ್ಕನ್ನು ನಿರ್ಧರಿಸುವ ಅಂಶವಾಗಿಬಿಡುತ್ತದೆ. ಕೆಲವು ಉಪಬಂಧಗಳನ್ನು ಗಮನಿಸಿದಾಗ ಕಾನೂನಿನ ರಚನೆಯಲ್ಲಿ ಪ್ರಗತಿಪರತೆ ಮೇಲ್ನೋಟಕ್ಕೆ ಕಂಡುಬಂದರೂ, ಅದರ ಜಾರಿಯನ್ನು ಮೊಟಕುಗೊಳಿಸುವ ಅಥವಾ ಪ್ರತಿಬಂಧಿಸುವ ಉಪಬಂಧಗಳನ್ನು ಸೇರಿಸುವ ಮೂಲಕ ಮಹಿಳೆಗೆ ಕಾನೂನಿನ ಮೂಲಕ ಕೊಡಲಾಗಿರುವ ವಿಶೇಷ ಸವಲತ್ತುಗಳಾಗಲೀ ವಿಶೇಷವಾದ ಹಕ್ಕುಗಳಾಗಲೀ ಕೇವಲ ಕಾನೂನಿನ ಪುಸ್ತಕಗಳಲ್ಲಿ ಸಮಾನತೆಯ ಸಾಕ್ಷಿಗಳಾಗಿ ಉಳಿದುಹೋಗಿವೆ ಎಂಬುದು ಸ್ಪಷ್ಟವಾಗುತ್ತದೆ. ವಾಸ್ತವವಾಗಿ ಇವು ನ್ಯಾಯನೀಡಿಕೆಯ ಸಂದರ್ಭದಲ್ಲಿ ಪ್ರತಿಫಲಿಸದೇ ವಿಫಲವಾಗುವ ಸಂದರ್ಭಗಳೇ ಹೆಚ್ಚು ಎನ್ನಬಹುದು.

ಹಿಂದೂ ವಿವಾಹ ಅಧಿನಿಯಮ ೧೯೫೫, ವಿವಾಹ ಹಾಗೂ ವಿಚ್ಛೇದನೆಯ ಬಗ್ಗೆ ನಿಯಮಗಳನ್ನು ವಿಧಿಸುತ್ತದೆ. ಹಾಗೆಯೇ ಕೆಲವು ಸಂದರ್ಭಗಳಲ್ಲಿ ವಿವಾಹವನ್ನು ವಿಘಟಿಸಲು ಹಾಗೂ ಪತಿ ಅಥವಾ ಪತ್ನಿ ಪರಸ್ಪರರ ವಿರುದ್ಧ ಎಸಗಿದ ಅಪರಾಧಗಳನ್ನು ವಿನಿಯಮಗೊಳಿಸಿಲು ನ್ಯಾಯಾಲಯಕ್ಕೆ ಅನುಮತಿ ನೀಡುತ್ತದೆ. ಪತಿ/ಪತ್ನಿಯರಲ್ಲಿ ಯಾರೊಬ್ಬರೂ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆ(Restitution of conjugal rights), ನ್ಯಾಯಿಕ ಬೇರ್ಪಡೆ(Judicial seperation), ವಿವಾಹದ ಅಕೃತತೆ ಅಥವಾ

ವಿಚ್ಛೇದನೆ ಇವುಗಳಲ್ಲಿ ಯಾವುದೇ ಪರಿಹಾರ ಕೋರಿ ನ್ಯಾಯಾಲಯಕ್ಕೆ ಮೊರೆಹೋಗಬಹುದು. ನ್ಯಾಯಾಲಯದ ವ್ಯವಹರಣೆಗಳು ನಡೆಯುವಾಗ, ಪತ್ನಿ ಅಥವಾ ಪತ್ನಿಗೆ ಜೀವನ ನಡೆಸಲು ಮತ್ತು ವ್ಯವಹರಣೆಗಳ ಖರ್ಚನ್ನು ಭರಿಸಲು ಜೀವನಾಂಶದ ಅಗತ್ಯ ಉಂಟಾಗಬಹುದು. ಸಾಮಾನ್ಯವಾಗಿ ವಿವಾಹಿತ ಸ್ತ್ರೀ ಆರ್ಥಿಕವಾಗಿ ಪತಿಯನ್ನು ಅವಲಂಬಿಸಿರುತ್ತಾಳೆ. ಅವಳು ಯಾವುದೇ ವರಮಾನವನ್ನೂ ಹೊಂದಿರುವುದಿಲ್ಲ. ಕೆಲವೊಮ್ಮೆ ಪುರುಷನೂ ಸಹ ಆರ್ಥಿಕವಾಗಿ ಅವಲಂಬಿತನಾಗಿರ ಬಹುದು. ಅಂಥ ಸಂದರ್ಭದಲ್ಲಿ ಅವನಿಗೂ ಜೀವನಾಂಶದ ಅಗತ್ಯ ಉಂಟಾಗುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿ, ವಿವಾಹ ವಿವಾದದ ವಿಚಾರಣೆಯ ಅವಧಿಯಲ್ಲಿ ಜೀವನಾಂಶವನ್ನು ಹಾಗೂ ವ್ಯವಹರಣೆಗಳ ವೆಚ್ಚವನ್ನು ಒದಗಿಸಲು ಅಧಿನಿಯಮದ ೨೪ನೇ ಪ್ರಕರಣ ವೈವಾಹಿಕ ನ್ಯಾಯಾಲಯಗಳಿಗೆ ಅಧಿಕಾರವ್ಯಾಪ್ತಿಯನ್ನು ನೀಡುತ್ತದೆ. ವಿಚಾರಣೆಯ ಕಾಲದಲ್ಲಿ ಪತ್ನಿ ಅಥವಾ ಪತಿ, ಹಣವಿಲ್ಲದ ಕಾರಣಕ್ಕಾಗಿ ತನ್ನ ಪರವಾಗಿ ವಾದವನ್ನು ಮಂಡಿಸಲು ಅಸಮರ್ಥರಾಗಬಾರದು ಎಂಬುದೂ ಇದರ ಉದ್ದೇಶ. ಈ ಉಪಬಂಧ, ಪತಿ ಪತ್ನಿಯರಿಬ್ಬರ ಹಿತಾಸಕ್ತಿಗಳನ್ನೂ ರಕ್ಷಿಸುವುದು. ಇದಕ್ಕಾಗಿ ಇದನ್ನು ವಿಶೇಷವಾಗಿ ಅಧಿನಿಯಮಿಸಿದ್ದು ಇದೊಂದು ಸ್ತ್ರೀ ಪುರುಷ ತಾರತಮ್ಯವಿಲ್ಲದೆ ಸಾಮಾಜಿಕ ನ್ಯಾಯದೊರಕಿಸಿ ಕೊಡುವ ಕ್ರಮವಾಗಿದೆ. ಹಾಗಾಗಿ, ಸಂವಿಧಾನದ ೧೪ ಮತ್ತು ೧೫ನೇ ಅನುಚ್ಛೇದಗಳ ಆಶಯವಾದ ಸ್ತ್ರೀಪುರುಷ ಸಮಾನತೆಯನ್ನು ಸಾಧಿಸುವ ಗುರಿಗೆ ಪೂರಕವಾಗಿದೆ. ಆದರೆ ಪಾರ್ಸಿ ವಿವಾಹ ಮತ್ತು ವಿಚ್ಛೇದನಾ ಅಧಿನಿಯಮ, ೧೯೩೬ರ ೩೯ನೇ ಪ್ರಕರಣ, ಭಾರತೀಯ ವಿಚ್ಛೇದನಾ ಅಧಿನಿಯಮದ ೩೬ನೇ ಪ್ರಕರಣ ಹಾಗೂ ವಿಶೇಷವಿವಾಹ ಅಧಿನಿಯಮ ೧೯೫೪ರ ೩೬ನೇ ಪ್ರಕರಣಗಳು ಪತ್ನಿಗೆ ಮಾತ್ರ ಈ ಮಧ್ಯಂತರ ಜೀವನಾಂಶ ಪಡೆಯುವ ಅವಕಾಶವನ್ನು ಕಲ್ಪಿಸಿವೆ.

ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣ ಮಧ್ಯಂತರ ಜೀವನಾಂಶದ ಸಂದರ್ಭದಲ್ಲಿ ವಿವೇಚನಾನುಸಾರ ನಿರ್ಧರಿಸಲು ನ್ಯಾಯಾಲಯಗಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡುತ್ತದೆ. ಆದರೆ ಈ ಸ್ವಾತಂತ್ರ್ಯವನ್ನು ಅಥವಾ ವಿವೇಚನೆಯನ್ನು ನ್ಯಾಯಾಲಯ ಮನಬಂದಂತೆ ಚಲಾಯಿಸುವಂತಿಲ್ಲ. ನ್ಯಾಯಾಲಯ ಹೊರಡಿಸುವ ಯಾವುದೇ ಆದೇಶ ದಾಖಲಾಗಿರುವ ವಿವರಗಳನ್ನು ಆಧರಿಸಿರಬೇಕು ಮತ್ತು ಅವನ್ನು ನ್ಯಾಯಸಮ್ಮತ ರೀತಿಯಲ್ಲಿ ವಿವೇಚಿಸಿರಬೇಕು. ಈ ಪ್ರಕರಣ ಪತಿ ಪತ್ನಿಯರಿಬ್ಬರಿಗೂ ಜೀವನಾಂಶವನ್ನು ಮಾಡುವ ಅವಕಾಶವನ್ನು ಕಲ್ಪಿಸಿದ್ದರೂ ಸಹ ವಾಸ್ತವದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದರ ಪ್ರಯೋಜನ ಪಡೆಯುವುದು ಮಹಿಳೆಯರೇ. ಆರ್ಥಿಕ ಸ್ವಾವಲಂಬನೆಯಿಲ್ಲದ ಇವರಿಗೆ ಇದು ಅನಿವಾರ್ಯವೂ ಆಗುತ್ತದೆ.

ಮಧ್ಯಂತರ ಜೀವನಾಂಶವನ್ನು ಮಂಜೂರುಮಾಡುವುದನ್ನು ನಿರ್ಧರಿಸಲು ಯಾವುದೇ ನಿಗದಿತ ನಿಯಮಗಳು ಇಲ್ಲ. ಇದು ಪ್ರತಿ ಪ್ರಕರಣದ ವಾಸ್ತವಾಂಶಗಳು ಮತ್ತು ಸನ್ನಿವೇಶಗಳನ್ನು ಅವಲಂಬಿಸಿರುತ್ತದೆ. ಆದರೂ ಅದನ್ನು ನಿರ್ಧರಿಸಬೇಕಾದ ಗಮನಿಸುವ ಅಂಶಗಳೆಂದರೆ,

೧. ತನ್ನ ಜೀವನಕ್ಕೆ ಮತ್ತು ವ್ಯವಹರಣೆಗಳಿಗೆ ಅಗತ್ಯವಾದ ವೆಚ್ಚಗಳಿಗೆ ಸಾಕಾಗುವಷ್ಟು ಸ್ವತಂತ್ರ ವರಮಾನ ಅರ್ಜಿದಾರಳಿಗೆ ಇಲ್ಲವೆ ಅಥವಾ ಇದ್ದರೆ ಎಷ್ಟು ವರಮಾನವಿದೆ.

೨. ಅವಳ ಗಂಡನ ವರಮಾನದ ಪ್ರಮಾಣ

೩. ಅವಳ ಜೀವನ ನಿರ್ವಹಣೆ ಮತ್ತು ವ್ಯವಹಾರಣೆಗಳ ಖರ್ಚಿಗೆ ಅವಳಿಗೆ ಅಗತ್ಯವಿರುವ ಮೊಬಲಗು ಎಷ್ಟು ಎಂಬವು.

ಹಿಂದೆ ಹೇಳಿದಂತೆ ವಾಸ್ತವವಾಗಿ ಈ ಉಪಬಂಧದ ಪ್ರಯೋಜನ ಪಡೆಯುವವರು ಮಹಿಳೆಯರೇ (ಪತ್ನಿಯರೇ). ಆದ್ದರಿಂದ ಈ ವಿವೇಚನೆಯ ಬಳಕೆಯಲ್ಲಿ ಏರುಪೇರಾದರೂ ಅದರ ನೇರ ಪರಿಣಾಮ ತಟ್ಟುವುದು ಮಹಿಳೆಯರಿಗೇ ಎಂಬುದು ನಿಸ್ಸಂದೇಹ. ಆದರೆ ನಿರ್ಣಯವಾಗಿರುವ ಅನೇಕ ಪ್ರಕರಣಗಳಲ್ಲಿ ಜೀವನಾಂಶದ ಮೊತ್ತವನ್ನು ನಿರ್ಧರಿಸುವಲ್ಲಿ ಹಾಕಿಕೊಟ್ಟಿರುವ ಮಾರ್ಗದರ್ಶಿಸೂತ್ರಗಳು ಮಹಿಳೆಗೆ ಅನುಕೂಲಕರವಾಗಿದೆ ಎನ್ನಬಹುದು. ಉದಾಹರಣೆಗೆ ಪತ್ನಿಗೆ ವರಮಾನವಿದ್ದರೂ, ಆ ವರಮಾನ ಅವಳ ಜೀವನ ನಿರ್ವಹಣೆಗೆ ಮತ್ತು ವ್ಯವಹಾರಗಳಿಗೆ ವೆಚ್ಚಮಾಡಲು ಸಾಕಾಗುವಷ್ಟಾಗಿರಬೇಕು. ಆದ್ದರಿಂದ ಅವಳಿಗೆ ವರಮಾನವಿದೆ ಎಂಬ ಕಾರಣ ಒಂದರಿಂದಲೇ ಅವಳಿಗೆ ಜೀವನಾಂಶದ ಮಂಜೂರಾತಿಯನ್ನು ನಿರಾಕರಿಸುವಂತಿಲ್ಲ. ಚರ ಅಥವಾ ಸ್ಥಿರ ಸ್ವತ್ತನ್ನು ಹೊಂದಿದ್ದು ಅದರಿಂದ ಮೇಲೆ ಹೇಳಿದಂಥ ಅವಳ ಖರ್ಚುಗಳಿಗೆ ಸಾಕಾಗುವಷ್ಟು ನಿಯತ ವರಮಾನವಿಲ್ಲದಿದ್ದರೆ ಅವಳಿಗೆ ಜೀವನಾಂಶವನ್ನು ನಿರಾಕರಿಸುವಂತಿಲ್ಲ. ಪತ್ನಿಯ ಅಣ್ಣ ಅಥವಾ ತಮ್ಮನಿಗೆ ವರಮಾನವಿದೆಯೆಂಬ ಅಂಶ ಇಲ್ಲಿ ಗಣನೆಗೆ ಬರುವುದಿಲ್ಲ. ಹಾಗೆಯೇ ಪತ್ನಿ ಸುಶಿಕ್ಷಿತಳು ಅವಳಿಗೆ ಗಳಿಸುವ ಸಾಮರ್ಥ್ಯವಿದೆ ಎಂಬುದೂ ಜೀವನಾಂಶವನ್ನು ನಿರಾಕರಿಸಲು ಕಾರಣವಾಗುವುದಿಲ್ಲ. ಪತ್ನಿಗೆ ಉದ್ಯೋಗವಿದ್ದು, ಸಾಕಷ್ಟು ವರಮಾನಗಳಿಸುತ್ತಿದ್ದು, ವಿಚಾರಣೆಯ ಕಾಲದಲ್ಲಿ ಅವಳು ಕೆಲಸವನ್ನು ಕಳೆದುಕೊಂಡಲ್ಲಿ, ಅವಳಿಗೆ ವರಮಾನವಿತ್ತು ಎಂಬುದು ಜೀವನಾಂಶ ನಿರಾಕರಣೆಗೆ ಕಾರಣವಾಗುವುದಿಲ್ಲ. ಅಂಥ ಸಂದರ್ಭದಲ್ಲಿ ಕೆಲಸವನ್ನು ಕಳೆದುಕೊಂಡ ದಿನದಿಂದ ಅವಳು ಜೀವನಾಂಶಕ್ಕೆ ಅರ್ಹಳಾಗುತ್ತಾಳೆ.

ಯಾವುದೇ ಪ್ರಕರಣವನ್ನು ನಿರ್ಧರಿಸುವಾಗ ಅವರ ವಿಷಯಕ್ಕೆ ಸಂಬಂಧಿಸಿದಂತೆ ಕಟ್ಟುನಿಟ್ಟಾದ ನಿಯಮಗಳಿದ್ದು, ಅವುಗಳನ್ನು ವಿವೇಚನಾ ರಹಿತವಾಗಿ ಕಾನೂನಿನ ವಾಚ್ಯಾರ್ಥಕ್ಕೆ ಕಟ್ಟುಬಿದ್ದು ಅವರ

ಆಶಯವನ್ನು ಕಡೆಗಣಿಸಿದಾಗ ನ್ಯಾಯನೀಡಿಕೆಯ ಹಂತದಲ್ಲಿ ಮಹಿಳೆಗೆ ಅನ್ಯಾಯವಾಗುವ ಅಪಾಯವಿದ್ದಂತೆಯೇ, ಕಟ್ಟುನಿಟ್ಟಾದ ನಿಯಮಗಳಿಲ್ಲದ ಹಾಗೂ ನಿಯಮಿಸಲು ಸಾಧ್ಯವಿಲ್ಲದಂತಹ ಜೀವನಾಂಶದಂಥ ವಿಷಯದಲ್ಲಿ ಕಟ್ಟುನಿಟ್ಟಾದ ನಿಯಮಗಳಿಲ್ಲವೆಂಬುದರಿಂದಲೇ ನ್ಯಾಯ ನೀಡಿಕೆಯ ಹಂತದಲ್ಲಿ ಮಹಿಳೆಗೆ ಅನ್ಯಾಯವಾಗುವ ಸಾಧ್ಯತೆಗಳಿವೆ. ಆದ್ದರಿಂದ ಮಹಿಳೆಗೆ ವಾಸ್ತವವಾಗಿ ನ್ಯಾಯದೊರೆಯುವುದು ಇವೆರಡರ ನಡುವಿನ ಯಾವುದೋ ಒಂದು ಬಿಂದುವಿನಲ್ಲಿ. ಹೀಗಾಗಿ ಕಾನೂನಿನ ಅನ್ವಯ ಹಾಗೂ ವ್ಯಾಖ್ಯಾನಗಳು ಮಹಿಳೆಗೆ ವಾಸ್ತವಿಕ ನ್ಯಾಯವೊದಗಿಸಿಕೊಡುವಲ್ಲಿ ಅತ್ಯಂತ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ.

ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣ ಜೀವನಾಂಶದ ಮೊಬಲಗನ್ನು ನಿರ್ಧರಿಸಲು ಯಾವುದೇ ಮಾನದಂಡವನ್ನು ನಿಗದಿಪಡಿಸುವುದಿಲ್ಲ. ಇದು ಪ್ರತಿ ಪ್ರಕರಣದ ವಿವರಗಳನ್ನವಲಂಬಿಸುತ್ತದೆ. ಆದರೆ, ಪಾರ್ಸಿ ವಿವಾಹ ಮತ್ತು ವಿಚ್ಛೇದನಾ ಅಧಿನಿಯಮದ ೩೯ನೇ ಪ್ರಕರಣದ ಮೇರೆಗೆ ವಿಚಾರಣಾ ಕಾಲದಲ್ಲಿ ಪತಿಯ ನಿವ್ವಳ ಮಾಸಿಕ ಸರಾಸರಿ ಆದಾಯದ ಐದನೇ ಒಂದು ಭಾಗದಷ್ಟು ಮಧ್ಯಂತರ ಜೀವನಾಂಶವಾಗಿ ನೀಡಬೇಕು. ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿ ಜೀವನಾಂಶವನ್ನು ನಿರ್ಧರಿಸುವಾಗಲೂ ಈ ಪ್ರಮಾಣವನ್ನು, ವಿಶೇಷ ಸಂದರ್ಭಗಳ ಹೊರತು, ಮಾನದಂಡವನ್ನಾಗಿ ಇರಿಸಿಕೊಳ್ಳಬಹುದು ಎಂಬುದನ್ನು ನ್ಯಾಯಾಲಯಗಳು ಅನೇಕ ತೀರ್ಪುಗಳಲ್ಲಿ ವ್ಯಕ್ತಪಡಿಸಿವೆ. ಆದರೆ ಇದೇ ಗರಿಷ್ಟ ಮಿತಿಯಾಗಬೇಕಾಗಿಲ್ಲ. ಏಕೆಂದರೆ "ಜೀವನಾಂಶದ ಮೊಬಲಗು ಜೀವನಾಂಶ ನೀಡಲು ಪತಿಗಿರುವ ಸಾಮರ್ಥ್ಯ, ಪತ್ನಿಯ ಅಗತ್ಯಗಳು, ಸಾಮಾಜಿಕ ಸ್ಥಾನಮಾನ, ವಯಸ್ಸು, ಶಿಕ್ಷಣ ಹಾಗೂ ಇತರ ಅಗತ್ಯಗಳನ್ನು" ಅವಲಂಬಿಸುತ್ತದೆ.

ಹಿಂದೂ ವಿವಾಹ ಅಧಿನಿಯಮದ ೨೫ನೇ ಪ್ರಕರಣ ಕಾಯಂ ಜೀವನಾಂಶದ ಬಗ್ಗೆ ಉಪಬಂದ ಕಲ್ಪಿಸುತ್ತದೆ. ಹಿಂದೆ ಇದ್ದ ಹಿಂದೂ ಕಾನೂನನ್ನೇ ಮಾರ್ಪಾಟುಗೊಳಿಸಿ ಹಿಂದೂ ವಿವಾಹ ಅಧಿನಿಯಮ, ೧೯೫೫ರಲ್ಲಿ ಅಳವಡಿಸಿಕೊಳ್ಳಲಾಯಿತು. ಈ ಅಧಿನಿಯಮದಲ್ಲಿ ಸೇರ್ಪಡೆಯಾದ ವಿಚ್ಛೇದನೆಯಂತೆ ಕಾಯಂ ಜೀವನಾಂಶದ ಪರಿಕಲ್ಪನೆಯೂ ಹೊಸದಾದ ಪರಿಕಲ್ಪನೆ. ಒಮ್ಮೆ ಆದ ವಿವಾಹವನ್ನು ವಿಘಟಿಸು ಅವಕಾಶವಿಲ್ಲದ ಪರಿಸ್ಥಿತಿಯಿಂದ ವಿವಾಹ ವಿಘಟನೆಗೆ ಕಾನೂನಿನಲ್ಲಿಯೇ ಅವಕಾಶ ಕಲ್ಪಿಸಲು ಸಾಮಾಜಿಕ ಪರಿಸರಗಳು ಕಾರಣವಾದಂತೆಯೇ ವಿವಾಹ ವಿಘಟನೆಯ ಪರಿಕಲ್ಪನೆ, ಕಾಯಂ ಜೀವನಾಂಶದ ಪರಿಕಲ್ಪನೆಗೆ ಕಾರಣವಾಯಿತು. ಸಾರ್ವಜನಿಕ ಹಿತಾಸಕ್ತಿ ಹಾಗೂ ಸಾಮಾಜಿಕ ಕ್ಷೇಮಾಭಿವೃದ್ಧಿಯ ದೃಷ್ಟಿಯಿಂದ ವಿಚ್ಛೇದಿತ ಮಹಿಳೆ ನಿರ್ಗತಿಕಳಾಗದಂತೆ ಹಾಗೂ ಜೀವನ ನಿರ್ವಹಣೆ ಅನಿವಾರ್ಯವಾಗಿ ಅನೈತಿಕ ಮಾರ್ಗ ಹಿಡಿಯದಂತೆ ನೋಡಿಕೊಳ್ಳಲು ಇಂಥ ಉಪಬಂಧದ ಸೇರ್ಪಡೆ ಅತ್ಯಗತ್ಯವಾಗಿತ್ತು. ದಾಂಪತ್ಯ ಹಕ್ಕುಗಳ

ಪೂರ್ವಸ್ಥಿತಿ ಸ್ಥಾಪನೆ, ನ್ಯಾಯಿಕ ಬೇರ್ಪಡೆ, ವಿವಾಹವನ್ನು ಅಕ್ರಮವೆಂದು ಘೋಷಿಸುವುದು ಮತ್ತು ವಿಚ್ಛೇದನೆಯಂಥ ವೈವಾಹಿಕ ಹಕ್ಕುಗಳನ್ನು ತಾನು ಚಲಾಯಿಸಿದಾಗ ಅಥವಾ ತನ್ನ ವಿರುದ್ಧ ಚಲಾಯಿಸಲ್ಪಟ್ಟಾಗ ಅಗತ್ಯವಿರುವ ಪಕ್ಷಕಾರರು ಜೀವನಾಂಶದ ಹಕ್ಕನ್ನು ಚಲಾಯಿಸಲು ಈ ಉಪಬಂಧದಲ್ಲಿ ಅವಕಾಶ ಕಲ್ಪಿಸಲಾಗಿದೆ.

ಕಾಯಂ ಜೀವನಾಂಶ ನೀಡಿಕೆಗೆ ಸಂಬಂಧಪಟ್ಟ, ಈ ಪ್ರಕರಣ ೧೯೭೬ರಲ್ಲಿ ತಿದ್ದುಪಡಿಯಾಯಿತು. ಆದರೆ ಅಲ್ಲಿಯವರೆಗೆ, ವೈವಾಹಿಕ ವ್ಯಾಜ್ಯಕ್ಕೆ ಪಕ್ಷಕಾರಳಾಗಿದ್ದ ಮಹಿಳೆ ಮೇಲೆ ಹೇಳಿದಂಥ ಯಾವುದೇ ವ್ಯಾಜ್ಯದ ಅಂತಿಮ ತೀರ್ಮಾನವಾಗಿ ಆದೇಶವನ್ನು ಹೊರಡಿಸಿದ ನಂತರ ನಡತೆಗೆಟ್ಟರೆ ಜೀವನಾಂಶ ನೀಡಿ ಹೊರಡಿಸಿದ ಆದೇಶವನ್ನು ಇನ್ನೊಬ್ಬ ಪಕ್ಷಕಾರನ ಅರ್ಜಿಯ ಮೇರೆಗೆ ರದ್ದುಗೊಳಿಸಬಹುದಿತ್ತು. ಆದರೆ, ೧೯೭೬ರ ತಿದ್ದುಪಡಿ ಅಧಿನಿಯಮದ ಮೂಲಕ, ಆಯಾ ಪ್ರಕರಣದ ಸನ್ನಿವೇಶಗಳನ್ನು ಗಮನಿಸಿ ನ್ಯಾಯಾಲಯವು ಅಂಥ ಆದೇಶವನ್ನು ಬದಲಾಯಿಸಬಹುದು, ತಿದ್ದುಪಡಿಮಾಡಬಹುದು. ಅಥವಾ ರದ್ದುಮಾಡಬಹುದು ಎಂದು ತಿದ್ದುಪಡಿ ಮಾಡಲಾಗಿದೆ. ಹೀಗೆ ಮಾಡುವುದರಿಂದ ಶಾಸಕಾಂಗ, ಹೆಚ್ಚು ಉದಾರವಾದ, ಸುಧಾರಣಾತ್ಮಕವಾದ ಹಾಗೂ ಹೊಂದಾಣಿಕೆಯ, ಮನೋಭಾವವನ್ನು ತೋರಿದೆ ಎಂದು ಸಾಮಾನ್ಯವಾಗಿ ವ್ಯಾಖ್ಯಾನಿಸಲಾಗುತ್ತದೆ.

ಭಾರತ ದಂಡ ಪ್ರಕ್ರಿಯಾ ಸಂಹಿತೆಯು, ೧೨೫ನೇ ಪ್ರಕರಣದಿಂದ ೧೨೮ ಪ್ರಕರಣಗಳವರೆಗೆ ಪತ್ನಿ ಮಕ್ಕಳು ಹಾಗೂ ತಂದೆತಾಯಿಯರಿಗೆ ನೀಡಬೇಕಾದ ಜೀವನಾಂಶ ಕುರಿತಾದ ಉಪಬಂಧಗಳನ್ನು ಒಳಗೊಂಡಿದೆ. ಪುರುಷ, ತನ್ನ ಪತ್ನಿ ಮಕ್ಕಳು ಹಾಗೂ ತಂದೆತಾಯಿಯರ ಬಗ್ಗೆ ಹೊಂದಿರುವ ಸಾಮಾಜಿಕ ಜವಾಬ್ದಾರಿಯನ್ನು ನಿಭಾಯಿಸುವಂತೆ ಒತ್ತಾಯಿಸುವ ಉದ್ದೇಶವನ್ನು ಈ ಪ್ರಕರಣಗಳು ಹೊಂದಿವೆ. ಶೀಘ್ರವಾದ ಸರಳವಾದ ಹಾಗೂ ಸೀಮಿತವಾದ ಪರಿಹಾರ ಒದಗಿಸುವ ಮೂಲಕ ಈ ಪ್ರಕರಣಗಳು ಅಲಕ್ಷಿತ ಪತ್ನಿ ಮಕ್ಕಳು ನಿರ್ಗತಿಕರಾಗದಂತೆ ನೋಡಿಕೊಳ್ಳುತ್ತವೆ. ರಾಜ್ಯದಲ್ಲಿ ಅರಾಜಕತೆ ಉಂಟಾಗದಂತೆ ನೋಡಿಕೊಳ್ಳುವ ಸಾರ್ವಜನಿಕ ಕಾರ್ಯನೀತಿಯನ್ನು ಸಾಧಿಸುವ ಉದ್ದೇಶವನ್ನು ಸಹ ಈ ಉಪಬಂಧ ಹೊಂದಿದೆ.

ನಿರ್ಲಕ್ಷ್ಯಕ್ಕೊಳಗಾದ ಮತ್ತು ಪರಿತ್ಯಜಿತ ಪತ್ನಿಯರು, ವಿಚ್ಛೇದಿತ ಮಹಿಳೆಯರು, ಮಕ್ಕಳು ಮತ್ತು ತಂದೆತಾಯಿಯರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವ ದೃಷ್ಟಿಯಿಂದ ಈ ಪ್ರಕರಣಗಳನ್ನು ಜಾರಿಗೊಳಿಸಿರುವುದರಿಂದ ಈ ಉದ್ದೇಶ ಸಫಲವಾಗುವ ರೀತಿಯಲ್ಲಿ ಇವುಗಳನ್ನು ಅನ್ವಯಿಸಬೇಕು ಹಾಗೂ ವ್ಯಾಖ್ಯಾನಿಸಬೇಕು. ಈ ಪ್ರಕರಣಗಳಿಂದ ಪ್ರಯೋಜನ ಪಡೆಯುವವರು ಸಮಾಜದ ದುರ್ಬಲವರ್ಗಕ್ಕೆ ಸೇರಿದ ಮಹಿಳೆಯರು, ಮಕ್ಕಳು ಮತ್ತು ನಿರ್ಲಕ್ಷಿತ ತಂದೆತಾಯಿಯರಾದ್ದರಿಂದ ಈ ಪ್ರಕರಣಗಳು

ಭಾರತದ ಸಂವಿಧಾನದ ೧೫(೩)ನೇ ಅನುಚ್ಛೇದದ ಆಶಯಕ್ಕೆ ಪೂರಕವಾಗಿದೆ. ಆದ್ದರಿಂದ ಈ ಪ್ರಕರಣಗಳನ್ನು ಅನ್ವಯಿಸುವಾಗ ಹಾಗೂ ವ್ಯಾಖ್ಯಾನಿಸುವಾಗ, ೧೫(೩)ನೇ ಅನುಚ್ಛೇದದ ಆಶಯ ಮಾರ್ಗದರ್ಶಿಯಾಗಬೇಕು. ಆದ್ದರಿಂದ ೧೨೫ನೇ ಪ್ರಕರಣ ಹಾಗೂ ಇತರ ಪ್ರಕರಣಗಳಲ್ಲಿ ಬಳಸಲಾಗಿರುವ ಪದಗಳಿಗೆ ಸಾಧ್ಯವಾದಷ್ಟು ವಿಸ್ತೃತಾರ್ಥ ನೀಡಿ ಸಹಾನುಭೂತಿ ಪರವ್ಯಾಖ್ಯಾನ ನೀಡಬೇಕು. ಏಕೆಂದರೆ ಈ ಪ್ರಕರಣಗಳ ಮೂಲ ಉದ್ದೇಶ ಸಾಮಾಜಿಕ ನ್ಯಾಯವನ್ನೊದಗಿಸುವುದು. ಸಂವಿಧಾನದ ೩೯ನೇ ಅನುಚ್ಛೇದ ಸ್ತ್ರೀಯರಿಗೆ ಸಮಾನತೆಯನ್ನು ನೀಡುವುದಕ್ಕಾಗಿ ವಿಶೇಷ ಉಪಬಂಧಗಳನ್ನು ರಚಿಸುವ ಅಧಿಕಾರವನ್ನು ರಾಜ್ಯಗಳಿಗೆ ನೀಡುವ ಮೂಲಕ ೧೫(೩)ನೇ ಅನುಚ್ಛೇದವನ್ನು ಬೆಂಬಲಿಸುವಂಥದ್ದಾಗಿದೆ. ಆದ್ದರಿಂದ ೧೨೫ರಿಂದ ೧೨೮ನೇ ಪ್ರಕರಣಗಳನ್ನು ಸಾಮಾಜಿಕ ಹಾಗೂ ಆರ್ಥಿಕ ಸಮತೋಲನವನ್ನು ಕಾಯ್ದುಕೊಳ್ಳುವ ರೀತಿಯಲ್ಲಿ ಜಾರಿಗೊಳಿಸುವುದು ಅತ್ಯಂತ ಮುಖ್ಯವಾಗುತ್ತದೆ. ಮುಖ್ಯನ್ಯಾಯಮೂರ್ತಿಗಳಾಗಿದ್ದ ಎಸ್. ಎಸ್.ಸಂಧಾವಾಲಿಯಾ ಅವರು ಈ ಉಪಬಂಧಗಳನ್ನು ಅನ್ವಯಿಸುವಾಗ ಈ ಮುಂದಿನಂತೆ ಅಭಿಪ್ರಾಯಪಟ್ಟಿದ್ದಾರೆ.

ನಿರ್ಗತಿಕ ಪತ್ನಿಯರು, ಮಕ್ಕಳು ಮತ್ತು ತಂದೆತಾಯಿಯರಿಗೆ ನೆರವು ನೀಡುವುದು ಇವುಗಳ ಉದ್ದೇಶ. ಆದ್ದರಿಂದ, ಪ್ರಯೋಜನಕಾರಿಯಾದ ಈ ಕಾನೂನನ್ನು ತಾಂತ್ರಿಕ ಕಾರಣಗಳಿಗಾಗಿ ಮಾತ್ರವೇ ಇವುಗಳ ಉದ್ದೇಶ ವಿಫಲವಾಗುವಂಥ ಸಂಕುಚಿತ ಅರ್ಥವನ್ನು ನೀಡಬಾರದು. ಆದ್ದರಿಂದ ಈ ಅಧ್ಯಾಯದ ಯಾವುವೇ ಉಪಬಂಧಗಳ ನಡುವೆ ಸಂಘರ್ಷ ಉಂಟಾದರೂ ಸಹ ಈ ಸಂಹಿತೆಯನ್ನು ರಚಿಸುವಾಗ ಸಂಸತ್ತು ಆಲೋಚಿಸಿದಂಥ ಜೀವನಾಂಶದ ಹಕ್ಕನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ಸುಸಂಗತವಾದ ರೀತಿಯಲ್ಲಿ ಅರ್ಥೈಸಬೇಕಾಗುತ್ತದೆ.

ಈ ಉಪಬಂಧಗಳು ಜಾತಿ ಮತ ಬೇಧವಿಲ್ಲದೆ ಎಲ್ಲ ಧರ್ಮಗಳ ಮಹಿಳೆಯರಿಗೂ ಲಭ್ಯವಿದೆ. ಆದರೆ ೧೯೮೬ರಲ್ಲಿ ಮುಸ್ಲಿಂ ಮಹಿಳೆಯರ(ವಿಚ್ಛೇದನಾನಂತರದ ಹಕ್ಕುಗಳ ರಕ್ಷಣೆ) ಅಧಿನಿಯಮ ಜಾರಿಯಾದ ನಂತರ ಇದು ಮುಸ್ಲಿಂ ವಿಚ್ಛೇದಿತ ಮಹಿಳೆಯರಿಗೆ ಅನ್ವಯವಾಗುವುದಿಲ್ಲ. ಆದರೆ ವಿಚ್ಛೇದಿತ ಮುಸ್ಲಿಂ ಸ್ತ್ರೀ ಹಾಗೂ ಅವಳ ಹಿಂದಿನ ಪತಿ ಆಯ್ಕೆ ಮಾಡಿಕೊಂಡಲ್ಲಿ ಅವರು ಈ ಸಂಹಿತೆಯ ಈ ಉಪಬಂಧಗಳಿಗೆ ಒಳಪಡುತ್ತಾರೆ.

ಪತ್ನಿ ಈ ಪ್ರಕರಣದ ಮೇರೆಗೆ ಜೀವನಾಂಶವನ್ನು ಕ್ಲೇಮು ಮಾಡುವ ತನ್ನ ಹಕ್ಕನ್ನು ಬಿಟ್ಟುಕೊಟ್ಟಿದ್ದಾಳೆ ಎಂದು ಪತಿ ವಾದ ಮಂಡಿಸಿದರೂ ಹಾಗೆ ಬಿಟ್ಟುಕೊಟ್ಟಿದ್ದಾಳೆ ಎಂಬ ಕಾರಣ ತೋರಿಸಿ ಪತಿ ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳಲಾರ. ಏಕೆಂದರೆ, ಅಂಥ ಯಾವುದೇ ಒಪ್ಪಂದ ಸಾರ್ವಜನಿಕ ನೀತಿಗೆ ವಿರುದ್ಧವಾದುದಾಗುತ್ತದಾದ್ದರಿಂದ ಅಂಥ ಒಪ್ಪಂದ ಕಾನೂನು ಬಾಹಿರವೆನಿಸುತ್ತದೆ. ಆದರೆ ಈ ಪ್ರಕರಣ

ಪತಿಯಿಂದ ಜೀವನಾಂಶ ಪಡೆಯುವ ಎಲ್ಲ ಸಂದರ್ಭಗಳಲ್ಲೂ ಪತ್ನಿಗೆ ನಿರುಪಾಧಿಕ ಹಕ್ಕನ್ನು ನೀಡುವುದಿಲ್ಲ. ಹಾಗೆಯೇ ಎಲ್ಲ ಸಂದರ್ಭಗಳಲ್ಲಿಯೂ ಪತಿ ಪತ್ನಿಗೆ ಜೀವನಾಂಶ ನೀಡಬೇಕೆಂದು ಪತಿಯನ್ನು ಬದ್ಧನನ್ನಾಗಿಸುವುದಿಲ್ಲ. ಈ ಪ್ರಕರಣದ ಅಡಿಯಲ್ಲಿ ಜೀವನಾಂಶ ಪಡೆಯಲು ಕೆಲವು ಅಂಶಗಳು ಪೂರೈಕೆಯಾಗಿರಬೇಕು.

೧. ಅವರಿಬ್ಬರ ನಡುವೆ ಪತಿಪತ್ನಿಯರ ಸಂಬಂಧವಿದೆಯೆಂಬುದು ರುಜುವಾತಾಗಬೇಕು.

೨. ಅವಳು ತನ್ನನ್ನು ತಾನು ನೋಡಿಕೊಳ್ಳಲು ಅಸಮರ್ಥಳಾಗಿರಬೇಕು.

೩. ಪತಿಗೆ ಸಾಕಷ್ಟು ಆದಾಯವಿರಬೇಕು ಮತ್ತು

೪. ಪತಿ ಪತ್ನಿಯನ್ನು ನೋಡಿಕೊಳ್ಳದೆ ನಿರ್ಲಕ್ಷಿಸಿದ್ದಾನೆಂದು ಅಥವಾ ನೋಡಿಕೊಳ್ಳಲು ನಿರಾಕರಿಸಿದ್ದಾನೆಂದು ರುಜುವಾತುಪಡಿಸಬೇಕು. ಈ ಎಲ್ಲ ಅಂಶಗಳನ್ನು ಪೂರೈಸಿರುವುದರಿಂದ ಜೀವನಾಂಶ ಪಡೆಯಲು ಹಕ್ಕುಳ್ಳವಳಾಗುವ ಪತ್ನಿಯ ಕ್ಲೇಮನ್ನು ಪತಿ ಮೂರು ಕಾರಣಗಳ ಮೇಲೆ ಮಾತ್ರವೇ ನಿರಾಕರಿಸಬಹುದು.

೧. ಪತ್ನಿ ವ್ಯಭಿಚಾರಿಯಾಗಿದ್ದಾಳೆ.

೨. ಸಾಕಷ್ಟು ಕಾರಣವಿಲ್ಲದೆ ಪತಿಯೊಂದಿಗೆ ವಾಸಿಸಲು ಪತ್ನಿ ನಿರಾಕರಿಸಿದ್ದಾಳೆ.

೩. ಪರಸ್ಪರ ಒಪ್ಪಿಗೆಯ ಮೇರೆಗೆ ಅವಳು ಪ್ರತ್ಯೇಕವಾಗಿ ವಾಸಿಸುತ್ತಿದ್ದಾಳೆ. ಈ ಮೂರನ್ನು ಬಿಟ್ಟು ಬೇರಾವುದೇ ಕಾರಣಕ್ಕಾಗಿಯೂ ಪತಿ ಪತ್ನಿಯ ಜೀವನಾಂಶದ ಕ್ಲೇಮನ್ನು ವಿಫಲಗೊಳಿಸಲಾರ.

೧೨೬ನೇ ಪ್ರಕರಣ, ನ್ಯಾಯಾಲಯದ ಅಧಿಕಾರ ವ್ಯಾಪ್ತಿ ಜೀವನಾಂಶವನ್ನು ಸಂದಾಯಮಾಡಲು ಬದ್ಧನಾಗಿರುವ ವ್ಯಕ್ತಿಯನ್ನು ಸಮನ್ ಮಾಡುವ ಕಾರ್ಯವಿಧಾನ, ಸಾಕ್ಷ್ಯಗಳನ್ನು ದಾಖಲಿಸುವುದು, ಜೀವನಾಂಶ ಸಂದಾಯಮಾಡಲು ಬದ್ಧನಾದ ವ್ಯಕ್ತಿ ಜಾರಿಯನ್ನು ಉದ್ದೇಶಪೂರ್ವಕವಾಗಿ ತಪ್ಪಿಸಿದರೆ ಅಥವಾ ನ್ಯಾಯಾಲಯಕ್ಕೆ ಹಾಜರಾಗಲು ಉದ್ದೇಶಪೂರ್ವಕ ನಿರ್ಲಕ್ಷ್ಯ ತೋರಿದರೆ ಅನುಸರಿಸಬೇಕಾದ ಕಾರ್ಯವಿಧಾನ, ಏಕಪಕ್ಷೀಯ ಜೀವನಾಂಶ ಆದೇಶವನ್ನು ರದ್ದುಗೊಳಿಸುವ ವಿಧಾನ ಮತ್ತು ಯಾವ ಷರತ್ತುಗಳಿಗೊಳಪಟ್ಟು, ಹಾಗೆ ರದ್ದುಗೊಳಿಸಬಹುದು ಎಂಬವುಗಳ ಬಗ್ಗೆ ಉಪಬಂಧ ಕಲ್ಪಿಸುತ್ತದೆ.

೧೨೭ನೇ ಪ್ರಕರಣ ಈ ಮೊದಲು ಆದೇಶಿಸಲಾಗಿದ್ದ ಜೀವನಾಂಶದ ಮೊಬಲಗಿನಲ್ಲಿ ಸನ್ನಿವೇಶಗಳು ಬದಲಾಗಿವೆಯೆಂದು ರುಜುವಾತು ಪಡಿಸಬೇಕೆಂಬುದಕ್ಕೊಳಪಟ್ಟು, ಮಾಡಬಹುದಾದ ಬದಲಾವಣೆ, ಸಕ್ಷಮ ಸಿವಿಲ್ ನ್ಯಾಯಾಲಯದ ತೀರ್ಪಿನ ಮೇರೆಗೆ ಜೀವನಾಂಶದ ಆದೇಶದ ರದ್ದಿಯಾತಿ ಮುಂತಾದವುಗಳ ಬಗ್ಗೆ ಉಪಬಂಧ ಕಲ್ಪಿಸುತ್ತದೆ.

ಕೊನೆಯದಾದ ೧೨೮ನೇ ಪ್ರಕರಣ, ಜೀವನಾಂಶವನ್ನು ಸಂದಾಯಮಾಡುವಂತೆ ಆದೇಶಿಸಿ ಯಾವ ವ್ಯಕ್ತಿಗೆ ಆದೇಶಿಸಲಾಗಿದೆಯೋ ಆ ವ್ಯಕ್ತಿ ಎಲ್ಲೇ ಇದ್ದರೂ ಆ ವ್ಯಕ್ತಿಯ ವಿರುದ್ಧ ಜೀವನಾಂಶದ ಆದೇಶವನ್ನು ಜಾರಿಗೊಳಿಸಲು ಮ್ಯಾಜಿಸ್ಟ್ರೇಟರಿಗೆ ಅಧಿಕಾರ ನೀಡುತ್ತದೆ.

ಭಾರತ ದಂಡಸಂಹಿತೆಯ IX ಅಧ್ಯಾಯದ ೧೨೫ ರಿಂದ ೧೨೮ರ ವರೆಗಿನ ಪ್ರಕರಣಗಳು ಜೀವನಾಂಶದ ಹಕ್ಕು, ಕಾರ್ಯವಿಧಾನ, ಮಂಜೂರಾತಿ, ಜೀವನಾಂಶ ಆದೇಶದ ಬದಲಾವಣೆ ಮತ್ತು ಜಾರಿ ಬಗ್ಗೆ ಉಪಬಂಧ ಕಲ್ಪಿಸುವ ಮೂಲಕ ಸ್ವಯಂಪೂರ್ಣವಾಗಿರುವುದರಿಂದ ಈ ಅಧ್ಯಾಯವೇ ಒಂದು ಸಂಹಿತೆ ಎನ್ನಲಾಗುತ್ತದೆ.

ಒಟ್ಟಾರೆಯಾಗಿ, ಹಿಂದೂ ವಿವಾಹ ಅಧಿನಿಯಮ, ೧೯೫೫ರ ೨೪ ಮತ್ತು ೨೫ನೇ ಪ್ರಕರಣಗಳು, ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ೧೮ನೇ ಪ್ರಕರಣ ಹಾಗೂ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣಗಳ ಉದ್ದೇಶವೂ ಒಂದೇ. ಜೀವನಾಧಾರವಿಲ್ಲದ ಪತ್ನಿ(ಹಿಂದೂ ವಿವಾಹ ಅಧಿನಿಯಮದ ಅಧಿನಿಯಮದ ಅಡಿಯಲ್ಲಿ ಪತಿಯೂ ಸೇರುತ್ತಾನೆ) ಪತಿಯ ತಪ್ಪಿನಿಂದಾಗಿ ಸಂಕಷ್ಟಕ್ಕೊಳಗಾಗ ಬಾರದು, ಸಮಾಜಕ್ಕೆ ಹೊರೆಯಾಗಬಾರದು, ತನ್ಮೂಲಕ ಸಾಮಾಜಿಕ ಸಮಸ್ಯೆಗಳ ಉದ್ಭವಕ್ಕೆ ಕಾರಣನಾಗಬಾರದು ಮತ್ತು ವಿವಾಹ ಬಂಧನಕ್ಕೊಳಗಾದ ವ್ಯಕ್ತಿ ತನ್ನ ಪತ್ನಿ ಹಾಗೂ ಮಕ್ಕಳನ್ನು ನೋಡಿ ಕೊಳ್ಳುವುದಕ್ಕೆ ಬದ್ಧನಾಗಿರುತ್ತಾನೆ. ಹಾಗೂ ಅದು ಅವನ ಕರ್ತವ್ಯವಾಗಿರುತ್ತದೆ. ಅವನು ಕರ್ತವ್ಯ ವಿಮುಖನಾಗಲು ಕಾನೂನು ಅವಕಾಶಕೊಡುವುದಿಲ್ಲ.

ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣ ಹಾಗೂ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ(ಮುಂದೆ ಜೀವನಾಂಶ ಅಧಿನಿಯಮ ಎಂದು ಉಲ್ಲೇಖಿಸಲಾಗಿದೆ) ೧೮ನೇ ಪ್ರಕರಣದಲ್ಲಿ ಹಿಂದೂ ಪತ್ನಿಗಿರುವ ಜೀವನಾಂಶದ ಹಕ್ಕು ಪ್ರತ್ಯೇಕವಾದುದು ಮತ್ತು ಇವೆರಡರ ಅಡಿಯಲ್ಲಿಯೂ ಅವಳು ಜೀವನಾಂಶಕ್ಕಾಗಿ ಅರ್ಜಿ ಸಲ್ಲಿಸಬಹುದು. ವಿವಾಹ ಅಧಿನಿಯಮದ ಅಡಿಯಲ್ಲಿ ಅವಳಿಗೆ ಪ್ರಾಪ್ತವಾಗುವ ಹಕ್ಕು ಆ ಅಧಿನಿಯಮದ ೯ ರಿಂದ ೧೩ನೇ ಪ್ರಕರಣಗಳ ಅಡಿಯಲ್ಲಿನ ಯಾವುದೇ ಕಾನೂನು ವ್ಯವಹರಗಳನ್ನು ಹೂಡಲಾಗಿರುವುದರಿಂದಾಗಿ ಪ್ರಾಪ್ತವಾಗುವ ಹಕ್ಕು. ಆದರೆ ಜೀವನಾಂಶ ಅಧಿನಿಯಮದ ಅಡಿಯಲ್ಲಿ ಅವಳಿಗೆ ಈ ಹಕ್ಕು ಪ್ರಾಪ್ತವಾಗುವುದು ಯಾವುದೇ ಕಾನೂನು ವ್ಯವಹರಣೆಯ ಪರಿಣಾಮವಾಗಿ ಅಲ್ಲ, ಆದರೆ ಇವೆರಡರ ಅಡಿಯಲ್ಲಿ ಮಾಡಲಾದ ಜೀವನಾಂಶದ ಕ್ಲೇಮಿನ ಅರ್ಜಿಗಳನ್ನು ಇತ್ಯರ್ಥಗೊಳಿಸಿ ಎರಡೂ ಪ್ರಕರಣಗಳಲ್ಲಿ ಜೀವನಾಂಶಕ್ಕಾಗಿ ಆದೇಶ ಹೊರಡಿಸಿದಲ್ಲಿ, ಒಂದೇ ಅವಧಿಗೆ ಎರಡು ಬಾರಿ ಎರಡು ಬೇರೆ ಬೇರೆ ಕಾನೂನುಗಳ ಅಡಿಯಲ್ಲಿ ಜೀವನಾಂಶವನ್ನು ಪಡೆಯುವಂತಿಲ್ಲ.

ವಿವಾಹ ಅಧಿನಿಯಮದ ೨೫ನೇ ಪ್ರಕರಣ ಕಾಯಂ ಜೀವನಾಂಶಕ್ಕಾಗಿ ಉಪಬಂಧ ಕಲ್ಪಿಸುತ್ತದೆ. ಆದರೆ ಈ ಪ್ರಕರಣದ ಅಡಿಯಲ್ಲಿ ಪ್ರಾಪ್ತವಾಗುವ ಹಕ್ಕು ಯಾವುದೇ ವಿವಾಹ ವ್ಯಾಜ್ಯದ ಇತ್ಯರ್ಥದ ನಂತರ ಪ್ರಾಪ್ತವಾಗುವಂಥದ್ದು. ಆದ್ದರಿಂದ ಇದು ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿನ ಯಾವುದೇ ವೈವಾಹಿಕ ಪರಿಹಾರಕ್ಕಿರುವ ಹಕ್ಕಿಗೆ ಅನುಷಂಗಿಕವಾದ ವಿಶೇಷ ಹಕ್ಕು. ಈ ಪ್ರಕರಣದ ಮೇರೆಗೆ ಪತ್ನಿಯಂತೆ ಪತಿ ಜೀವನಾಂಶವನ್ನು ಕ್ಲೇಮು ಮಾಡಬಹುದು. ಇದರ ಪ್ರಕಾರ, ಇಬ್ಬರಲ್ಲಿ ಯಾರು ಹಣಕಾಸಿನ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿದ್ದಾರೆಯೋ ಅವರು(ಪತಿ/ಪತ್ನಿ) ಇನ್ನೊಬ್ಬರಿಗೆ (ಪತಿ/ಪತ್ನಿ) ಜೀವನಾಂಶವನ್ನು ನೀಡಬೇಕಾಗುತ್ತದೆ. ಜೀವನಾಂಶದ ಮೊಬಲಗನ್ನು ಅಧಿನಿಯಮ ನಿಗದಿಪಡಿಸುವುದಿಲ್ಲ. ಇದನ್ನು ನಿಗದಿಪಡಿಸುವುದು ನ್ಯಾಯಾಲಯದ ವಿವೇಚನೆಗೆ ಬಿಡಲಾಗಿದೆ. ಈ ಹಕ್ಕು ಹಿಂದೂ ಪತ್ನಿಗೆ ವಿವಾಹ ಬಂಧನ ಮುರಿದ ನಂತವೂ(ವಿಚ್ಛೇದನೆಯ) ನಂತರವೂ ಲಭ್ಯ ಮತ್ತು ಕಾನೂನು ರೀತ್ಯಾ ವಿವಾಹವಾದ ಪತ್ನಿಗೆ ಲಭ್ಯವಿರುವಂತೆ ಶೂನ್ಯವಿವಾಹದಿಂದ ಪತ್ನಿಯಾದ ಮಹಿಳೆಗೂ ಈ ಹಕ್ಕು ಲಭ್ಯವಿರುತ್ತದೆ.

## ದತ್ತಕ ಮತ್ತು ಪೋಷಕತ್ವ

ವಿವಾಹ ಸಂಬಂಧೀ ಕಾನೂನುಗಳು ಹಾಗೂ ಅವುಗಳಲ್ಲಿನ ತಾರತಮ್ಯಗಳ ಬಗ್ಗೆ ವಿಶ್ಲೇಷಿಸುವಾಗ ದತ್ತಕ ಹಾಗೂ ಪೋಷಕತ್ವ ಕಾನೂನುಗಳಲ್ಲಿನ ತಾರತಮ್ಯವನ್ನು ಗಮನಿಸುವುದು ಅತ್ಯಂತ ಅಗತ್ಯವಾಗುತ್ತದೆ. ಸಂವಿಧಾನದಲ್ಲಿ ಸ್ತ್ರೀಪುರುಷ ಸಮಾನತೆಯ ತತ್ತ್ವವನ್ನು ಅಳವಡಿಸಿಕೊಂಡಿದ್ದರೂ, ನಮ್ಮ ಎಲ್ಲ ವೈಯಕ್ತಿಕ ಕಾನೂನುಗಳೂ ಮೂಲತಃ ಸಾಂಪ್ರದಾಯಿಕ ಕಾನೂನುಗಳು ಹಾಗೂ ಕಟ್ಟುಕಟ್ಟಳೆಗಳನ್ನು ಆಧರಿಸಿಯೇ ರಚನೆಯಾಗಿರುವುದರಿಂದ, ಸಾಂಪ್ರದಾಯಿಕ ಕಾನೂನುಗಳು ಹಾಗೂ ಆಚರಣೆಗಳಲ್ಲಿದ್ದ ಪುರುಷ ಪ್ರಧಾನತೆಯೇ ಸ್ವಾತಂತ್ರ್ಯಾನಂತರ ಹಾಗೂ ಸಂವಿಧಾನದ ನಂತರವೂ ಕಾನೂನುಗಳಲ್ಲಿ ಮುಂದುವರಿದಿದೆ.

**ದತ್ತಕ :** ದತ್ತಕ ಎಂಬುದು ಹಿಂದೂ ಧರ್ಮಕ್ಕೆ ವಿಶಿಷ್ಟವಾದ ಪರಿಕಲ್ಪನೆ. ಹಿಂದೂ ಧರ್ಮದಲ್ಲಿ ವಿವಾಹದ ಮುಖ್ಯ ಉದ್ದೇಶ ಮಕ್ಕಳನ್ನು ಪಡೆಯುವುದು. ಅದರಲ್ಲೂ ಗಂಡು ಮಕ್ಕಳನ್ನು ಪಡೆದು ವಂಶ ಮುಂದುವರಿಯುವಂತೆ ನೋಡಿಕೊಳ್ಳುವುದು. ಏಕೆಂದರೆ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ವಂಶ ಮುಂದುವರಿಯುವುದು ಗಂಡುಮಕ್ಕಳಿಂದ, ಕುಟುಂಬದ ಆಸ್ತಿಯನ್ನು ಪಡೆಯಲು ಹಕ್ಕಿರುವುದೂ ಗಂಡು ಮಕ್ಕಳಿಗೆ ಮತ್ತು ಗಂಡು ಮಕ್ಕಳಿಗೆ ಮಾತ್ರವೇ ತನ್ನ ಪೂರ್ವಜರಿಗೆ ಪಿಂಡ ಪ್ರದಾನ ಮಾಡಿ ಕರ್ಮಗಳಿಂದ ಮುಕ್ತರನ್ನಾಗಿಸುವ ಹಕ್ಕು ಇರುವುದು. ಇದು ಶತಶತಮಾನಗಳಿಂದ ಹಿಂದೂ ಧರ್ಮದಲ್ಲಿ

ಆಳವಾಗಿ ಬೇರುಬಿಟ್ಟಿರುವ ನಂಬಿಕೆ. ಹೆಣ್ಣುಮಕ್ಕಳನ್ನು ದತ್ತುತೆಗೆದುಕೊಳ್ಳಲು ಅವಕಾಶವಿಲ್ಲದೆ ಇದ್ದುದಕ್ಕೂ ಈ ನಂಬಿಕೆಯೇ ಕಾರಣ. "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ನಂಬಿಕೆಯಿಂದಾಗಿಯೇ ಒಬ್ಬ ಹೆಂಡತಿಯಲ್ಲಿ ಮಕ್ಕಳಾಗದಿದ್ದಲ್ಲಿ ಮತ್ತೊಂದು ವಿವಾಹವಾಗಲೂ ಧರ್ಮದ ಅನುಮತಿ ಇತ್ತು. ಹೀಗೆ ದತ್ತು ತೆಗೆದುಕೊಂಡ ಪುತ್ರ ಎಲ್ಲರೀತಿಯಲ್ಲಿಯೂ ದತ್ತುಪಡೆದ ತಂದೆತಾಯಿಯರ ಸಹಜ ಪುತ್ರನ ಸ್ಥಾನಮಾನವನ್ನು ಪಡೆಯುತ್ತಿದ್ದ. ಹೀಗಾಗಿ ಗಂಡು ಸಂತಾನವಿಲ್ಲದ ದಂಪತಿಗಳ ಸಮಸ್ಯೆಗೆ ಧರ್ಮಶಾಸ್ತ್ರಜ್ಞರು ಕಂಡುಹಿಡಿದ ಏಕೈಕ ಮಾರ್ಗವೆಂದರೆ ಬೇರೊಂದು ವಂಶಕ್ಕೆ ಸೇರಿದ ಗಂಡು ಮಗುವನ್ನು ದತ್ತು ಪುತ್ರನನ್ನಾಗಿ ಪಡೆಯುವುದು. ಧಾರ್ಮಿಕ ವಿಧಿವಿಧಾನಗಳನ್ನು ಅನುಸರಿಸಿ ಗಂಡುಮಗುವನ್ನು ದತ್ತು ಪಡೆದ ಮೇಲೆ ಧರ್ಮಶಾಸ್ತ್ರಗಳು ಅವರ ನಡುವೆ ತಂದೆ-ತಾಯಿ ಮತ್ತು ಮಗನ ಸಂಬಂಧವನ್ನು ಕೃತಕವಾಗಿ ಸೃಷ್ಟಿಸುತ್ತದೆ, ಮಾನ್ಯಮಾಡುತ್ತದೆ. ಇದರಿಂದಾಗಿ ಸಹಜ ಪುತ್ರನಿಗಿರುವ ಎಲ್ಲ ಹಕ್ಕುಬಾಧ್ಯತೆಗಳು ಹಾಗೂ ಸ್ಥಾನಮಾನಗಳೂ ದತ್ತು ಪುತ್ರನಿಗೆ ಪ್ರಾಪ್ತವಾಗುತ್ತದೆ. ಇದು, ೧೯೫೬ರಲ್ಲಿ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ ಜಾರಿಗೆ ಬರುವವರೆಗೆ ಇದ್ದ ಪರಿಸ್ಥಿತಿ.

೧೯೫೬ರಲ್ಲಿ ಈ ಕಾನೂನನ್ನು ಜಾರಿಗೆ ತರುವ ಮೂಲಕ ಸಾಂಪ್ರದಾಯಿಕವಾಗಿ ಜಾರಿಯಲ್ಲಿದ್ದ ಈ ಪದ್ಧತಿಗೆ ಕಾನೂನಿನ ರೂಪವನ್ನು ನೀಡಲಾಯಿತು. ಸಾಂಪ್ರದಾಯಿಕ ಪದ್ಧತಿಯಲ್ಲಿದ್ದ ಅಂಶಗಳನ್ನು ಕಾನೂನಿನಲ್ಲಿ ಅಳವಡಿಸಿಕೊಳ್ಳುವುದರ ಜೊತೆಗೆ ಕೆಲವೊಂದು ಪ್ರಗತಿಗಾಮಿಯೆನಿಸುವ ಬದಲಾವಣೆಗಳನ್ನೂ ಅದರಲ್ಲಿ ಮಾಡಲಾಯಿತು.

ಹೆಣ್ಣು ಮಗುವನ್ನು ದತ್ತುಪಡೆಯುವುದಕ್ಕಾಗಲೀ ಮಹಿಳೆಯರು ಮಗುವನ್ನು ದತ್ತು ಪಡೆಯುವುದಕ್ಕಾಗಲೀ ಹಿಂದೂ ಧರ್ಮಶಾಸ್ತ್ರದಲ್ಲಿ ಅವಕಾಶವಿರಲಿಲ್ಲ. ಆದರೆ ೧೯೫೬ರ ಕಾನೂನಿನಲ್ಲಿ ಅದಕ್ಕೆ ಅವಕಾಶ ಕಲ್ಪಿಸಲಾಯಿತು. ಅದರ ಪ್ರಕಾರ ಮುಂದಿನ ಮಹಿಳೆಯರು ತಮ್ಮ ಹೆಸರಿನಲ್ಲಿಯೇ ಮಗುವನ್ನು ದತ್ತುಪಡೆಯಬಹುದು.

೧. ಅವಿವಾಹಿತ ಸ್ತ್ರೀ

೨. ವಿವಾಹ ವಿಚ್ಛೇದನೆ ಪಡೆದ ಸ್ತ್ರೀ

೩. ವಿಧವೆ

೪. ಪತಿಯು ಸನ್ಯಾಸಿಯಾಗಿದ್ದರೆ ಅವನ ಪತ್ನಿ

೫. ಹಿಂದೂಧರ್ಮವನ್ನು ಪತಿ ತ್ಯಜಿಸಿದ್ದರೆ ಅವನ ಪತ್ನಿ

೬. ಪತಿ ಅಸ್ವಸ್ಥಚಿತ್ತನೆಂದು ಸಕ್ಷಮ ನ್ಯಾಯಾಲಯ ಘೋಷಿಸಿದ್ದರೆ ಅಂಥವನ ಪತ್ನಿ.

ದತ್ತುಪಡೆಯುವವರು ಸ್ವಸ್ಥಚಿತ್ತರಾಗಿದ್ದು ಪ್ರಾಪ್ತವಯಸ್ಕರಾಗಿರಬೇಕು.

ಈ ಕಾನೂನಿನ ಪ್ರಕಾರ ಹಿಂದೂ ಪುರುಷ ಅವಿವಾಹಿತರಾಗಿದ್ದರೂ ಸಹ ದತ್ತು ಪಡೆಯಬಹುದಾಗಿದೆ. ವಿವಾಹಿತನಾಗಿದ್ದರೆ ಅವನು ದತ್ತುಪಡೆಯಲು ಪತ್ನಿಯ ಒಪ್ಪಿಗೆ ಪಡೆಯಬೇಕು.

ಆದರೆ ಹಿಂದೂ ವಿವಾಹಿತ ಪತ್ನಿ ಮಾತ್ರ ಈ ಪ್ರಗತಿಪರ ಕಾನೂನು ಜಾರಿಯಾದ ನಂತರವೂ, ಪತಿಯ ಒಪ್ಪಿಗೆ ಪಡೆದರೂ ದತ್ತುಪಡೆಯುವ ಹಕ್ಕನ್ನು ಹೊಂದಿಲ್ಲ. ಈ ಮಟ್ಟಿಗೆ ಈ ತಾರತಮ್ಯ ಉಳಿದುಕೊಂಡೇ ಬಂದಿದೆ. ವಿಧವೆ, ವಿಚ್ಛೇದಿತ ಮಹಿಳೆ ಮತ್ತು ಅವಿವಾಹಿತ ಸ್ತ್ರೀಗೆ ಇರುವ ಹಕ್ಕು ಸಹ ವಿವಾಹಿತ ಮಹಿಳೆಗೆ ಇಲ್ಲದಿರುವುದು, ಪಿತೃಪ್ರಧಾನ ಕುಟುಂಬದಲ್ಲಿ ಅವಳ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಮೊಟಕುಗೊಳಿಸುವ ಹುನ್ನಾರ ಎಂದೇ ಹೇಳಬೇಕು. ಪತಿಯಂತೆಯೇ ಅವಳಿಗೂ ಪತಿಯ ಸಮ್ಮತಿಯೊಂದಿಗೆ ದತ್ತುಪಡೆಯುವ ಹಕ್ಕು ನೀಡಿದಿದ್ದರೆ, ಕುಟುಂಬದಲ್ಲಿ ಪತಿಗಿರುವಂತೆಯೇ ಅವಳಿಗೂ ದತ್ತು ಪಡೆಯುವ ಸಮಾನಹಕ್ಕನ್ನು ನೀಡಿದಂತಾಗುತ್ತಿತ್ತು. ಇಂಥ ಸಮಾನತೆ ವಾಸ್ತವಿಕ ಸಮಾನತೆಯಾಗಿ ಹಕ್ಕು ಚಲಾಯಿಸುವ ಅವಕಾಶ ಒದಗುತ್ತಿದ್ದುದರ ಬಗ್ಗೆ ಅನುಮಾನವಿದ್ದರೂ, ಈ ಔಪಚಾರಿಕ ಸಮಾನತೆ ವಾಸ್ತವಿಕ ಸಮಾನತೆಯನ್ನು ಸಾಧಿಸುವತ್ತ ಇಡುವ ಒಂದು ಹೆಜ್ಜೆಯಾಗುತ್ತಿತ್ತು.

೧೯೯೪ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ಕ್ಕೆ ತಿದ್ದುಪಡಿ ಮಾಡಿ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೂ ಗಂಡುಮಕ್ಕಳೊಂದಿಗೆ ಸಮಾನ ಹಕ್ಕು ನೀಡಲಾಯಿತು. ಈ ತಿದ್ದುಪಡಿಗೆ ಮುನ್ನ, ಪಿತ್ರಾರ್ಜಿತ ಆಸ್ತಿಗೆ ಗಂಡುಮಗು ಮಾತ್ರವೇ ಹುಟ್ಟಿನಿಂದಲೇ ಹಕ್ಕುದಾರನಾಗುತ್ತಿದ್ದ. ಹಿಂದೂ ಧರ್ಮದಲ್ಲಿ ದತ್ತುಪುತ್ರ ಸಹಜ ಪುತ್ರನ ಸ್ಥಾನಮಾನವನ್ನೇ ಪಡೆಯುವುದರಿಂದ ಆಸ್ತಿಗೂ ಸಹಜ ಪುತ್ರನಂತೆಯೇ ಹಕ್ಕುದಾರನಾಗುತ್ತಿದ್ದ. ಆಸ್ತಿಯ ವಾರಸುದಾರಿಕೆ ಹಾಗೂ ನಿಯಂತ್ರಣ ಸಂಪೂರ್ಣವಾಗಿ ಕುಟುಂಬದ ಪುರುಷರ ಅಧೀನದಲ್ಲಿದ್ದುದರಿಂದ ಮಹಿಳೆ ಸಹಜವಾಗಿಯೇ ದತ್ತು ಪಡೆಯುವ ಹಕ್ಕಿನಿಂದ ವಂಚಿತಳಾದಳು. ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಹಿಂದೂ ವಿಧವೆಗೂ ದತ್ತು ಪಡೆಯುವ ಹಕ್ಕು ಇರಲಿಲ್ಲ. ವಿಧವೆ ತನ್ನ ಗಂಡನ ಸಾವಿಗೆ ಮುಂಚೆ ಅವನಿಂದ ಅನುಮತಿ ಪಡೆದಿದ್ದರೆ ಮಾತ್ರ ಅವಳು ಅವನ ಮರಣಾನಂತರ ದತ್ತು ಪಡೆಯಬಹುದಿತ್ತು. ಹಾಗೆ ಅನುಮತಿ ಪಡೆಯದಿದ್ದರೆ, ವಿಧವೆಯ ಮರಣಾನಂತರ, ಮಿತಾಕ್ಷರ ಪದ್ಧತಿಯ ಆಸ್ತಿವಾರಸುದಾರಿಕೆಯ ಪ್ರಕಾರ, ವಿಧವೆಯ ಆಸ್ತಿ, ಅವಳಿಗೆ ಮಕ್ಕಳಿಲ್ಲದುದ್ದರ ಕಾರಣ, ಯಾರಿಗೆ ಸೇರುತ್ತಿತ್ತೋ, ಆ ದಾಯಾದಿಗಳ ಅನುಮತಿಯನ್ನು ಪಡೆಯಬೇಕಿತ್ತು. ಇದಕ್ಕೆ ಕಾರಣ ಮತ್ತೆ ಆಸ್ತಿ ವಾರಸುದಾರಿಕೆಯ ಪದ್ಧತಿಯೇ. ೧೯೫೬ರಲ್ಲಿ ಹಿಂದೂ ಉತ್ತಾರಾಧಿಕಾರ ಕಾನೂನು ಜಾರಿಗೆ ಬರುವ ಮುನ್ನ ಮಹಿಳೆ ತನ್ನ ಪತಿಯಿಂದ ಬರುವ ಆಸ್ತಿಯ ಮೇಲೆ ಸೀಮಿತ ಹಕ್ಕನ್ನು ಮಾತ್ರ ಹೊಂದಿರುತ್ತಿದ್ದಳು. ಎಂದರೆ ಅವಳು ತನ್ನ ಜೀವಿತಾವಧಿಯವರೆಗೆ ಅದನ್ನು ಅನುಭವಿಸುತ್ತಿದ್ದಳು. ಅನಂತರ ಅದು ದಾಯಾದಿಗಳಿಗೆ ಹಿಂತಿರುಗುತ್ತಿತ್ತು. ಅಂಥ ಕಾನೂನು ಜಾರಿಯಲ್ಲಿದ್ದ ಹಿನ್ನೆಲೆಯಲ್ಲಿ,

ಆಸ್ತಿಯಲ್ಲಿ ದಾಯಾದಿಗಳ ಜೊತೆಯಲ್ಲಿ ಸಮಾನವಾಗಿ ಆಸ್ತಿಗೆ ಪಾಲುದಾರನಾಗುವ ದತ್ತುಪುತ್ರನನ್ನು ಪಡೆಯುವ ನಿರ್ಧಾರವನ್ನು ಕೈಗೊಳ್ಳುವ ಸ್ವಾತಂತ್ರ್ಯವನ್ನು ವಿಧವೆ ಮಹಿಳೆಗೆ ಕೊಡುವುದು ಆಸ್ತಿ ನಿಯಂತ್ರಣ ಹೊಂದಿರುವ ಪುರುಷ ಪ್ರಧಾನ ಕುಟುಂಬದ ಸದಸ್ಯರಿಗೆ ಒಲ್ಲದ ವಿಚಾರವಾಗಿತ್ತು. ಹೀಗಾಗಿ ಮಹಿಳೆಯರನ್ನು ಸಂಪೂರ್ಣವಾಗಿ ದತ್ತು ಪಡೆಯುವ ಹಕ್ಕಿನಿಂದ ವಂಚಿತರನ್ನಾಗಿಸಲಾಗಿತ್ತು. ಆದರೆ, ೧೯೫೬ರ ಕಾನೂನು ಜಾರಿಗೆ ಬಂದ ನಂತರ, ಮಹಿಳೆ ಯಾವುದೇ ರೀತಿಯಲ್ಲಿ ಪಡೆದಿರುವ ಆಸ್ತಿಯ ಮೇಲೆ ನಿರುಪಾಧಿಕ ಹಕ್ಕನ್ನು ಹೊಂದಿರುತ್ತಾಳೆ. ಎಂದರೆ, ೧೯೫೬ರ ನಂತರ ಆಸ್ತಿಯ ಮೇಲೆ ಅವಳಿಗಿರುವ ಸೀಮಿತ ಹಕ್ಕು ನಿರುಪಾಧಿಕ ಹಕ್ಕಾಗಿ ವಿಕಸನಗೊಳ್ಳುತ್ತದೆ. ಎಂದರೆ ಅದನ್ನು ಅನುಭವಿಸುವ ತನ್ನಿಚ್ಛೆಯಂತೆ ಮಾರಾಟ ಮಾಡುವ ದಾನಮಾಡುವ ಸಂಪೂರ್ಣ ಹಕ್ಕನ್ನು ಹೊಂದಿರುತ್ತಾಳೆ. ಆಸ್ತಿಯ ಮೇಲೆ ಅವಳು ನಿಯಂತ್ರಣ ಹೊಂದಿದುದರಿಂದ, ಸಹಜ ಪುತ್ರನ ಸ್ಥಾನ ಪಡೆದು ಆಸ್ತಿಗೂ ಹಕ್ಕುದಾರ ನಾಗುವವನನ್ನು ದತ್ತು ತೆಗೆದುಕೊಳ್ಳಲು ಅವಳಿಗೆ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಮೇರೆಗೆ ಹಕ್ಕು ನೀಡಲಾಯಿತು.

೧೯೫೬ರ ಹಿಂದೂ ಉತ್ತಾರಾಧಿಕಾರ ಅಧಿನಿಯಮದ ಮತ್ತೊಂದು ಪ್ರಗತಿಪರ ಸಮಾನತೆಯ ಉಪಬಂಧವೆಂದರೆ, ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಗಂಡುಮಕ್ಕಳೊಡನೆ ಸಮಾನವಾಗಿ ಪಾಲು ಪಡೆಯುವ ಹಕ್ಕನ್ನು ನೀಡಿದುದು. ಇದರ ಪರಿಣಾಮವಾಗಿ, ಅವಿವಾಹಿತ ಹೆಣ್ಣುಮಕ್ಕಳಿಗೂ ದತ್ತು ಪಡೆಯುವ ಹಕ್ಕನ್ನು ನೀಡಲಾಯಿತು.

ಮಹಿಳೆಯರಿಗೆ ದತ್ತಕದಲ್ಲಿ ನೀಡಲಾದ ಸಮಾನತೆಯ ಹಕ್ಕಿಗೆ, ಆಸ್ತಿಯಲ್ಲಿ ಅವರಿಗೆ ನಿರುಪಾಧಿಕ ಹಕ್ಕುಗಳನ್ನು ನೀಡಿದುದೇ ಕಾರಣ. ಪುರುಷಪ್ರಧಾನ ಸಮಾಜದಲ್ಲಿ ಪುರುಷರು ಹೊಂದಿದ್ದ ಆಸ್ತಿಯ ಮೇಲಿನ ನಿಯಂತ್ರಣ ಮಹಿಳೆಯರನ್ನು ಸಮಾನತೆಯಿಂದ ವಂಚಿಸಲು ಬಹುಮಟ್ಟಿಗೆ ಕಾರಣವಾಗಿರುವುದು ಸಂಪ್ರದಾಯಿಕ ಕಾನೂನುಗಳು ಹಾಗೂ ಆ ನಂತರ ಬಂದ ಕಾನೂನುಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ.

ತಂದೆ ಜೀವಂತ ಇದ್ದಲ್ಲಿ ತಂದೆ ಮಾತ್ರವೇ ತನ್ನ ಮಗುವನ್ನು ದತ್ತುಕೊಡಬಹುದಾಗಿರುತ್ತದೆ. ಆದರೆ ಮಗುವಿನ ತಾಯಿಯ ಒಪ್ಪಿಗೆಯನ್ನು ಪಡೆಯುವುದು ಕಡ್ಡಾಯ. ಆದರೆ ತಾಯಿ ಪ್ರಪಂಚವನ್ನು ತ್ಯಜಿಸಿದ್ದರೆ, ಮತಾಂತರ ಹೊಂದಿದ್ದರೆ ಅಥವಾ ಅಸ್ವಸ್ಥಚಿತ್ತಳೆಂದು ನ್ಯಾಯಾಲಯದಿಂದ ನಿರ್ಣೀತಳಾಗಿದ್ದರೆ ಮಾತ್ರವೇ ತಾಯಿಯ ಒಪ್ಪಿಗೆ ಪಡೆಯದೆಯೇ ತಂದೆ ಮಗುವನ್ನು ದತ್ತು ಕೊಡಬಹುದು.

ದತ್ತುಪಡೆಯಲು ತಾಯಿಗೆ ಇರುವ ನಿರ್ಬಂಧಗಳೇ ಮಗುವನ್ನು ದತ್ತುಕೊಡುವಾಗಲೂ ಅನ್ವಯಿಸುತ್ತವೆ. ಹೀಗಾಗಿ ಪತಿಯ ಒಪ್ಪಿಗೆ ಪಡೆದು ದತ್ತು ಕೊಡುವ ಹಕ್ಕನ್ನು ಹಿಂದೂ ಪತ್ನಿ ಈಗಲೂ ಹಿಂದೂ ಪತ್ನಿ ಈಗಲೂ ಹೊಂದಿಲ್ಲ.

ಈ ಅಧಿನಿಯಮದ ಮೇರೆಗೆ ಒಂದು ಗಂಡು ಹಾಗೂ ಒಂದು ಹೆಣ್ಣು ಮಗುವನ್ನು ಮಾತ್ರ ದತ್ತು ಪಡೆಯಬಹುದು. ಇಬ್ಬರು ಗಂಡುಮಕ್ಕಳನ್ನಾಗಲೀ ಇಬ್ಬರು ಹೆಣ್ಣು ಮಕ್ಕಳನ್ನಾಗಲೀ ಅಥವಾ ಇಬ್ಬರಿಗಿಂತ ಹೆಚ್ಚು ಮಕ್ಕಳನ್ನಾಗಲೀ ದತ್ತು ಪಡೆಯುವಂತಿಲ್ಲ.

ಮಹಾರಾಷ್ಟ್ರ ರಾಜ್ಯ ೧೯೭೫ರಲ್ಲಿ ಮಹಾರಾಷ್ಟ್ರ ದತ್ತಕ ಅಧಿನಿಯಮವನ್ನು ಜಾರಿಗೊಳಿಸಿ ಕಾನೂನಿನಲ್ಲಿರುವ ಸ್ತ್ರೀಪುರುಷ ಅಸಮಾನತೆಯನ್ನು ಸಂಪೂರ್ಣವಾಗಿ ನಿವಾರಿಸಿದೆ. ಹಾಗೂ ದತ್ತಕ ಮಗುವಿನ ಕಲ್ಯಾಣ ಎಲ್ಲಕ್ಕಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿದೆ.

ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಪ್ರಕಾರ ದತ್ತುಪಡೆಯುವುದು ಅಥವಾ ಕೊಡುವುದು ಅಧಿನಿಯಮದ ಮೇರೆಗೆ ದತ್ತುಪಡೆಯಲು ಅಥವಾ ಕೊಡಲು ಹಕ್ಕು ಹೊಂದಿರುವ ಹಿಂದೂ ಪುರುಷ ಅಥವಾ ಇತರ ವ್ಯಕ್ತಿಯ ವೈಯಕ್ತಿಕ ವ್ಯವಹಾರವಾದ್ದರಿಂದ ದತ್ತುಕೊಡುವ ವ್ಯಕ್ತಿಗೆ ನ್ಯಾಯಾಲಯದ ಅನುಮತಿ ಅಥವಾ ಆದೇಶ ಪಡೆಯುವುದು ಅಗತ್ಯವಿಲ್ಲ. ಇಲ್ಲಿ ಧಾರ್ಮಿಕ ಕಾರಣಗಳಿಗಾಗಿ ಮಗುವನ್ನು ದತ್ತು ಪಡೆಯಲು ಅನುಕೂಲ ಮಾಡಿಕೊಡುವುದೇ ಮುಖ್ಯ ಉದ್ದೇಶವಾಗಿದೆ. ದತ್ತುಕೊಡುವುದು ಮಗುವಿನ ಪೋಷಕನಾಗಿದ್ದಾಗ ನ್ಯಾಯಾಲಯದ ಅನುಮತಿ ಅಗತ್ಯ. ಹೀಗಾಗಿ ಈ ಅಧಿನಿಯಮದಲ್ಲಿ ಮಗುವಿನ ಹಿತಾಸಕ್ತಿಯ ಮೇಲೆ ನಿಯಂತ್ರಣ ಹೊಂದಲು ಯಾವುದೇ ಕ್ರಮವಿಲ್ಲ. ಆದರೆ ಮಹಾರಾಷ್ಟ್ರದ ಅಧಿನಿಯಮ ಈ ನ್ಯೂನತೆಯನ್ನು ನಿವಾರಿಸಿ, ದತ್ತಕವನ್ನು ಜಿಲ್ಲಾ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸುವ ಮೂಲಕ ಮಾತ್ರವೇ ಮಾಡಬೇಕೆಂದು ವಿಧಿಸಿದೆ.

ಹಿಂದೂ ಧರ್ಮವನ್ನುಳಿದು ಯಾವುದೇ ಧರ್ಮದ ಸಂಪ್ರದಾಯ ಅಥವಾ ವೈಯಕ್ತಿಕ ಕಾನೂನಿನಲ್ಲಿ ದತ್ತಕಕ್ಕೆ ಮನ್ನಣೆಯಿಲ್ಲ. ಆದ್ದರಿಂದ ಮುಸಲ್ಮಾನರು, ಕ್ರಿಶ್ಚಿಯನ್ನರು, ಪಾರ್ಸಿಗಳು ಮಗುವನ್ನು 'ದತ್ತು' ಪಡೆಯಬೇಕಾದರೆ, ''ಪೋಷಕರು ಮತ್ತು ಪರಿಪಾಲಿತರ ಅಧಿನಿಯಮ, ೧೮೯೦''ರ ಅಡಿಯಲ್ಲಿ ಪೋಷಕರ ಸಾಮರ್ಥ್ಯದಲ್ಲಿ ಪಡೆಯಬಹುದು. ಆದರೆ ಇಲ್ಲಿ ದತ್ತು ಪಡೆದ ಮಗುವಿಗೆ ಸಹಜ ಮಗುವಿನ ಸ್ಥಾನಮಾನವಾಗಲೀ ಹಕ್ಕುಗಳಾಗಲೀ ಪ್ರಾಪ್ತವಾಗುವುದಿಲ್ಲ. ದತ್ತು ಪಡೆದ ತಂದೆ ತಾಯಿಯರೂ ಸಹಜ ತಂದೆತಾಯಿಯರೆನಿಸುವುದಿಲ್ಲ. ಅವರಿಬ್ಬರ ನಡುವಿನ ಸಂಬಂಧ ''ಪೋಷಕ-ಪರಿಪಾಲಿತ''ರ ಸಂಬಂಧ.

ದತ್ತಕಕ್ಕೆ ಸಂಬಂಧಿಸಿದಂತೆ ಎಲ್ಲ ಧರ್ಮಿಯರಿಗೂ ಅನ್ವಯಿಸುವಂಥ ಒಂದು ಏಕರೂಪದ ಕಾನೂನನ್ನು ಜಾರಿಗೊಳಿಸುವ ಪ್ರಯತ್ನವನ್ನು ಮಕ್ಕಳ ದತ್ತಕ ವಿಧೇಯಕ, ೧೯೭೨ನ್ನು ಸಂಸತ್ತಿನಲ್ಲಿ ಮಂಡಿಸುವ ಮೂಲಕ ಮಾಡಲಾಯಿತು. ದತ್ತು ಪಡೆಯಲಿಚ್ಛಿಸುವ ಇತರ ಧರ್ಮೀಯರಿಗೆ ಅಂಥ ಅವಕಾಶವನ್ನು ಕಲ್ಪಿಸುವುದು ಇದರ ಉದ್ದೇಶವಾಗಿತ್ತು. ಆದರೆ ಆಯ್ಕೆಯ ಅವಕಾಶವಿರುವ ಇಂತಹ ಒಂದು ಕಾನೂನನ್ನು ಸಹ ಸಂಪ್ರದಾಯವಾದಿ ಮುಸ್ಲಿಮರು ವಿರೋಧಿಸಿದರು. ಅವರ ಒತ್ತಾಯಕ್ಕೆ

ಮಣಿದ ಸರ್ಕಾರ ವಿಧೇಯಕವನ್ನು ಹಿಂತೆಗೆದುಕೊಳ್ಳಬೇಕಾಯಿತು. ದತ್ತುಪಡೆಯುವುದು ತಮ್ಮ ಧರ್ಮಕ್ಕೆ ವಿರೋಧ ಎಂಬ ಭಾವನೆಯುಳ್ಳವರಿಗೆ ಇದು ಯಾವುದೇ ರೀತಿಯ ತೊಂದರೆಯನ್ನುಂಟು ಮಾಡುತ್ತಿರಲಿಲ್ಲ. ಆದರೆ ಮಕ್ಕಳಿಗಾಗಿ ಹಂಬಲಿಸುವ ದಂಪತಿಗಳಿಗೆ ದತ್ತಕ ಸ್ವೀಕಾರ ಮಾಡುವ ಒಂದು ಅವಕಾಶವನ್ನು ಇದು ಕಲ್ಪಿಸಿಕೊಡುತ್ತಿತ್ತಲ್ಲದೆ, ಪಾಲನೆಯ ಅಗತ್ಯವಿರುವ ಅನೇಕ ಮಕ್ಕಳಿಗೆ ಇದು ವರವಾಗಿ ಪರಿಣಮಿಸುತ್ತಿತ್ತು.

ಇಂಥ ವಿರೋಧಕ್ಕೆ ಮುನ್ನ ಆ ಧರ್ಮದ ಮಹಿಳೆಯರ ಭಾವನೆಗಳು ಹಾಗೂ ಅನಿಸಿಕೆಗಳನ್ನು ವ್ಯಕ್ತಪಡಿಸಲು ಅವಕಾಶದೊರೆತಿರಬಹುದೇ? ಮಹಾರಾಷ್ಟ್ರ ಸರ್ಕಾರ ಮಂಡಿಸಿರುವ ಮಹಾರಾಷ್ಟ್ರ ದತ್ತಕ ವಿಧೇಯಕ(ಇದಕ್ಕೆ ಇನ್ನೂ ರಾಷ್ಟ್ರಾಧ್ಯಕ್ಷರ ಅನುಮೋದನೆ ದೊರೆಯಬೇಕಾಗಿದೆ) ಮತ, ಜಾತಿ ಅಥವಾ ಲಿಂಗಗಳ ಪ್ರತಿಬಂಧವಿಲ್ಲದೆ ಎಲ್ಲ ನಾಗರಿಕರಿಗೂ ಒಂದೇ ರೀತಿಯಲ್ಲಿ ಅನ್ವಯಿಸುತ್ತದೆ. ಇದು ಸ್ತ್ರೀಪುರುಷ ಸಮಾನತೆಯನ್ನು ಸಾಧಿಸುವಲ್ಲಿ ಇಟ್ಟ ದಿಟ್ಟಹೆಜ್ಜೆ.

**ಪೋಷಕತ್ವ ಮತ್ತು ಅಭಿರಕ್ಷೆ :** ಪೋಷಕತ್ವ ಮತ್ತು ಅಭಿರಕ್ಷೆಗೆ ಸಂಬಂಧಿಸಿದಂತೆ, ಪೋಷಕರು ಮತ್ತು ಪರಿಪಾಲಿಕರ ಅಧಿನಿಯಮ ೧೮೯೦ ಎಲ್ಲ ಧರ್ಮದವರಿಗೂ ಏಕಪ್ರಕಾರವಾಗಿ ಅನ್ವಯಿಸುತ್ತದೆ. (ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಇದು ಅನ್ವಯಿಸುವುದಿಲ್ಲ) ಎಲ್ಲ ಪದ್ಧತಿಗಳ ಎಲ್ಲ ವೈಯಕ್ತಿಕ ಕಾನೂನುಗಳಲ್ಲಿರುವ ಸಂಪ್ರದಾಯಿಕ ನಂಬಿಕೆಯಂತೆ, ಇದರ ಪ್ರಕಾರ ತಂದೆ ಮಗುವಿನ ಸಹಜ ಪೋಷಕ ಮತ್ತು ಮಗುವಿನ ಮೇಲೆ ಸಂಪೂರ್ಣ ಹಕ್ಕುಗಳನ್ನು ಹೊಂದಿರುತ್ತಾನೆ.

ಹಿಂದೂಗಳಿಗೆ ಅನ್ವಯಿಸುವ ಹಿಂದೂ ಅಪ್ರಾಪ್ತ ವಯಸ್ಕತೆ ಮತ್ತು ಪೋಷಕತ್ವ ಅಧಿನಿಯಮ, ೧೯೫೬ ಮೇಲಿನ ಅಧಿನಿಯಮಕ್ಕೆ ಪೂರಕವಾದದ್ದು, ಎಂದರೆ ಇಲ್ಲಿರುವ ಉಪಬಂಧಗಳು ಮೇಲಿನ ಅಧಿನಿಯಮದ ಉಪಬಂಧಗಳಿಗೆ ಪೂರಕವಾಗಿ ಅನ್ವಯಿಸುತ್ತದೆಯೇ ವಿನಃ ಅದಕ್ಕೆ ಬದಲಾಗಿ ಅಲ್ಲ.

ಈ ಅಧಿನಿಯಮದಲ್ಲಿಯೂ ಅಪ್ರಾಪ್ತವಯಸ್ಕ ಹುಡುಗ ಅಥವಾ ಅವಿವಾಹಿತ ಹುಡುಗಿಯ ಸಹಜ ಪೋಷಕ ಮೊದಲು ತಂದೆಯೇ. ಅನಂತರ ಮಾತ್ರವೇ ತಾಯಿ. ಹುಡುಗ ಅಥವಾ ಅವಿವಾಹಿತ ಹುಡುಗಿ ಜಾರಜ ಮಕ್ಕಳಾಗಿದ್ದರೆ ಆಗ ಆ ಮಕ್ಕಳಿಗೆ ತಾಯಿಯೇ ಮೊದಲು ಸಹಜ ಪೋಷಕಳಾಗುತ್ತಾಳೆ. ಆ ತರುವಾಯ ತಂದೆ ಪೋಷಕನಾಗುತ್ತಾನೆ. ವಿವಾಹಿತ ಸ್ತ್ರೀಯ ಸಂದರ್ಭದಲ್ಲಿ ಪತಿ ಪೋಷಕನೆನಿಸಿಕೊಳ್ಳುತ್ತಾನೆ.

ಅಪ್ರಾಪ್ತ ವಯಸ್ಕ ಮಗ ಅಥವಾ ಮಗಳ ಪೋಷಕ ಮೊದಲು ತಂದೆ ಆ ತರುವಾಯ ತಾಯಿ ಆದರೂ, ಮಗುವಿನ ಅಭಿರಕ್ಷೆ ಮಗುವಿಗೆ ೫ ವರ್ಷಗಳು ತುಂಬುವವರೆಗೆ ತಾಯಿಯದೇ ಆಗಿರುತ್ತದೆ. ಇಲ್ಲಿ ಪೋಷಕತ್ವ ಎಂದರೆ ಅಪ್ರಾಪ್ತವಯಸ್ಕ ಮಗುವನ್ನು ಅಥವಾ ಮಗುವಿನ ಆಸ್ತಿಯನ್ನು ಅಥವಾ

ಮಗು ಮತ್ತು ಅದರ ಆಸ್ತಿ ಎರಡನ್ನೂ ನೋಡಿಕೊಳ್ಳುವುದು. ಅಭಿರಕ್ಷೆ ಎಂದರೆ ಮಗು ಯಾರ ಬಳಿ ಇರಬೇಕು ಎಂಬುದು.

ಮಹಿಳೆ ಕೇವಲ ಮಗುವಿನ ಲಾಲನೆ ಪಾಲನೆ ಮಾಡುವುದಕ್ಕಷ್ಟೇ ಯೋಗ್ಯಳು, ಮಗುವಿಗೆ ಐದು ವರ್ಷವಾದ ನಂತರ ಮಗುವನ್ನು ನೋಡಿಕೊಳ್ಳಲು ಮತ್ತು ಅದರ ಭವಿಷ್ಯವನ್ನು ರೂಪಿಸಲು ಯೋಗ್ಯಳಲ್ಲ ಎಂಬ ಪೂರ್ವಭಾವನೆಯೊಂದಿಗೆ ಈ ಶಾಸನ ರಚನೆಯಾಗಿದೆ.

ತಾಯಿಗೆ ನೀಡಿರುವ ಈ ಸೀಮಿತ ಹಕ್ಕುಗಳೂ ಸಹ ಕಡ್ಡಾಯವಾಗಿ ಕೊಡಲೇ ಬೇಕಾಗಿರುವ ಹಕ್ಕುಗಳಲ್ಲ. ಇವು ಕೇವಲ ನಿರ್ದೇಶನಾತ್ಮಕವಾದವುಗಳು. ತಾಯಿ ಮಗುವನ್ನು ತನ್ನ ಬಳಿ ಇರಿಸಿಕೊಳ್ಳಲೂ ಯೋಗ್ಯಳಲ್ಲ ಎಂಬುದನ್ನು ತಂದೆ ಸಾಕಷ್ಟು ಕಾರಣಗಳನ್ನು ನೀಡಿ ರುಜುವಾತು ಪಡಿಸಿದರೆ, ತಾಯಿಯನ್ನು ಈ ಸೀಮಿತ ಹಕ್ಕಿನಿಂದಲೂ ವಂಚಿತಳನ್ನಾಗಿಸಬಹುದು.

ಭಾರತದ ಸಂವಿಧಾನವನ್ನು ದೇಶಕ್ಕೆ ಸಮರ್ಪಿಸಿಕೊಂಡ ಆರು ವರ್ಷಗಳ ನಂತರ ಈ ಕಾನೂನು ಜಾರಿಯಲ್ಲಿ ಬಂದಿದ್ದರೂ ಸಹ, ಹಕ್ಕುಗಳ ನೀಡಿಕೆಯಲ್ಲಿ ಸ್ತ್ರೀಪುರುಷರ ನಡುವೆ ತಾರತಮ್ಯವೆಸಗಲಾಗಿದೆ. ಸೂಕ್ತ ಶಿಕ್ಷಣವಿಲ್ಲದ, ಆರ್ಥಿಕವಾಗಿ ಸ್ವತಂತ್ರಳಲ್ಲದ ಮಹಿಳೆ ಈ ಮಗುವಿನ ಜವಾಬ್ದಾರಿಯನ್ನು ನಿರ್ವಹಿಸಲಾರಳು ಎಂಬುದು ಇದರ ಹಿಂದಿನ ಶಾಸನ ರಚನಕಾರರ ಉದ್ದೇಶವಿರಬಹುದು. ಆದರೆ ಕಾಲಕ್ಕೆ ತಕ್ಕಂತೆ ಕಾನೂನುಗಳು ಬದಲಾಗಬೇಕು. ಬದಲಾದ ಸಾಮಾಜಿಕ ಸನ್ನಿವೇಶಗಳಿಗೆ ಸ್ಪಂದಿಸಬೇಕು. ಇಲ್ಲದಿದ್ದಲ್ಲಿ ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಮಹಿಳೆ ಉನ್ನತಿಯನ್ನು ಸಾಧಿಸಿದರೂ ಐವತ್ತು ವರ್ಷಗಳಷ್ಟು ಹಿಂದೆ ರಚಿತವಾದ ಕಾನೂನುಗಳ ಪರಿಧಿಯಲ್ಲೇ ತನ್ನ ಹಕ್ಕುಗಳನ್ನು ಚಲಾಯಿಸಬೇಕಾಗುತ್ತದೆ.

ಬದಲಾದ ಮಹಿಳೆಯ ಸ್ಥಾನಮಾನ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಪರಿಗಣಿಸಿ ಕಟ್ಟುನಿಟ್ಟಾದ ಕಾನೂನಿನಾಚೆಯೂ ಕಾನೂನನ್ನು ವಿಸ್ತರಿಸಿ ವ್ಯಾಖ್ಯಾನಿಸುವ ಮೂಲಕ ನ್ಯಾಯಾಧೀಶರು ಮಹಿಳೆಯರಿಗೆ ವಾಸ್ತವಿಕ ನ್ಯಾಯವನ್ನೊದಗಿಸಿರುವ ಸಂದರ್ಭಗಳೂ ಇಲ್ಲದಿಲ್ಲ. ಆದರೆ ಕಾನೂನಿನಲ್ಲಿ ಸ್ಪಷ್ಟವಾಗಿ ಸ್ತ್ರೀಪುರುಷ ಸಮಾನತೆಯನ್ನು ನೀಡಿಲ್ಲದ ಸಂದರ್ಭದಲ್ಲಿ, ಕಾನೂನಿನ ಚೌಕಟ್ಟಿನೊಳಗೆ ಕಾನೂನನ್ನು ಅಕ್ಷರಶಃ ವ್ಯಾಖ್ಯಾನ ಮಾಡಿ ತೀರ್ಪು ನೀಡಿದಲ್ಲಿ ಮಹಿಳೆ ವಾಸ್ತವಿಕ ಸಮಾನತೆಯ ನ್ಯಾಯದಿಂದ ವಂಚಿತಳಾಗುವ ಅಪಾಯವೂ ಇಲ್ಲದಿಲ್ಲ. ಆದ್ದರಿಂದ ಯಾವುದೇ ಕಾರಣಕ್ಕೂ ಮಹಿಳೆ ವಾಸ್ತವಿಕ ನ್ಯಾಯದಿಂದ ವಂಚಿತಳಾಗದಿರುವ ರೀತಿಯಲ್ಲಿ ಕಾನೂನಿನಲ್ಲೇ ಸ್ಪಷ್ಟ ಉಪಬಂಧ ಕಲ್ಪಿಸುವುದು ಮಹಿಳೆಗೆ ಸಮಾನಹಕ್ಕು ನೀಡಿಕೆಯ ದೃಷ್ಟಿಯಿಂದ ಅಗತ್ಯವಾಗುತ್ತದೆ.

## ಭಾಗ ೨ ಕ್ರಿಮಿನಲ್ ಕಾನೂನುಗಳು

### ವರದಕ್ಷಿಣೆ

ವರದಕ್ಷಿಣೆಯ ಪಿಡುಗು ಒಂದು ಸಾಮಾಜಿಕ ಪಿಡುಗಾಗಿರುವುದರಿಂದ, ಮಹಿಳೆಯ ಸ್ಥಾನಮಾನವನ್ನು ಉತ್ತಮಪಡಿಸುವ ಮೂಲಕ ಮತ್ತು ಮಹಿಳೆಯನ್ನು ಆರ್ಥಿಕವಾಗಿ ಸ್ವಾವಲಂಬಿಯನ್ನಾಗಿಸುವ ಮೂಲಕ ಈ ಪಿಡುಗನ್ನೂ ಸ್ವಲ್ಪಮಟ್ಟಿಗಾದರೂ ನಿವಾರಿಸಬಹುದೆಂದು ಭಾವಿಸಿ ೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮವನ್ನು ಜಾರಿಗೊಳಿಸಿ ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಗಂಡುಮಕ್ಕಳಿಗಿರುವಷ್ಟೇ ಹಕ್ಕನ್ನು ಹೆಣ್ಣುಮಕ್ಕಳಿಗೂ ನೀಡಲಾಯಿತು. ಆದರೆ ವರದಕ್ಷಿಣೆಯಂಥ ಆಳವಾಗಿ ಬೇರುಬಿಟ್ಟಿರುವ ಪಿಡುಗನ್ನು ನಿವಾರಿಸಲು ಈ ಪರೋಕ್ಷ ಕ್ರಮಗಳಿಂದ ಸ್ವಲ್ಪಮಟ್ಟಿಗಿನ ಸಹಾಯವಾಗಬಹುದಷ್ಟೇ. ಈ ಪದ್ಧತಿಯನ್ನು ಒಂದು ಅಪರಾಧವನ್ನಾಗಿಸಿ, ಅಪರಾಧವೆಸಗಿದವರಿಗೆ ಶಿಕ್ಷೆಯ ಭಯ ಮೂಡಿಸಿ ಅಪರಾಧದ ನಿಯಂತ್ರಣಕ್ಕೆ ಕ್ರಮಕೈಗೊಳ್ಳುವ ಪ್ರತ್ಯಕ್ಷ ಕ್ರಮಗಳು ಅತ್ಯಗತ್ಯ. ಅಲ್ಲದೆ ಇಂಥ ಕಾನೂನಿನ ರಚನೆಗೆ ಸಾರ್ವಜನಿಕರ ಹಾಗೂ ಸಂಸದರ ಬೇಡಿಕೆ ಮತ್ತು ಒತ್ತಾಯಗಳೂ ಬಂದದ್ದರಿಂದ ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮವನ್ನು ಜಾರಿಗೊಳಿಸಲಾಯಿತು. ಈ ಕಾನೂನಿನಲ್ಲಿ ವರದಕ್ಷಿಣೆ ಬೇಡುವುದನ್ನು ಹಾಗೂ ಕೊಡುವುದನ್ನು ಅಪರಾಧವನ್ನಾಗಿಸಲಾಯಿತು. ಹಾಗೆ ಪಡೆದವರು ಹಾಗೂ ನೀಡಿದವರು ಇಬ್ಬರೂ ದಂಡನೆಗೆ ಒಳಪಡುತ್ತಾರೆಂದು ಉಪಬಂಧ ಕಲ್ಪಿಸಲಾಯಿತು. ಆದರೆ ೧೯೬೧ರಲ್ಲಿ ಜಾರಿಗೆ ತಂದ ವರದಕ್ಷಿಣೆ ನಿಷೇದ ಅಧಿನಿಯಮ ಅನೇಕ ನ್ಯೂನತೆಗಳಿಂದ ಕೂಡಿತ್ತು. ಇದರ ಪ್ರಕಾರ, ಯಾವುದೇ ಆಸ್ತಿ ಅಥವಾ ಮೌಲಿಕ ಭದ್ರತೆಯನ್ನು 'ವಿವಾಹಕ್ಕೆ ಪ್ರತಿಫಲ'ವಾಗಿ ನೀಡಿದರೆ ಅದು 'ವರದಕ್ಷಿಣೆ'ಯ ವ್ಯಾಪ್ತಿಗೆ ಸೇರುತ್ತಿತ್ತು. ಕಾನೂನಿನ ಅಕ್ಷರಶಃ ವ್ಯಾಖ್ಯಾನ ಕಾನೂನಿನ ಆಶಯವನ್ನೇ ವಿಫಲಗೊಳಿಸಿ ಕಾನೂನು ಪರಿಣಾಮಕಾರಿಯಾಗದಂತೆ ಮಾಡಿಬಿಡಬಲ್ಲುದು ಎನ್ನುವುದಕ್ಕೆ ವರದಕ್ಷಿಣೆ ನಿಷೇಧ ಅಧಿನಿಯಮದಲ್ಲಿ ಬಳಸಿದ್ದ 'ವಿವಾಹಕ್ಕೆ ಪ್ರತಿಫಲವಾಗಿ ಕೊಟ್ಟಿದ್ದರೆ' ಎಂಬ ಪದಗಳು ಉತ್ತಮ ಉದಾಹರಣೆ. 'ವಿವಾಹಕ್ಕೆ ಪ್ರತಿಫಲವಾಗಿ' ಎಂಬುದಕ್ಕೆ ವಿವಾಹದ ಸಮಯದಲ್ಲಿ ಕೊಡುವುದಾಗಿ ಒಪ್ಪಿಕೊಂಡ ಆಸ್ತಿ ಮತ್ತು ವಸ್ತುಗಳಿಗೆ ಸೀಮಿತಗೊಳಿಸಿ, ಆ ನಂತರದ ಬೇಡಿಕೆಗಳನ್ನು 'ವರದಕ್ಷಿಣೆ' ವ್ಯಾಪ್ತಿಯಲ್ಲಿ ಸೇರುವುದಿಲ್ಲವೆಂದು ವ್ಯಾಖ್ಯಾನಿಸಲಾಯಿತು. ಹಾಗಾಗಿ 'ವರದಕ್ಷಿಣೆ'ಯ ಎಷ್ಟೋ ಪ್ರಕರಣಗಳು ಈ ಕಾನೂನಿನ ಮುಷ್ಟಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಯಿತು. ಈ ಕಾನೂನಿನ ಪ್ರಕಾರ ವರದಕ್ಷಿಣೆ ಬೇಡಿದನೆಂಬ ಕಾರಣಕ್ಕೆ ಅವನನ್ನು ಕಾನೂನಿನ ವಿಚಾರಣೆಗೆ ಗುರಿಪಡಿಸಲು, ಸರ್ಕಾರದ ಪೂರ್ವಾನುಮತಿ ಪಡೆಯಬೇಕಿತ್ತು ಮತ್ತು ತೊಂದರೆಗೊಳಗಾದ ವ್ಯಕ್ತಿಯೇ ಒಂದು ವರ್ಷದೊಳಗಾಗಿ ದೂರು ನೀಡಬೇಕಿತ್ತು.

ಈ ಎಲ್ಲ ಕ್ರಮಗಳೂ ಮೇಲ್ನೋಟಕ್ಕೆ ಉತ್ತಮ ಕ್ರಮಗಳೆಂದು ಕಂಡರೂ ಅನುಷ್ಠಾನದ ಹಂತದಲ್ಲಿ ಅವೆಲ್ಲವೂ ವಿಫಲವಾದವು. ಈ ಅಧಿನಿಯಮ ಪರಿಣಾಮಕಾರಿಯಾಗಿಲ್ಲವೆಂಬುದು ವಿವಿಧ ಹಂತಗಳಲ್ಲಿ ರುಜುವಾತಾಗಿತ್ತು. ಮೊದಲನೆಯದಾಗಿ ಈ ಅಧಿನಿಯಮದ ಅಡಿಯಲ್ಲಿ ದಾಖಲಾದ ಪ್ರಕರಣಗಳ ಸಂಖ್ಯೆ ತೀರ ಕಡಿಮೆ. ಅಧಿನಿಯಮ ಜಾರಿಗೊಂಡಾಗಿನಿಂದ ಅದು ತಿದ್ದುಪಡಿಯಾಗುವವರೆಗೆ ಎಂದರೆ ಸುಮಾರು ಹದಿನಾಲ್ಕು ವರ್ಷಗಳ ಅವಧಿಯಲ್ಲಿ ಈ ಅಧಿನಿಯಮದ ಅಡಿಯಲ್ಲಿ ಅಪರಾಧ ಸಾಬೀತಾದುದು ಕೇವಲ ಆರು ಪ್ರಕರಣಗಳಲ್ಲಿ. ಆದ್ದರಿಂದ ಈ ಕಾನೂನು ಜನರಲ್ಲಿ ಭಯವನ್ನುಂಟು ಮಾಡುವಲ್ಲಿ ವಿಫಲವಾಯಿತೆಂದೇ ಹೇಳಬಹುದು. ಶಂಕರ್ ರಾವ್ -ವಿ-ಎಲ್.ವಿ.ಜಾದವ್ ಪ್ರಕಣದಲ್ಲಿ(೧೯೮೩ ೪ ಎಸ್‌ಸಿಸಿ ೨೩೧) ದಂಪತಿಗಳನ್ನು ವಿದೇಶಕ್ಕೆ ಕಳುಹಿಸುವುದಕ್ಕಾಗಿ ವಧುವಿನ ತಂದೆಯಿಂದ ೫೦,೦೦೦ ರೂಗಳನ್ನು ಬೇಡಿದುದು ವರದಕ್ಷಿಣೆ ಆಗುವುದಿಲ್ಲ ಎಂದು ಮುಂಬಯಿ ಉಚ್ಚನ್ಯಾಯಾಲಯ ತೀರ್ಪುನೀಡಿತು. ವಧುವಿನ ತಂದೆ ತಾಯಿಯರು ಈ ಹಣವನ್ನು ಕೊಡಲು ವಿವಾಹದ ಸಮಯದಲ್ಲಿ ಒಪ್ಪಿಕೊಂಡಿರಲಿಲ್ಲ ವಾದ್ದರಿಂದ ಅದು "ಮದುವೆಗೆ ಪ್ರತಿಫಲ"ವಾಗಿ ಕೊಟ್ಟ ಹಣ ಎನಿಸಿಕೊಳ್ಳುವುದಿಲ್ಲ. ವಿವಾಹದ ನಂತರ ಏನನ್ನೇ ಕೊಟ್ಟರೂ, ಅದನ್ನು ಕೊಡುವುದಾಗಿ ವಿವಾಹದ ಸಮಯದಲ್ಲಿ ಒಪ್ಪಿಕೊಂಡಿದ್ದರೆ ಅಥವಾ ವಚನ ನೀಡಿದ್ದರೆ ಮಾತ್ರ ಅದು ವರದಕ್ಷಿಣೆಯೆನಿಸಿಕೊಳ್ಳುತ್ತದೆ ಎಂದು ವ್ಯಾಖ್ಯಾನಿಸಲಾಯಿತು. ಈ ವ್ಯಾಖ್ಯಾನ ಅಧಿನಿಯಮದ ಆಶಯಕ್ಕೆ ತದ್ವಿರುದ್ಧವಾದುದು. ಇದನ್ನು ಒಪ್ಪಿಕೊಂಡರೆ ಈ ಅಧಿನಿಯಮವನ್ನು ಜಾರಿಗೊಳಿಸಿದುದರ ಉದ್ದೇಶವೇ ಸಂಪೂರ್ಣವಾಗಿ ವಿಫಲವಾಗಿಬಿಡುತ್ತದೆ. ಎರಡನೆಯದಾಗಿ, ಅಧಿನಿಯಮ ಜಾರಿಯಲ್ಲಿದ್ದರೂ ಅದನ್ನು ಸಂಪೂರ್ಣವಾಗಿ ಉಲ್ಲಂಘಿಸಿ, ಹಿಂದಿನಿಂದಲೂ ರೂಢಿಯಲ್ಲಿ ಬಂದ ಪದ್ಧತಿ ಇಂದಿಗೂ ಒಂದು ಸಾಮಾಜಿಕ ವ್ಯವಸ್ಥೆಯಾಗಿ ಸಮಾಜದ ಒಪ್ಪಿಗೆ ಪಡೆದು ಬೇರುಬಿಟ್ಟಿರುವುದು.

ಮೂರನೆಯದಾಗಿ, ಮಹಿಳೆ ತನ್ನ ಗಂಡನ ಮನೆಯಲ್ಲಿ ಅನುಭವಿಸುವ ಹಿಂಸೆಗೆ ವರದಕ್ಷಿಣೆಯೇ ಕಾರಣ ಎಂದು ಭಾವಿಸಿ ಎಲ್ಲ ಸಾವುಗಳು ಹಾಗೂ ಕೊಲೆಗಳನ್ನು ವರದಕ್ಷಿಣೆ ಸಾವು ಎಂದು ವರ್ಗೀಕರಿಸಿ ಆ ಬಗ್ಗೆ ಸಂವೇದನೆಯನ್ನೇ ಕಳೆದುಕೊಂಡಿರುವುದು.

೧೯೮೦ರ ದಶಕದ ಪ್ರಾರಂಭದಲ್ಲಿ, ಭಾರತದೆಲ್ಲೆಡೆ ಹೆಚ್ಚುತ್ತಿರುವ ವರದಕ್ಷಿಣೆ ಸಾವುಗಳ ಬಗ್ಗೆ ಸಾರ್ವಜನಿಕ ವಿರೋಧ ವ್ಯಕ್ತವಾಯಿತು. ವರದಕ್ಷಿಣೆ ಸಾವು ಅಥವಾ ವಧೂ ದಹನ ಭಾರತೀಯ ಮಹಿಳೆಯರಲ್ಲಿ ಅದರಲ್ಲೂ ಹಿಂದೂಗಳಲ್ಲಿ ಹೆಚ್ಚಾಗಿದ್ದು ಅದನ್ನು ತಡೆಗಟ್ಟಲು ಇನ್ನೂ ಕಟ್ಟುನಿಟ್ಟಾದ ಕಾನೂನನ್ನು ರಚಿಸಬೇಕೆಂದು ಹಾಗೂ ಅಪರಾಧಿಗಳಿಗೆ ವಿಧಿಸುವ ಶಿಕ್ಷೆಯನ್ನು ಹೆಚ್ಚಿಸಬೇಕೆಂಬ ಬಗ್ಗೆ ಒತ್ತಾಯ ತೀವ್ರವಾಯಿತು. ಇದಕ್ಕೆ ಮಣಿದು ವರದಕ್ಷಿಣೆ ನಿಷೇಧ ಅಧಿನಿಯಮಕ್ಕೆ ತಿದ್ದುಪಡಿ ತರಲಾಯಿತು. ಆದರೆ ವಾಸ್ತವದಲ್ಲಿ ಹೆಚ್ಚು ಕಟ್ಟುನಿಟ್ಟಾದ ಕಾನೂನನ್ನು ರಚಿಸುವ ಅಥವಾ ಅಪರಾಧಿಗಳಿಗೆ

ವಿಧಿಸುವ ಶಿಕ್ಷೆಯನ್ನು ಹೆಚ್ಚಿಸುವ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿರುವ ಒಂದು ಪಿಡುಗನ್ನು ಹೋಗಲಾಡಿಸಲು ಸಾಧ್ಯವಿಲ್ಲ ಎಂಬುದನ್ನು ಮಹಿಳಾ ಚಳವಳಿಗಾರರಾಗಲೀ ಕಾನೂನು ರಚನಕಾರರಾಗಲೀ ಮನಗಾಣದೇ ಹೋದರು. ಈ ಕ್ರಮಗಳು ಪಿಡುಗನ್ನು ನಿವಾರಿಸಲು ಸಹಾಯಕವಾಗಬಹುದೇ ವಿನಃ ಅವೇ ಪಿಡುಗನ್ನು ಸಂಪೂರ್ಣವಾಗಿ ನಿವಾರಿಸಲಾರವು ಎಂಬುದನ್ನು ತಿದ್ದುಪಡಿಯ ನಂತರದ ಅಂಕಿ ಅಂಶಗಳು ತೋರಿಸಿಕೊಟ್ಟವು.

೧೯೮೦ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮ ೧೯೬೧ಕ್ಕೆ ಕೆಲವೊಂದು ತಿದ್ದುಪಡಿಗಳನ್ನು ಮಾಡಿ ವಿಧೇಯಕವನ್ನು ಮಂಡಿಸಿದಾಗ ಅದನ್ನು ಸಂಸತ್ತು ಉಭಯಸದನಗಳ ಜಂಟಿಸಮಿತಿಗೆ ಪರಿಶೀಲನೆಗಾಗಿ ಒಪ್ಪಿಸಿತು. ಜಂಟಿ ಸಮಿತಿ ಪ್ರಸ್ತಾವಿತ ತಿದ್ದುಪಡಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಕೆಲವೊಂದು ಶಿಫಾರಸ್ಸುಗಳನ್ನು ಹಾಗೂ ತಿದ್ದುಪಡಿಗಳನ್ನು ಸೂಚಿಸಿತು. ಇವುಗಳಲ್ಲಿ ಕೆಲವೇ ಕೆಲವನ್ನು ೧೯೮೪ರಲ್ಲಿ ಅಧಿನಿಯಮಕ್ಕೆ ತಂದ ತಿದ್ದುಪಡಿಯಲ್ಲಿ ಅಳವಡಿಸಿಕೊಳ್ಳಲಾಯಿತು. ಮುಖ್ಯವಾಗಿ, ಕಾನೂನಿನ ಉದ್ದೇಶವನ್ನು ವಿಫಲಗೊಳಿಸುವಂತೆ ವ್ಯಾಖ್ಯಾನಿಸಬಹುದಾದ "ವಿವಾಹಕ್ಕೆ ಪ್ರತಿಫಲವಾಗಿ" ಎಂಬ ಪದಗಳಿಗೆ ಬದಲಾಗಿ "ವಿವಾಹದ ಸಂಬಂಧದಲ್ಲಿ" ಎಂಬ ಪದಗಳನ್ನು ಇಡಲಾಯಿತು. ೧೯೮೪ರಲ್ಲಿ ಮಾಡಿದ ಮುಖ್ಯ ತಿದ್ದುಪಡಿಗಳೆಂದರೆ

೧. ಶಿಕ್ಷೆಯನ್ನು ಹೆಚ್ಚಿಸಲಾಯಿತು.

೨. ದೂರು ನೀಡಲು ವಿಧಿಸಿದ್ದ ಒಂದು ವರ್ಷದ ಕಾಲಮಿತಿಯನ್ನು ತೆಗೆದು ಹಾಕಲಾಯಿತು.

೩. ವಧುವಿನ ಪರವಾಗಿ ಇತರರು ದೂರುಕೊಡಲು ಅವಕಾಶ ನೀಡಲಾಯಿತು.

೪. ವರದಕ್ಷಿಣೆ ನೀಡುವಂತೆ ಒತ್ತಾಯಿಸಿದವನನ್ನು ದಸ್ತಗಿರಿ ಮಾಡಲು ಸರ್ಕಾರದ ಪೂರ್ವಾನುಮತಿ ಪಡೆಯಬೇಕೆನ್ನುವುದನ್ನು ತೆಗೆದು ಹಾಕಲಾಯಿತು.

೫. ವರದಕ್ಷಿಣೆ ಪಡೆಯುವುದನ್ನು ಸಂಜ್ಞೇಯ ಅಪರಾಧವನ್ನಾಗಿ ಮಾಡಲಾಯಿತು.

೧೯೮೬ರ ತಿದ್ದುಪಡಿಯ ಮೂಲಕ ಅಧಿನಿಯಮವನ್ನು ಮತ್ತಷ್ಟು ಕಟ್ಟುನಿಟ್ಟುಗೊಳಿಸಲಾಯಿತು.

**೧೯೮೬ರ ತಿದ್ದುಪಡಿಯ ಮುಖ್ಯಾಂಶಗಳೆಂದರೆ**

೧. ಜುಲ್ಮಾನೆಯನ್ನು ೧೫,೦೦೦ ರೂಗಳಿಗೆ ಏರಿಸಲಾಯಿತು.

೨. ತಾನು ಅಪರಾಧವನ್ನು ಮಾಡಿಲ್ಲವೆಂದು ರುಜುವಾತುಪಡಿಸುವ ಹೊಣೆಯನ್ನು ಆರೋಪಿಗೆ ವರ್ಗಾಯಿಸಲಾಯಿತು.

೩. ವರದಕ್ಷಿಣೆಯನ್ನು ಜಾಮೀನೀಯವಲ್ಲದ ಅಪರಾಧವನ್ನಾಗಿ ಮಾಡಲಾಯಿತು.

೪. ವರದಕ್ಷಿಣೆ ಕೊಡುವುದಾಗಿ ತಿಳಿಸುವ ಜಾಹಿರಾತುಗಳಿಗೆ ನಿಷೇಧ ವಿಧಿಸಲಾಯಿತು.

೫. ಮಹಿಳೆ ಅಸಹಜವಾಗಿ ಮರಣಗೊಂಡಲ್ಲಿ, ಅವಳ ಆಸ್ತಿ ಅವಳ ಮಕ್ಕಳಿಗೆ ಪ್ರಾಪ್ತವಾಗಬೇಕು. ಅವಳಿಗೆ ಮಕ್ಕಳಿಲ್ಲದಿದ್ದಲ್ಲಿ, ಅವಳ ಆಸ್ತಿ ಅವಳ ತಂದೆತಾಯಿಯರಿಗೆ ಮರಳಿ ಹೋಗಬೇಕು ಎಂಬ ಉಪಬಂಧ ಕಲ್ಪಿಸಲಾಯಿತು.

ಕಳೆದ ಕೆಲವು ವರ್ಷಗಳಿಂದ ಭಾರತದಾದ್ಯಂತ ಅತಿ ಹೆಚ್ಚಿನ ಸ್ತ್ರೀ ದಹನ ಹಾಗೂ ಅತ್ಯಾಚಾರದ ಪ್ರಕರಣಗಳು ದಾಖಲಾಗಿವೆ. ೧೯೮೩ರಲ್ಲಿ ದೆಹಲಿಯಲ್ಲಿ ಪ್ರತಿ ದಿನವೂ ಸರಾಸರಿ ಇಬ್ಬರು ಮಹಿಳೆಯರು ಸುಟ್ಟ ಗಾಯಗಳಿಂದ ಸಾವನ್ನಪ್ಪಿದ್ದಾರೆ. ಮುಂಬಯಿಯಲ್ಲಿ ೧೯೮೪ರಲ್ಲಿ ಎಂಟು ತಿಂಗಳ ಅವಧಿಯ ಸಮೀಕ್ಷೆಯ ಪ್ರಕಾರ ಪ್ರತಿ ಐದು ದಿನಗಳಿಗೆ ಒಬ್ಬ ಮಹಿಳೆ ಸುಟ್ಟ ಗಾಯಗಳಿಗೆ ಬಲಿಯಾಗುತ್ತಿದ್ದಳು. ಬೆಂಗಳೂರಿನಲ್ಲಿ ೧೯೮೪ರಲ್ಲಿ ಆತ್ಮಹತ್ಯೆ ಹಾಗೂ ವರದಕ್ಷಿಣೆ ಸಾವುಗಳ ಸಂಖ್ಯೆ ಅದರ ಹಿಂದಿನ ವರ್ಷಗಳಿಗಿಂತ ದುಪ್ಪಟ್ಟಾಗಿತ್ತು.

ಭಾರತ ದಂಡಸಂಹಿತಗೆ ೧೯೮೬ರಲ್ಲಿ ತಿದ್ದುಪಡಿ ಮಾಡುವ ಮೂಲಕ ವರದಕ್ಷಿಣೆ ಸಾವಿನ ಅಪರಾಧವನ್ನು ೩೦೪ ಬಿ ಪ್ರಕರಣದ ಅಡಿಯಲ್ಲಿ ಸೇರಿಸಲಾಗಿದೆ. ಇದು ವರದಕ್ಷಿಣೆ ಸಾವನ್ನು ಪರಿಭಾಷಿಸುತ್ತದೆ.

೩೦೪ ಬಿ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ವರದಕ್ಷಿಣೆ ಸಾವಿನ ಅಪರಾಧ ಎಂದರೆ "ಮಹಿಳೆಯ ಸಾವು ಮದುವೆಯಾದ ಏಳು ವರ್ಷಗಳೊಳಗೆ ಸುಟ್ಟ ಗಾಯಗಳಿಂದ ಅಥವಾ ದೈಹಿಕ ಗಾಯಗಳಿಂದ ಅಥವಾ ಸಹಜ ಸಂದರ್ಭಗಳಲ್ಲಿ ಅಲ್ಲದೆ ಅನ್ಯಥಾ ಉಂಟಾದರೆ, ಮತ್ತು ಅವಳ ಸಾವಿಗೆ ನಿಕಟಪೂರ್ವದಲ್ಲಿ ವರದಕ್ಷಿಣೆಗಾಗಿ ಅಥವಾ ವರದಕ್ಷಿಣೆಯ ಸಂಬಂಧದಲ್ಲಿ ಅವಳ ಪತಿಯಿಂದ ಅಥವಾ ಅವಳ ಪತಿಯ ಸಂಬಂಧಿಯಿಂದ ಅವಳು ಹಿಂಸೆಗೆ ಅಥವಾ ಕಿರುಕುಳಕ್ಕೆ ಗುರಿಯಾಗಿದ್ದಳು ಎಂಬುದನ್ನು ರುಜುವಾತು ಪಡಿಸಲಾದರೆ ಅಂಥ ಸಾವನ್ನು 'ವರದಕ್ಷಿಣೆ ಸಾವು' ಎಂದು ಕರೆಯತಕ್ಕುದು ಮತ್ತು ಅಂಥ ಪತಿ ಅಥವಾ ಸಂಬಂಧಿ ಈ ಸಾವಿಗೆ ಕಾರಣ ಎಂಬುದಾಗಿ ಭಾವಿಸತಕ್ಕುದು".

ವರದಕ್ಷಿಣೆ ಸಾವನ್ನುಂಟು ಮಾಡಿದ ಯಾವನೇ ವ್ಯಕ್ತಿಗೆ ಏಳು ವರ್ಷಗಳಿಗೆ ಕಡಿಮೆಯಿಲ್ಲದ ಅಥವಾ ಜೀವಾವಧಿ ಕಾರಾವಾಸ ಶಿಕ್ಷೆಯನ್ನು ವಿಧಿಸತಕ್ಕುದು ಎಂದು ಉಪಬಂಧಿಸಲಾಗಿದೆ.

ಇದಕ್ಕೆ ಪೂರಕವಾಗಿ, ಭಾರತದ ಸಾಕ್ಷ್ಯ ಅಧಿನಿಯಮಕ್ಕೆ ೧೧೩-ಎ ಹೊಸ ಪ್ರಕರಣವನ್ನು ಸೇರಿಸಿ ಈ ಮುಂದಿನ ಸಂದರ್ಭಗಳಲ್ಲಿ ದುಷ್ಪ್ರೇರಣೆಯನ್ನು ನೀಡಲಾಯಿತು ಎಂಬ ಪೂರ್ವಭಾವನೆ ಮಾಡಬಹುದು ಎಂಬುದನ್ನು ತಿಳಿಸಲಾಗಿದೆ.

ಮೊದಲನೆಯದಾಗಿ, ಮಹಿಳೆ ಮದುವೆಯಾದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಎರಡನೆಯದಾಗಿ ಅವಳ ಪತಿ ಅಥವಾ ಅವಳ ಯಾರೇ ಸಂಬಂಧಿ ಅವಳನ್ನು ಹಿಂಸೆಗೆ ಗುರುಪಡಿಸಿದ್ದ ಸಂದರ್ಭಗಳಲ್ಲಿ, ಅಂಥ ಆತ್ಮಹತ್ಯೆಗೆ ಪತಿ ಅಥವಾ ಅಂಥ ಸಂಬಂಧಿ ದುಷ್ಪ್ರೇರಣೆ ನೀಡಿದ್ದಾನೆಂದು ಪೂರ್ವಭಾವನೆ ಮಾಡಿಕೊಳ್ಳಲು ಈ ಪ್ರಕರಣ ಉಪಬಂಧಿಸುತ್ತದೆ. ಹಾಗೆ ದುಷ್ಪ್ರೇರಣೆ ನೀಡಿದ ವ್ಯಕ್ತಿಗೆ ಆ ಅಪರಾಧಕ್ಕಾಗಿ ವಿಧಿಸುವ ಶಿಕ್ಷೆಯನ್ನು ವಿಧಿಸತಕ್ಕುದು ಎಂದು ಭಾರತ ದಂಡ ಸಂಹಿತೆ ವಿಧಿಸುತ್ತದೆ.(ಭಾರತ ದಂಡ ಸಂಹಿತೆ ೧೯೮ನೇ ಪ್ರಕರಣ)

ಇಂಥ ಅಪರಾಧಗಳನ್ನು ರುಜುವಾತು ಪಡಿಸಬೇಕಾದರೆ, 'ಹಿಂಸೆ' ಎಂಬುದನ್ನು ಪರಿಭಾಷಿಸುವುದು-ಅಗತ್ಯ. ಇದನ್ನು ೧೯೮೩ರಲ್ಲಿ ಭಾರತದ ದಂಡಸಂಹಿತೆಗೆ ಸೇರಿಸಿದ ೪೯೮ ಎ ಪ್ರಕರಣ ಹಾಗೂ ಅದಕ್ಕೆ ನೀಡಿರುವ ವಿವರಣೆಯಲ್ಲಿ ಪರಿಭಾಷಿಸಲಾಯಿತು. ಇದರ ಉದ್ದೇಶ ವಿವಾಹದ ನಂತರ ಹೆಚ್ಚಿನ ವರದಕ್ಷಿಣೆಗಾಗಿ ಅಥವಾ ಆಸ್ತಿಗಾಗಿ ಪತ್ನಿಯನ್ನು ಹಿಂಸಿಸುವ ಪತಿ ಮತ್ತು ಅವನ ಸಂಬಂಧಿಗಳನ್ನು ಶಿಕ್ಷೆಗೆ ಗುರಿಪಡಿಸುವುದೇ ಆಗಿದೆ.

೪೯೮ ಎ -ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿಕ ಅವಳನ್ನು ಹಿಂಸೆಗೆ ಗುರಿಪಡಿಸುವುದು, ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿಯಾಗಿರುವ ಯಾವನೇ ವ್ಯಕ್ತಿ ಅಂಥ ಮಹಿಳೆಯನ್ನು ಹಿಂಸೆಗೆ ಗುರಿಪಡಿಸಿದರೆ ಅವನು ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ದಂಡಿತನಾಗತಕ್ಕುದು ಮತ್ತು ಜುಲ್ಮಾನೆಗೂ ಬದ್ಧನಾಗತಕ್ಕುದು.

ವಿವರಣೆ - ಈ ಪ್ರಕರಣದ ಉದ್ದೇಶಕ್ಕಾಗಿ 'ಹಿಂಸೆ' ಎಂದರೆ

೧. ಮಹಿಳೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಪ್ರಚೋದಿಸುವ ಸ್ವರೂಪದ ಅಥವಾ ಅವಳ ಜೀವಕ್ಕೆ, ಅಂಗಗಳಿಗೆ ಅಥವಾ(ದೈಹಿಕ ಅಥವಾ ಮಾನಸಿಕ) ಆರೋಗ್ಯಕ್ಕೆ ತೀವ್ರ ಗಾಯ ಅಥವಾ ಹಾನಿ ಉಂಟು ಮಾಡುವ ಸಂಭವಿರುವ ಯಾವುದೇ ಉದ್ದೇಶಪೂರ್ವಕ ವರ್ತನೆ, ಅಥವಾ

೨. ಯಾವುದೇ ಆಸ್ತಿ ಅಥವಾ ಮೌಲಿಕ ಭದ್ರತೆಯ ಯಾವುದೇ ಕಾನೂನು ಬಾಹಿರ ಬೇಡಿಕೆಯನ್ನು ಪೂರೈಸುವಂತೆ ಮಹಿಳೆಯನ್ನು ಅಥವಾ ಅವಳ ಸಂಬಂಧಿಯನ್ನು ಬಲಾತ್ಕಾರಪಡಿಸುವ ದೃಷ್ಟಿಯಿಂದ ಮಹಿಳೆಗೆ ನೀಡಲಾದ ಕಿರುಕುಳ ಅಥವಾ ಅವಳು ಅಥವಾ ಅವಳ ಸಂಬಂಧಿ ಅಂಥ ಬೇಡಿಕೆಯನ್ನು ಪೂರೈಸಲು ವಿಫಲರಾದರೆಂಬ ಕಾರಣಕ್ಕಾಗಿ ನೀಡಲಾದ ಕಿರುಕುಳ.

ಭಾರತ ದಂಡ ಸಂಹಿತೆಯನ್ನು ತಿದ್ದುಪಡಿ ಮಾಡುವುದರೊಂದಿಗೆ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಗೂ ಸೂಕ್ತ ತಿದ್ದುಪಡಿ ತರಲಾಯಿತು. ಮೇಲೆ ಹೇಳಿದ ಭಾರತ ದಂಡ ಸಂಹಿತೆಯ ೪೯೮ಎ ಪ್ರಕರಣದ ಮೇರೆಗೆ

ಅಪರಾಧವೆನಿಸುವ ಒಂದು ಕೃತ್ಯದ ಬಗ್ಗೆ ಯಾರು ದೂರು ಸಲ್ಲಿಸಬಹುದು ಎಂಬುದನ್ನು ೧೯೮ ಎ ಪ್ರಕರಣವನ್ನು ಸೇರಿಸಿ ಅದರಲ್ಲಿ ಸ್ಪಷ್ಟಪಡಿಸಲಾಗಿದೆ.

- ಮೇಲಿನ ಪ್ರಕರಣದ ಅಡಿಯಲ್ಲಿ ಅಪರಾಧವಾಗುವ ಕೃತ್ಯದ ವಿವರಗಳ ವರದಿಯನ್ನು ಪೊಲೀಸು ಅಧಿಕಾರಿ ಸಲ್ಲಿಸಬೇಕು.
- ಕ್ರೌರ್ಯಕ್ಕೆ ಒಳಗಾದ ವ್ಯಕ್ತಿ ಅಥವಾ ಅವಳ ತಂದೆ, ತಾಯಿ, ಸೋದರ, ಸೋದರಿ ಅಥವಾ ತಂದೆ ಅಥವಾ ತಾಯಿಯ ಸೋದರ, ಸೋದರಿ ಒಂದು ದೂರನ್ನು ಸಲ್ಲಿಸಬೇಕು.
- ನ್ಯಾಯಾಲಯದ ಅನುಮತಿ ಪಡೆದು ಅವಳ ರಕ್ತ ಸಂಬಂಧಿ, ವೈವಾಹಿಕ ಅಥವಾ ದತ್ತಕ ಸಂಬಂಧಿಕಯಾದ ಯಾವನೇ ವ್ಯಕ್ತಿ ದೂರನ್ನು ಸಲ್ಲಿಸಬಹುದು.

ಈ ಉಪಬಂಧಗಳಿಂದಾಗಿ, ಪತಿಯ ಕ್ರೌರ್ಯಕ್ಕೆ ಒಳಗಾದ ಪತ್ನಿ ತಾನೇ ಸ್ವತಃ ಅಥವಾ ಅವಳ ಸಂಬಂಧಿಗಳು ಅವಳ ಪರವಾಗಿ ದೂರನ್ನು ಸಲ್ಲಿಸುವುದು ಸುಲಭವಾಗಿದೆ. ದೂರನ್ನು ಪತ್ನಿ ತಾನೇ ಸ್ವತಃ ನೀಡಿದ್ದರೆ ಅಥವಾ ತನ್ನ ಯಾವೊಬ್ಬ ಬಂಧುವಿನ ಮೂಲಕ ನೀಡಿದ್ದರೆ, ಮ್ಯಾಜಿಸ್ಟ್ರೇಟರಿಂದ ವಾರೆಂಟನ್ನು ಪಡೆಯದೆಯೇ ಯಾರ ವಿರುದ್ಧ ದೂರು ಕೊಡಲಾಗಿದೆಯೋ ಅವರನ್ನು ದಸ್ತಗಿರಿ ಮಾಡಬಹುದು. ಅವಳಿಗೆ ಅಂಥ ಸಂಬಂಧಿ ಯಾರೂ ಇಲ್ಲದಿದ್ದರೆ, ಸರ್ಕಾರ ಅಧಿಸೂಚಿಸಿರುವ ಪ್ರವರ್ಗಕ್ಕೆ ಸೇರಿದ ಯಾವೊಬ್ಬ ಸರ್ಕಾರಿ ನೌಕರ ಸಹ ಪೋಲಿಸ್ ಅಧಿಕಾರಿಗೆ ಈ ಬಗ್ಗೆ ಮಾಹಿತಿ ನೀಡಬಹುದು. ಆಗಲೂ ಸಹ ಪೋಲೀಸು ಅಧಿಕಾರಿ ಅವಳ ಪತಿ ಅಥವಾ ಪತಿಯ ಸಂಬಂಧಿಗಳನ್ನು ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಬಹುದು. ಈ ಅಪರಾಧಕ್ಕಾಗಿ ದಸ್ತಗಿರಿಯಾದವನಿಗೆ ಜಾಮೀನು ದೊರೆಯುವುದಿಲ್ಲ. ಏಕೆಂದರೆ ಈ ಅಪರಾಧವನ್ನು ಜಾಮೀನೀಯವಲ್ಲದ ಅಪರಾಧಗಳ ಗುಂಪಿಗೆ ಸೇರಿಸಲಾಗಿದೆ. ಆದರೂ ಆಯಾ ಪ್ರಕರಣದ ಸನ್ನಿವೇಶಗಳನ್ನು ಗಮನದಲ್ಲಿರಿಸಿಕೊಂಡು ನ್ಯಾಯಾಲಯ ತನ್ನ ವಿವೇಚನಾನುಸಾರ ಜಾಮೀನು ಮಂಜೂರು ಮಾಡಬಹುದಾಗಿರುತ್ತದೆ.

ಪತಿ ಅಥವಾ ಅವನ ಬಂಧುಗಳ ಕ್ರೌರ್ಯಕ್ಕೆ ಗುರಿಯಾಗಿ ಸಾವಿಗೀಡಾಗುವ ಮತ್ತು ಆತ್ಮಹತ್ಯೆ ಮಾಡಿಕೊಳ್ಳುವ ಪತ್ನಿಯರ ಸಂಖ್ಯೆ ಹೆಚ್ಚುತ್ತಲೇ ಇದೆ. ಇಂಥ ಸಂದರ್ಭಗಳಲ್ಲಿ ಮೃತಳ ಅಂತ್ಯಕ್ರಿಯೆಯನ್ನು ಮಾಡಿ ಮುಗಿಸಿಬಿಡಲು ಅಪರಾಧಕ್ಕೆ ಕಾರಣರಾದವರು ಅನುಚಿತ ಆತುರವನ್ನು ತೋರಿಸುತ್ತಾರೆ. ಸಾವಿಗೀಡಾದ ಮಹಿಳೆಯ ಮೃತ ದೇಹವನ್ನು ಹಾಗೆ ಅತುರದಲ್ಲಿ ವಿಲೇ ಮಾಡುವುದನ್ನು ತಡೆಯುವುದಕ್ಕಾಗಿ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೭೪ನೇ ಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ ಮತ್ತು ಈ ತಿದ್ದುಪಡಿ ಮಾಡುವ ಮೂಲಕ ಈ ಮುಂದಿನ ಸಂದರ್ಭಗಳಲ್ಲಿ ಮೃತ ದೇಹವನ್ನು ಕಡ್ಡಾಯವಾಗಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಬೇಕೆಂದು ವಿಧಿಸಲಾಗಿದೆ. ಎಂದರೆ

೧. ಮಹಿಳೆ ವಿವಾಹದ ತರುವಾಯದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ.

೨. ವಿವಾಹದ ತರುವಾಯದ ಏಳು ವರ್ಷಗಳೊಳಗೆ ಆದ ಆ ಮಹಿಳೆಯ ಸಾವು ಇತರ ವ್ಯಕ್ತಿಯ ಅಪರಾಧದಿಂದ ಆಗಿದೆ ಎಂದು ಸಕಾರಣವಾಗಿ ಸಂದೇಹಿಸಬಹುದಾದ ಸಂದರ್ಭಗಳಲ್ಲಿ ಆಗಿದ್ದರೆ.

೩. ಮಹಿಳೆಯ ಸಾವು ವಿವಾಹವಾದ ನಂತರ ಏಳು ವರ್ಷಗಳೊಳಗೆ ಆಗಿದ್ದು, ಆ ಬಗ್ಗೆ ಮಹಿಳೆಯ ಯಾರೇ ಬಂಧು ಕೋರಿಕೆ ಸಲ್ಲಿಸಿದ್ದರೆ.

೪. ಸಾವಿನ ಕಾರಣದ ಬಗ್ಗೆ ಸಂದೇಹವಿದ್ದರೆ, ಅಥವಾ

೫. ಪೋಲೀಸು ಅಧಿಕಾರಿ ಅಥವಾ ಇತರ ಯಾವೊಬ್ಬ ವ್ಯಕ್ತಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸುವುದು ಉಚಿತವೆಂದು ಭಾವಿಸಿದರೆ, ಅಂಥ ಸಂದರ್ಭಗಳಲ್ಲಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಬೇಕಾಗುತ್ತದೆ.

ಸಾವಿನ ಕಾರಣದ ಬಗ್ಗೆ ಮ್ಯಾಜಿಸ್ಟ್ರೇಟರ ವಿಚಾರಣೆಗೆ ಉಪಬಂಧ ಕಲ್ಪಿಸುವ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೭೬ನೇ ಪ್ರಕರಣವನ್ನು ೧೯೮೩ರಲ್ಲಿ ತಿದ್ದುಪಡಿ ಮಾಡಲಾಯಿತು.

ಇದರ ಪ್ರಕಾರ, ಮಹಿಳೆ ತನ್ನ ವಿವಾಹವಾದ ತರುವಾಯದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ, ಅಥವಾ ಆ ಅವಧಿಯೊಳಗೆ ಅನುಮಾನಾಸ್ಪದ ರೀತಿಯಲ್ಲಿ ಸಾವಿಗೀಡಾಗಿದ್ದರೆ, ಪೋಲೀಸು ವಿಚಾರಣೆಯೊಂದಿಗೆ ಮ್ಯಾಜಿಸ್ಟ್ರೇಟರೂ ವಿಚಾರಣೆ ನಡೆಸಬಹುದು. ದೇಹವನ್ನು ಹೂಳಲಾಗಿದ್ದರೆ ಅದನ್ನು ಹೊರತೆಗೆಯುವಂತೆ ಆದೇಶಿಸಬಹುದು ಮತ್ತು ಮೃತ ಮಹಿಳೆಯ ಸಂಬಂಧಿಗಳಿಗೆ(ತಂದೆ, ತಾಯಿ, ಮಕ್ಕಳು, ಸಹೋದರ, ಸಹೋದರಿಯರು ಮತ್ತು ಪತಿ) ವಿಚಾರಣೆಯ ಕಾಲದಲ್ಲಿ ಹಾಜರಿರುವಂತೆ ತಿಳಿಸಬಹುದು.

ಭಾರತೀಯ ಸಾಕ್ಷ್ಯ ಅಧಿನಿಯಮವನ್ನು ಮಹಿಳೆಗೆ ಅನುಕೂಲವಾಗುವ ರೀತಿಯಲ್ಲಿ ತಿದ್ದುಪಡಿ ಮಾಡಲಾಗಿದೆ. ಆತ್ಮಹತ್ಯೆಗೆ ದುಷ್ಪ್ರೇರಣೆ ನೀಡುವುದು ಅಪರಾಧ. ಹಾಗಾಗಿ, ಸಾಮಾನ್ಯವಾಗಿ ಮಹಿಳೆಯ ಆತ್ಮಹತ್ಯೆಗೆ ಕಾರಣವಾದ ಕ್ರೌರ್ಯದ ಕುರುಹುಗಳನ್ನು ಮುಚ್ಚಿಹಾಕಲು ಅಪರಾಧಿಗಳು ಪ್ರಯತ್ನಿಸುತ್ತಾರೆ. ಇದರಿಂದಾಗಿ ಆರೋಪಿಗಳ ಅಪರಾಧಗಳನ್ನು ರುಜುವಾತುಪಡಿಸಲು ಪ್ರಾಸಿಕ್ಯೂಷನ್ ವಕೀಲರಿಗೆ ಸಾಕಷ್ಟು ಸಾಕ್ಷ್ಯಗಳು ದೊರೆಯುತ್ತಿರಲಿಲ್ಲ. ಸಾಕ್ಷ್ಯಗಳ ಕೊರತೆಯಿಂದಾಗಿಯೇ ಅನೇಕ ಪ್ರಕರಣಗಳಲ್ಲಿ ಅಪರಾಧಿಗಳು ದೋಷಮುಕ್ತರಾಗಿ ಬಿಡುತ್ತಿದ್ದರು. ಈಗ ಈ ತಿದ್ದುಪಡಿಯಿಂದಾಗಿ, ತಾನು ನಿರ್ದೋಷಿಯೆಂಬುದನ್ನು ಆರೋಪಕ್ಕೆ ಗುರಿಯಾದ ವ್ಯಕ್ತಿಯೇ ಸಾಕ್ಷ್ಯಾಧಾರಗಳಿಂದ ಸಿದ್ಧಗೊಳಿಸಬೇಕಾಗುತ್ತದೆ. ಮದುವೆಯಾದ ಏಳು ವರ್ಷಗಳೊಳಗೆ ಪತ್ನಿ ಮರಣ ಹೊಂದಿದರೆ ಮತ್ತು ಅವಳ ಪತಿ ಹಾಗೂ ಸಂಬಂಧಿಗಳು ಅವಳನ್ನು

ಹಿಂಸಿಸುತ್ತಿದ್ದರೆಂಬುದನ್ನು ಸಾಬೀತುಪಡಿಸಿದರೆ ಆರೋಪಿಯನ್ನು ನ್ಯಾಯಾಲಯ ಅಪರಾಧಿಯೆಂದೇ ಭಾವಿಸುತ್ತದೆ.

ಈ ಎಲ್ಲಾ ತಿದ್ದುಪಡಿಗಳ ಉದ್ದೇಶ ನೊಂದ ಮಹಿಳೆಯರಿಗೆ ನ್ಯಾಯ ದೊರಕಿಸಬೇಕು ಮತ್ತು ಕಾನೂನಿನಲ್ಲಿರುವ ಕೊರತೆಗಳಿಂದಾಗಿ ನಿಜವಾದ ಅಪರಾಧಿ ಶಿಕ್ಷೆಗೆ ಗುರಿಪಡದೆ ಪಾರಾಗಬಾರದು ಎಂಬುದು. ನ್ಯಾಯಪರಿಪಾಲನೆಯಲ್ಲಿ ಕಾನೂನಿನ ಅನ್ವಯ ಹಾಗೂ ವ್ಯಾಖ್ಯಾನಗಳು ಕಾನೂನುಗಳಷ್ಟೇ ಮಹತ್ತರ ಪಾತ್ರವನ್ನು ವಹಿಸುತ್ತದೆ.

ಚಂಚಲ ಕುಮಾರಿ -ವಿ- ಚಂದೀಘಡ ಸಂಘ ರಾಜ್ಯ ಕ್ಷೇತ್ರ (ಎಐಆರ್ ೧೯೮೬ ಎಸ್‌ಸಿ ೭೫೨) ಪ್ರಕರಣದಲ್ಲಿ ಮಹಿಳೆಯ ಸಾವು ಸಂಭವಿಸಿದ್ದು ೧೯೮೧ರ ಜುಲೈ ೨೦ರಂದು, ಪ್ರಥಮ ಮಾಹಿತಿ ವರದಿಯನ್ನು ದಾಖಲು ಮಾಡಿದ್ದು ಮೂರು ದಿನಗಳ ನಂತರ ಸಂಜೆ ೫-೧೦ರಲ್ಲಿ. ಇದಕ್ಕೆ ಕಾರಣ ಮೃತಳ ಅಣ್ಣ ದೂರದೂರಿನಲ್ಲಿದ್ದ ಎಂಬುದು. ಅಧೀನ ನ್ಯಾಯಾಲಯಗಳು ಅಪರಾಧಿಗಳನ್ನು ಶಿಕ್ಷೆಗೆ ಒಳಪಡಿಸಿದವು. ಆದರೆ ಉಚ್ಚ ನ್ಯಾಯಾಲಯ ಪ್ರಥಮ ಮಾಹಿತಿ ವರದಿಯನ್ನು ನೀಡುವಲ್ಲಿ ಆದ ವಿಳಂಬಕ್ಕೆ ಸಮಾಧಾನಕರ ಉತ್ತರ ನೀಡಿಲ್ಲ, ಹಾಗಾಗಿ ಇಡೀ ಕಾನೂನು ವ್ಯವಹರಣೆಗಳ ಸತ್ಯತೆಯ ಬಗ್ಗೆ ಇದು ಪ್ರಶ್ನಿಸುವಂತೆ ಮಾಡುತ್ತದೆ ಎಂಬ ಕಾರಣ ನೀಡಿ ಅಪರಾಧಿಗಳನ್ನು ದೋಷಮುಕ್ತರನ್ನಾಗಿಸಿತು.

ಆದರೆ, ಬಿರ್ದಿಚಂದ್ ಸರ್ದಾ-ವಿ- ಮಹಾರಾಷ್ಟ್ರ ರಾಜ್ಯ(ಎಐಆರ್ ೧೯೮೪ ಎಸ್‌ಸಿ ೧೬೨೨) ಪ್ರಕರಣದಲ್ಲಿ ನಗರದ ಗಣ್ಯವ್ಯಕ್ತಿ ಬಿರ್ದಿಚಂದ್ ಸರ್ದಾ ಅವರ ಪತ್ನಿ ಮಂಜು ಕೇವಲ ೨೦ ವರ್ಷದ, ಅದೇ ಆಗ ಜೀವನಕ್ಕೆ ಕಾಲಿಟ್ಟ ಕನಸುಹೊತ್ತ ತರುಣಿ, ಆದರೆ ಮದುವೆಯಾದ ನಾಲ್ಕು ತಿಂಗಳೊಳಗೆ ಆತ್ಮಹತ್ಯೆ ಮಾಡಿಕೊಂಡು ಜೀವನಕ್ಕೆ ವಿದಾಯ ಹೇಳಿದಳು. ಕಾರಣ ಗಂಡನ ಅಲಕ್ಷ್ಯ ಹಾಗೂ ಅವನಿಗಿದ್ದ ವಿವಾಹ ಬಾಹಿರ ಸಂಬಂಧ. ಅಧೀನ ನ್ಯಾಯಾಲಯಗಳು ಅಪರಾಧಿ ಎಂದ ಬಿರ್ದಿಚಂದ್‌ನನ್ನು, ಸರ್ವೋಚ್ಚ ನ್ಯಾಯಾಲಯ, ಮಂಜುವಿನ ಮರಣ ಆತ್ಮಹತ್ಯೆಯಿಂದಲೇ ಉಂಟಾಗಿದೆ ಎಂದು ತೀರ್ಪು ನೀಡಿ ಖುಲಾಸೆ ಮಾಡಿತು. ಇಲ್ಲಿಯೂ ಎಫ್‌ಐಆರ್ ಅನ್ನು ನೀಡುವಲ್ಲಿ ವಿಳಂಬವಾಗಿತ್ತು. ಆದರೆ ಇಲ್ಲಿ ಈ ವಿಳಂಬವನ್ನು 'ಬರ್ದಿಚಂದ್ ನಗರದ ಗಣ್ಯವ್ಯಕ್ತಿ, ಆತುರದ ನಿರ್ಧಾರ ಕೈಗೊಂಡಲ್ಲಿ ತಮ್ಮ ಮರ್ಯಾದೆಗೆ ಕುಂದುಂಟಾಗಬಹುದೆಂಬ ಕಾರಣದಿಂದ ಅವರು ತತ್‌ಕ್ಷಣವೇ ಎಫ್ ಐಆರ್ (ಪ್ರಥಮ ಮಾಹಿತಿ ವರದಿ) ಅನ್ನು ದಾಖಲು ಮಾಡಿಲ್ಲ. ಯಾವುದೇ ಕ್ರಮ ಕೈಗೊಳ್ಳುವುದಕ್ಕೆ ಮುನ್ನ ಆ ಬಗ್ಗೆ ತಮ್ಮ ಸ್ನೇಹಿತರನ್ನು ಸಮಾಲೋಚಿಸುವುದಕ್ಕಾಗಿ ಅವರು 'ಸ್ವಲ್ಪ' ಸಮಯ ತೆಗೆದುಕೊಂಡಿರಬಹುದು ಎಂದು ಸರ್ವೋಚ್ಚ ನ್ಯಾಯಾಲಯವೇ ಸಮರ್ಥಿಸಿತು.

ಒಂದು ಪ್ರಕರಣದಲ್ಲಿ ಪ್ರಥಮ ಮಾಹಿತಿ ವರದಿಯನ್ನು ನೀಡುವಲ್ಲಿ ಆದ ವಿಳಂಬ ಅಪರಾಧ ಸಿದ್ಧಿಗೆ ಅಡ್ಡಿಯಾಗುತ್ತದೆ. ಆದರೆ ಅದೇ ವಿಳಂಬ ಇನ್ನೊಂದು ಪ್ರಕರಣದಲ್ಲಿ ಅಪರಾಧಿಯ ಖುಲಾಸೆಗೆ ಅಡ್ಡಿಯಾಗುವುದಿಲ್ಲ. ಕಾನೂನುಗಳನ್ನು ಅನ್ವಯಿಸುವಲ್ಲಿ ನ್ಯಾಯಾಲಯಗಳಿಗಿರುವ ವಿವೇಚನಾ ಸ್ವಾತಂತ್ರ್ಯ ನ್ಯಾಯ ದೊರಕಿಸಿಕೊಡುವಲ್ಲಿ ಪ್ರತಿಕೂಲವಾಗಿಯೂ ಪರಿಣಮಿಸಬಹುದು ಎಂಬುದಕ್ಕೆ ಇಂಥ ತೀರ್ಪುಗಳು ಸಾಕ್ಷಿಯಾಗುತ್ತವೆ.

ಮಹಿಳೆಯರ ವಿರುದ್ಧ ತೋರುವ ಕ್ರೌರ್ಯಕ್ಕೆ ಹಾಗೂ ಹಿಂಸೆಗೆ ರಕ್ಷಣೆಯಾಗಿ ತಂದಿರುವ ಕಾನೂನು ಅದರ ನಿಜವಾದ ಅರ್ಥದಲ್ಲಿ ಮಹಿಳೆಯರ ರಕ್ಷಣೆಗೆ ಒದಗುವುದು ಕಾನೂನನ್ನು ಪರಿಣಾಮಕಾರಿಯಾಗಿ ಅನ್ವಯಿಸಿದಾಗ ಮಾತ್ರ. ಈ ಎರಡು ಪ್ರಕರಣಗಳಲ್ಲಿ ಕಾನೂನಿನ ಅನ್ವಯದಲ್ಲಿ ನ್ಯಾಯಾಂಗ ತಳೆದ ನಿಲುವುಗಳು ಗಮನಾರ್ಹ.

ಕೇವಲ ನೈತಿಕತೆಯ ಆಧಾರದ ಮೇಲೆ ಯಾವೊಬ್ಬ ವ್ಯಕ್ತಿಯನ್ನು ಅಪರಾಧಿ ಎಂದು ನಿರ್ಣಯಿಸಬಾರದು ಎಂಬುದು ನ್ಯಾಯಶಾಸ್ತ್ರದ ಮೂಲ ತತ್ವ. ದೊರೆವ ಸಾಕ್ಷ್ಯಗಳಿಂದ ಆರೋಪಿಯ ಪರವಾಗಿ ಅಥವಾ ಅವನ ವಿರುದ್ಧವಾಗಿ ಎರಡೂ ರೀತಿಯಲ್ಲಿ ವ್ಯಾಖ್ಯಾನಿಸಿ ತೀರ್ಪುನೀಡುವುದು ಸಾಧ್ಯವಿದ್ದಾಗ, ಅಂಥ ತೀರ್ಪು ಯಾವಾಗಲೂ ಆರೋಪಿಗೆ ಅನುಕೂಲಕರವಾಗಿಯೇ ಇರಬೇಕು ಎಂಬುದು ನೆಲೆಗೊಂಡಿರುವ ಕಾನೂನು ಸಿದ್ಧಾಂತ. ಎಂದರೆ ಒಂದು ಸಾಕ್ಷ ಪ್ರಾಸಿಕ್ಯೂಷನ್ನಿನ ಪರವಾಗಿದ್ದು ಇನ್ನೊಂದು ಸಾಕ್ಷ್ಯ ಅರೋಪಿಯ ಪರವಾಗಿದ್ದರೆ, 'ಸಂದೇಹದ ಲಾಭ'(benefit of doubt) ದೊರೆಯುವುದು ಆರೋಪಿಗೇ.

ಕುಟುಂಬದ ವ್ಯವಹಾರಗಳು ಖಾಸಗಿ ಸ್ವರೂಪದ್ದಾಗಿರುವುದರಿಂದ, ಮಹಿಳೆಯರು ಆತಿ ಸುಲಭವಾಗಿ ಕ್ರೌರ್ಯಕ್ಕೆ ಹಾಗೂ ಹಿಂಸೆಗೆ ಗುರಿಯಾಗುತ್ತಾರೆ. ಇದು ಮನೆಯ ನಾಲ್ಕು ಗೋಡೆಗಳ ನಡುವೆ ನಡೆಯುವುದರಿಂದ ಪುರುಷರ ವಿರುದ್ಧ ಕಾನೂನು ಅಗತ್ಯಪಡಿಸುವ ಸಾಕ್ಷ್ಯಗಳು ದೊರೆಯುವುದಿಲ್ಲ. ಆದ್ದರಿಂದ ಅಪರಾಧಿಕ ನ್ಯಾಯಶಾಸ್ತ್ರದ ಪ್ರಕಾರ ಅಪರಾಧವನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತುಪಡಿಸುವುದು ಕಷ್ಟದ ಕೆಲಸ. ಆದರೆ ಸಂದೇಹಾತೀತ ಸಾಕ್ಷ್ಯವಿದ್ದಾಗಲೂ ಸಹ ಮಹಿಳೆಯನ್ನು ಹಾಗೂ ಅವಳ ಮರಣ ಕಾಲದ ಹೇಳಿಕೆಯನ್ನು ನ್ಯಾಯಾಲಯ ಸಂದೇಹಾಸ್ಪದವೆಂದು ಉಪೇಕ್ಷಿಸಿರುವ ಪ್ರಕರಣಗಳಿವೆ.

೧೯೮೪ರಲ್ಲಿ ತೀರ್ಪು ಹೊರ ಬಿದ್ದ ರಾಜ್ಯ-ವಿ- ಉಧಾಮಸಿಂಗ್ ಪ್ರಕರಣದಲ್ಲಿ ಒಂದು ವರ್ಷದ ಮಗುವಿನ ತಾಯಿ, ಸಣ್ಣ ವಯಸ್ಸಿನ ಶನ್ನಿಕೌರ್ ದೆಹಲಿಯ ಆಸ್ಪತ್ರೆಯೊಂದರಲ್ಲಿ ಸುಟ್ಟಗಾಯಗಳಿಂದ ಮೃತಪಟ್ಟಳು. ಸಾಯುವುದಕ್ಕೆ ಮುನ್ನ ಅವಳು ತನ್ನ ಗಂಡನೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ

ಹಚ್ಚಿದನೆಂದು ಮೂರು ಬಾರಿ ಹೇಳಿಕೆ ನೀಡಿದಳು. ಒಮ್ಮೆ ಪೋಲೀಸರಿಗೆ ಮತ್ತು ಎರಡು ಬಾರಿ ವೈದ್ಯರಿಗೆ. ಆದರೆ ನ್ಯಾಯಾಲಯ ಇದನ್ನು ಮೊದಲು ನಂಬಲಿಲ್ಲ. ಮೊದಲ ಬಾರಿ ವೈದ್ಯರಿಗೆ ನೀಡಿದ ಹೇಳಿಕೆಯನ್ನು ನಂಬದಿರಲು ಅದು ನೀಡಿದ ಕಾರಣ- ಹೇಳಿಕೆಯನ್ನು ನೀಡುವಂಥ ಸ್ವಸ್ಥ ಮನಃಸ್ಥಿತಿಯನ್ನು ಆಕೆ ಹೊಂದಿದ್ದಾಳೆಯೇ ಇಲ್ಲವೇ ಎಂಬುದನ್ನು ವೈದ್ಯರು ವೈದ್ಯಕೀಯ ಪರೀಕ್ಷೆ ನಡೆಸಿ ಖಚಿತಪಡಿಸಿ ಕೊಂಡಿರಲಿಲ್ಲ ಎಂಬುದು. ಎರಡನೆಯ ಬಾರಿ ಪೋಲೀಸರಿಗೆ ನೀಡಿದ ಹೇಳಿಕೆಯನ್ನು ಪರಿಗಣಿಸದೇ ಇದ್ದುದಕ್ಕೆ ನೀಡಿದ ಕಾರಣ- ಪೋಲೀಸರು ನಂಬಲರ್ಹರಲ್ಲ, ಬಹುಮಾನ ಪಡೆಯುವ ಆಸೆಯಿಂದ ಈ ಹೇಳಿಕೆಯನ್ನು ದಾಖಲು ಮಾಡಿರಬೇಕು ಎಂಬುದು. ಮೂರನೆಯ ಬಾರಿ ಮತ್ತೊಬ್ಬ ವೈದ್ಯರು ಅವಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿ ಅವಳು ಹೇಳಿಕೆ ನೀಡುವ ಸ್ವಸ್ಥ ಮನಸ್ಥಿತಿಯನ್ನು ಹೊಂದಿದ್ದಾಳೆ ಎಂಬುದನ್ನು ದೃಢಪಡಿಸಿಕೊಂಡು ಪಡೆದ ಹೇಳಿಕೆಯನ್ನು ನಂಬದಿರಲು ನ್ಯಾಯಾಲಯ ನೀಡಿದ ಕಾರಣ- ಅವಳು ನೋವಿನಿಂದ ಕಿರಿಚುತ್ತಿದ್ದಳು ಹಾಗಾಗಿ ಅವಳು ಹೇಳಿಕೆ ನೀಡುವ ಮನಃಸ್ಥಿತಿಯಲ್ಲಿದ್ದಳು ಎಂದು ನಂಬಲು ಕಷ್ಟ ಎಂಬುದು. ಮೇಲಿನ ಎಲ್ಲ ಮೂರು ಬಾರಿಯ ಹೇಳಿಕೆಗಳಲ್ಲೂ ಶನ್ನಿಕೌರ್ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದುದು ತನ್ನ ಗಂಡನೇ ಎಂಬುದನ್ನು ಮತ್ತೆ ಮತ್ತೆ ಸ್ಪಷ್ಟವಾಗಿ ತಿಳಿಸಿದ್ದಳು.

ಕೆಲವೊಮ್ಮೆ ಗಂಡನ ಕ್ರೌರ್ಯಕ್ಕೆ ತುತ್ತಾಗಿ ಸಾಯುವ ಸ್ಥಿತಿಯಲ್ಲಿರುವ ಮಹಿಳೆಯೂ ತನ್ನ ಸಾವಿಗೆ ತನ್ನ ಗಂಡನೇ ಕಾರಣ ಎಂದು ಹೇಳಲು ಹಿಂಜರಿದು, ತಾನೇ ಆತ್ಮಹತ್ಯೆಗೆ ಪ್ರಯತ್ನಿಸಿದುದು ಎಂದು ಹೇಳಿಕೆ ನೀಡುತ್ತಾಳೆ. ಮಕ್ಕಳ ಹಿತಾಸಕ್ತಿಯ ದೃಷ್ಟಿಯಿಂದಲೂ ಇಂಥ ಸುಳ್ಳು ಹೇಳಿಕೆಗಳನ್ನು ನೀಡಿರಬಹುದಾಗಿದೆ. ಒಂದು ವೇಳೆ ಗುಣಮುಖಳಾದರೆ ಮತ್ತೆ ಅದೇ ಮನೆಗೆ ಹೋಗಿ ಅವರ ನಡುವೆಯೇ ಬಾಳಬೇಕಾಗುತ್ತದೆಂಬ ಕಠೋರ ಸತ್ಯ ಇಂಥ ಹೇಳಿಕೆಗಳಿಗೆ ಕಾರಣವಾಗುತ್ತದೆ. ಹೀಗಾಗಿ ಎಲ್ಲಾ ಸಾಕ್ಷ್ಯಗಳೂ ಒಂದು ಸಾವನ್ನು ಕೊಲೆ ಎಂಬುದನ್ನು ರುಜುವಾತುಪಡಿಸಿದರೂ ಮರಣ ಕಾಲದ ಹೇಳಿಕೆ ಅದನ್ನು ಆತ್ಮಹತ್ಯೆ ಎನ್ನುತ್ತದೆ. ಕೆಲವೊಮ್ಮೆ ತನ್ನ ಸಾವಿಗೆ ಆತ್ಮಹತ್ಯೆಯ ಪ್ರಯತ್ನವೇ ಕಾರಣ ಎಂದು ಹೇಳಿಕೆ ಕೊಟ್ಟ ಮಹಿಳೆ ತಾನು ಉಳಿಯುವುದಿಲ್ಲವೆಂಬುದು ಖಚಿತವಾದಾಗ ತನ್ನ ಸಾವಿಗೆ ಆತ್ಮಹತ್ಯೆಯ ಪ್ರಯತ್ನ ಕಾರಣವಲ್ಲ ಅದು ಕೊಲೆ ಎಂಬ ಹೇಳಿಕೆಯನ್ನು ನೀಡುತ್ತಾಳೆ.

ವರದಕ್ಷಿಣೆಯ ಪ್ರಕರಣಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಪರಾಧಿಯೆಂದು ನಿರ್ಧರಿಸುವಲ್ಲಿ ಸಾವಿನಂಚಿನಲ್ಲಿರುವ ವ್ಯಕ್ತಿಯ 'ಮರಣದ ಕಾಲದ ಹೇಳಿಕೆ' ಮುಖ್ಯ ಸಾಕ್ಷ್ಯವಾಗುತ್ತದೆ. ವರದಕ್ಷಿಣೆಯಂಥ ಸಾಮಾಜಿಕ ಪಿಡುಗನ್ನು ಈ ಎಲ್ಲಾ ಕಾನೂನುಗಳ ಮೂಲಕವೂ ನಿವಾರಿಸಲಾಗದಿರುವುದಕ್ಕೆ ನಮ್ಮ ಮಹಿಳೆಯರ ಆರ್ಥಿಕ ಅವಲಂಬನೆಯಷ್ಟೇ ಅವರ ಮನೋಧರ್ಮವೂ ಕಾರಣವಾಗುತ್ತದೆ.

ಏನೇ ಕಷ್ಟ ಬಂದರೂ ಗಂಡನೇ ದೈವ, ಗಂಡನ ಮನೆಯೇ ಅವಳು ಬಾಳಿ ಬದುಕಬೇಕಾದ ಮನೆ, ಗಂಡನ ಹೊರತು ಅವಳಿಗೆ ಉಳಿವಿಲ್ಲ, ಪ್ರತ್ಯೇಕ ಅಸ್ತಿತ್ವವಿಲ್ಲ, ಬೆಲೆಯಿಲ್ಲ ಕಡೆಗೆ ನೆಲೆಯೂ ಇಲ್ಲ. ಇದು ನಮ್ಮ ಸಮಾಜ ಹೆಣ್ಣು ಮಕ್ಕಳಲ್ಲಿ ಬಿತ್ತಿ ಮರವಾಗಿಸಿರುವ ಆದರ್ಶ. ಇಂಥ ಆದರ್ಶದ ಆರಾಧನಾ ಮನೋಭಾವವೇ ಎಷ್ಟೋ ಬಾರಿ ಅವಳಿಗೆ ಶಾಪವಾಗಿ ಪರಿಣಮಿಸಿದೆ. ಒಂದು ವೇಳೆ ಗಂಡನ ಕಿರುಕುಳವನ್ನು ತಾಳದೇ ಗಂಡನನ್ನು ಧಿಕ್ಕರಿಸಿ ಹೊರಬರುವ ಎಷ್ಟು ಮಂದಿ ಮಹಿಳೆಯರಿಗೆ ತವರಿನ ಆಶ್ರಯ ದೊರೆತೀತು?

ವಸಂತ ನಾರಾಯಣ ಪವಾರ್ -ವಿ- ಮಹಾರಾಷ್ಟ್ರ ರಾಜ್ಯ ಪ್ರಕರಣದಲ್ಲಿ (೧೯೮೦ ೨ ಎಸ್‌ಸಿಆರ್) ಮಹಿಳೆಯನ್ನು ಅವಳ ಪತಿಯೇ ಬೆಂಕಿ ಹಚ್ಚಿ ಕೊಲ್ಲಲು ಪ್ರಯತ್ನಿಸಿದ್ದರೂ ಮರಣ ಕಾಲದ ತನ್ನ ಹೇಳಿಕೆಯಲ್ಲಿ ಯಾವುದೇ ಕಾರಣಕ್ಕೂ ತನ್ನ ಪತಿಯನ್ನು ಹೊಡೆಯಬಾರದೆಂದು ಬೇಡುತ್ತಾ ಕಣ್ಣು ಮುಚ್ಚುತ್ತಾಳೆ. ಮಹಿಳೆಯ ಈ ಭಾವನಾತ್ಮಕ ದೃಷ್ಟಿಯೂ ಕಾನೂನಿನ ವೈಫಲ್ಯಕ್ಕೆ ಕೆಲವೊಮ್ಮೆ ಕಾರಣವಾಗುತ್ತದೆ.

ಈ ಸಂದರ್ಭದಲ್ಲಿ ಬ್ರಿಟನ್ನಿನಲ್ಲಿರುವ ಕಾನೂನನ್ನು ಗಮನಿಸಬೇಕು. ಅಲ್ಲಿ ತನ್ನನ್ನು ಹೊಡೆದು ಬಡಿದು ಹಿಂಸಿಸುತ್ತಾನೆಂದು ಪೊಲೀಸರಿಗೆ ದೂರು ನೀಡುವ ಮಹಿಳೆಯು ಗಂಡನನ್ನು ಮನೆಯಿಂದ ಹೊರ ಹಾಕುವ ಆದೇಶವನ್ನು ಪಡೆಯಬಹುದು. ಬ್ರಿಟನ್ನಿನಲ್ಲಿ ಈ ಕಾರ್ಯತಂತ್ರ ಯಶಸ್ವಿಯಾದಂತೆ ಕಾಣುತ್ತದೆ. ಆದರೆ ಭಾರತದಲ್ಲಿನ ಪರಿಸ್ಥಿತಿ ಇದಕ್ಕೆ ತದ್ವಿರುದ್ಧ. ದೂರು ನೀಡಿದ ಮಹಿಳೆಯ ಪರಿಸ್ಥಿತಿ ಮತ್ತಷ್ಟು ಶೋಚನೀಯವಾಗಿ ಸಂಭವಿಸಬಹುದಾಗಿದೆ.

ಆದರೆ ಈಗೀಗ ಈ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಬದಲಾಗುತ್ತಿದೆ. ಕರ್ನಾಟಕದ ಸಾಗರದಲ್ಲಿರುವ ಅಗಡಿ ನಾರಾಯಣ ಆಶ್ರಮದಲ್ಲಿ ವರ ವರದಕ್ಷಿಣೆಯನ್ನು ಬೇಡಿದನೆಂಬ ಕಾರಣಕ್ಕೆ ಹಸೆಮಣೆಯ ಮೇಲಿದ್ದ ವಧು ಅದನ್ನು ಧಿಕ್ಕರಿಸಿ ನಡೆದ ಪ್ರಕರಣ ವರದಿಯಾಗಿದೆ. ಈಗೀಗ ಕರ್ನಾಟಕದಲ್ಲಿ ಶೋಷಿತ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ದೂರು ನೀಡಲು ಮುಂದಾಗುತ್ತಿದ್ದಾರೆ. ೧೯೮೩ರಲ್ಲಿ ದೂರು ನೀಡಿದವರ ಸಂಖ್ಯೆ ಕೇವಲ ೨೦. ಆದರೆ ಈ ಸಂಖ್ಯೆ ೧೯೮೫ರಲ್ಲಿ ೯೧ಕ್ಕೆ ೧೯೮೭ರಲ್ಲಿ ೨೬೬ಕ್ಕೆ ಏರಿತು.

ಮುರಿದು ಬಿದ್ದ ಎಲ್ಲ ಮದುವೆಗಳಿಗೂ ವರದಕ್ಷಿಣೆ ಒಂದೇ ಕಾರಣವಲ್ಲದಿದ್ದರೂ ಅಂಕಿ ಅಂಶಗಳ ಪ್ರಕಾರ ಬಹುಪಾಲು ಪ್ರಕರಣಗಳಿಗೆ ಅದೇ ಕಾರಣವಾಗಿದೆ. ಸಂತೋಷ ಹಾಗೂ ನೆಮ್ಮದಿಯಿಂದ ಕೂಡಿದ ಕುಟುಂಬಗಳೇ ಸಮಾಜ ವ್ಯವಸ್ಥೆಯ ಅಡಿಪಾಯ. ಆದ್ದರಿಂದ ಪ್ರಯತ್ನಗಳು ಸಮಸ್ಯೆಯ ಪರಿಹಾರಕ್ಕಿಂತ ಸಮಸ್ಯೆಗೆ ಮೂಲವಾದ ಕಾರಣವನ್ನು ನಿವಾರಿಸುವತ್ತ ಕೇಂದ್ರೀಕೃತವಾಗಬೇಕು.

ಈ ಹಿಂದೆಯೇ ಹೇಳಿದಂತೆ ಮಹಿಳೆಯ ಆರ್ಥಿಕ ಸ್ವಾವಲಂಬನೆ ಈ ಸಮಸ್ಯೆಯ ನಿವಾರಣೆಗೆ ಉತ್ತಮ ಉತ್ತರವಾದೀತು. ಮಹಿಳೆ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸುವುದು ಈ ದಿಕ್ಕಿನಲ್ಲಿ ನಾವಿಡುವ ಮೊದಲ ಹೆಜ್ಜೆಯಾಗಬೇಕು. ಈಗ ಮಹಿಳೆಗೆ ಪಿತ್ರಾರ್ಜಿತ ಆಸ್ತಿ ಹಕ್ಕು ನೀಡಿರುವ ಕರ್ನಾಟಕ ಸರ್ಕಾರದ ಕ್ರಮ ಈ ದೃಷ್ಟಿಯಿಂದ ಅತ್ಯಂತ ಶ್ಲಾಘನೀಯವಾದುದು.

**ಕೌಟುಂಬಿಕ ಕಿರುಕುಳ**

ಮಹಿಳೆಯ ವಿರುದ್ಧ ಹಿಂಸೆ ಒಂದು ಜಾಗತಿಕ ಸಮಸ್ಯೆ. ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳೆರಡರಲ್ಲೂ ಮಹಿಳೆ ಹಿಂದಿನ ಕಾಲದಿಂದಲೂ ಹಿಂಸೆಗೆ ಹಾಗೂ ಕ್ರೌರ್ಯಕ್ಕೆ ಗುರಿಯಾಗುತ್ತಲೇ ಬಂದಿದ್ದಾಳೆ.

ಅಮೇರಿಕಾ ಮತ್ತು ಇಂಗ್ಲೆಂಡ್‌ಗಳಂಥ ದೇಶಗಳಲ್ಲಿ ಇದನ್ನು ತಡೆಯಲು ನಿರ್ದಿಷ್ಟ ಕಾನೂನುಗಳಿವೆ. ಆದರೆ ಭಾರತದಲ್ಲಿ ಕೌಟುಂಬಿಕ ಹಿಂಸೆಯನ್ನು ತಡೆಯಲು ಯಾವುದೇ ನಿರ್ದಿಷ್ಟ ಕಾನೂನು ಇಲ್ಲ. ೧೯೮೩ರಲ್ಲಿ ಅಪರಾಧಿಕ ಕಾನೂನಿಗೆ ತಿದ್ದುಪಡಿ ತರುವವರೆಗೆ ಕೌಟುಂಬಿಕ ಕ್ರೌರ್ಯವನ್ನು ಅಪರಾಧವನ್ನಾಗಿಸುವ ಯಾವುದೇ ಉಪಬಂಧವೂ ಸಹ ಇರಲಿಲ್ಲ. ೧೯೮೩ರಲ್ಲಿ ಭಾರತ ದಂಡ ಸಂಹಿತೆಗೆ ೪೯೮ ಎ ಪ್ರಕರಣವನ್ನು ಸೇರಿಸಿ ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿಗಳು ಅವಳ ಮೇಲೆ ನಡೆಸುವ ಕ್ರೌರ್ಯವನ್ನು ಅಪರಾಧವನ್ನಾಗಿಸಲಾಯಿತು. ಅದುವರೆಗೆ ಗಂಡಂದಿರನ್ನು, ಕೊಲೆ, ಆತ್ಮಹತ್ಯೆಗೆ ದುಷ್ಪ್ರೇರಣೆ, ಹಾನಿ ಮತ್ತು ಅಕ್ರಮಬಂಧನಗಳಿಗಾಗಿ, ಭಾರತ ದಂಡ ಸಂಹಿತೆಯ ವಿವಿಧ ಪ್ರಕರಣಗಳ ಅಡಿಯಲ್ಲಿ ಅಪರಾಧಿಯನ್ನಾಗಿಸಬಹುದಿತ್ತು ಅಷ್ಟೆ. ಆದರೆ ಈ ಉಪಬಂಧಗಳು, ಮಹಿಳೆ ನಾಲ್ಕು ಗೋಡೆಗಳ ಮಧ್ಯೆ ಮನೆಮಂದಿಯಿಂದಲೇ ಅನುಭವಿಸುವ ಹಿಂಸೆ ಹಾಗೂ ಕ್ರೌರ್ಯದ ಕೃತ್ಯಗಳಿಗಾಗಿ ಯಾರನ್ನು ದೋಷಿಗಳನ್ನಾಗಿ ಮಾಡುವ ವ್ಯಾಪ್ತಿಯನ್ನು ಹೊಂದಿರಲಿಲ್ಲ. ಅಲ್ಲದೆ, ಭಾವನಾತ್ಮಕವಾಗಿ ಹಾಗೂ ಆರ್ಥಿಕವಾಗಿ ತಾನು ಅವಲಂಬಿಸುವ ವ್ಯಕ್ತಿಗಳಿಂದಲೇ ಉಂಟಾಗುವ ಕ್ರೌರ್ಯ ಹಾಗೂ ಹಿಂಸೆಗಳನ್ನು ಎದುರಿಸಲು ಪ್ರತ್ಯೇಕ ಉಪಬಂಧದ ಅಗತ್ಯವಿತ್ತು.

ಮಹಿಳೆಯ ವಿರುದ್ಧ ನಡೆಸುವ ಕ್ರೌರ್ಯ ಪುರುಷ ಪ್ರಧಾನ ಸಮಾಜದ ಅಭಿವ್ಯಕ್ತಿಯ ಒಂದು ರೂಪ ಎನ್ನಬಹುದು. ಇದಕ್ಕೆ ಕಾರಣ ಅವಳ ಅಧೀನ ಸ್ಥಾನಮಾನ ಮತ್ತು ಅದಕ್ಕೆ ಕಾರಣವಾಗುವ ಅವಳ ಆರ್ಥಿಕ ಅವಲಂಬನೆ. ಈ ಆರ್ಥಿಕ ಅವಲಂಬನೆಯಿಂದಾಗಿಯೇ ಇಂದು 'ವರದಕ್ಷಿಣೆ' ಎಂಬುದು ಅನೇಕ ಮಹಿಳೆಯರನ್ನು ಬಲಿತೆಗೆದುಕೊಳ್ಳುವಷ್ಟು ಪೆಡಂಭೂತವಾಗಿ ಬೆಳೆದಿರುವುದು. ಇದೊಂದು ವಿಷವರ್ತುಲ.

ದಿನೇ ದಿನೇ ಅನಿಯಂತ್ರಿತವಾಗಿ ಹೆಚ್ಚುತ್ತಿರುವ ವಧೂದಹನ, ವರದಕ್ಷಿಣೆಯಿಂದಾಗಿ ನಡೆಯುವ ಆತ್ಮಹತ್ಯೆಗಳು, ಕೌಟುಂಬಿಕ ಕಿರುಕುಳ ಇವುಗಳನ್ನು ತಡೆಗಟ್ಟುವ ಉದ್ದೇಶದಿಂದಾಗಿ ೪೯೮ ಎ

ಪ್ರಕರಣವನ್ನು ಭಾರತ ದಂಡ ಸಂಹಿತೆಯಲ್ಲಿ ಸೇರ್ಪಡೆ ಮಾಡಿದ್ದರೂ, ಮಹಿಳೆ ಒಳಗಾಗುವ ಯಾವುದೇ ಬಗೆಯ ಕ್ರೌರ್ಯಕ್ಕೂ ಈ ಉಪಬಂಧ ಅನ್ವಯಿಸುತ್ತದೆ. ಕೌಟುಂಬಿಕ ಕ್ರೌರ್ಯವನ್ನು ನಮ್ಮ ಸಿವಿಲ್ ಕಾನೂನುಗಳು ವೈವಾಹಿಕ ಪರಿಹಾರವನ್ನು ಕ್ಲೇಮು ಮಾಡಲು ಕಾರಣವನ್ನಾಗಿ ಪರಿಗಣಿಸಿತ್ತಾದರೂ ಅದನ್ನು ಒಂದು ದಂಡನೀಯ ಅಪರಾಧವನ್ನಾಗಿ ಕ್ರಿಮಿನಲ್ ಕಾನೂನು ೧೯೮೩ರಲ್ಲಿ ತಿದ್ದುಪಡಿ ತರುವವರೆಗೆ ಪರಿಗಣಿಸಿರಲಿಲ್ಲ. ನಮ್ಮಲ್ಲಿನ ಮಹಿಳಾ ಕ್ರಿಯಾತಂಡಗಳೂ ಸಹ, ವಧೂದಹನ, ಅತ್ಯಾಚಾರದಂಥ ಹಿಂಸೆಗಳಿಗೆ ನೀಡಿದಷ್ಟು ಗಮನವನ್ನು ಕೌಟುಂಬಿಕ ಹಿಂಸೆಗೆ ನೀಡಿರಲಿಲ್ಲ. ಪತ್ನಿಯನ್ನು ಹೊಡೆಯುವುದು ಅಥವಾ ಚೆಚ್ಚುವುದು ವೈವಾಹಿಕ ಜೀವನದಲ್ಲಿ ಪತ್ನಿಯನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಪತಿ ಬಹುಹಿಂದಿನಿಂದ ಅನುಸರಿಸಿಕೊಂಡು ಬಂದ ಪುರುಷ ಪ್ರಧಾನ ಸಮಾಜದ ಒಂದು ಕ್ರಮವಾಗಿದೆ.

ಕಳೆದ ಶತಮಾನದ ಕೊನೆಯವರೆಗೂ ಇಂಗ್ಲೆಂಡಿನಂಥ ರಾಷ್ಟ್ರದಲ್ಲಿಯೂ ಸಹ ಪತಿ ಪತ್ನಿಯನ್ನು ಎಷ್ಟೇ ಕ್ರೂರವಾಗಿ ನಡೆಸಿಕೊಂಡರೂ ಪತ್ನಿ ಪತಿಯೊಂದಿರಬೇಕೆಂಬುದು ಕಾನೂನಿನ ಪ್ರಕಾರ ಕಡ್ಡಾಯವಾಗಿತ್ತು. ಅವರು ಓಡಿಹೋದರೆ, ಅವರನ್ನು ಮತ್ತೆ ಎಳೆದು ತರುವ ಹಾಗೂ ಮುಂದೆ ಓಡಿಹೋಗದಂತೆ ತಡೆಯಲು ಕೋಣೆಯೊಳಗಿಟ್ಟು, ಬೀಗ ಹಾಕುವ ಎಲ್ಲ ಹಕ್ಕು ಅವರಿಗಿತ್ತು. ೧೮೭೦ರಲ್ಲಿ ವಿಕ್ಟೋರಿಯಾ ಕಾಲದ ಮಹಿಳಾವಾದಿ ಹಾಗೂ ಸಮಾಜ ಸೇವಕನಾದ ಫ್ರಾನ್ಸಿಸ್ ಪವರ್ ಕಾಬ್ ಎಂಬಾತ 'ಪತ್ನಿಯ ಹಿಂಸೆ' ಎಂಬ ಹೆಸರಿನ ಕರಪತ್ರವನ್ನು ಬರೆದು ಹಂಚಿದ. ಅನೇಕ ಚಿಂತಕರಲ್ಲಿ ಹಾಗೂ ಮಹಿಳೆಯರಲ್ಲಿ ಕಾನೂನಿನ ಬಗ್ಗೆ ಬೆಳೆಯುತ್ತಿದ್ದ ಅಸಮಾಧಾನಕ್ಕೆ ಇದು ಧ್ವನಿ ನೀಡಿತು. ೧೮೭೮ರಲ್ಲಿ ವೈವಾಹಿಕ ಖಂಡಗಳ ಅಧಿನಿಯಮವನ್ನು ಹೊರಡಿಸಲಾಯಿತು. ತೀವ್ರವಾಗಿ ಹಲ್ಲೆ ನಡೆಸಿದ ಪತಿಯಿಂದ ಪತ್ನಿಗೆ ನ್ಯಾಯಿಕ ಬೇರ್ಪಡೆಯನ್ನು, ಜೀವನಾಂಶವನ್ನು ಹಾಗೂ ಮಕ್ಕಳ ಅಭಿರಕ್ಷೆಯನ್ನು ಕೊಡಿಸಲು ಈ ಕಾನೂನು ಮ್ಯಾಜಿಸ್ಟ್ರೇಟರಿಗೆ ಅಧಿಕಾರ ನೀಡಿತು. ಆದರೆ ಕೌಟುಂಬಿಕ ಹಿಂಸೆಯ ಬಗ್ಗೆ ಎರಿನ್ ಪಜ್ಜೆ ಎಂಬಾಕೆ ಏಕಾಂಗಿಯಾಗಿ ಮತ್ತೆ ಇದಕ್ಕೆ ಚಾಲನೆ ನೀಡುವವರೆಗೆ ಎಂದರೆ ಸುಮಾರು ಒಂದು ಶತಕದ ಕಾಲ ಈ ವಿಷಯ ಜನರ ಮನೋಭೂಮಿಕೆಯಿಂದ ಮರೆಯಾಗಿಬಿಟ್ಟಿತ್ತು. ಆಕೆಯ ಪ್ರಯತ್ನಗಳಿಂದಾಗಿ, ವಿಶೇಷವಾಗಿ ಪತ್ನಿಯ ಮೇಲೆ ನಡೆಯುವ ಹಲ್ಲೆಯ ವಿಷಯಕ್ಕೆ ವ್ಯಾಪಕ ಪ್ರಚಾರ ದೊರೆಯಿತು. ೧೯೭೫ರ ಜೂನ್‌ನಲ್ಲಿ ಹೌಸ್ ಆಫ್ ಕಾಮನ್ಸ್ 'ವೈವಾಹಿಕ ಹಿಂಸೆಯ ಬಗ್ಗೆ ಆಯ್ಕೆ ಸಮಿತಿಯ ವರದಿ'ಯನ್ನು ಪ್ರಕಟಿಸಿತು. ಮನೆಯೊಳಗಿನ ಹಿಂಸೆಯ ಬಗ್ಗೆ ಮಾಹಿತಿಯ ಕೊರತೆಯನ್ನು ವರದಿಯಲ್ಲಿ ಎತ್ತಿಹೇಳಲಾಗಿತ್ತು ಮತ್ತು ಈ ಬಗ್ಗೆ ಶೀಘ್ರವಾಗಿ ಹೆಚ್ಚಿನ ಅಧ್ಯಯನ ನಡೆಸಬೇಕೆಂದು ಸಹ ಬ್ರಿಟಿಷ್ ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು. ಪ್ರತಿ ರಾಷ್ಟ್ರದಲ್ಲಿಯೂ, ಕೌಟುಂಬಿಕ ಹಿಂಸೆ ಹಾಗೂ ಕ್ರೌರ್ಯಗಳಿಗೆ ಬಲಿಯಾಗುತ್ತಿರುವ ಮಹಿಳೆಯರ ಸಂಖ್ಯೆ ಅಲ್ಲಿಯ ಮಹಿಳಾ ವಾದಿಗಳಿಗೆ ಆತಂಕ ಉಂಟುಮಾಡುವ ಅಂಶವಾಗಿಯೇ

ಉಳಿದಿದೆ. ಇಂಥ ಪರಿಸ್ಥಿತಿಗೆ ಸಮಾಜ ಶಾಸ್ತ್ರಜ್ಞರಾದ ಫ್ರಿಮೆನ್ ಮತ್ತು ಕಾನೂನು ತಜ್ಞರಾದ ಮೈಡ್ ಮೆಂಟ್ ಅವರು ನೀಡುವ ಕಾರಣ-ಸಮಾಜದ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ. ಎಲ್ಲಿ ಪುರುಷರ ಪ್ರಾಧಾನ್ಯತೆಯಿರುತ್ತದೋ ಅಲ್ಲಿ ಪತ್ನಿಯ ಮೇಲೆ ಕ್ರೌರ್ಯ ಹಾಗೂ ಅಧಿಕಾರ ಪ್ರದರ್ಶನವಿರುತ್ತದೆ ಎಂಬುದು.

ಪತ್ನಿ, ತನ್ನನ್ನು ಕ್ರೂರವಾಗಿ ನಡೆಸಿಕೊಳ್ಳುವ ಪತಿಯನ್ನು ತೊರೆದು ಬರದಿರುವುದಕ್ಕೆ ಆಕೆಯ ಆರ್ಥಿಕ ಅವಲಂಬನೆ ಮುಖ್ಯಕಾರಣಗಳಲ್ಲಿ ಒಂದು ಎಂದು ಹೇಳಿದರೂ ಮೇಲ್ಜಾತಿಯ, ಮೇಲ್ ಮಧ್ಯಮ ವರ್ಗದ ನಗರದ ಸಂಘಟಿತ ಕ್ಷೇತ್ರದ ಮಹಿಳೆಯರೂ 'ಸಾಮಾಜಿಕ ಹಿಂಸೆ'ಗಿಂತ ಹೆಚ್ಚಾಗಿ ಇಂಥ 'ಕೌಟುಂಬಿಕ ಹಿಂಸೆ'ಗೆ ಗುರಿಯಾಗುತ್ತಾರೆ ಎಂಬುದು ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತದೆ. ಇವರಿಗೆ ರಕ್ಷಣೆ ನೀಡುವ ಕುಟುಂಬದ ಸದಸ್ಯರೇ ಬಹಳಷ್ಟು ಬಾರಿ ಇವರಿಗೆ ಅತ್ಯಂತ ಹೆಚ್ಚಿನ ಹಿಂಸೆಯ ಮೂಲವಾಗುತ್ತಾರೆ. ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ವರದಕ್ಷಿಣೆ ಸಾವುಗಳಾಗುವುದು, ಹೆಣ್ಣು ಭ್ರೂಣಹತ್ಯೆ ಹಾಗೂ ಹೆಂಡತಿಯನ್ನು ಹೊಡೆಯುವಂಥ ಹಿಂಸಾತ್ಮಕ ಕೃತ್ಯಗಳೂ ಈ ವರ್ಗದಲ್ಲೇ ಹೆಚ್ಚು. ಆದರೆ ಕೆಳವರ್ಗದ ಮತ್ತು ಗ್ರಾಮೀಣ ಮಹಿಳೆಯರಲ್ಲಿ ಇದು ಬೆಳಕಿಗೆ ಬರುವಂತೆ ಇವರಲ್ಲಿ ಅದು ಬೆಳಕಿಗೆ ಬರುವುದಿಲ್ಲ.

ಎಲ್ಲ ಬಗೆಯ ಕೌಟುಂಬಿಕ ಹಿಂಸೆ ಹಾಗೂ ಕ್ರೌರ್ಯದ ಕೃತ್ಯಗಳು ೪೯೮ ಎ ಪ್ರಕರಣದ ಅಡಿಯಲ್ಲಿ ದಂಡನೀಯ ಅಪರಾಧಗಳು. ಆದರೆ ಈ ಪ್ರಕರಣವನ್ನು ಹೆಚ್ಚುತ್ತಿರುವ ವರದಕ್ಷಿಣೆ ಸಾವು, ವರದಕ್ಷಿಣೆ ಕಿರುಕುಳದಿಂದಾಗಿ ಮಾಡಿಕೊಳ್ಳುವ ಆತ್ಮಹತ್ಯೆ ಹಾಗೂ ವರದಕ್ಷಿಣೆ ಕಿರುಕುಳಗಳ ಸಂಬಂಧದಲ್ಲಿ ಜಾರಿಗೊಳಿಸಿದುದರಿಂದಾಗಿ ವರದಕ್ಷಿಣೆಗೆ ಸಂಬಂಧಪಡದ ಕೌಟುಂಬಿಕ ಹಿಂಸೆಯ ಕೃತ್ಯಗಳ ಬಗೆಗಿನ ದೂರುಗಳನ್ನು ದಾಖಲು ಮಾಡಿಕೊಳ್ಳಲು ಸಹ ಪೋಲೀಸರು ಪ್ರಾರಂಭದಲ್ಲಿ ಸಿದ್ಧರಿರಲಿಲ್ಲ. ಪತಿಗೆ ಪತ್ನಿಯನ್ನು ಹೊಡೆಯಲು ಹಾಗೂ ದಂಡಿಸಲು ಹಕ್ಕಿದೆ ಎಂಬುದೇ ಪ್ರಚಲಿತ ಭಾವನೆ. ಹಾಗಾಗಿ ಭಾರತ ದಂಡಸಂಹಿತೆಯ ೩೨೩ ಮತ್ತು ೩೨೫ನೇ ಪ್ರಕರಣಗಳ ಮೇರೆಗೆ ಪತಿಯ ಹೊಡೆತದಿಂದ ತೀವ್ರವಾಗಿ ಗಾಯಗೊಂಡ ಪತ್ನಿ ಪತಿಯ ವಿರುದ್ಧ ಕೊಡುವ ದೂರನ್ನು ಸಹ ಇದೇ ಪುರುಷ ಪ್ರಧಾನ ವ್ಯವಸ್ಥೆಯ ಒಂದು ಭಾಗವಾಗಿರುವ ಪೋಲಿಸರು ಗಂಭಿರವಾಗಿ ಪರಿಗಣಿಸುತ್ತಿರಲಿಲ್ಲ. ಹಾಗಾಗಿ ಆ ಪ್ರಕರಣಗಳ ನೆರವು ಪಡೆದು ದೂರು ದಾಖಲು ಮಾಡುವ ಪ್ರಯತ್ನಗಳೂ ಅಪರೂಪವಾಗಿತ್ತು. ಅಲ್ಲದೆ ಧೈರ್ಯ ತಂದುಕೊಂಡು ಪೋಲೀಸರಲ್ಲಿ ದೂರುಕೊಡಲು ಪ್ರಯತ್ನಿಸಿದ ಮಹಿಳೆಯರನ್ನು ವಿಚಿತ್ರವಾಗಿ ನೋಡುತ್ತಿದ್ದರಲ್ಲದೆ, ದೂರನ್ನು ದಾಖಲು ಮಾಡಿಕೊಳ್ಳುವ ಬದಲು, ಗಂಡನೊಂದಿಗೆ ಹೊಂದಿಕೊಂಡು ಹೋಗುವಂತೆ ಬುದ್ಧಿಹೇಳಿ ಕಳುಹಿಸಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆ

ಹಾಗೂ ದೌರ್ಜನ್ಯಗಳನ್ನು ತಡೆಗಟ್ಟುವ ಪೂರ್ಣ ಪ್ರಮಾಣದ ಶಾಸನವನ್ನು ತರದಿದ್ದರೂ. ಭಾರತ ದಂಡ ಸಂಹಿತೆಗೆ ಒಂದು ಪ್ರಕರಣವನ್ನು ಸೇರಿಸುವ ಮೂಲಕ ಗಂಡನಿಂದ ಮತ್ತು ಅವನ ಬಂಧುಗಳಿಂದ ಉಂಟಾಗುವ ಕ್ರೌರ್ಯವನ್ನು ಅಪರಾಧವನ್ನಾಗಿಸಲಾಯಿತು. ಮನೆಯ ನಾಲ್ಕು ಗೋಡೆಗಳ ನಡುವೆ ಕುಟುಂಬದ ಸದಸ್ಯರಿಂದಲೇ ನಡೆಯುವ ಎಲ್ಲ ಹಿಂಸೆಯನ್ನೂ ವರದಕ್ಷಿಣೆ ಸಂಬಂಧೀ ಹಿಂಸೆಗಳೆಂದೇ ವರ್ಗೀಕರಿಸಿಬಿಡುವುದರಿಂದ ಅದನ್ನು ಹೊರತುಪಡಿಸಿದ ಹಿಂಸೆಯ ಪ್ರಕರಣಗಳಲ್ಲಿ ಹೆಚ್ಚಾಗಿ ಈ ಉಪಬಂಧದ ಉಪಯೋಗವನ್ನು ಪಡೆದುಕೊಂಡಿಲ್ಲವೆಂದೇ ಹೇಳಬೇಕು.

ಈ ಪ್ರಕರಣದಲ್ಲಿ ಎಲ್ಲಿಯೂ 'ವರದಕ್ಷಿಣೆ' ಎಂಬ ಪದವನ್ನು ಬಳಸಿಲ್ಲ ಎಂಬುದು ಮತ್ತು ಇದರಲ್ಲಿ 'ಮಾನಸಿಕ ಕ್ರೌರ್ಯ'ವನ್ನು ಸೇರಿಸಲಾಗಿರುವುದು ಪ್ರಮುಖವಾದ ಅಂಶಗಳು. ಗಾಯಕ್ಕೆ ಸಂಬಂಧಿಸಿದಂತೆ, ತೀವ್ರಗಾಯ ಎಂದು ಬಳಸಿರುವುದರಿಂದ ಬಹುಪಾಲು ಮಹಿಳೆಯರು ದಿನನಿತ್ಯ ಎದುರಿಸುತ್ತಿರುವ ಸಾಮಾನ್ಯ ಹಿಂಸೆಗಳು ಈ ಪರಿಧಿಯಿಂದ ಹೊರಗೇ ಉಳಿದುಬಿಡುತ್ತವೆ. ಹಾಗಿದ್ದೂ ಸಹ ನ್ಯಾಯಾಂಗ ಮತ್ತು ಪೋಲಿಸರು ಕಾನೂನಿನ ಈ ಪ್ರಕರಣವನ್ನು ಸರಿಯಾದ ರೀತಿಯಲ್ಲಿ ವ್ಯಾಖ್ಯಾನಿಸಿ ಅದರ ಆಶಯ ನೆರವೇರುವ ರೀತಿಯಲ್ಲಿ ಅನ್ವಯಿಸಿದರೆ, ಹಿಂಸಾಚಾರೀ ಗಂಡಂದಿರ ವಿರುದ್ಧ ಮಹಿಳೆಯರ ಕೈಗೆ ಒದಗುವ ಒಂದು ಭಯೋತ್ಪಾದಕ ಅಸ್ತ್ರವಾಗುವ ಸಾಧ್ಯತೆಯಿದೆ. ಆದರೆ, ಆರ್ಥಿಕ ಪರಾವಲಂಬನೆ, ಅನಕ್ಷರತೆಯಿಂದ ಬಳಲುತ್ತಿರುವ ಹಾಗೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಸ್ವತಂತ್ರ್ಯ ನಿರ್ಧಾರ ಕೈಗೊಳ್ಳಲು ಅವಕಾಶಗಳು ತೀರ ಕಡಿಮೆಯಿರುವ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಇದರ ಉಪಯೋಗ ಪಡೆಯುವ ಮಹಿಳೆಯರು ತೀರ ಬೆರಳೆಣಿಕೆಯಷ್ಟು. ಇದರ ಉಪಯೋಗ ಪಡೆದವರೂ ಸಹ ದೂರು ನೀಡಿದ ಕೆಲವೇ ದಿನಗಳಲ್ಲಿ ಹಿಂತೆಗೆದುಕೊಂಡಿರುವ ಸಂದರ್ಭಗಳೇ ಹೆಚ್ಚು. ಇದಕ್ಕೆ ಕಾರಣ ಮತ್ತೆ ಮಹಿಳೆಯಿರುವ ಸಾಮಾಜಿಕ ಸಂದರ್ಭ. ಅವಳು ದೂರುಕೊಟ್ಟ, ನಂತರವೂ ಹಿಂಸಿಸುವ ಗಂಡನ ಮನೆಯಲ್ಲೇ ಉಳಿಯಬೇಕಾಗುತ್ತದೆ ಎಂಬ ವಾಸ್ತವ ಸಂದರ್ಭ. ಕೌಟುಂಬಿಕ ಕ್ರೌರ್ಯವನ್ನು ಅಪರಾಧವನ್ನಾಗಿ ಸುವ ಕಾನೂನು, ವೈವಾಹಿಕ ಗೃಹದಲ್ಲಿರುವ ಅವಳ ಹಕ್ಕನ್ನು ಸಂರಕ್ಷಿಸುವುದಿಲ್ಲ, ಇಲ್ಲವೆ ಅವಳ ವಸತಿಗೆ ಪರ್ಯಾಯ ವ್ಯವಸ್ಥೆಯನ್ನೂ ಕಲ್ಪಿಸುವುದಿಲ್ಲ. ಹಿಂಸೆಗೊಳಗಾದಾಗ ಅದನ್ನು ವಿರೋಧಿಸುವ ರೋಷದಿಂದ ಕಾನೂನಿನ ಮೊರೆಹೊಕ್ಕರೂ, ಅವಳು ಆರ್ಥಿಕವಾಗಿ ಅವಲಂಬಿತಳಾಗಿದ್ದರೆ, ಕೊನೆಗೆ ದೂರನ್ನು ಹಿಂದಕ್ಕೆ ಪಡೆದು ರಾಜಿ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಗಂಡನನ್ನು ಶಿಕ್ಷಿಸುವುದಕ್ಕಿಂತ, ತನ್ನ ಸಂಸಾರವನ್ನು ಸರಿಪಡಿಸಿಕೊಳ್ಳುವುದರತ್ತಲೇ ಅವಳ ಒಲವಿರುತ್ತದೆ. ಇದು ಶೇ.೯೦ರಷ್ಟು ಸತ್ಯ. ಸರಿಪಡಿಸಿಕೊಳ್ಳಲಾರದ ವಿವಾಹ ಸಂಬಂಧವಾದಲ್ಲಿ, ೪೯೮ ಎ ಪ್ರಕರಣದ ಅಡಿಯಲ್ಲಿ ಗಂಡನನ್ನು ಶಿಕ್ಷಿಸುವ ಮಾರ್ಗವನ್ನು ಆಯ್ಕೆ ಮಾಡಿಕೊಳ್ಳುವ ಬದಲು ಸಿವಿಲ್ ಕಾನೂನಿನ ಅಡಿಯಲ್ಲಿ

ವಿಚ್ಛೇದನೆ ಪಡೆಯುವುದನ್ನೆ ಆಯ್ಕೆ ಮಾಡಿಕೊಳ್ಳುತ್ತಾಳೆ. ಹಾಗೆ ಆಯ್ಕೆ ಮಾಡಕೊಂಡಲ್ಲಿ, ಅವಳಿಗೆ ಜೀವನಾಂಶ ದೊರೆತು ಮುಂದಿನ ಜೀವನಕ್ಕೆ ಆರ್ಥಿಕ ಭದ್ರತೆಯೂ ದೊರೆತಂತಾಗುತ್ತದೆ.

ಇಷ್ಟಾದರೂ ೪೯೮ ಎ ಪ್ರಕರಣ, ಹಿಂಸಾಚಾರೀ ಗಂಡಂದಿರಿಗೆ ಬುದ್ಧಿಕಲಿಸುವ ಮಟ್ಟಿಗೆ ಅತ್ಯಂತ ಉಪಯುಕ್ತ. ಈ ಪ್ರಕರಣದ ಅಡಿಯಲ್ಲಿ ಕೊಟ್ಟ ದೂರು ವಿಚಾರಣೆಯಾಗಿ ನ್ಯಾಯಾಲಯದಿಂದ ಶಿಕ್ಷೆಯಾಗುವವರೆಗೆ ಪ್ರಕರಣವನ್ನು ಮುಂದುವರಿಸದಿದ್ದರೂ, ಈ ಅಪರಾಧ ಜಾಮೀನೀಯ ಅಪರಾಧವಲ್ಲದ ಕಾರಣ ದೂರು ನೀಡಿದ ಕೂಡಲೇ ಅವರಿಗೆ ಒದಗುವ ಪ್ರಾರಂಭಿಕ ಜೈಲುವಾಸ, ಪತ್ನಿ ಹಿಂಸೆಯನ್ನು ಮೌನವಾಗಿ ಸಹಿಸುವುದಿಲ್ಲ ಎಂಬ ಸಂದೇಶವನ್ನು ನೀಡುವುದರಲ್ಲಂತೂ ಯಶಸ್ವಿಯಾಗುತ್ತದೆ.

ಭಾರತ ದಂಡ ಸಂಹಿತೆಯ ೪೯೮ನೇ ಪ್ರಕರಣ ವಿವಾಹಿತ ಸ್ತ್ರೀಯನ್ನು ಆಪರಾಧಿಕ ಉದ್ದೇಶದಿಂದ ಪುಸಲಾಯಿಸುವುದು ಅಥವಾ ಕರೆದುಕೊಂಡು ಹೋಗುವುದನ್ನು ಅಪರಾಧವನ್ನಾಗಿಸುತ್ತದೆ. ಈ ಪ್ರಕರಣ, ಯಾರೇ ವ್ಯಕ್ತಿ ತನ್ನ ಪತ್ನಿಯನ್ನು ಕರೆದೊಯ್ದರೆ, ಪತ್ನಿಯ ಒಪ್ಪಿಗೆಯಿದ್ದು ಹಾಗೆ ಕರೆದೊಯ್ದ ವ್ಯಕ್ತಿಯ ವಿರುದ್ಧ ಕಾನೂನು ಕ್ರಮಕೈಗೊಳ್ಳಲು ಪತಿ ಹಕ್ಕು ಹೊಂದಿರುತ್ತಾನೆ.

೪೯೭ನೇ ಪ್ರಕರಣ ತನ್ನ ಪತ್ನಿಯ ವ್ಯಭಿಚಾರಿಯ ವಿರುದ್ಧ ಕಾನೂನು ಕ್ರಮಕೈಗೊಳ್ಳಲು ಪತಿಗೆ ಹಕ್ಕು ನೀಡುತ್ತದೆ. ಆದರೆ ತನ್ನ ಪತಿಯೊಡನೆ ವ್ಯಭಿಚಾರ ನಡೆಸಿದ ವ್ಯಭಿಚಾರಿಣಿಯ ವಿರುದ್ಧ ಕಾನೂನು ಕ್ರಮಕೈಗೊಳ್ಳಲು ಪತ್ನಿಗೆ ಹಕ್ಕು ನೀಡುವುದಿಲ್ಲ. ಹಾಗೆಯೇ ಇತರ ಮಹಿಳೆಯೊಡನೆ ವ್ಯಭಿಚಾರ ನಡೆಸಿದ ಪತಿಯ ವಿರುದ್ಧ ಕ್ರಮಕೈಗೊಳ್ಳಲು ಸಹ ಪತ್ನಿಗೆ ಯಾವುದೇ ಹಕ್ಕು ನೀಡುವುದಿಲ್ಲ.

ಹಾಗಾಗಿ, ಮೇಲಿನ ಎರಡೂ ಪ್ರಕರಣಗಳೂ ಮಹಿಳೆಯ ಅಧೀನ ಸ್ಥಾನಮಾನವನ್ನು ಸ್ಪಷ್ಟವಾಗಿ ಸೂಚಿಸುವಂಥ ಪ್ರಕರಣಗಳಾಗಿವೆ. ಪತಿಯ ಕ್ರೌರ್ಯಕ್ಕೆ ಹಾಗೂ ದಬ್ಬಾಳಿಕೆ ಒಳಗಾಗದೆ ಅದನ್ನು ಪ್ರಶ್ನಿಸುವ ಹಕ್ಕನ್ನು ನೀಡುವ ೪೯೮ ಎ ಪ್ರಕರಣವನ್ನು ಇದರೊಂದಿಗೆ ಸೇರಿಸಿದುದರ ಔಚಿತ್ಯ ಅರ್ಥವಾಗುವುದಿಲ್ಲ.

ಇಂಗ್ಲಿಷ್ ಕಾನೂನಿನ ಪ್ರಕಾರ ಹಿಂಸಾಚಾರಿ ಗಂಡನನ್ನು ಕೆಲದಿನಗಳ ಮಟ್ಟಿಗೆ ಮನೆಯಿಂದ ಹೊರ ಹಾಕಲು ಪತ್ನಿಗೆ ಅವಕಾಶವಿದೆ. ಕೌಟುಂಬಿಕ ಹಿಂಸೆ ಮತ್ತು ವೈವಾಹಿಕ ವ್ಯವಹರಣೆಗಳ ಅಧಿನಿಯಮ, ೧೯೭೬ರ ಅಡಿಯಲ್ಲಿ ಪತಿಯನ್ನು ಮನೆಗೆ ಬರದಂತೆ ಮತ್ತು ಮಕ್ಕಳನ್ನು ಭೇಟಿ ಮಾಡದಂತೆ ನಿರ್ಬಂಧಿಸಲಾಗುತ್ತದೆ. ನ್ಯೂಯಾರ್ಕ್ ಕಾನೂನಿನಲ್ಲಿಯೂ ಇಂಥ ಉಪಬಂಧವಿದೆ. 'ಹೊರದೂಡಿಕೆ ಆದೇಶ' ಎಂದು ಕರೆಯಲಾಗುವ ಈ ಆದೇಶವನ್ನು ಉಲ್ಲಂಘಿಸಿದರೆ ಅಥವಾ ಉಲ್ಲಂಘಿಸಬಹುದೆಂದು ಸಕಾರಣವಾಗಿ ಊಹಿಸಬಹುದಾಗಿದ್ದರೆ ಅವನು ದಸ್ತಗಿರಿ ಹಾಗೂ ಜುಲ್ಮಾನೆಯ ದಂಡನೆಗೆ ಗುರಿಯಾಗ ಬೇಕಾಗುತ್ತದೆ. ಭಾರತದಲ್ಲಿಯೂ ಈ ಕ್ರಮವನ್ನು ಅನುಸರಿಸುವುದು ಸೂಕ್ತ ಎಂಬ ಸಲಹೆ ಇದೆ.

ಭಾರತದಲ್ಲಿ ಲಿಂಗಬೇಧ ಮಾಡದೇ ನ್ಯಾಯದೊರಕಿಸಿಕೊಡಬೇಕೆನ್ನುವ ಎಲ್ಲ ಪ್ರಯತ್ನಗಳಲ್ಲಿಯೂ ಪ್ರಮುಖ ಆದ್ಯತೆಯನ್ನು ಗಳಿಸಿಕೊಂಡಿರುವುದು ಕಾನೂನಿನಲ್ಲಿ ಮಾಡಬೇಕಾಗಿರುವ ಸುಧಾರಣೆಗಳು. ಹತ್ತೊಂಬತ್ತನೆ ಶತಮಾನದ ಸಮಾಜ ಸುಧಾರಣಾ ಆಂದೋಲನಗಳು, ಅನಂತರದ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಗಳಿಂದ ಹಿಡಿದು ಸಮಕಾಲೀನ ಮಹಿಳಾ ಚಳವಳಿಗಳವರೆಗೂ ಅವುಗಳ ಕೇಂದ್ರಬಿಂದು ಕಾನೂನುಗಳ ಸುಧಾರಣೆಯೇ ಆಗಿದ್ದವು ಎಂದರೆ ತಪ್ಪಲ್ಲ. ಇತ್ತೀಚಿನ ದಿನಗಳಲ್ಲಿ, ಲಿಂಗತಾರತಮ್ಯವಿಲ್ಲದ ನ್ಯಾಯ ದೊರಕಿಸಿಕೊಡುವ ಹಾಗೂ ಸರ್ವಸಮಾನತೆಯುಳ್ಳ ಸಮಾಜ ರಚನೆಯ ಪ್ರಯತ್ನಗಳು ವ್ಯಕ್ತವಾದದ್ದು, ಮೊತ್ತಮೊದಲು ಭಾರತದಲ್ಲಿ ಸಮಕಾಲೀನ ಮಹಿಳಾ ಚಳವಳಿಯನ್ನು ಗುರುತಿಸುವಂಥ 'ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಅಧ್ಯಯನ ಸಮಿತಿ ವರದಿ'ಯ ಮೂಲಕ ಎನ್ನಬಹುದು. ಬ್ರಿಟಿಷ್ ಆಳ್ವಿಕೆಯ ನಂತರದ ಭಾರತದಲ್ಲಿ ಕಾನೂನನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖ ಬದಲಾವಣೆಗಳನ್ನು ತರಬಲ್ಲ ಪ್ರಮುಖ ಸಾಧನವನ್ನಾಗಿ ಸಮಿತಿ ಪರಿಗಣಿಸಿದೆ. ''ಕಾನೂನು ಪ್ರತ್ಯೇಕವಾಗಿ ಒಂದು ವ್ಯವಸ್ಥೆಯನ್ನು ರೂಪಿಸಲು, ಪರೋಕ್ಷವಾಗಿ, ಸಾಮಾಜಿಕ ಬದಲಾವಣೆಯನ್ನು ತರಬಲ್ಲ ಸಂಘಸಂಸ್ಥೆಗಳನ್ನು ಒಪ್ಪಿಕೊಳ್ಳುವಂತೆ ಮಾಡಲು ನೆರವಾಗುತ್ತದೆ'' ಎಂದು ಸಮಿತಿ ಅಭಿಪ್ರಾಯಪಟ್ಟಿತು. ಒಂದು ರಾಷ್ಟ್ರ ಕಟ್ಟುವ, ಅಭಿವೃದ್ಧಿಪಡಿಸುವ, ಸಮಾಜವನ್ನು ಪುನರ್ನಿರ್ಮಿಸುವ ಮಹತ್ಕಾರ್ಯದ ಒಂದು ಭಾಗವೇ ಲಿಂಗ ತಾರತಮ್ಯವಿಲ್ಲದ ಸಮಾಜದ ನಿರ್ಮಾಣ. ಈ ಪ್ರಯತ್ನದಲ್ಲಿ ಕಾನೂನು ದೃಢವಾದ, ಸುನಿಶ್ಚಿತವಾದ ಹಾಗೂ ಸಕಾರಾತ್ಮಕವಾದ ಪಾತ್ರವಹಿಸುತ್ತದೆ.

ಮಹಿಳೆಯರ ವಿರುದ್ಧ ನಡೆದ ನಿರ್ದಿಷ್ಟ ದೌರ್ಜನ್ಯ ಪ್ರಕರಣಗಳನ್ನು ಕೇಂದ್ರವಾಗಿಸಿಕೊಂಡು ಸಾರ್ವಜನಿಕ ಅಭಿಪ್ರಾಯ ರೂಪಿಸುವ ಮೂಲಕ ಕಾನೂನಿನಲ್ಲಿ ಪರಿಹಾರ ದೊರಕಿಸಿಕೊಡುವತ್ತ ಎಂಬತ್ತರ ದಶಕದಲ್ಲಿ ಮಹಿಳಾ ಚಳವಳಿಗಳು ಗಮನಹರಿಸಿದವು. ೧೯೭೯ರ ಮಥುರಾ ಅತ್ಯಾಚಾರ ಪ್ರಕರಣ, ೧೯೮೫ರ ಮುಸ್ಲಿಂ ವೈಯಕ್ತಿಕ ಕಾನೂನಿನಡಿಯಲ್ಲಿ ನಡೆದ ಷಾಬಾನು ವಿಚ್ಛೇದನೆ ಪ್ರಕರಣ, ೧೯೯೪ರ ಬನ್ವಾರಿ ಅತ್ಯಾಚಾರ ಪ್ರಕರಣಗಳು ಬಹುಮಟ್ಟಿಗೆ ಭಾರತದಲ್ಲಿನ ಸಮಕಾಲೀನ ಮಹಿಳಾ ಚಳವಳಿಯ ದಿಕ್ಕನ್ನು ನಿರ್ಧರಿಸಿದವು ಎನ್ನಬಹುದು.

ಮಥುರಾ ಅತ್ಯಾಚಾರ ಪ್ರಕರಣ ಸಾರ್ವಜನಿಕ ಆಕ್ರೋಶಕ್ಕೆ ಕಾರಣವಾಯಿತಲ್ಲದೆ, ಆ ಮೂಲಕ ಅತ್ಯಾಚಾರ ಸಂಬಂಧೀ ಕಾನೂನುಗಳಲ್ಲಿ ಕೆಲವೊಂದು ಮೂಲಭೂತ ತಿದ್ದುಪತಿಗಳನ್ನು ತರಲೂ ಕಾರಣವಾಯಿತು. ಇದರ ಪರಿಣಾಮವಾಗಿ, ಈ ಅಪರಾಧಕ್ಕೆ ಶಿಕ್ಷೆ ಹೆಚ್ಚು ಕಠಿಣವಾಯಿತಾದರೂ, ವಾಸ್ತವ ಪರಿಸ್ಥಿತಿಯಲ್ಲಿ ಏನೊಂದೂ ಬದಲಾವಣೆಯಾಗಲಿಲ್ಲ. ಅಷ್ಟೇ ಅಲ್ಲ, ಸುಧಾರಣೆಯ ನಂತರದ

ವರ್ಷಗಳಲ್ಲಿ ಈ ಅಪರಾಧಕ್ಕಾಗಿ ಶಿಕ್ಷೆಗೆ ಒಳಪಟ್ಟವರ ಸಂಖ್ಯೆ ಗಣನೀಯವಾಗಿ ಇಳಿದಿದೆ ಎಂಬುದು ಆತಂಕವನ್ನುಂಟುಮಾಡುವಂಥದ್ದು.

ಷಾ ಬಾನು ಪ್ರಕರಣವಂತೂ ಸಂವೇದನಾಶೀಲ ನಾಗರಿಕರೆಲ್ಲರಿಗೂ, ಜಾತಿಧರ್ಮಗಳನ್ನು ಮೀರಿ, ದಿಗ್ಭ್ರಮೆಯುಂಟುಮಾಡುವಂಥದ್ದು. ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ, ಇತರ ಧರ್ಮಗಳಿಗೆ ಸೇರಿದ ಭಾರತೀಯ ಮಹಿಳೆಯರಂತೆಯೇ, ವಿಚ್ಛೇದಿತ ಮುಸ್ಲಿಂ ಮಹಿಳೆಯೂ ಸಹ, ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೆ ಪತಿಯಿಂದ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವಳಾಗಿದ್ದಾಳೆ ಎಂದು ಅಭಿಪ್ರಾಯ ಪಟ್ಟು ತೀರ್ಪು ನೀಡಿತು. ಆದರೆ ಸಂಪ್ರದಾಯಶೀಲ ಮುಸ್ಲಿಂ ಸಮಾಜ ಈ ತೀರ್ಪು ತಮ್ಮ ವೈಯಕ್ತಿಕ ಕಾನೂನುಗಳ ಉಲ್ಲಂಘನೆ ಎಂದು ಭಾವಿಸಿ ಆ ಬಗ್ಗೆ ತಮ್ಮ ತೀವ್ರ ವಿರೋಧವನ್ನು ವ್ಯಕ್ತಪಡಿಸಿದರು. ಮುಸ್ಲಿಂ ಸಂಪ್ರದಾಯವಾದಿಗಳ ಒತ್ತಡಕ್ಕೆ ಮಣಿದು ಸರ್ಕಾರ ಹೊಸ ಕಾನೂನನ್ನು ಜಾರಿಗೊಳಿಸುವ ಮೂಲಕ, ಸರ್ವೋಚ್ಚ ನ್ಯಾಯಾಲಯದ ತೀರ್ಪು ಪರಿಣಾಮಕಾರಿಯಾಗದಂತೆ ಮಾಡಿತು. ಸಮಾಜದಲ್ಲಿ ತರಬಹುದಾಗಿದ್ದ ಒಂದು ಸುಧಾರಣೆಯ ಪ್ರಯತ್ನ ರಾಜಕೀಯ ಅಗತ್ಯಗಳಿಗಾಗಿ ವಿಫಲಗೊಂಡಿತು.

ಬನ್ವಾರಿದೇವಿ ಪ್ರಕರಣ ಪುರುಷಪ್ರಧಾನ, ಸಮಾಜದ ಯಾವುದೇ ರೂಢಿಗತ ಆಚರಣೆಯನ್ನು ವಿರೋಧಿಸುವ ಅಥವಾ ಸುಧಾರಿಸಲೆತ್ನಿಸುವ ಯಾವುದೇ ಪ್ರಯತ್ನಕ್ಕೆ ಸಮಾಜ ತೋರಿಸಬಹುದಾದ ಪ್ರತಿಕ್ರಿಯೆಗೆ ಸಾಕ್ಷಿಯಾಗಿದೆ. ರಾಜಾಸ್ಥಾನ ಸರ್ಕಾರದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಕೆಲಸಮಾಡುತ್ತಿದ್ದ ಬನ್ವಾರಿದೇವಿ ಸಮುದಾಯದಲ್ಲಿ ಆಚರಣೆಯಲ್ಲಿದ್ದ ಬಾಲ್ಯವಿವಾಹವನ್ನು ವಿರೋಧಿಸಿದಳೆಂಬ ಕಾರಣಕ್ಕೆ ಅವಳನ್ನು ಸಾಮೂಹಿಕ ಅತ್ಯಾಚಾರಕ್ಕೆ ಗುರಿಪಡಿಸಿದರು. ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿರುವ ಪುರುಷಪ್ರಧಾನ ಅಧಿಕಾರ ಸಂರಚನೆಯನ್ನು ಕಾನೂನಿನ ಮೂಲಕ ಮಾತ್ರವೇ ಪ್ರಶ್ನಿಸುವುದು ಅಸಾಧ್ಯವಾದ ಕೆಲಸ ಎಂಬುದನ್ನು ಈ ಪ್ರಕರಣ ಸಾಬೀತುಪಡಿಸಿತು.

ಇಂಥ ಪ್ರಕರಣಗಳಿಂದಾಗಿ ಕಳೆದ ಇಪ್ಪತ್ತು ಇಪ್ಪತ್ತೈದು ವರ್ಷಗಳಲ್ಲಿ ನಡೆದ ಮಹಿಳಾ ಚಳವಳಿಗಳು, ಕಾನೂನಿಗೆ ತಂದ ತಿದ್ದುಪಡಿಗಳು ಮಹಿಳೆಯ ಸ್ಥಿತಿಗತಿಯಲ್ಲಿ ಯಾವುದೇ ರೀತಿಯ ಸುಧಾರಣೆಯನ್ನು ತರುವಲ್ಲಿ ಸಫಲವಾಗಿವೆಯೇ, ಸಮಾಜದಲ್ಲಿನ ಸ್ತ್ರೀಪುರುಷ ತಾರತಮ್ಯವನ್ನು ಕಡಿಮೆ ಮಾಡುವಲ್ಲಿ, ಯಶಸ್ವಿಯಾಗಿವೆಯೇ ಎಂಬ ಪ್ರಶ್ನೆ ಮತ್ತೆಮತ್ತೆ ಉಂಟಾಗುತ್ತದೆ.

ಹೊಸಕಾನೂನುಗಳನ್ನು ಜಾರಿಗೊಳಿಸುವುದು ಹಾಗೂ ಜಾರಿಯಲ್ಲಿರುವ ಕಾನೂನುಗಳಿಗೆ ತಿದ್ದುಪಡಿಗಳನ್ನು ತರುವುದು ಸಹ ಸುಧಾರಣೆಯ ಕ್ರಮಗಳು ಎನ್ನುವ ದೃಷ್ಟಿಯಿಂದ ಎಂಬತ್ತರ ದಶಕವನ್ನು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಾನೂನುಗಳು ಬಂದ ದಶಕವೆಂದು ಗುರುತಿಸಬಹುದು.

ಈ ಅವಧಿಯಲ್ಲಿ ಮಹಿಳೆಯ ವಿರುದ್ಧ ದೌರ್ಜನ್ಯದ ಪ್ರತಿಯೊಂದು ಪ್ರಕರಣವನ್ನು ಮಹಿಳಾ ಚಳವಳಿ ಕೈಗೆತ್ತಿಕೊಂಡಿತಲ್ಲದೆ, ಪ್ರತಿಯೊಂದು ಅಂಥ ಚಳವಳಿಯೂ ಕಾನೂನಿನ ಸುಧಾರಣೆ(ತಿದ್ದುಪಡಿ)ಯಲ್ಲಿ ಕೊನೆಗೊಂಡಿತು. ಇವೆಲ್ಲವೂ ಸಮಾಜದಲ್ಲಿ ಮಹಿಳೆಯ ಸ್ಥಾನಮಾನವನ್ನು ಸುಧಾರಿಸುವ ಧನಾತ್ಮಕ ಕ್ರಮಗಳಾದರೂ ಸಹ ಆ ಅವಧಿಯ ಅಂಕಿ ಅಂಶಗಳು ತೀರ ನಿರಾಶಾದಾಯಕವಾದ ಚಿತ್ರಣವನ್ನು ಕಟ್ಟಿಕೊಡುತ್ತವೆ. ಪ್ರತಿವರ್ಷವೂ ಹೆಚ್ಚಿದ ಅತ್ಯಾಚಾರ ಹಾಗೂ ಅಸ್ವಾಭಾವಿಕ ಮರಣಗಳ ಸಂಖ್ಯೆ ಮತ್ತು ಇಳಿಮುಖವಾದ ಅಪರಾಧ ನಿರ್ಣಯಗಳ ಸಂಖ್ಯೆ ಈ ಕಾನೂನುಗಳ ವೈಫಲ್ಯವನ್ನು ಎತ್ತಿ ತೋರಿಸುತ್ತದೆ. ಮಹಿಳಾ ದೌರ್ಜನ್ಯದ ವಿರುದ್ಧ ಬಂದಿರುವ ಎಲ್ಲ ಕಾನೂನುಗಳೂ ಕೇವಲ ಕಾನೂನು ಪುಸ್ತಕಗಳಲ್ಲಿ ಉಳಿದಿವೆಯೇ ಹೊರತು ಅವನ್ನು ಯಶಸ್ವಿಯಾಗಿ ಜಾರಿಗೊಳಿಸಲಾಗಿಲ್ಲ. ಇದಕ್ಕೆ ಕಾರಣಗಳನ್ನು ವಿಶ್ಲೇಷಿಸುವುದಕ್ಕೆ ಮುನ್ನ ಮಹಿಳಾ ದೌರ್ಜನ್ಯದ ವಿರುದ್ಧ ಜಾರಿಯಲ್ಲಿರುವ ಕಾನೂನುಗಳನ್ನು ಸ್ಥೂಲವಾಗಿ ಪರಿಚಯಿಸಿಕೊಳ್ಳುವುದು ಅಗತ್ಯ.

ಅತ್ಯಾಚಾರ ಪ್ರಕರಣಗಳಿಗೆ ಸಂಬಂಧಿಸಿದ ಭಾರತ ದಂಡಸಂಹಿತೆಯ ೩೭೫ ಮತ್ತು ೩೭೬ನೇ ಪ್ರಕರಣಗಳು ೧೮೬೦ರಿಂದಲೂ ತಿದ್ದುಪಡಿಯಾಗಿರಲಿಲ್ಲ. ದೇಶಾದ್ಯಂತ ಸುದ್ದಿಮಾಡಿದ ಮಥುರಾ ಪ್ರಕರಣದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಈ ಪ್ರಕರಣಗಳ ತಿದ್ದುಪಡಿಗೆ ಕಾರಣವಾಯಿತು.

ಮಥುರಾ ಹದಿನಾರು ವರ್ಷದ ಗುಡ್ಡಗಾಡು ಜನಾಂಗದ ಹುಡುಗಿ. ಅವಳನ್ನು ಅವಳ ಪ್ರಿಯತಮ ಅಪಹರಿಸಿದ್ದಾನೆಂದು ಮಥುರಾಳ ಅಣ್ಣ ಪೊಲೀಸು ಠಾಣೆಯಲ್ಲಿ ದೂರು ನೀಡಿದ್ದ. ದೂರಿನ ಆಧಾರದ ಮೇಲೆ, ಮಥುರಾ ಹಾಗೂ ಅವಳ ಪ್ರಿಯತಮನನ್ನು ಠಾಣೆಗೆ ಕರೆತರಲಾಗಿತ್ತು. ಠಾಣೆಯಲ್ಲಿ ಮಥುರಾಳ ಅಣ್ಣ, ಅತ್ತೆ ಹಾಗೂ ಪ್ರಿಯತಮನ ಎದುರಿನಲ್ಲಿಯೇ ಅವಳನ್ನು ಠಾಣೆಯೊಳಕ್ಕೆ ಕೈಹಿಡಿದು ಕರೆದೊಯ್ದು ಇಬ್ಬರು ಪೋಲಿಸು ಪೇದೆಗಳು ಅವಳ ಮೇಲೆ ಅತ್ಯಾಚಾರವೆಸಗಿದರು. ಈ ಪ್ರಕರಣದಲ್ಲಿ ಸೆಷನ್ಸ್ ನ್ಯಾಯಾಲಯ, ಮಥುರಾಳಿಗೆ ಲೈಂಗಿಕ ಸಂಭೋಗ ರೂಢಿಗತವಾಗಿತ್ತು ಎಂಬ ಕಾರಣವನ್ನು ನೀಡಿ ಪೋಲೀಸು ಪೇದೆಗಳನ್ನು ಖುಲಾಸೆ ಮಾಡಿತು. ಆದರೆ ಉಚ್ಚ ನ್ಯಾಯಾಲಯ, ಅವರು ಪೋಲಿಸರೆಂಬ ಹೆದರಿಕೆಯಿಂದ ಅವಳು ಸುಮ್ಮನಿದ್ದುದನ್ನು "ಸಮ್ಮತಿ" ಎಂದು ಭಾವಿಸಬಾರದು ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಅವರನ್ನು ಅಪರಾಧಿಗಳೆಂದು ನಿರ್ಧರಿಸಿತು. ಆದರೆ ಮಥುರಾ ಪೋಲೀಸರ ಕೃತ್ಯಕ್ಕೆ ವಿರೋಧ ವ್ಯಕ್ತಪಡಿಸಲಿಲ್ಲ, ಸಹಾಯಕ್ಕಾಗಿ ಕೂಗಿಕೊಳ್ಳಲಿಲ್ಲ ಮತ್ತು ಅವಳ ದೇಹದ ಮೇಲೆ ಕಾಣುವಂಥ ಯಾವುದೇ ಗಾಯದ ಗುರುತುಗಳಿಲ್ಲ ಎಂಬ ಕಾರಣಗಳ ಮೇಲೆ ಉಚ್ಚ ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಿ, ಸರ್ವೋಚ್ಚ ನ್ಯಾಯಾಲಯ ಅಪರಾಧಿಗಳನ್ನು ಖುಲಾಸೆ ಮಾಡಿತು. ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪು ದೇಶಾದ್ಯಂತ ವ್ಯಾಪಕ ಪ್ರತಿಕ್ರಿಯೆಯನ್ನು ಉಂಟುಮಾಡಿತು.

ಅತ್ಯಾಚಾರಕ್ಕೆ ಸಂಬಂಧಿಸಿದ ವಿಚಾರಣೆಯಲ್ಲಿ 'ತನ್ನ ಸಮ್ಮತಿ ಇರಲಿಲ್ಲ' ಎಂಬುದನ್ನು ಕ್ರಿಮಿನಲ್ ವ್ಯವಹರಣೆಗಳಲ್ಲಿ ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತುಪಡಿಸುವುದು ಅತ್ಯಂತ ಕಷ್ಟವಾದುದು ಎಂಬುದನ್ನು ಮಥುರಾ ಅತ್ಯಾಚಾರ ಪ್ರಕರಣ ಎತ್ತಿ ತೋರಿಸಿತು. ಹಾಗಾಗಿ ಅತ್ಯಾಚಾರ ಕಾನೂನಿನಲ್ಲಿ 'ಸಮ್ಮತಿ' ಎಂಬುದನ್ನು ಮರುಪರಿಭಾಷಿಸಬೇಕೆಂಬುದು ಮಥುರಾ ತೀರ್ಪಿನ ವಿರುದ್ಧ ನಡೆದ ಆಂದೋಲನದಲ್ಲಿ ಮುಖ್ಯವಾದ ಬೇಡಿಕೆಯಾಗಿತ್ತು. ಅತ್ಯಾಚಾರ ಕಾನೂನಿನಲ್ಲಿ ಎರಡು ಮಹತ್ವದ ತಿದ್ದುಪಡಿಗಳಿಗಾಗಿ ಈ ಆಂದೋಲನ ಒತ್ತಾಯಿಸಿತು. ಅತ್ಯಾಚಾರ ಪ್ರಕರಣದಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆ ಅದಕ್ಕೆ ತನ್ನ ಸಮ್ಮತಿ ಇರಲಿಲ್ಲವೆಂದು ಹೇಳಿಕೆ ನೀಡಿದರೆ, ನ್ಯಾಯಾಲಯ ಅವಳ ಸಮ್ಮತಿ ಇರಲಿಲ್ಲವೆಂಬುದನ್ನು ಪೂರ್ವಭಾವಿಸತಕ್ಕುದು. ಮತ್ತು ಅವಳ ಸಮ್ಮತಿ ಇತ್ತು ಎಂದು ಆಪಾದಿತ ಆರೋಪಿಸುವುದಾದರೆ ಅದನ್ನು ರುಜುವಾತುಪಡಿಸುವ ಹೊಣೆ ಆರೋಪಿಯದೇ ಆಗಿರಬೇಕು ಎಂಬುದಾಗಿ ಮತ್ತು ಎರಡನೆಯದಾಗಿ ಮಹಿಳೆಯ ಹಿಂದಿನ ಲೈಂಗಿಕ ಚರಿತ್ರೆಯನ್ನಾಗಲೀ ಅವಳ ಸಾಮಾನ್ಯ ನಡತೆಯನ್ನಾಗಲೀ ಸಾಕ್ಷ್ಯವನ್ನಾಗಿ ಬಳಸಬಾರದು ಎಂಬುದು.

ಸರ್ಕಾರ ಈ ಬೇಡಿಕೆಗಳಿಗೆ ಗಮನನೀಡಿ, ಈ ವಿಷಯದ ಬಗ್ಗೆ ಪರಿಶೀಲಿಸಿ ವರದಿ ನೀಡಬೇಕೆಂದು ಕಾನೂನು ಆಯೋಗಕ್ಕೆ ನಿರ್ದೇಶಿಸಿತು. ಆಯೋಗ ಈ ಎರಡು ಬೇಡಿಕೆಗಳಷ್ಟೇ ಅಲ್ಲದೆ, ವಿಚಾರಣೆಗೆ ಮುನ್ನ ಅನುಸರಿಸುವ ವ್ಯವಹರಣೆಗಳ ಬಗ್ಗೆಯೂ ತನ್ನ ಶಿಫಾರಸ್ಸುಗಳನ್ನು ಮಾಡಿತು. ಮಹಿಳೆಯರನ್ನು ರಾತ್ರಿಯ ವೇಳೆಯಲ್ಲಿ ದಸ್ತಗಿರಿ ಮಾಡಬಾರದು. ಪೊಲೀಸರು ಮಹಿಳೆಯನ್ನು ದಸ್ತಗಿರಿ ಮಾಡುವಾಗ ಆಕೆಯನ್ನು ಮುಟ್ಟಬಾರದು. ಮಹಿಳೆಯ ಹೇಳಿಕೆಯನ್ನು ಆಕೆಯ ಸಂಬಂಧಿ, ಗೆಳತಿ ಅಥವಾ ಸಮಾಜಸೇವಾಕರ್ತೆಯ ಸಮ್ಮುಖದಲ್ಲಿ ಪಡೆಯಬೇಕು ಮತ್ತು ಅತ್ಯಾಚಾರದ ದೂರನ್ನು ದಾಖಲು ಮಾಡಿಕೊಳ್ಳಲು ಪೊಲೀಸ್ ಅಧಿಕಾರಿ ನಿರಾಕರಿಸಿದರೆ, ಅದನ್ನು ಅಪರಾಧವೆಂದು ಪರಿಗಣಿಸಬೇಕು ಮುಂತಾದುವು. ಆದರೆ ಪೊಲೀಸರು ಅಧಿಕಾರವನ್ನು ನಿಯಂತ್ರಿಸುವ ಅಥವಾ ಮಹಿಳೆಯ ಹಿಂದಿನ ಚಾರಿತ್ರ್ಯವನ್ನು ಪರಿಗಣಿಸಬಾರದು ಎಂಬ ಕಾನುನು ಆಯೋಗದ ಶಿಫಾರಸ್ಸುಗಳನ್ನು ತಿದ್ದುಪಡಿ ವಿಧೇಯಕದಲ್ಲಿ ಅಳವಡಿಸಿಕೊಳ್ಳಲೇ ಇಲ್ಲ. 'ಸಮ್ಮತಿ'ಯ ಬಗ್ಗೆ ರುಜುವಾತುಪಡಿಸುವ ಹೊಣೆಯನ್ನು ಆಪಾದಿತನಿಗೆ ವರ್ಗಾಯಿಸಬೇಕು ಎಂಬ ಬೇಡಿಕೆಯನ್ನು ಭಾಗಶಃ ಅಳವಡಿಸಿಕೊಳ್ಳಲಾಯಿತು. ಎಂದರೆ ಅತ್ಯಾಚಾರ ಪೋಲಿಸರು, ಲೋಕನೌಕರರು, ಸರ್ಕಾರೀ ಆಸ್ಪತ್ರೆಗಳ ಹಾಗೂ ಆಶ್ರಯತಾಣಗಳ ವ್ಯವಸ್ಥಾಪಕರು ಮತ್ತು ಜೈಲುಗಳ ವಾರ್ಡನ್ ಗಳಿಂದ ಆಗಿರುವಲ್ಲಿ ಮಾತ್ರ 'ಸಮ್ಮತಿ'ಯನ್ನು ರುಜುವಾತುಪಡಿಸುವ ಹೊಣೆ ಆಪಾದಿತನಾಗಿರುತ್ತದೆ. ಕಾನೂನು ಆಯೋಗದ ಶಿಫಾರಸ್ಸುಗಳಲ್ಲಿ ಕೆಲವನ್ನು ಮಾತ್ರವೇ ತಿದ್ದುಪಡಿಯಲ್ಲಿ ಅಳವಡಿಸಿಕೊಂಡರೂ, ಅದು ಶಿಫಾರಸ್ಸು ಮಾಡದ ಕೆಲವು ತಿದ್ದುಪಡಿಗಳನ್ನು

ಮಾಡಲಾಯಿತು. ೨೨೮ ಎ ಪ್ರಕರಣದ ಸೇರ್ಪಡೆ ಅಂಥದೊಂದು. ಇದರ ಪ್ರಕಾರ ಅತ್ಯಾಚಾರಕ್ಕೊಳಗಾದ ಮಹಿಳೆಯರನ್ನು ಗುರುತಿಸಲು ಸಹಾಯಕವಾಗುವ ಯಾವುದೇ ವಸ್ತುವಿನ ಹೆಸರನ್ನು, ಸೂಕ್ತ ಅಧಿಕಾರಿಯಿಂದ ಅನುಮತಿ ಪಡೆಯದೇ ಬಹಿರಂಗಗೊಳಿಸುವಂತಿಲ್ಲ. ಹಾಗೆ ಪ್ರಕಟಿಸಿದರೆ ಎರಡು ವರ್ಷಗಳವರೆಗಿನ ಕಾರಾವಾಸ ಮತ್ತು ಜುಲ್ಮಾನೆಯ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಅಪರಾಧಕ್ಕೆ ಬಲಿಯಾದ ಮಹಿಳೆಯ ಸಂಬಂಧದಲ್ಲಿ ಗೋಪ್ಯತೆಯನ್ನು ಕಾಪಾಡುವ ಸದುದ್ದೇಶದಿಂದ ೨೨೮ ಎ ಪ್ರಕರಣವನ್ನು ಸೇರಿಸಲಾಯಿತಾದರೂ, ಮಥುರಾ ಪ್ರಕರಣದಲ್ಲಿ ವ್ಯಾಪಕವಾಗಿ ದೊರೆತ ಪ್ರಚಾರದಿಂದಲೇ ಅತ್ಯಾಚಾರದ ಕಾನೂನಿಗೆ ತಿದ್ದುಪಡಿ ತರಲು ಸಾಧ್ಯವಾಯಿತೆಂಬುದನ್ನು ನಾವು ಮರೆಯುವಂತಿಲ್ಲ. ಆದ್ದರಿಂದ ಅತ್ಯಾಚಾರಕ್ಕೊಳಗಾದ ಮಹಿಳೆಯ ಹೆಸರನ್ನು ಮಾತ್ರ ಬಹಿರಂಗಗೊಳಿಸಬಾರದು ಎಂದಷ್ಟೇ ತಿದ್ದುಪಡಿ ಮಾಡಿದ್ದಿದ್ದರೆ, ಅತ್ಯಾಚಾರ ಪ್ರಕರಣದ ಪ್ರಚಾರದಿಂದ ಕಾನೂನಿನ ನ್ಯೂನತೆಗಳ ಕುರಿತು ಸಾರ್ವಜನಿ ಚರ್ಚೆ ನಡೆಯುವ ಸಾಧ್ಯತೆ ಇರುತ್ತಿತ್ತು. ಹಾಗಾಗಿ ಈ ತಿದ್ದುಪಡಿಗೆ ತೀವ್ರ ವಿರೋಧ ವ್ಯಕ್ತವಾಯಿತು. ಆ ನಂತರ ಈ ಉಪಬಂಧವನ್ನು ಸ್ವಲ್ಪ ಸಡಿಲಗೊಳಿಸಲಾಯಿತು. ಅತ್ಯಾಚಾರ ಪ್ರಕರಣದ ವಿಚಾರಣೆಯ ಪ್ರಕಟಣೆಯನ್ನು ಜಾಮೀನೀಯ ಅಪರಾಧವನ್ನಾಗಿ ಮಾಡಲಾಯಿತು. ಈ ಸಂದರ್ಭದಲ್ಲಿ ಆದ ಮುಖ್ಯ ತಿದ್ದುಪಡಿಗಳೆಂದರೆ,

೧. ಮಹಿಳೆ ಅಭಿರಕ್ಷೆಯಲ್ಲಿದ್ದಾಗ ಮಾಡಿದ ಲೈಂಗಿಕ ಸಂಭೋಗ, ಅದಕ್ಕೆ ಮಹಿಳೆಯ ಸಮ್ಮತಿಯಿದ್ದರೂ ಅಪರಾಧವಾಗುತ್ತದೆ.

೨. ಅತ್ಯಾಚಾರ ಪ್ರಕರಣಗಳಲ್ಲಿ ಅಪರಾಧಿಗಳಿಗೆ ಕನಿಷ್ಠ ಶಿಕ್ಷೆ ಎಂದರೆ ಅಭಿರಕ್ಷೆಯಲ್ಲಿದ್ದಾಗ ನಡೆಸಿದ ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ಗರ್ಭಿಣಿಯ ಮೇಲೆ ನಡೆಸಿದ ಅತ್ಯಾಚಾರ ಹಾಗೂ ಹನ್ನೆರಡು ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯರ ಮೇಲೆ ನಡೆಸಿದ ಅತ್ಯಾಚಾರ ಪ್ರಕರಣಗಳಲ್ಲಿ ಹತ್ತು ವರ್ಷಗಳು ಮತ್ತು ಇತರ ಸಂದರ್ಭಗಳಲ್ಲಿ ಏಳು ವರ್ಷಗಳ ಕನಿಷ್ಟ ಶಿಕ್ಷೆಯನ್ನು ನಿಗದಿಪಡಿಸಿದುದು. ಇದು ಬಹುಮಹತ್ವದ ತಿದ್ದುಪಡಿ.

ಮಹಿಳಾ ಸಂಘಟನೆಗಳು ಹಾಗೂ ಕಾನೂನು ಆಯೋಗ ಶಿಫಾರಸ್ಸು ಮಾಡಿದ ಎಲ್ಲ ತಿದ್ದುಪಡಿಗಳನ್ನು ಒಪ್ಪಿಕೊಳ್ಳದಿದ್ದರೂ ಮಾಡಿದ ತಿದ್ದುಪಡಿಗಳು ಪ್ರಗತಿಪರವಾಗಿವೆಯೆಂದು ಅವನ್ನು ಸ್ವಾಗತಿಸಲಾಯಿತು. ನ್ಯಾಯಾಲಯಗಳು ಈ ತಿದ್ದುಪಡಿಗಳ ಆಶಯವನ್ನು ಗುರುತಿಸಿ ತೀರ್ಪುನೀಡುತ್ತವೆಂದು ಮತ್ತು ಅತ್ಯಾಚಾರ ಪ್ರಕರಣಗಳಲ್ಲಿ ಮಹಿಳೆಯರಿಗೆ ನ್ಯಾಯ ದೊರೆಯುತ್ತದೆ ಎಂದು ಭಾವಿಸಲಾಯಿತು. ಆದರೆ ತೀರ್ಪಿನಲ್ಲಿ ದಾಖಲಿಸಬೇಕಾದ ಸಾಕಷ್ಟು ಮತ್ತು ವಿಶೇಷ ಕಾರಣಗಳಿಗಾಗಿ ಮೇಲೆ ಉಲ್ಲೇಖಿಸಿದ ಶಿಕ್ಷೆಯನ್ನು ಕಡಿಮೆ ಮಾಡಬಹುದು ಎಂಬ ಉಪಬಂಧವನ್ನು ಕಲ್ಪಿಸಲಾಗಿದೆ. ಯಾವುವು 'ಸಾಕಷ್ಟು ಮತ್ತು ವಿಶೇಷ ಕಾರಣಗಳಾಗುತ್ತವೆ' ಎಂಬುದು ನ್ಯಾಯಾಧೀಶರ ವಿವೇಚನೆಯನ್ನವಲಂಬಿಸುತ್ತದೆ. ನ್ಯಾಯಾಧೀಶರು

ಈ ವಿವೇಚನೆಯ ಪ್ರಯೋಜನವನ್ನು ಪಡೆದು ಅಪರಾಧಿಗಳಿಗೆ ಕಡಿಮೆ ಶಿಕ್ಷೆ ವಿಧಿಸಿದ ಅನೇಕ ಉದಾಹರಣೆಗಳಿವೆ.

ಈ ತಿದ್ದುಪಡಿಗಳ ನಂತರ ಈ ಆಂದೋಲನ ತೀವ್ರತೆಯನ್ನು ಕಳೆದುಕೊಂಡುದಷ್ಟೇ ಅಲ್ಲದೆ, ಅತ್ಯಾಚಾರ ಪ್ರಕರಣಗಳ ವಿಚಾರಣೆಗಳ ಬಗ್ಗೆ ನಿಗಾ ಇಡುವುದರ ಬಗ್ಗೆಯೂ ಗಮನಹರಿಸಲಿಲ್ಲ. ಸುಮನ್ ರಾಣಿ ಅತ್ಯಾಚಾರ ಪ್ರಕರಣ ಎಂದೇ ಪ್ರಚಾರ ಪಡೆದ ಅಭಿರಕ್ಷೆಯಲ್ಲಿ ಪೊಲೀಸ್ ಪೇದೆಯಿಂದ ನಡೆದ ಅತ್ಯಾಚಾರ ಪ್ರಕರಣದಲ್ಲಿ ವಿಚಾರಣೆ ನಡೆದು ೧೯೮೯ರಲ್ಲಿ ಸರ್ವೋಚ್ಚ ನ್ಯಾಯಾಯದ ಹೊರಬಿದ್ದ ತೀರ್ಪು ದಿಗ್ಭ್ರಮೆ ಮೂಡಿಸಿತು. ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಶಿಕ್ಷೆಯನ್ನು ಕನಿಷ್ಠ ಹತ್ತುವರ್ಷಗಳಿಂದ ಐದು ವರ್ಷಗಳಿಗೆ ಇಳಿಸಿತು. ಇದನ್ನು ಆಕ್ಷೇಪಿಸಿ ಮಹಿಳಾ ಸಂಘಟನೆಗಳು ಹೂಡಿದ ಪುನರವಲೋಕನ ಅರ್ಜಿಯನ್ನು ನ್ಯಾಯಾಲಯ ತಿರಸ್ಕರಿಸಿತು. ಇದರಿಂದಾಗಿ ಕಾನೂನಿನಲ್ಲಿ ತಿದ್ದುಪಡಿಗಳಾದರೂ, ತಿದ್ದುಪಡಿಗಳ ಆಶಯ ಎಷ್ಟರಮಟ್ಟಿಗೆ ತೀರ್ಪುಗಳಲ್ಲಿ ಪ್ರತಿಬಿಂಬಿತವಾಗುತ್ತದೆ ಎಂಬುದನ್ನು ಗಮನಿಸುವ ಅಗತ್ಯವಿದೆ ಎಂಬುದನ್ನು ಸ್ಪಷ್ಟಪಡಿಸಿತು.

ಆ ದಶಕದಲ್ಲಿ ಹೊರಬಿದ್ದ ತೀರ್ಪುಗಳನ್ನು ಗಮನಿಸಿದಾಗ, ಕಾನೂನು ವಿಧಿಸಿರುವುದಕ್ಕಿಂತ ಕಡಿಮೆ ಶಿಕ್ಷೆಯನ್ನು ವಿಧಿಸಿದ ಪ್ರಕರಣಗಳು ವಿರಳವಾಗಿರಲಿಲ್ಲ. ಅನೇಕ ಪ್ರಕರಣಗಳಲ್ಲಿ ಕನಿಷ್ಟ ಶಿಕ್ಷೆ ಉಪಬಂಧಕ್ಕಿರುವ ಅಪವಾದದ ಪ್ರಯೋಜನವನ್ನು ಪಡೆಯಲಾಗಿತ್ತು. ಇದರಿಂದ ಕನಿಷ್ಟ ಶಿಕ್ಷೆಯನ್ನು ಹತ್ತುವರ್ಷಗಳು ಅಥವಾ ಏಳು ವರ್ಷಗಳನ್ನು ವಿಧಿಸುವ ಮೂಲಕ ಅಪರಾಧಿಗಳಲ್ಲಿ ಶಿಕ್ಷೆಯ ಭಯವನ್ನುಂಟು ಮಾಡುವ, ಆ ಮೂಲಕ ಅತ್ಯಾಚಾರ ಪ್ರಕರಣಗಳಿಗೆ ತಡೆಯೊಡ್ಡುವ ತಿದ್ದುಪಡಿಯ ಮೂಲ ಉದ್ದೇಶವೇ ವಿಫಲವಾಗುತ್ತದೆ. ಆದರೆ ಈ ತಿದ್ದುಪಡಿಗೆ ಮುನ್ನ ಮಹಿಳಾ ಸಂಘಟನೆಗಳು ವ್ಯಕ್ತಪಡಿಸಿದ ಕಾಳಜಿಗಳು ಆ ಕಾಲದಲ್ಲಿ ಹೊರಬಿದ್ದ ಕೆಲವು ತೀಪುಗಳಲ್ಲಿ ಪ್ರತಿಬಿಂಬಿತವಾದವು. ಅತ್ಯಾಚಾರ ಪ್ರಕರಣಗಳಲ್ಲಿ ೧೯೭೭ರಲ್ಲಿ ನ್ಯಾಯಾಧೀಶರು ತಳೆದ ನಿಲುವಿಗೂ ೧೯೮೦ರ ದಶಕದಲ್ಲಿ ತಳೆದ ನಿಲುವಿಗೂ ಇರುವ ವ್ಯತ್ಯಾಸ ಈ ಮಾತನ್ನು ಪುಷ್ಟೀಕರಿಸುತ್ತದೆ.

ಅತ್ಯಾಚಾರವನ್ನು ಮಹಿಳೆಯ ವಿರುದ್ಧದ ಲೈಂಗಿಕ ಹಿಂಸೆ ಎಂಬುದನ್ನಾಗಿ ನೋಡುವುದಕ್ಕಿಂತ ಹೆಚ್ಚಾಗಿ ನ್ಯಾಯಾಂಗ ಅದನ್ನು ಪುರುಷನ ಅನಿಯಂತ್ರಿತ ಸಂಭೋಗಾಕಾಂಕ್ಷೆಯನ್ನಾಗಿ ನೋಡಿದೆ. ೧೯೭೭ರಲ್ಲಿ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ನೀಡಿದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಈ ವಿಚಾರಧಾರೆಯನ್ನು ವ್ಯಕ್ತಪಡಿಸುತ್ತದೆ. "೨೨ ವರ್ಷದ ಒಬ್ಬ ಸ್ತ್ರೀಲೋಲುಪ ಹಾಡುಹಗಲಲ್ಲಿಯೇ ತನ್ನ ರಕ್ತಸಂಬಂಧಿಯಿದ್ದ ಪಕ್ಕದಮನೆಗೆ ಲೈಂಗಿಕ ತೃಷೆಯಿಂದ ನುಗ್ಗಿ, ಒಬ್ಬಳೇ ಇದ್ದ ಫಿರ್ಯಾದುದಾರಳಿಂದ ಪ್ರಚೋದಿತನಾಗಿ ಕಾಮೋದ್ರೇಕದಿಂದ ಅವಳ ಮೇಲೆ ಅತ್ಯಾಚಾರವೆಸಗಿ ತನ್ನ ಕಾಮತೃಷೆಯನ್ನು ತೀರಿಸಿಕೊಂಡು ಆತುರಾತುರವಾಗಿ

ಹೊರಬಿದ್ದಿದ್ದಾನೆ." ಶಿಕ್ಷೆಯನ್ನು ಕಡಿಮೆಮಾಡಿದುದಕ್ಕೆ ಕೊಟ್ಟ ಕಾರಣ, "...ಅತಿಯಾದ ಕಾಮತೃಷೆಯಿರುವ ಮನುಷ್ಯರಿಗೆ ಅವಮಾನಮಾಡುವುದರಿಂದ ಅಥವಾ ಕಠಿಣ ಕ್ರಮಕೈಗೊಳ್ಳುವುದರಿಂದ ಅವರನ್ನು ಯೋಗ್ಯರನ್ನಾಗಿ ಮಾಡುವುದು ಸಾಧ್ಯವಿಲ್ಲ. ಆದರೆ ಅದೇ ನ್ಯಾಯಧೀಶರು ಕೆಲವು ತಿಂಗಳುಗಳ ನಂತರ ೧೯೮೦ರ ಪ್ರಾರಂಭದಲ್ಲಿ ಅತ್ಯಾಚಾರ ಪ್ರಕರಣದಲ್ಲಿ ನೀಡಿದ ತೀರ್ಪು ನ್ಯಾಯನೀಡಿಕೆಯಲ್ಲಿ ನ್ಯಾಯಾಧೀಶರಲ್ಲಿ ಕಂಡುಬಂದ ಹೊಸ ಸಂವೇದನೆಗೆ ದ್ಯೋತಕವಾಯಿತು. ಅಲ್ಲದೆ, ಆ ತೀರ್ಪಿನಲ್ಲಿ ಮಾನಭಂಗ ಪ್ರಕರಣಗಳ ವಿರುದ್ಧ, "ಸಂಕೀರ್ಣ ಕಾನೂನಿನ ದೀರ್ಘ ಕಾನೂನು ಖಂಡಗಳಿಗಿಂತ ಸಾಮಾಜಿಕವಾಗಿ ಸಂವೇದನಾಶೀಲನಾದ ನ್ಯಾಯಧೀಶ ಅತ್ಯಂತ ಉತ್ತಮ ರಕ್ಷಾಕವಚವಾಗಬಲ್ಲ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಯಿತು. ಅತ್ಯಾಚಾರಕ್ಕೆ ಒಳಗಾದವಳ ಸಾಕ್ಷ್ಯದ ಬಗ್ಗೆ ತಳೆಯುತ್ತಿದ್ದ ನ್ಯಾಯಾಲಯಗಳ ನಿಲುವು ಬದಲಾಗಿ "ಅತ್ಯಾಚಾರಕ್ಕೊಳಗಾದವಳ ಹೇಳಿಕೆಯ ವಿಶ್ವಾಸಾರ್ಹತೆಯ ಬಗ್ಗೆ ನಿರ್ಧಾರ ಕೈಗೊಳ್ಳುವಾಗ ಮಾನವ ಮನಶ್ಶಾಸ್ತ್ರ ಹಾಗೂ ವರ್ತನೆಯ ಸಂಭಾವ್ಯತೆಯನ್ನು ಗಮನಿಸಬೇಕು." ಎಂಬ ಅಭಿಪ್ರಾಯವನ್ನು ತಳೆಯಲಾಯಿತು.

೧೬ ವರ್ಷದ ಹುಡುಗಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದ ಪ್ರಕರಣ ಒಂದರಲ್ಲಿ ೧೯೮೧ರಲ್ಲಿ ವರದಿಯಾದ ತೀರ್ಪಿನಲ್ಲಿ 'ಹುಡುಗಿಯ ಮೈಮೇಲೆ ಗಾಯಗಳಿಲ್ಲ ಮತ್ತು ಹುಡುಗಿಯನ್ನು ಲೈಂಗಿಕ ಸಂಭೋಗಕ್ಕಾಗಿ ಬಳಸಲಾಗುತ್ತಿತ್ತು ಎಂಬ ಅಂಶ ಅತ್ಯಾಚಾರದ ಪ್ರಕರಣದ ವಿಚಾರಣೆಯಲ್ಲಿ ಮುಖ್ಯವಾಗುವುದಿಲ್ಲ ಎಂದು ಅಭಿಪ್ರಾಯಪಡಲಾಯಿತು.(ಹರಪಾಲ್ ಸಿಂಗ್ ಮತ್ತು ಮತ್ತೊಬ್ಬ -ವಿ- ಹಿಮಾಚಲ ಪ್ರದೇಶ ೧೯೮೧ ಕ್ರಿ.ಲಾ.ಜರ್ನಲ್ ೧)

೧೯೮೨ರಲ್ಲಿ, ಸಾಮೂಹಿಕ ಅತ್ಯಚಾರದ ಪ್ರಕರಣದಲ್ಲಿ ಒರಿಸ್ಸಾ ಉಚ್ಚ ನ್ಯಾಯಾಲಯ, ರಾವ್ ಹರನಾರಾಯಣ ಸಿಂಗ್ ತೀರ್ಪನ್ನು ಆಧರಿಸಿ, 'ಸಮ್ಮತಿ ಸ್ವಯಿಚ್ಛೆಯಿಂದ ಕೊಟ್ಟುದುದಾಗಿರಬೇಕು. ವಿರೋಧವನ್ನು ತೋರಲಿಲ್ಲ ಎಂಬುದನ್ನು ಅಥವಾ ಬಲವಂತಕ್ಕಾಗಿ ಸುಮ್ಮನಿದ್ದುದನ್ನು 'ಸಮ್ಮತಿ' ಎಂದು ಪರಿಗಣಿಸಲಾಗದು" ಎಂದು ಅಭಿಪ್ರಾಯಪಟ್ಟಿತು.(ಬಿಜಾಯ್ ಕುಮಾರ್ ಮಹೋಪಾತ್ರ ಮತ್ತು ಇತರರು-ವಿ-ಒರಿಸ್ಸಾ ರಾಜ್ಯ ೧೯೮೨ ಕ್ರಿಲಾಜ ೨೧೬೧)

೧೯೮೩ರಲ್ಲಿ ಒಂದು ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪು ಒಂದು ಮೈಲಿಗಲ್ಲು. ಇದರಲ್ಲಿ "ಅಪರಾಧಕ್ಕೊಳಗಾದವಳು ನೀಡುವ ಸಾಕ್ಷ್ಯಕ್ಕೆ ಪೂರಕ ಸಾಕ್ಷ್ಯದ ಅವಶ್ಯಕತೆಯಿಲ್ಲ" ಎಂದು ಅಭಿಪ್ರಾಯಪಟ್ಟಿತು. "ಭಾರತೀಯ ವ್ಯವಸ್ಥೆಯಲ್ಲಿ, ಲೈಂಗಿಕ ಆಕ್ರಮಣಕ್ಕೆ ತುತ್ತಾದವಳ ಸಾಕ್ಷ್ಯವನ್ನಷ್ಟೇ ಆಧರಿಸದೆ, ಅದಕ್ಕೆ ಪೂರಕ ಸಾಕ್ಷ್ಯಗಳಿಲ್ಲವೆಂಬ ಕಾರಣದ ಮೇಲೆ ಕ್ರಮಕೈಗೊಳ್ಳದಿದ್ದರೆ, ಗಾಯಕ್ಕೆ ಉಪ್ಪು ಸವರಿದಂತೆ" ಎಂದು ತನ್ನ ಅಭಿಪ್ರಾಯಕ್ಕೆ ಸಮರ್ಥನೆ ನೀಡಿತು.(ಭೋಗಿ ಬಾಯ್ ಹರ್ಜಿಭಾಯಿ

-ವಿ-ಗುಜರಾತ್ ರಾಜ್ಯ ೧೯೮೩ ಕ್ರಿಲಾಜ ೧೧೯೬) ಅತ್ಯಾಚಾರ ಪ್ರಕರಣಗಳಲ್ಲಿ ನ್ಯಾಯಾಧೀಶರು ತಳೆದ ನಿಲುವಿನಲ್ಲಿ ಪೂರ್ಣ ಏಕರೂಪತೆಯಿಲ್ಲದಿದ್ದರೂ, ಈ ತಿದ್ದುಪಡಿಗಳು ಅವುಗಳಲ್ಲಿ ಸ್ವಲ್ಪಮಟ್ಟಿಗಿನ ಏಕರೂಪತೆಯನ್ನು ತರುವಲ್ಲಿ ಹಾಗೂ ಅತ್ಯಾಚಾರಕ್ಕೊಳಗಾದ ಮಹಿಳೆಯರ ಬಗ್ಗೆ ನ್ಯಾಯಾಧೀಶರು ತಳೆದ ಮನೋಭಾವದಲ್ಲಿ ಬದಲಾವಣೆಯನ್ನು ತರುವಲ್ಲಿ ಸ್ವಲ್ಪಮಟ್ಟಿಗಾದರೂ ಯಶಸ್ವಿಯಾದವು. ಇತ್ಯರ್ಥಗೊಂಡಿರುವ ಅನೇಕ ಅತ್ಯಾಚಾರ ಪ್ರಕರಣಗಳಲ್ಲಿ, ಈಗಿರುವ ಉಪಬಂಧಗಳನ್ನು ಪುರುಷರಿಗೆ (ಆರೋಪಿಗಳಿಗೆ) ಅನುಕೂಲವಾಗುವ ಹಾಗೆ ವ್ಯಾಖ್ಯಾನ ಮಾಡುವ ಮೂಲಕ ಆರೋಪಿಗಳ ಖುಲಾಸೆ ಮಾಡಲಾಗಿದೆ. ಇಲ್ಲವೇ ಆ ಪ್ರಕರಣಕ್ಕೆ ಇರುವ ಪರಂತುಕದಲ್ಲಿನ ಅಪವಾದದ ಪ್ರಯೋಜನವನ್ನು ಪಡೆದು ಅಪರಾಧಿಗಳಿಗೆ ಕಡಿಮೆ ಶಿಕ್ಷೆಯನ್ನು ವಿಧಿಸಲಾಗಿದೆ. ಇಲ್ಲವೇ ಸಂದೇಹದ ಲಾಭವನ್ನು ಆರೋಪಿಗಳಿಗೆ ಕೊಡುವ ಮೂಲಕ ಆರೋಪಿಗಳ ಬಿಡುಗಡೆಯಾಗಿದೆ.

೧೯೮೩ರಲ್ಲಿ ಮಾಡಿದ ತಿದ್ದುಪಡಿಗಳಲ್ಲಿ ತುಂಬ ಮುಖ್ಯವಾದ ಅಂಶವೆಂದರೆ, ಅಭಿರಕ್ಷೆಯಲ್ಲಿರುವ ಮಹಿಳೆ ಮತ್ತು ಬಾಲಕಿಯರ ಮೇಲೆ ಎಸಗುವ ಅತ್ಯಾಚಾರದ ಅಪರಾಧಕ್ಕೆ ವಿಧಿಸುವ ಕನಿಷ್ಟ ಶಿಕ್ಷೆಯನ್ನು ನಿಗದಿಪಡಿಸಿದುದು. ಆದರೆ ಇದು ಕೇವಲ ಮಹಿಳಾ ಕಾರ್ಯಕರ್ತೆಯರನ್ನು ಸುಮ್ಮನಾಗಿಸುವುದಕ್ಕೆ ಮಾಡಿರುವ ತಿದ್ದುಪಡಿಯೇ ಹೊರತು ಅದನ್ನು ಕಟ್ಟುನಿಟ್ಟಾಗಿ ಪಾಲಿಸುವ ಉದ್ದೇಶದಿಂದಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಈ ಉಪಬಂಧ ಅಪರಾಧಗಳಿಗೆ ಔದಾರ್ಯ ತೋರಬೇಕೆಂಬ ಪ್ರಗತಿಪರ ಕಾನೂನಿನ ಸಿದ್ಧಾಂತಕ್ಕೆ ತದ್ವಿರುದ್ಧವಾಗಿರುವುದು.

ಮಕ್ಕಳ ಮೇಲೆ ನಡೆಯುವ ಮಾನಭಂಗ ಪ್ರಕರಣಗಳಲ್ಲೆಲ್ಲ ಅಪರಾಧಿಗಳು ಸಾಮಾನ್ಯವಾಗಿ ಯುವಕರೇ ಆಗಿರುತ್ತಾರೆ. ಹೀಗಾಗಿ, ಕನಿಷ್ಠ ಕಡ್ಡಾಯ ಶಿಕ್ಷೆಯ ಸಿದ್ಧಾಂತ ಮತ್ತು ಯುವ ಅಪರಾಧಿಗಳಿಗೆ ಔದಾರ್ಯದ ಸಿದ್ಧಾಂತ, ಇವೆರಡರ ನಡುವೆ ಯುವ ಅಪರಾಧಾಗಳಿಗೆ ಶಿಕ್ಷೆ ವಿಧಿಸುವಾಗ ಸಂಘರ್ಷ ಉಂಟಾಗುತ್ತದೆ. ನಮ್ಮ ಆಪರಾಧಿಕ ನ್ಯಾಯಶಾಸ್ತ್ರದ ತತ್ತ್ವದ ಪ್ರಕಾರ, ಅನುಕೂಲ ದೊರೆಯುವುದು ಯಾವಾಗಲೂ ಆರೋಪಿಗಳಿಗೇ. ಹಾಗಾಗಿ ಯುವ ಅಪರಾಧಿಗಳಿಗೆ ಔದಾರ್ಯ ತೋರಬೇಕೆಂಬ ಸಿದ್ಧಾಂತಕ್ಕೆ ಮೇಲುಗೈಯಾಗಿ, ಕನಿಷ್ಟ ಕಡ್ಡಾಯ ಶಿಕ್ಷೆ ಕಾನೂನು ಗ್ರಂಥಗಳಲ್ಲಿ ಉಳಿಯುವ ಒಂದು ಶಾಸನಾತ್ಮಕ ಉಪಬಂಧ ಮಾತ್ರವಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ೧೯೮೮ರಲ್ಲಿ ವರದಿಯಾದ(ಭಾನ್ ಸಿಂಗ್ -ವಿ- ಹರ್ಯಾಣ ರಾಜ್ಯ, ೧೯೮೮ ಕ್ರಿಲಾಜ ೭೮೬) ಒಂದು ಪ್ರಕರಣವನ್ನು ನೋಡಬಹುದು. ೧೮ ವರ್ಷದ ಯುವಕ ಏಳು ವರ್ಷದ ಬಾಲಕಿಯ ಮೇಲೆ ಅತ್ಯಾಚಾರ ನಡೆಸಿದ. ಅತಿಯಾಗಿ ಗಾಯಗೊಂಡ ಆಕೆ ಪ್ರಜ್ಞೆ ತಪ್ಪಿದಳು. ವಿಚಾರಣಾ ನ್ಯಾಯಾಲಯ ಈ ಪ್ರಕರಣದಲ್ಲಿ ಅಪರಾಧಿಗೆ ವಿಧಿಸಿದ ಐದುವರ್ಷಗಳ ಕಾರಾವಾಸ ಶಿಕ್ಷೆಯನ್ನು ಹೆಚ್ಚಿಸಬೇಕೆಂದು ಉಚ್ಚನ್ಯಾಯಾಲಯದಲ್ಲಿ ಅಪೀಲು

ಹೂಡಲಾಯಿತು. ಆದರೆ, ಅತ್ಯಾಚಾರಕ್ಕೆ ಹೆಚ್ಚು ಕಠಿಣವಾದ ಶಿಕ್ಷೆಯನ್ನು ವಿಧಿಸುವುದು ಅಗತ್ಯವಾದರೂ, ಆರೋಪಿ ಕೇವಲ ೧೮ ವರ್ಷ ವಯಸ್ಸಿನವನೆಂಬುದನ್ನು ಪರಿಗಣಿಸಿದಲ್ಲಿ, ಐದು ವರ್ಷಗಳ ಕಾರಾವಾಸದ ಶಿಕ್ಷೆಯನ್ನು ಹೆಚ್ಚಿಸುವುದು ನ್ಯಾಯದ ದೃಷ್ಟಿಯಿಂದ ಸೂಕ್ತವಲ್ಲ ಎಂಬ ಕಾರಣ ನೀಡಿ ಅಪೀಲನ್ನು ವಜಾಮಾಡಿತು. ದೆಹಲಿ ಡೊಮೆಸ್ಟಿಕ್ ವರ್ಕಿಂಗ್ ವಿಮೆನ್ಸ್ ಫೋರಮ್-ವಿ-ಯೂನಿಯನ್ ಆಫ್ ಇಂಡಿಯಾ ಪ್ರಕರಣದಲ್ಲಿ(೧೯೯೫(೧) ಎಸ್‌ಸಿಸಿ ೧೪) ಸರ್ವೋಚ್ಚ ನ್ಯಾಯಾಲಯ, ಒಬ್ಬ ವ್ಯಕ್ತಿಯನ್ನು ಅತ್ಯಾಚಾರದ ಅಪರಾಧಕ್ಕಾಗಿ ಸಿದ್ಧದೋಷಿಯನ್ನಾಗಿ ಮಾಡುವ ಸಂದರ್ಭದಲ್ಲಿಯೇ ಅತ್ಯಾಚಾರಕ್ಕೆ ಒಳಗಾದ ವ್ಯಕ್ತಿಗೆ ಪರಿಹಾರವನ್ನು ನೀಡುವ ಯೋಜನೆಯನ್ನು ರೂಪಿಸಬೇಕೆಂಬ ಸಲಹೆಯನ್ನು ಮಾಡಿತು. ಅತ್ಯಾಚರಕ್ಕೊಳಗಾದ ವ್ಯಕ್ತಿಯು ಅನುಭವಿಸುವ ಯಾತನೆ, ಹಿಂಸೆ ಮತ್ತು ಆಘಾತ ಹಾಗೂ ಅಂಥ ಅತ್ಯಾಚಾರದಿಂದಾಗಿ ಆಕೆ ಗರ್ಭಿಣಿಯಾದರೆ, ಗರ್ಭಿಣಿಯಾದುದರಿಂದಾಗಿ ವರಮಾನದಲ್ಲಿ ಉಂಟಾಗುವ ಕಡಿತ, ಪ್ರಸವ ಸಂಬಂಧದಲ್ಲಿ ಭರಿಸಬೇಕಾಗುವ ಖರ್ಚುಗಳು ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು, ಆಪರಾಧಿಕ ಹಾನಿಗಳ ಪರಿಹಾರ ಮಂಡಲಿ ಅಥವಾ ನ್ಯಾಯಾಲಯ ಪರಿಹಾರವನ್ನು ನೀಡಬೇಕು ಎಂಬ ಸಲಹೆಯನ್ನು ನೀಡಿತು.

ಆಪರಾಧಿಕ ಹಾನಿಗಳ ಪರಿಹಾರ ಮಂಡಲಿಯನ್ನು ಭಾರತದ ಸಂವಿಧಾನದ ೩೮(೧)ನೇ ಅನುಚ್ಛೇದದಲ್ಲಿನ ನಿರ್ದೇಶಕ ತತ್ತ್ವಗಳಿಗೆ ಅನುಸಾರವಾಗಿ ರಚಿಸಬೇಕೆಂದು ಸಲಹೆ ನೀಡಿತು. ಈ ಪ್ರಕರಣದಲ್ಲಿ ಅತ್ಯಾಚಾರಕ್ಕೆ ಒಳಗಾದವರಿಗೆ ಯಾವ ರೀತಿಯ ಸಹಾಯವನ್ನು ನೀಡಬಹುದು ಎಂಬುದನ್ನು ಸರ್ವೋಚ್ಚ ನ್ಯಾಯಾಲಯ ಸ್ಥೂಲವಾಗಿ ತಿಳಿಸಿದೆ.

೧. ಲೈಂಗಿಕ ಅಪರಾಧಗಳ ಸಂಬಂಧದಲ್ಲಿ ಅಪರಾಧಕ್ಕೊಳಗಾದವಳಿಗೆ ಕಾನೂನು ನೆರವನ್ನು ನೀಡಬೇಕು. ಈ ಕ್ರಮದಿಂದಾಗಿ ಅವಳು ವ್ಯವಹರಣೆಗಳ ಸ್ವರೂಪವನ್ನು ತಿಳಿಯಲು, ಪ್ರಕರಣವನ್ನು ಎದುರಿಸಲು ಸಿದ್ಧಳಾಗುವಂತೆ ಮಾಡಲು ಸಾಧ್ಯವಾಗುತ್ತದಲ್ಲದೇ, ಇತರ ಸಂಘಸಂಸ್ಥೆಗಳಿಂದ ಸಹಾಯವನ್ನು ಪಡೆಯುವ ರೀತಿಯನ್ನು ತಿಳಿಸುತ್ತದೆ. ಹಾಗೂ ಪಡೆಯಬೇಕಾದ ಮನಶ್ಶಾಸ್ತ್ರೀಯ ಸಲಹೆ ಮತ್ತು ವೈದ್ಯಕೀಯ ನೆರವಿನ ಬಗ್ಗೆ ಸಹ ತಿಳಿಸುತ್ತದೆ. ಅಪರಾಧಕ್ಕೊಳಗಾದವಳು ಮಾನಸಿಕ ಆಘಾತದಿಂದ ತತ್ತರಿಸಿ ಹೋಗಿರುತ್ತಾಳಾದ್ದರಿಂದ, ಪೊಲೀಸು ಠಾಣೆಯಲ್ಲಿ ದೂರು ನೀಡುವಾಗ ಹಾಗೂ ಅವಳನ್ನು ಪೊಲೀಸರು ಪ್ರಶ್ನಿಸುವ ಸಂದರ್ಭದಲ್ಲಿ ಅವಳಿಗೆ ವಕೀಲರೊಬ್ಬರ ನೆರವು ಅತ್ಯಂತ ಮಹತ್ವದ್ದಾಗುತ್ತದೆ. ಆದ್ದರಿಂದ ಅವಳಿಗೆ ಅಂಥ ನೆರವನ್ನು ಒದಗಿಸಿಕೊಡಬೇಕು.

ಅಪರಾಧಕ್ಕೊಳಗಾದ ವ್ಯಕ್ತಿ ತನ್ನ ಆಯ್ಕೆಯ ವಕೀಲರನ್ನು ಹೊಂದಿಲ್ಲದ ಸಂದರ್ಭದಲ್ಲಿ, ಇಂಥ ಪ್ರಕರಣಗಳಲ್ಲಿ ಕಾರ್ಯನಿರ್ವಹಿಸಲು ಸಿದ್ಧರಿರುವ ವಕೀಲರ ಪಟ್ಟಿಯನ್ನು ಪೋಲೀಸು ಠಾಣೆ ಹೊಂದಿರಬೇಕು.

ಪೋಲೀಸರ ಅರ್ಜಿಯ ಮೇರೆಗೆ ಅತ್ಯಂತ ಶೀಘ್ರವಾಗಿ ವಕೀಲರನ್ನು ನ್ಯಾಯಾಲಯ ನೇಮಕಮಾಡಬೇಕು. ಆದರೆ ವಿಳಂಬವಿಲ್ಲದೆ ಅಪರಾಧಕ್ಕೊಳಗಾದವಳನ್ನು ಪ್ರಶ್ನಿಸುವುದು ಅತ್ಯಂತ ಮುಖ್ಯವಾದ್ದರಿಂದ, ನ್ಯಾಯಾಲಯದ ಅನುಮತಿ ಕೋರುವ ಅಥವಾ ಪಡೆಯುವುದಕ್ಕೆ ಮುನ್ನವೇ ಪೋಲೀಸು ಠಾಣೆಯಲ್ಲಿ ಅಪರಾಧಕ್ಕೊಳಗಾದವಳ ಪರವಾಗಿ ಕಾರ್ಯನಿರ್ವಹಿಸಲು ವಕೀಲರನ್ನು ಪ್ರಾಧಿಕೃತಗೊಳಿಸುವ ಅವಕಾಶವಿರಬೇಕು. ಅತ್ಯಾಚಾರಕ್ಕೊಳಗಾದವರಿಗೆ ಪರಿಹಾರ ನೀಡಲು ಆಪರಾಧಿಕ ಪರಿಹಾರ ಮಂಡಲಿಯನ್ನು ರಚಿಸುವುದು ಅತ್ಯಗತ್ಯ. ಆರೋಪಿಯ ಅಪರಾಧ ರುಜುವಾತಾಗಲಿ ಅಥವಾ ಆಗದಿರಲಿ, ಅಪರಾಧಕ್ಕೊಳಗಾದ ವಳಿಗೆ ಮಂಡಲಿಯಿಂದ ಪರಿಹಾರ ದೊರೆಯುವ ವ್ಯವಸ್ಥೆ ಇರಬೇಕು.

ಬೋಧಿಸತ್ವ ಗೌತಮ್ -ವಿ- ಸುಭ್ರಚಕ್ರವರ್ತಿ ((೧೯೯೧)೧ ಎಸ್‌ಸಿಸಿ ೪೯೦ ಪ್ರಕರಣದಲ್ಲಿ ಆರೋಪಿ ಫಿರ್ಯಾದುದಾರಳೊಂದಿಗೆ, ಅವಳನ್ನು ವಿವಾಹವಾಗುವುದಾಗಿ ನಂಬಿಸಿ ಲೈಂಗಿಕ ಸಂಬಂಧವಿರಿಸಿಕೊಂಡು, ಅವಳ ಹಣೆಗೆ ಕುಂಕುಮವಿರಿಸಿ ರಹಸ್ಯವಾಗಿ ವಿವಾಹವಾದ ನಾಟಕವನ್ನಾಡಿದ. ಆಕೆ ಅವನಿಂದ ಎರಡು ಬಾರಿ ಗರ್ಭಿಣಿಯಾದಾಗಲೂ ಒತ್ತಾಯದಿಂದ ಗರ್ಭಪಾತ ಮಾಡಿಸಿದ. ಕೊನೆಯಲ್ಲಿ ಒಮ್ಮೆ ಅವಳನ್ನು ಪರಿತ್ಯಜಿಸಿದ. ಈ ಪ್ರಕರಣದಲ್ಲಿ ಆಪರಾಧಿಕ ಮೊಕದ್ದಮೆ ನಿರ್ಣಯವಾಗುವವರೆಗೆ ಆರೋಪಿ ಫಿರ್ಯಾದುದಾರಳಿಗೆ ತಿಂಗಳಿಗೆ ೧೦೦೦ ರೂಗಳ ಮಧ್ಯಂತರ ಪರಿಹಾರವನ್ನು ಕೊಡಬೇಕೆಂದು ತೀರ್ಪು ನೀಡಿತು. ಆರೋಪಿಯ ವಿರುದ್ಧ ಅಪರಾಧ ಮೇಲ್ನೋಟಕ್ಕೆ ಸಾಬೀತಾದರೆ, ಅತ್ಯಾಚಾರಕ್ಕೊಳಗಾದವಳಿಗೆ ಅಂಥ ಆಪರಾಧಿಕ ಮೊಕದ್ದಮೆಗಳ ವಿಚಾರಣೆಯ ಕಾಲದಲ್ಲಿ ಮಧ್ಯಂತರ ಪರಿಹಾರವನ್ನು ನೀಡಬೇಕೆಂಬ ಬಗ್ಗೆ ಈ ತೀರ್ಪು ಅನುಸರಣೀಯ ಪೂರ್ವನಿದರ್ಶನವಾಯಿತು.

ಪ್ರೇಂಚಂದ್ ವಿರುದ್ಧ ಹರ್ಯಾಣ ರಾಜ್ಯ(೧೯೮೯ ೧, ಎಸ್ ಸಿ ೧೫೮) ಈ ಪ್ರಕರಣದಲ್ಲಿ ಇಬ್ಬರು ಪೊಲೀಸರು ಹರ್ಯಾಣದ ಭವಾನಿ ಖೇರಾ ಪೊಲೀಸು ಠಾಣೆಯಲ್ಲಿ ಸಣ್ಣ ವಯಸ್ಸಿನ ಮಹಿಳೆಯ ಮೇಲೆ ಅತ್ಯಾಚಾರವೆಸಗಿದರು. ಐದು ದಿನಗಳ ನಂತರ ಅವಳು ದೂರು ನೀಡಿದಳು. ಸತ್ರನ್ಯಾಯಾಲಯ ಹಾಗೂ ಉಚ್ಚನ್ಯಾಯಲಯಗಳೆರಡೂ ಅವರಿಗೆ ಕನಿಷ್ಟ ಶಿಕ್ಷೆಯಾದ ಹತ್ತುವರ್ಷಗಳ ಕಾರಾವಾಸ ಶಿಕ್ಷೆಯನ್ನು ವಿಧಿಸಿತು. ಆದರೆ ಸರ್ವೋಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರಾದ ಬಿ.ಸಿ.ರೇ ಮತ್ತು ಪಾಂಡಿಯನ್ ಅವರು ಪೊಲೀಸರಿಗೆ ಕಾನೂನಿನಲ್ಲಿ ವಿಧಿಸಲಾದುದಕ್ಕಿಂತ ಕಡಿಮೆ ಶಿಕ್ಷೆಯನ್ನು ವಿಧಿಸಿದರು. ಇದಕ್ಕೆ ಅವರು ನೀಡಿದ ಕಾರಣ ಮಹಿಳೆಯ ನಡತೆ ಸರಿಯಿಲ್ಲ, ಅವಳು 'ಸುಲಭ ಲಭ್ಯಳು' ಎಂಬುದು. ಆದರೆ ಅತ್ಯಾಚಾರದ ಆರೋಪದ ವಿಚಾರಣೆಯಲ್ಲಿ ಈ ಅಂಶ ಪ್ರಸ್ತುತವಾಗಬಾರದು ಎಂಬುದು ಮಹಿಳಾವಾದಿಗಳ ಒಮ್ಮತಾಭಿಪ್ರಾಯವಾಗಿತ್ತು. ಅನಂತರ, ಮಹಾರಾಷ್ಟ್ರ-ವಿ-ಮಧುಕರ್ ಎನ್.ಮರ್ಡಿಕರ್ ((೧೯೯೧)೧ ಎಸ್‌ಸಿಸಿ ೫೭) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಅತ್ಯಾಚಾರಕ್ಕೊಳಗಾದವಳು ಪತಿವ್ರತೆಯಾಗಿ

ದ್ದಳೇ ಇಲ್ಲವೆ ಎಂಬುದು ಅತ್ಯಾಚಾರಿಗೆ ವಿಧಿಸುವ ಶಿಕ್ಷೆಯನ್ನು ನಿರ್ಧರಿಸುವ ಮಾನದಂಡವಾಗಬಾರದು. ಮಹಿಳೆ ಪತಿವ್ರತೆಯಾಗಿಲ್ಲ ಎಂದಮಾತ್ರಕ್ಕೆ ಅವಳು ಎಲ್ಲರಿಗೂ ಸುಲಭಲಭ್ಯಳು ಎಂದರ್ಥವಲ್ಲ. ಅತ್ಯಾಚಾರವೆಸಗುವಂಥ ಸಂದರ್ಭದಲ್ಲಿ ಇತರರಂತೆಯೇ ಅವಳಿಗೂ ತನ್ನ ದೇಹವನ್ನು ರಕ್ಷಿಸಿಕೊಳ್ಳುವ ಎಲ್ಲ ಹಕ್ಕು ಇರುತ್ತದೆ. ಅಲ್ಲದೆ ಕಾನೂನಿನ ರಕ್ಷಣೆ ಪಡೆಯುವ ಹಕ್ಕೂ ಅವಳಿಗಿರುತ್ತದೆ. ವ್ಯಭಿಚಾರಿಣಿಯೂ ಸಹ ಖಾಸಗಿ ಜೀವನಕ್ಕೆ ಹಕ್ಕುಳ್ಳವಳಾಗಿರುತ್ತಾಳೆ. ಅವಳು 'ಸುಲಭ ಲಭ್ಯಳು' ಎಂಬ ಕಾರಣಕ್ಕಾಗಿ ಯಾರೇ ವ್ಯಕ್ತಿ ಅವಳ ಮೇಲೆ ಅತ್ಯಾಚಾರ ನಡೆಸುವಂತಿಲ್ಲ ಎಂದು ಅಭಿಪ್ರಾಯಪಟ್ಟಿತು.

ಅತ್ಯಾಚಾರ ಪ್ರಕರಣದಲ್ಲಿ ದೂರುಕೊಡಲು ವಿಳಂಬವಾಗಿದೆ ಎಂಬ ಅಂಶ ಮೊಕದ್ದಮೆಯನ್ನು ದುರ್ಬಲಗೊಳಿಸುವುದಿಲ್ಲ. ಬಹಳಷ್ಟು ಬಾರಿ ಅತ್ಯಾಚಾರಕ್ಕೊಳಗಾದ ಮಹಿಳೆಯ ಬಗ್ಗೆ ಸಮಾಜ ತೋರುವ ಪ್ರತಿಕ್ರಿಯೆ ಇಂಥ ವಿಳಂಬಕ್ಕೆ ಕಾರಣವಾಗಿರುತ್ತದೆ. ಅಪರಾಧಕ್ಕೆ ಒಳಗಾದವಳ ಬಗ್ಗೆ ಅನುಕಂಪ ತೋರಿ ಸಮಧಾನ ಹೇಳುವ ಬದಲು ಅವಳೇ ತಪ್ಪಿತಸ್ಥೆ ಎಂಬ ಭಾವನೆಯಿಂದ ನೋಡಲಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಅತ್ಯಾಚಾರ ಪ್ರಕರಣಗಳ ವಿಚಾರಣೆ ನಡೆಸುವ ನ್ಯಾಯಾಲಯಗಳು ಹೆಚ್ಚಿನ ಕಾಳಜಿ ವಹಿಸಬೇಕು. ಇತ್ತೀಚಿನ ಒಂದು ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಲಯ ''ಅತ್ಯಾಚಾರದ ಆರೋಪವನ್ನೇ ಸುಳ್ಳಾಗಿಸದಂಥ ಸಾಕ್ಷಿಗಳ ಹೇಳಿಕೆಗಳಲ್ಲಿನ ಸಣ್ಣಪುಟ್ಟ ವ್ಯತ್ಯಾಸಗಳನ್ನು ಅಥವಾ ವೈರುಧ್ಯಗಳನ್ನು ದೊಡ್ಡದಾಗಿಸದೆ, ಆ ಘಟನೆಯ ಸಂಭಾವ್ಯತೆಯ ದೃಷ್ಟಿಯಿಂದ ಪ್ರಕರಣದ ವಿಚಾರಣೆಯನ್ನು ನಡೆಸಬೇಕು''[೧೩] ಎಂದು ಅಭಿಪ್ರಾಯಪಟ್ಟಿದೆ.

ಅತ್ಯಾಚಾರ ಕಾನೂನುಗಳಿಗೆ ತಿದ್ದುಪಡಿ ಮಾಡುವಾಗ, ಅತ್ಯಾಚಾರಗಳಿಗೆ ವಿಧಿಸುವ ಗರಿಷ್ಠ ಹಾಗೂ ಕನಿಷ್ಟ ಶಿಕ್ಷೆಯ ಬಗ್ಗೆ ಗಮನ ಕೇಂದ್ರೀಕರಿಸಲಾಯಿತು. ಗರಿಷ್ಠ ಶಿಕ್ಷೆ ೧೦ ವರ್ಷಗಳ ಕಾರಾವಾಸವಾದರೆ, ಕನಿಷ್ಟ ಶಿಕ್ಷೆ ೭ ವರ್ಷಗಳ ಕಾರಾವಾಸ. ಶಿಕ್ಷೆಯ ಭಯದಿಂದಾಗಿಯಾದರೂ ಅತ್ಯಾಚಾರ ಪ್ರಕರಣಗಳ ಸಂಖ್ಯೆ ಕಡಿಮೆಯಾಗಬಹುದು ಎಂಬುದು ಇದರ ಹಿಂದಿನ ಆಶಯವಾಗಿತ್ತು. ಆದರೆ, ಶಿಕ್ಷೆ ಜಾಸ್ತಿಯಾದಷ್ಟೂ ದೋಷಸಿದ್ಧಿಯಾಗುವ ಪ್ರಕರಣಗಳ ಸಂಖ್ಯೆ ಕಡಿಮೆಯಾಗುತ್ತದೆ ಎಂಬುದನ್ನು ಅಂಕಿ ಅಂಶಗಳು ಸಾಬೀತು ಪಡಿಸಿವೆ. ಯುವ ಅಪರಾಧಿಗಳ ಬಗ್ಗೆ ಉದಾರತೆ ಹಾಗೂ ಲೈಂಗಿಕ ಅಪರಾಧಿಗಳಿಗೆ ಕಠಿಣ ಶಿಕ್ಷೆ ಈ ಎರಡೂ ಆಧುನಿಕ ಸಿದ್ಧಾಂತಗಳ ನಡುವೆ ಸಂಘರ್ಷ ಉಂಟಾದಾಗ, ಔದಾರ್ಯತೆಯ ಸಿದ್ಧಾಂತವನ್ನೇ ಹೆಚ್ಚಿನ ತೀರ್ಪುಗಳಲ್ಲಿ ಅನುಸರಿಸಿರುವುದನ್ನು ಈ ಅಂಕಿ-ಅಂಶಗಳು ಸಾಬೀತುಪಡಿಸಿವೆ.

ಯಾವುದೇ ಅಪರಾಧಿಕ ವಿಚಾರಣೆಯಲ್ಲಿ ಪ್ರಾಸಿಕ್ಯೂಷನ್ ನಡೆಸುವ ಪಕ್ಷ ರಾಜ್ಯವಾದರೆ, ಆರೋಪಿ ಪ್ರತಿವಾದಿಯಾಗಿರುತ್ತಾನೆ. ಆರೋಪಿ ಸಾಮಾನ್ಯ ವ್ಯಕ್ತಿಯಾಗಿ ಅಧಿಕಾರ ಸ್ಥಾನದಲ್ಲಿರುವ ರಾಜ್ಯದ ಕಾರ್ಯ ಯಂತ್ರದೊಡನೆ ಹೋರಾಡಬೇಕಾಗುತ್ತದೆ. ಈ ಎರಡು ಅಸಮ ಬಲಗಳ ನಡುವೆ ನಡೆಯುವ ವಾದ

ವಿವಾದ ಯಾವುದೇ ಬಗೆಯ ಅನ್ಯಾಯಕ್ಕೆಡೆಮಾಡಿಕೊಡಬಾರದು ಎಂಬ ದೃಷ್ಟಿಯಿಂದ, ದಂಡ ಪ್ರಕ್ರಿಯಾ ಸಂಹಿತೆ ಹಾಗೂ ಭಾರತೀಯ ಸಾಕ್ಷ್ಯ ಅಧಿನಿಯಮಗಳು ಅತ್ಯಂತ ಕಟ್ಟುನಿಟ್ಟಾದ ಪ್ರಕ್ರಿಯಾ ನಿಯಮಗಳನ್ನು ವಿಧಿಸುತ್ತವೆ. ವಿಚಾರಣೆಯ ಕಾಲದಲ್ಲಿ ಎಲ್ಲ ಅನುಕೂಲಗಳೂ ದೊರೆಯುವುದೂ ಆರೋಪಿಗೇ.

ರಾಜ್ಯದ ಪ್ರಬಲಶಕ್ತಿಯಿಂದ, ಅದರೊಂದಿಗೆ ಪ್ರತಿಪಕ್ಷಕಾರನಾಗಿ ಹೋರಾಡಬೇಕಾಗಿ ಬರುವ ವ್ಯಕ್ತಿಯನ್ನು ರಕ್ಷಿಸಲು, ಸಂದೇಹಾತೀತವಾಗಿ ಅಪರಾಧವನ್ನು ರುಜುವಾತುಪಡಿಸುವ ಹೊಣೆ ಪ್ರಾಸಿಕ್ಯೂಷನ್ನಿನ ಮೇಲಿರುತ್ತದೆ.(ಅತ್ಯಾಚಾರ ಪ್ರಕರಣಗಳಲ್ಲಿ ಮಾತ್ರ ಈ ಹೊಣೆ ಆರೋಪಿಯ ಮೇಲೆ ಇರುತ್ತದೆ.) ಪ್ರಾಸಿಕ್ಯೂಷನ್ ಈ ಪ್ರಯತ್ನದಲ್ಲಿ ಸೋತರೆ, ಸಂದೇಹದ ಲಾಭವನ್ನು ಆರೋಪಿಗೇ ನೀಡಲಾಗುತ್ತದೆ. ಆದ್ದರಿಂದ ಲೈಂಗಿಕ ಆಕ್ರಮಣ ಎಂಬುದನ್ನು ಮತ್ತೆ ಪರಿಭಾಷಿಸಬೇಕು ಎಂಬುದು ಮಹಿಳಾ ಚಳವಳಿಗಾರರ ಒತ್ತಾಯ. ಆದರೆ ರಾಜ್ಯ ಹಾಗೂ ವ್ಯಕ್ತಿಯ ನಡುವಿನ ಸೂಕ್ಷ್ಮವಾದ ಈ ತಕ್ಕಡಿ ರಾಜ್ಯದ ಪರವಾಗಿ ವಾಲದಂತೆ ಹಾಗೆಯೇ ಸ್ವಾಭಾವಿಕ ನ್ಯಾಯದ ನಿಯಮಗಳ ಕಟ್ಟುನಿಟ್ಟಾದ ಪಾಲನೆ, ಲೈಂಗಿಕ ಅಪರಾಧಗಳಿಗೆ ಒಳಪಟ್ಟವರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳುವುದು ಬಹು ಅಗತ್ಯವಾದುದು.

ರಾಷ್ಟ್ರೀಯ ಮಹಿಳಾ ಆಯೋಗದ ಪರವಾಗಿ ಸಮಿತಿಯು ಮಹಿಳೆ ಮತ್ತು ಮಕ್ಕಳ ವಿರುದ್ಧ ಲೈಂಗಿಕ ಹಿಂಸೆ ವಿಧೇಯಕದ ಕರಡನ್ನು ೧೯೯೩ರಲ್ಲಿ ಸಿದ್ದಪಡಿಸಿದ್ದು ಅದರಲ್ಲಿ ಕಾನೂನಿನಲ್ಲಿ ಇರುವ ಮೇಲೆ ತಿಳಿಸಿದ ಎಲ್ಲ ನ್ಯೂನತೆಗಳನ್ನು ಸರಿಪಡಿಸುವ ಪ್ರಯತ್ನವನ್ನು ಮಾಡಲಾಗಿದೆ. 'ಅತ್ಯಾಚಾರ' ಎಂಬುದರ ಬದಲು 'ಲೈಂಗಿಕ ಆಕ್ರಮಣ' ಎಂಬ ಪದಗಳನ್ನು ಉಪಯೋಗಿಸಿ ಪರಿಭಾಷಿಸುವ ಮೂಲಕ ಅನೇಕ ಬಗೆಯ ಲೈಂಗಿಕ ಅಪರಾಧಗಳು ಈ ಪರಿಭಾಷೆಯಲ್ಲಿ ಸೇರುವಂತೆ ಮಾಡಲಾಗಿದೆ. ಅಲ್ಲದೆ ಮಹಿಳೆಯ ವರ್ತನೆ ಮತ್ತು ನಡತೆ, ಸಾಕ್ಷ್ಯವನ್ನು ದಾಖಲುಮಾಡವುದು ಮತ್ತು ಪರೀಕ್ಷೆ ಇವುಗಳಿಗೆ ಸಂಬಂಧಿಸಿದಂತೆ ಸೂಕ್ತ ತಿದ್ದುಪಡಿಗಳನ್ನು ಸೂಚಿಸಿ ಇರುವ ಉಪಬಂಧಗಳಲ್ಲಿನ ನ್ಯೂನತೆಗಳನ್ನು ಹೋಗಲಾಡಿಸಲು ಪ್ರಯತ್ನಿಸಲಾಗಿದೆ. ಪ್ರಸ್ತಾವಿತ ವಿಧೇಯಕದಲ್ಲಿ ಸಮ್ಮತಿಯ ವಯಸ್ಸನ್ನು ೧೮ಕ್ಕೆ ಏರಿಸಲು ಮತ್ತು ೧೨ ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳ ಮೇಲೆ ನಡೆಸುವ ಲೈಂಗಿಕ ಆಕ್ರಮಣಗಳಿಗೆ(protracted sexual violence) ಆಜೀವ ಕಾರಾವಾಸದ ಶಿಕ್ಷೆಯನ್ನು ವಿಧಿಸಲು ಪ್ರಸ್ತಾವಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಈಗಿನ ಅಧಿನಿಯಮದಲ್ಲಿ ವಿಚ್ಛೇದನಕ್ಕೆ ಮುಂಚಿನ ನ್ಯಾಯಿಕ ಬೇರ್ಪಡೆ

೨. ಇಂದಿಗೂ ಈ ಪರಿಸ್ಥಿತಿ ಭಿನ್ನವಾಗಿಲ್ಲ. ಪತಿಯನ್ನು ತೊರೆದ ಅಥವಾ ಪತಿಯಿಂದ ಪರಿತ್ಯಕ್ತಳಾದ ಪತ್ನಿಗೆ ಪತಿಯ ಆಸ್ತಿಯಲ್ಲಿ ಯಾವುದೇ ಹಕ್ಕಿಲ್ಲ

೩. ಜೀವನಾಂಶದ ಉಪಬಂಧ

೪. ಕ್ವೆಟ್ಟ (ಬೆಲೂಚಿಸ್ತಾನ) ಪಾಕಿಸ್ತಾನದಲ್ಲಿ ಮುಸ್ಲಿಂ ಕುಟುಂಬ ಕಾನೂನುಗಳ ಅಧ್ಯಾದೇಶ(೧೯೬೧)ರ ಪ್ರಭಾವ ಡೇವಿಡ್ ಪರ್ಲ್

೫. 'ಸಮಾನತೆಯತ್ತ'- ಭಾರತೀಯ ಮಹಿಳೆಯರ ಸ್ಥಾನಮಾನ, ಅಧ್ಯಯನ ಸಮಿತಿಯ ವರದಿ

೬. ಎ ಕ್ರಿಟಿಕ್ ಆಫ್ ಮಾಡರ್ನ್ ಹಿಂದೂ ಲಾ, ೧೯೭೦, ಪು.೩೦೯

೭. ೪೯೭. ಪರದಾರಾಗಮನ- ಇನ್ನೊಬ್ಬನ ಹೆಂಡತಿಯಾಗಿರುವ ಮತ್ತು ಹಾಗೆಂದು ತಾನು ತಿಳಿದಿರುವ ಅಥವಾ ನಂಬಲು ಕಾರಣವಿರುವ ಯಾರೇ ಸ್ತ್ರೀಯೊಡನೆ ಆ ಪುರುಷನ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಲ್ಲದೆ, ಲೈಂಗಿಕ ಸಂಭೋಗ ಮಾಡುವ ವ್ಯಕ್ತಿಯ, ಆ ಲೈಂಗಿಕ ಸಂಭೋಗವು ಬಲಾತ್ ಸಂಭೋಗದ ಅಪರಾಧವಾಗದಿದ್ದರೆ, ಅವನು, ಪರದಾರಾಗಮನದ ಅಪರಾಧಿಯಾಗುತ್ತಾನೆ ಮತ್ತು ಅವನು ಐದು ವರ್ಷಗಳವರೆಗಿನ ಅವಧಿಗೆ ಎರಡರಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು. ಇಂಥ ಸಂದರ್ಭದಲ್ಲಿ ಆ ಹೆಂಡತಿಯು ದುಷ್ಪ್ರೇರಕಳೆಂದು ದಂಡನೀಯಳಾಗತಕ್ಕದ್ದಲ್ಲ.

೪೯೮. ವಿವಾಹಿತ ಸ್ತ್ರೀಯನ್ನು ಅಪರಾಧಿಕ ಉದ್ದೇಶದಿಂದ ಪುಸಲಾಯಿಸುವುದು ಅಥವಾ ಕರೆದುಕೊಂಡು ಹೋಗುವುದು - ಇನ್ನೊಬ್ಬನ ಹೆಂಡತಿಯಾಗಿರುವ ಅಥವಾ ಹಾಗೆಂದು ತನಗೆ ತಿಳಿದಿರುವ, ಅಥವಾ ನಂಬಲು ಕಾರಣವಿರುವ ಯಾರೇ ಸ್ತ್ರೀಯನ್ನು ಆ ಮನುಷ್ಯನಿಂದ ಅಥವಾ ಆ ಮನುಷ್ಯನ ಪರವಾಗಿ ಅವಳ ರಕ್ಷಣೆ ಹೊತ್ತವನಿಂದ ಅವಳು ಮತ್ತಾವನೇ ವ್ಯಕ್ತಿಯೊಡನೆ ಅಕ್ರಮ ಸಂಭೋಗ ನಡೆಸಲೆಂಬ ಉದ್ದೇಶದಿಂದ ಕರೆದುಕೊಂಡು ಅಥವಾ ಪುಸಲಾಯಿಸಿಕೊಂಡು ಹೋಗುವ ಅಥವಾ ಆ ಉದ್ದೇಶದಿಂದ ಅಥವಾ ಯಾರೇ ಸ್ತ್ರೀಯನ್ನು ಬಚ್ಚಿಡುವ ಅಥವಾ ತಡೆ ಹಿಡಿದಿಡುವ ವ್ಯಕ್ತಿಯು ಎರಡು ವರ್ಷಗಳವರೆಗಿನ ಅವಧಿಯ ಎರಡರ ಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

೮. ೧೯೮. ವಿವಾಹದ ವಿರುದ್ಧದ ಅಪರಾಧಕ್ಕಾಗಿ ಕಾನೂನು ಕ್ರಮ - ೧. ಅಪರಾಧದಿಂದ ಬಾಧಿತನಾದ ವ್ಯಕ್ತಿಯು ದೂರು ನೀಡಿದ ಹೊರತು, ಭಾರತ ದಂಡ ಸಂಹಿತೆ (೧೮೬೦ರ ೪೫) ಯ ೨೦ನೇ ಅಧ್ಯಾಯದ ಅಡಿಯಲ್ಲಿ ದಂಡನೀಯವಾದ ಒಂದು ಅಪರಾಧದ ಸಂಜ್ಞಾನವನ್ನು ಯಾವುದೇ ನ್ಯಾಯಾಲಯವೂ ತೆಗೆದುಕೊಳ್ಳತಕ್ಕದ್ದಲ್ಲ.

ಪರಂತು,

* * * * *

೨. (೧)ನೇ ಉಪ ಪ್ರಕರಣದ ಉದ್ದೇಶಗಳಿಗಾಗಿ, ಸದರಿ ಸಂಹಿತೆಯ ೪೯೭ನೇ ಪ್ರಕರಣ ಅಥವಾ ೪೯೮ನೇ ಪ್ರಕರಣದ ಅಡಿಯಲ್ಲಿನ ಯಾವುದೇ ಅಪರಾಧದಿಂದ, ಮಹಿಳೆಯ ಪತಿಯ ಹೊರತು ಬೇರೆ ಯಾರೇ ವ್ಯಕ್ತಿ ಬಾಧಿತನಾಗಿದ್ದಾನೆಂದು ಭಾವಿಸತಕ್ಕದಲ್ಲ.

ಪರಂತು, ಪತಿ ಇಲ್ಲದಿರುವಲ್ಲಿ, ಅಂಥ ಅಪರಾಧವು ಘಟಿಸಿದ ಸಮಯದಲ್ಲಿ ಮಹಿಳೆಯ ರಕ್ಷಣೆಯನ್ನು ಹೊತ್ತಿದ್ದ ಇತರ ವ್ಯಕ್ತಿಯು, ನ್ಯಾಯಾಲಯದ ಅನುಮತಿ ಪಡೆದು ಅವನ ಪರವಾಗಿ ದೂರು ನೀಡಬಹುದು.

೯. ಪ್ರಕರಣ ೧೮ (೨)(ಎ) ಪತಿ ಪರಿತ್ಯಾಗದ ದೋಷಿಯಾಗಿದ್ದರೆ ಎಂದರೆ, ಯಥೋಚಿತ ಕಾರಣವಿಲ್ಲದೆ ಮತ್ತು ಅವಳ ಒಪ್ಪಿಗೆಯಿಲ್ಲದೆ ಅಥವಾ ಅವಳ ಇಚ್ಛೆಗೆ ವಿರುದ್ಧವಾಗಿ ಅವಳನ್ನು ಬಿಟ್ಟಿಬಿಟ್ಟಿದ್ದರೆ, ಅಥವಾ ಉದ್ದೇಶಪೂರ್ವಕವಾಗಿ ಅವಳನ್ನು ನಿರ್ಲಕ್ಷಿಸಿದ್ದ ಸಂದರ್ಭದಲ್ಲಿ, ಹಿಂದೂ ಪತ್ನಿ ತನ್ನ ಪತಿಯಿಂದ ಜೀವನಾಂಶ ಪಡೆಯಲು ತನಗಿರುವ ಕ್ಲೇಮನ್ನು ಕಳೆದುಕೊಳ್ಳದೆಯೇ, ಪ್ರತ್ಯೇಕವಾಗಿ ಜೀವಿಸಲು ಹಕ್ಕುಳ್ಳವಳಾಗಿರುತ್ತಾಳೆ.

೧೦. ಕುಲ್ಲೂಕ ಭಟ್ಟ-ಮನ್ವರ್ಥ-ಮುಕ್ತಾವಳಿ

ರಾಘವೇಂದ್ರ ಸರಸ್ವತಿ-ಮನ್ವರ್ಥ-ಮುಕ್ತಾವಳಿ

ನಂದನಾಚಾರ್ಯ-ಮನ್ವಾಖ್ಯಾನ

೧೧. ಪ್ರಕರಣ ೩೨೩, ಸ್ವಇಚ್ಛೆಯಿಂದ ಗಾಯವನ್ನುಂಟು ಮಾಡಿದ್ದಕ್ಕೆ ದಂಡನೆ

೧೨. ಪ್ರಕರಣ ೩೨೪. ಅಪಾಯಕಾರೀ ಆಯುಧಗಳಿಂದ ಅಥವಾ ಸಾಧನಗಳಿಂದ ಸ್ವಇಚ್ಛೆಯಿಂದ ಗಾಯವನ್ನುಂಟು ಮಾಡುವುದು.

೧೩. ಆಂಧ್ರ ಪ್ರದೇಶ-ವಿ-ಗಂಗೂಲ ಸತ್ಯಮೂರ್ತಿ ((೧೯೯೭) ೧ ಎಸ್‌ಸಿಸಿ ೨೭೨)

# ಮಹಿಳೆಯರ ಆಸ್ತಿಹಕ್ಕು ಮತ್ತು ಲಿಂಗತಾರತಮ್ಯ

ವಿವಾಹ, ದತ್ತಕ, ವಿಚ್ಛೇದನೆ ಮುಂತಾದವುಗಳಿಗೆ ಸಂಬಂಧಿಸಿದಂತೆ ವಿಭಿನ್ನ ಧರ್ಮೀಯರಿಗೆ ವಿಭಿನ್ನ ವೈಯಕ್ತಿಕ ಕಾನೂನುಗಳು ಅನ್ವಯಿಸುವಂತೆಯೇ ಆಸ್ತಿಗೆ ಸಂಬಂಧಿಸಿದಂತೆಯೂ ಬೇರೆ ಬೇರೆ ಧರ್ಮಗಳಿಗೆ ಸೇರಿದ ವ್ಯಕ್ತಿಗಳಿಗೆ ಆಯಾ ಧರ್ಮದಲ್ಲಿ ಚಾಲ್ತಿಯಲ್ಲಿರುವ ಕಾನೂನುಗಳು ಅನ್ವಯಿಸುತ್ತವೆ.

ಹಿಂದೂಗಳಿಗೆ ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ ಅನ್ವಯಿಸುತ್ತದೆ. ಇದು ಜಮ್ಮು ಕಾಶ್ಮೀರ ರಾಜ್ಯವನ್ನುಳಿದು ಭಾರತದ ಉಳಿದೆಲ್ಲ ಪ್ರದೇಶಗಳಿಗೂ ಅನ್ವಯಿಸುತ್ತದೆ. 'ಹಿಂದೂ' ಎಂಬುದರಲ್ಲಿ ಸಿಖ್ಖರು, ಜೈನ ಹಾಗೂ ಬುದ್ಧಧರ್ಮೀಯರೂ ಸೇರುತ್ತಾರೆ. ಆದ್ದರಿಂದ ಭಾರತದ ಸುಮಾರು ಶೇ.೮೨.೦ರಷ್ಟು ಜನಸಂಖ್ಯೆಗೆ ಈ ಕಾನೂನು ಅನ್ವಯಿಸುತ್ತದೆ. ದೇಶದ ಒಟ್ಟು ಜನಸಂಖ್ಯೆ ಅರ್ಧದಷ್ಟು ಮಹಿಳೆಯರು. ಆದ್ದರಿಂದ ಭಾರತದಲ್ಲಿ ಮಹಿಳೆಯ ಸಾಮಾಜಿಕ ಹಾಗೂ ಆರ್ಥಿಕ ಸಬಲೀಕರಣಕ್ಕೆ ಆಸ್ತಿಯಲ್ಲಿ ಮಹಿಳೆ ಹಕ್ಕು ಹೊಂದಿರಬೇಕು ಎಂಬುದು ಬಹುಮುಖ್ಯವಾದ ಅಂಶವಾಗುತ್ತದೆ. ಈ ದೃಷ್ಟಿಯಿಂದಲೇ ಸಂವಿಧಾನದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಹಕ್ಕುಗಳನ್ನು ಕೊಡಲಾಗಿದೆ. ಆದರೆ ಇತರ ಕಾನೂನುಗಳಂತೆ ಆಸ್ತಿಗೆ ಸಂಬಂಧಿಸಿದ ಕಾನೂನು ಸಹ ರಚನೆಯ ಹಂತದಲ್ಲಿಯೇ ಸೇರಿಹೋಗಿರುವ ಸ್ತ್ರೀ ಪುರುಷ ತಾರತಮ್ಯದಿಂದ ಮುಕ್ತವಾಗಿಲ್ಲ.

ಆಸ್ತಿಗಳಲ್ಲಿ ಎರಡು ಬಗೆ. ಸ್ವಯಾರ್ಜಿತ ಹಾಗೂ ಪಿತ್ರಾರ್ಜಿತ. ಈ ಎರಡು ಆಸ್ತಿಗಳ ವಾರಸುದಾರಿಕೆಯ ಕ್ರಮವೂ ಬೇರೆ ಬೇರೆ. ಒಬ್ಬ ವ್ಯಕ್ತಿ ತನ್ನ ಸ್ವಯಾರ್ಜಿತ ಆಸ್ತಿಯನ್ನು ಬದುಕಿರುವವರೆಗೂ ಹೇಗೆ ವಿನಿಯೋಗಿಸಬಹುದೋ ಹಾಗೆಯೇ ತನ್ನ ಮರಣಾನಂತರ ತನ್ನ ಆಸ್ತಿ ಹೇಗೆ ವಿನಿಯೋಗವಾಗಬೇಕು ಎಂಬ ತನ್ನ ಇಚ್ಛೆಯನ್ನು ಉಯಿಲಿನ ಮೂಲಕ ತಿಳಿಸಬಹುದು. ಇಲ್ಲದಿದ್ದಲ್ಲಿ ಅಂಥ ಆಸ್ತಿ ವಾರಸುದಾರಿಕೆ ಕ್ರಮದಲ್ಲಿ ಹಂಚಿಕೆಯಾಗುತ್ತದೆ. ಹಿಂದೂ ಉತ್ತರಾಧಿಕಾರ ಅಧಿನಿಯಮ ಸ್ವಯಾರ್ಜಿತ ಆಸ್ತಿಯಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸಮಾನ ಉತ್ತರಾಧಿಕಾರ ಹಕ್ಕುಗಳನ್ನು ನೀಡುವುದಷ್ಟೇ ಅಲ್ಲದೆ ಮಹಿಳೆಗೆ ಆಸ್ತಿಯನ್ನು ನಿರುಪಾಧಿಕವಾಗಿ ಹೊಂದುವ ಹಕ್ಕನ್ನು ನೀಡುತ್ತದೆ ಎಂಬ ಕಾರಣಕ್ಕೆ ಅದನ್ನು ಪ್ರಗತಿಪರ ದೃಷ್ಟಿಯುಳ್ಳ ಕಾನೂನೆಂದು ಪರಿಗಣಿಸಲಾಗುತ್ತದೆ.

ಆಸ್ತಿ ಉತ್ತರಾಧಿಕಾರಕ್ಕೆ ಅನ್ವಯಿಸುವ ಪ್ರಾಚೀನ ಹಿಂದೂ ಕಾನೂನುಗಳ ಮೂಲವನ್ನು ಪ್ರಾಚೀನ ಧರ್ಮ ಶಾಸ್ತ್ರಗ್ರಂಥಗಳು ಹಾಗೂ ಅವುಗಳ ಬಗ್ಗೆ ಬಂದಂಥ ಭಾಷ್ಯಗಳಲ್ಲಿ ಗುರುತಿಸಬಹುದು. ಆಸ್ತಿ ವಾರಸುದಾರಿಕೆಗೆ ಸಂಬಂಧಿಸಿದಂತೆ ಸುಮಾರು ೧೨ನೇ ಶತಮಾನದಿಂದಲೂ ಪ್ರಾಚೀನ ಭಾರತದಲ್ಲಿ ಜಾರಿಯಲ್ಲಿದ್ದ ಮಿತಾಕ್ಷರ ಹಾಗೂ ದಾಯಭಾಗ ಪದ್ಧತಿಗಳು ಬ್ರಿಟಿಷರ ಕಾಲದ ಕಾನೂನುಗಳ ಮೇಲೆ ಪ್ರಭಾವ ಬೀರುವುದರ ಜೊತೆಗೆ ಈಗ ಜಾರಿಯಲ್ಲಿರುವ ಆಸ್ತಿ ಕಾನೂನುಗಳಿಗೂ ಮೂಲ ಆಕರವಾದವು.

ಮಿತಾಕ್ಷರ ಮತ್ತು ದಾಯಭಾಗ ಪದ್ಧತಿಗಳು ಆಸ್ತಿ ವಾರಸದಾರಿಕೆಗೆ ಅನ್ವಯಿಸುತ್ತಿದ್ದ ಪದ್ಧತಿಗಳಾಗಿದ್ದವು. ದಾಯಭಾಗ ಪದ್ಧತಿಯ ವಾರಸುದಾರಿಕೆ ಬಂಗಾಳದಲ್ಲಿ ಹಾಗೂ ಮಿತಾಕ್ಷರ ಪದ್ಧತಿ ಭಾರತದ ಉಳಿದೆಲ್ಲ ಪ್ರದೇಶಗಳಲ್ಲಿ ಜಾರಿಯಲ್ಲಿತ್ತು. ಈ ಎರಡೂ ಪದ್ಧತಿಗಳಲ್ಲಿದ್ದ ಮೂಲ ವ್ಯತ್ಯಾಸವೆಂದರೆ, ಮಿತಾಕ್ಷರ ಪದ್ಧತಿಯಲ್ಲಿ ಮೃತ(survivorship) ದಾಯದಿಯ ಆಸ್ತಿ(ಹಿತಾಸಕ್ತಿ) ಇತರ ದಾಯಾದಿಗಳಿಗೆ ಉತ್ತರ ಜೀವಿತಾಧಿಕಾರದಿಂದ ಪ್ರಾಪ್ತವಾಗುತ್ತದೆ. ಆದರೆ ದಾಯಭಾಗ ಪದ್ಧತಿಯಲ್ಲಿ ದಾಯಾದಿಗಳು ನಡುವೆ ಉತ್ತರಜೀವಿತಾಧಿಕಾರವಿಲ್ಲ.

ಮಿತಾಕ್ಷರ ಪದ್ಧತಿ ಎರಡು ಬಗೆಯ ಆಸ್ತಿಯನ್ನು ಗುರುತಿಸುತ್ತದೆ. ಅವಿಭಕ್ತ ಕುಟುಂಬದ ಆಸ್ತಿ ಹಾಗೂ ಪ್ರತ್ಯೇಕ ಆಸ್ತಿ. ಅವಿಭಕ್ತ ಕುಟುಂಬದ ಆಸ್ತಿ ಎಂದರೆ ಪಿತ್ರಾರ್ಜಿತ ಆಸ್ತಿ. ತಂದೆ, ತಾತ(ತಂದೆಯ ತಂದೆ) ಮುತ್ತಾತ(ತಂದೆಯ ತಂದೆಯ ತಂದೆ) ಮತ್ತು ತಂದೆಯ ತಂದೆಯ ತಂದೆಯಿಂದ ಪ್ರಾಪ್ತವಾದ ಆಸ್ತಿ ಮತ್ತು ಒಟ್ಟಾಗಿ ಆರ್ಜಿಸಿದ ಅಥವಾ ಪ್ರತ್ಯೇಕವಾಗಿ ಆರ್ಜಿಸಿ ಒಟ್ಟು ಆಸ್ತಿಗೇ ಸೇರ್ಪಡೆ ಮಾಡಿದ ಆಸ್ತಿಯೂ ಇದರಲ್ಲಿ ಸೇರುತ್ತದೆ. ಮೇಲೆ ಹೇಳಿದಂತೆ ತಂದೆ, ಮಗ, ಮೊಮ್ಮಗ, ಮರಿಮಗ ಹೀಗೆ ನಾಲ್ಕು ತಲೆಮಾರಿನ ಪುರುಷ ಸಂತಾನ ಹುಟ್ಟಿನಿಂದಲೇ ದಾಯಾದಿಗಳಾಗಿ ಆಸ್ತಿಗೆ ಹಕ್ಕುದಾರರೆನಿಸುತ್ತಾರೆ. ಆಸ್ತಿ ಪ್ರಾಪ್ತವಾಗುವುದು ಉತ್ತರಜೀವಿತಾಧಿಕಾರದ ಮೂಲಕ(survivorship) ಎಂದರೆ ಬದುಕಿರುವ ದಾಯಾದಿಗಳಿಗೆ ಮೃತ ದಾಯಾದಿಗಳ ಪಾಲು ಸೇರುತ್ತದೆ. ಹೀಗಾಗಿ ಹಿಂದೂ ಅವಿಭಕ್ತ ಕುಟುಂಬದಲ್ಲಿ ದಾಯಾದಿಯ ಸಾವು ಉಳಿದ ದಾಯಿಗಳ ಆಸ್ತಿಯ ಪಾಲನ್ನು ಹೆಚ್ಚಿಸುತ್ತಿದ್ದರೆ ದಾಯಾದಿಗಳ ಪುರುಷ ಸಂತಾನದಿಂದ ದಾಯಾದಿಗಳ ವೈಯಕ್ತಿಕ ಆಸ್ತಿಯ ಪಾಲು ಕಡಿಮೆಯಾಗುತ್ತಿತ್ತು. ಪ್ರತ್ಯೇಕ ಆಸ್ತಿ ಎಂಬುದು ಪಾಲಾದ ನಂತರವೇ ಮಾತ್ರ ನಿರ್ಧರಿತವಾಗುತ್ತಿತ್ತು. ಪ್ರತಿಯೊಬ್ಬ ದಾಯಾದಿಗೂ ಪಾಲು ಕೇಳುವ ಹಕ್ಕು ಇರುತ್ತಿತ್ತು. ಹಾಗೆ ಪಡೆದ ಪಾಲು ಅವನ ಪ್ರತ್ಯೇಕ ಆಸ್ತಿ ಎನಿಸಿಕೊಳ್ಳುತ್ತಿತು.

ಇಂಥ ಪ್ರತ್ಯೇಕ ಆಸ್ತಿಯ ಮೇಲೆ ಅವನು ನಿರುಪಾಧಿಕ ಹಕ್ಕನ್ನು ಹೊಂದಿರುತ್ತಿದ್ದ. ಆದರೆ ತಂದೆಯ ಆಸ್ತಿಯಿಂದ ಅವನು ಪಡೆದ ಪಾಲು ಪಿತ್ರಾರ್ಜಿತ ಆಸ್ತಿಯಾಗುವುದರಿಂದ ಅವನಿಗೆ ಮಗ, ಮೊಮ್ಮಗ ಅಥವಾ ಮರಿಮಗನಿದ್ದಲ್ಲಿ ಆ ಆಸ್ತಿಯ ಮೇಲಿನ ಅವನ ಅನಿರುಪಾಧಿಕ ಹಕ್ಕು ಮೊಟಕುಗೊಳ್ಳುತ್ತಿತ್ತು.

ಉಳಿದಂತೆ ಬೇರೆ ರೀತಿಯಲ್ಲಿ ಅವನು ಗಳಿಸಿದ ಆಸ್ತಿ ಎಂದರೆ ಪಿತ್ರಾರ್ಜಿತ ಆಸ್ತಿಯಲ್ಲದೆ ಬೇರೆ ಆಸ್ತಿಯಿಂದ ತಂದೆ ನೀಡಿದ ಆಸ್ತಿ, ಮದುವೆಯಲ್ಲಿ ಉಡುಗೊರೆಯಾಗಿ ಬಂದ ಆಸ್ತಿ ಇವೆಲ್ಲವೂ ಅವನ ಸ್ವಯಾರ್ಜಿತ ಆಸ್ತಿ ಎನಿಸಿಕೊಳ್ಳುತ್ತದೆ. ಮಹಿಳೆಯರಿಗೆ ಮಾತ್ರ ಎಂದೂ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ಇರಲಿಲ್ಲ. ಹೆಂಡತಿಯಾಗಿ ಮತ್ತು ಅವಿವಾಹಿತ ಮಗಳಾಗಿ ಅವಳು ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಜೀವನಾಂಶ ಪಡೆಯುವುದಕ್ಕೆ ಮಾತ್ರ ಅವಳ ಆಸ್ತಿ ಹಕ್ಕು ಸೀಮಿತವಾಗಿತ್ತು. ದಾಯಾದಿಯ ವಿಧವೆಗೆ ಗಂಡು ಸಂತಾನವಿಲ್ಲದಿದ್ದಲ್ಲಿ, ಸಗೋತ್ರದ ಮೊಮ್ಮಕ್ಕಳು ಅಥವಾ ಮರಿಮೊಮ್ಮಕ್ಕಳು(ಗಂಡುಮಕ್ಕಳು) ಇಲ್ಲದಿದ್ದಲ್ಲಿ ಮಾತ್ರ ತನ್ನ ಗಂಡನ ಆಸ್ತಿಯಲ್ಲಿ ಸೀಮಿತ ಹಕ್ಕನ್ನು ಪಡೆಯುತ್ತಿದ್ದಳು. ಅದೂ ಅವಳು ಶುದ್ಧ ಚಾರಿತ್ರ್ಯವನ್ನು ಹೊಂದಿದವಳಾಗಿದ್ದರೆ ಮಾತ್ರ. 'ಸೀಮಿತ ಹಕ್ಕು' ಎಂದರೆ ಅವಳು ತನ್ನ ಜೀವಿತಾವಧಿಗೆ ಮಾತ್ರ ಆಸ್ತಿಯನ್ನು ಉಪಭೋಗಿಸುವ ಹಕ್ಕನ್ನು ಹೊಂದಿರುತ್ತಿದ್ದಳು. ಅವಳ ನಂತರ ಅದು ಗಂಡನ ದಾಯಾದಿಗಳಿಗೇ ಸೇರುತ್ತಿತ್ತು. ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಅವಳಿಗೆ ಈ ಆಸ್ತಿಯನ್ನು ಪರಭಾರೆ ಮಾಡಲು ಅವಕಾಶವಿರುತ್ತಿತ್ತು.

ದಾಯಭಾಗ ಪದ್ಧತಿಯಲ್ಲಿ ಪಿತ್ರಾರ್ಜಿತ ಹಾಗೂ ಸ್ವಯಾರ್ಜಿತ ಆಸ್ತಿಗಳಲ್ಲಿ ಪ್ರತ್ಯೇಕತೆಯಿಲ್ಲ. ಇಲ್ಲಿ ವ್ಯಕ್ತಿ ತಾನು ಹೊಂದಿರುವ ಆಸ್ತಿಗೆ ನಿರುಪಾದಕ ಒಡೆಯ ಅದನ್ನು ತನ್ನಿಚ್ಛೆ ಬಂದಂತೆ ವಿಲೆಮಾಡಬಹುದು. ಹಾಗಾಗಿ ಮಗ ಹುಟ್ಟಿನಿಂದಲೇ ತಂದೆಯ ಆಸ್ತಿಯಲ್ಲಿ ಪಾಲು ಪಡೆಯುವುದಿಲ್ಲ. ಇಲ್ಲಿ ತಂದೆಯ ಮರಣಾನಂತರ ಗಂಡು ಮಕ್ಕಳು ಹಾಗೂ ಹೆಣ್ಣು ಮಕ್ಕಳು ಪಾಲು ಪಡೆಯುತ್ತಾರೆ. ಈ ಎರಡೂ ಪದ್ಧತಿಗಳೂ ಸ್ತ್ರೀಧನ ಪರಿಕಲ್ಪನೆಗೆ ಮನ್ನಣೆ ನೀಡಿದೆ.

ಈ ಎರಡು ಪದ್ಧತಿಗಳಲ್ಲಿಯೂ, ಸ್ಥಿರ ಆಸ್ತಿಯನ್ನು ಮಹಿಳೆ ತೀರ ನಿರ್ಬಂಧಿತ ಸನ್ನಿವೇಶಗಳಲ್ಲಿ ಮಾತ್ರ ಪಡೆಯುತ್ತಿದ್ದಳು. ಮತ್ತು ಪಡೆದರೂ ಅದರಲ್ಲಿ ಕೇವಲ ಸೀಮಿತಾಧಿಕಾರವನ್ನು ಹೊಂದಿರುತ್ತಿದ್ದಳು. ಮಿತಾಕ್ಷರ ಪದ್ಧತಿಯಲ್ಲಿ ಅವಿಭಕ್ತ ಕುಟುಂಬದ ಆಸ್ತಿಯನ್ನು ಪರಭಾರೆ ಮಾಡವುದರ ಮೇಲೆ ಪುರುಷರಿಗೂ ಕೆಲವು ನಿರ್ಬಂಧಗಳಿದ್ದವು. ಆದರೆ ಈ ನಿರ್ಬಂಧಗಳು ವ್ಯಕ್ತಿಯ ಹಕ್ಕುಗಳಿಗೆ ಸಂಬಂಧಪಟ್ಟ ವುಗಳಾಗಿದ್ದುವೇ ಹೊರತು ವ್ಯಕ್ತಿ 'ಪುರುಷ' ಎಂಬುದರಿಂದಾಗಿ ಇದ್ದಂಥ ನಿರ್ಬಂಧಗಳಾಗಿರಲಿಲ್ಲ. ಆದರೆ ಮಹಿಳೆಗಿದ್ದ ನಿರ್ಬಂಧಗಳು ಅವಳು 'ಮಹಿಳೆ' ಎಂಬ ಕಾರಣಕ್ಕಾಗಿ ಹೇರಿದಂಥವುಗಳಾಗಿದ್ದವು.

ಇಪ್ಪತ್ತನೇ ಶತಮಾನದ ಪ್ರಾರಂಭಿಕ ದಶಕಗಳಲ್ಲಿ ಅನೇಕ ಮಹಿಳಾ ಸಂಘಟನೆಗಳು ಹಾಗೂ ಪ್ರಗತಿಗಾಮಿ ಮನೋಭಾವವುಳ್ಳ ಪುರುಷರು ಮಹಿಳೆಯರಿಗೆ ಕಾನೂನಿನ ಸ್ಥಾನಮಾನದಲ್ಲಿ ಬದಲಾವಣೆಗಳನ್ನು ತರಬೇಕೆಂದು ಹೋರಾಟ ನಡೆಸಿದರು. ೧೯೩೦ರ ಸುಮಾರಿಗೆ ಅನೇಕ ಮಹಿಳಾ ಸಂಘಟನೆಗಳು ಸ್ಥಾಪನೆಗೊಂಡಿದ್ದವು. ಅವುಗಳಲ್ಲಿ ೧೯೧೭ರಲ್ಲಿ ಸ್ಥಾಪನೆಗೊಂಡ ವಿಮೆನ್ಸ್ ಇಂಡಿಯನ್ ಅಸೋಸಿಯೇಷನ್

(W.I.A), ೧೯೨೭ರ ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್ (AIWC), ೧೯೨೫ರಲ್ಲಿ ಅಸ್ತಿತ್ವಕ್ಕೆ ಬಂದ ನ್ಯಾಷನಲ್ ಕೌನ್ಸಿಲ್ ಆಫ್ ವಿಮೆನ್ ಇನ್ ಇಂಡಿಯಾ(AIWC) ಮುಖ್ಯವಾದವು. ಇವೆಲ್ಲವೂ ಸಾಮಾಜಿಕ ಸುಧಾರಣೆಯ ಕಾನೂನುಗಳಿಗಾಗಿ, ಅದರಲ್ಲೂ ಮುಖ್ಯವಾಗಿ ಮಹಿಳೆಯರ ವಿಚ್ಛೇದನೆ ಹಕ್ಕು ಹಾಗೂ ಆಸ್ತಿಯ ವಾರಸುದಾರಿಕೆ ಮತ್ತು ನಿಯಂತ್ರಣ ಹಕ್ಕುಗಳಿಗಾಗಿ ಹೋರಾಟ ನಡೆಸಿದವು. ಹಿಂದೂ ಮಹಿಳೆಯರ ವಿಚ್ಛೇದನೆ ಹಕ್ಕು ಹಾಗೂ ಹಿಂದೂ ವಿಧವೆಯರಿಗೆ ಅವರ ಗಂಡಂದಿರ ಆಸ್ತಿಯಲ್ಲಿ ಪಾಲಿನ ಹಕ್ಕುಗಳ ಬಗ್ಗೆ ೧೯೩೫ರ ಶಾಸನಸಭೆಯಲ್ಲಿ ಮಂಡಿಸಿದ ಕಾನೂನುಗಳು ಸಾಂಪ್ರದಾಯಿಕ ಹಿಂದೂ ಸದಸ್ಯರ ತೀವ್ರ ವಿರೋಧವನ್ನು ಎದುರಿಸಬೇಕಾಯಿತು. ಕೊನೆಗೆ ೧೯೩೭ರಲ್ಲಿ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮವನ್ನು ಅಂಗೀಕರಿಸಲಾಯಿತು. ಮಿತಾಕ್ಷರ ಉತ್ತರಾಧಿಕಾರ ಪದ್ಧತಿಯಲ್ಲಿ, ಪ್ರತ್ಯೇಕವಾದ ಮರಣಶಾಸನ ರಹಿತ ಆಸ್ತಿಯಲ್ಲಿ ಮಗನ ಪಾಲಿಗೆ ಸಮನಾದ ಪಾಲನ್ನು ಪಡೆಯಲು ಹಿಂದೂ ವಿಧವೆಗೆ ಹಕ್ಕು ನೀಡಲಾಯಿತು. ಮತ್ತು ದಾಯಭಾಗ ಪದ್ಧತಿಯಲ್ಲಿ ಎಲ್ಲ ಬಗೆಯ ಆಸ್ತಿಯಲ್ಲಿಯೂ ಹಕ್ಕು ನೀಡಲಾಯಿತು. ಅಲ್ಲದೆ, ಮಿತಾಕ್ಷರ ಪದ್ಧತಿಯ ಅವಿಭಕ್ತ ಕುಟುಂಬದಲ್ಲಿ ಮೃತ ಗಂಡನಿಗಿರುವ ಪಾಲನ್ನು ಅವನ ವಿಧವೆ ಹೊಂದಲು ಹಾಗೂ ಗಂಡನಿಗಿದ್ದಂತೆ ಪಾಲು ಮಾಡುವಂತೆ ಕೇಳುವ ಹಕ್ಕನ್ನೂ ನೀಡಲಾಯಿತು. ಆದರೆ ಆಸ್ತಿಯ ಈ ಹಕ್ಕು ಸೀಮಿತವಾದುದಾಗಿತ್ತು. ವಿಧವೆ ಪುನರ್ವಿವಾಹವಾದಲ್ಲಿ ಈ ಹಕ್ಕನ್ನು ಕಳೆದುಕೊಳ್ಳುತ್ತಿದ್ದಳು. ಇಲ್ಲಿ ಗಮನಿಸಬೇಕಾದ ಮತ್ತು ಮಹಿಳೆಯ ಇಂದಿನ ಎರಡನೇ ಸ್ಥಾನ ಹಾಗೂ ಶೋಷಣೆಗೆ ಕಾರಣವಾಗಿದೆ ಎಂಬ ಕಾರಣಕ್ಕೆ ಮಹತ್ವವಾಗುವ ಇನ್ನೊಂದು ಅಂಶವೆಂದರೆ- ಈ ಕಾನೂನು ಕೃಷಿಭೂಮಿಯನ್ನು ಸ್ಪಷ್ಟವಾಗಿ ಹೊರತುಪಡಿಸಿತು ಎಂಬುದು. ಇದಕ್ಕೆ ಕಾರಣ ೧೯೩೫ರಲ್ಲಿ ಭಾರತ ಸರ್ಕಾರದ ಅಧಿನಿಯಮ ಜಾರಿಗೆ ಬಂದ ನಂತರ (Govt of India Act, 1935) ಕೃಷಿ ಆಸ್ತಿ ಪ್ರಾಂತೀಯ ಅಧಿಕಾರ ವ್ಯಾಪ್ತಿಗೆ ಒಳಪಡುತ್ತದೆ ಎಂಬುದು. ಹೆಣ್ಣುಮಕ್ಕಳನ್ನು ಸಹ ಈ ಅಧಿನಿಯಮ ಹೊರತುಪಡಿಸಿತು. ೧೯೩೭ರ ಹಿಂದೂ ಮಹಿಳೆಯರ ಆಸ್ತಿ ಹಕ್ಕು ಅಧಿನಿಯಮದಲ್ಲಿ ವಿಧವೆಯರಿಗೆ ನೀಡುವ ಹಕ್ಕುಗಳ ಬಗ್ಗೆ ಬಹಳಷ್ಟು ಗೊಂದಲಗಳಿದ್ದವು. ಆ ಬಗ್ಗೆ ಸ್ಪಷ್ಟೀಕರಣ ನೀಡಲು ಮತ್ತು ಈ ಅಧಿನಿಯಮದಿಂದ ಹೆಣ್ಣುಮಕ್ಕಳಿಗೆ ಆಗಿರುವ ಅನ್ಯಾಯವನ್ನು ತೊಡೆದುಹಾಕಲು ಈ ಕಾನೂನಿಗೆ ತರಬೇಕಾದ ತಿದ್ದುಪಡಿಗಳ ಬಗ್ಗೆ ಸಲಹೆ ನೀಡುವುದಕ್ಕಾಗಿ ಸರ್ಕಾರ, ೧೯೪೧ರಲ್ಲಿ ರಾವ್ (ಹಿಂದೂ ಕಾನೂನು) ಸಮಿತಿಯನ್ನು ರಚಿಸಿತು. ಈ ಸಮಿತಿ ತಿದ್ದುಪಡಿಗಳು ಮತ್ತಷ್ಟು ಗೊಂದಲವುಂಟುಮಾಡುತ್ತವಾದ್ದರಿಂದ, ವಾರಸುದಾರಿಕೆ, ವಿವಾಹ ಮತ್ತಿತರ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ಸಮಗ್ರವಾದ ಹಿಂದೂ ಕಾನೂನನ್ನು ಸಿದ್ಧಪಡಿಸಬೇಕೆಂದು ಶಿಫಾರಸು ಮಾಡಿತು ಮತ್ತು ಸ್ತ್ರೀ ಪುರುಷರಿಗಿಬ್ಬರಿಗೂ, ಸಮಾನ ಹೊಣೆಗಾರಿಕೆ ಮತ್ತು ಸಮಾನ ಹಕ್ಕುಗಳೊಡನೆ ಸಮಾನ ಸ್ಥಾನಮಾನ ನೀಡಬೇಕೆಂದು ಇದರ ಆಶಯವಾಗಿತ್ತು.

೧೯೪೪ರಲ್ಲಿ ಹಿಂದೂ ಸಂಹಿತೆಯನ್ನು ಸಿದ್ಧಪಡಿಸುವುದಕ್ಕಾಗಿ ರಾವ್ ಸಮಿತಿಯನ್ನು ಮತ್ತೆ ರಚಿಸಲಾಯಿತು. ಕರಡು ಸಂಹಿತೆಯನ್ನು ಸಮಿತಿ ಅದೇ ವರ್ಷ ಅಗಸ್ಟ್ ತಿಂಗಳಲ್ಲಿ ಸಿದ್ಧಪಡಿಸಿತು. ಮಿತಾಕ್ಷರ ಪದ್ಧತಿಯಲ್ಲಿರುವ ಪುರುಷರಿಗೆ ಹುಟ್ಟನಿಂದ ಪ್ರಾಪ್ತವಾಗುವ ವಾರಸುದಾರಿಕೆ, ಗಂಡುಮಕ್ಕಳಿಗೆ ಹಾಗೂ ಮೃತ ಗಂಡುಮಕ್ಕಳ ವಿಧವೆಯರಿಗೆ ಆಸ್ತಿಯಲ್ಲಿ ಸಮಾನ ಪಾಲು, ಮರಣಶಾಸನ ರಹಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಗಂಡುಮಕ್ಕಳ ಪಾಲಿನಲ್ಲಿ ಅರ್ಧಪಾಲು; ವಿಧವೆಯರಿಗೆ ಆಸ್ತಿಯ ಮೇಲೆ ನಿರುಪಾಧಿಕ ಹಕ್ಕು (ಸೀಮಿತ ಹಕ್ಕಿಗೆ ಬದಲಾಗಿ), ಏಕಪತ್ನಿತ್ವದ ಕಡ್ಡಾಯ ಹೇರಿಕೆ ಮತ್ತು ಕೆಲವು ಸಂದರ್ಭಗಳಲ್ಲಿ ವಿಚ್ಛೇದನೆ ಪಡೆಯುವುದನ್ನು ಕಾನೂನು ಬದ್ಧಗೊಳಿಸುವುದು- ಇವು ಹಿಂದೂ ಸಂಹಿತೆಯಲ್ಲಿ ಅಳವಡಿಸಿದ್ದ ಮುಖ್ಯ ಅಂಶಗಳಾಗಿದ್ದವು. ಇದರಲ್ಲಿಯೂ ಸಹ ಕೃಷಿಭೂಮಿಯ ಆಸ್ತಿ ಹಕ್ಕನ್ನು, ಅದರ ಪ್ರಾಂತ್ಯಗಳ ಅಧಿಕಾರದ ಪರಿಧಿಗೆ ಸೇರುತ್ತದೆಂಬ ಕಾರಣದ ಮೇಲೆ ಬಿಟ್ಟು ಬಿಡಲಾಗಿತ್ತು. ಈ ಸಂಹಿತೆಗೆ ಅನೇಕ ಪರ ವಿರೋಧ ಅಭಿಪ್ರಾಯಗಳು ವ್ಯಕ್ತವಾದುವು. ಆಸ್ತಿ ಮತ್ತು ವಿವಾಹಗಳಿಗೆ ಸಂಬಂಧಿಸಿದಂತೆ ಮಾಡಲಾಗಿದ್ದ ಕೆಲವು ಉಪಬಂಧಗಳು ಮಹಿಳಾಪರ ಉಪಬಂಧಗಳಾಗಿವೆ ಎಂಬ ಕಾರಣಕ್ಕೆ ತೀವ್ರ ವಿರೋಧ ವ್ಯಕ್ತವಾಯಿತು. ಆದರೆ ವಾಸ್ತವವಾಗಿ ಮಹಿಳಾ ಪರವಾದುವುಗಳಾಗಿರದೆ, ಅವಳಿಗೆ ಸಂವಿಧಾನದ ಆಶಯದಂತೆ ನೀಡಬೇಕಾದ ಸಮಾನ ಸ್ಥಾನಮಾನ ಹಾಗೂ ಸಮಾನ ಅವಕಾಶಗಳಿಗಾಗಿ ಕಲ್ಪಿಸಲಾದ ಉಪಬಂಧಗಳಾಗಿದ್ದು, ಅದರ ಆಶಯಕ್ಕೆ ಪೂರಕವಾದವುಗಳಾಗಿದ್ದವು.

ಎಲ್ಲ ವಿರೋಧಗಳ ನಡುವೆಯೇ ರಾವ್ ಸಮಿತಿ ಪರಿಷ್ಕೃತ ಕರಡು ಹಿಂದೂ ಸಂಹಿತೆಯನ್ನು ಸಲ್ಲಿಸಿತು. ಇದನ್ನು ೧೯೪೭ರ ಏಪ್ರಿಲ್ ನಲ್ಲಿ ಶಾಸನಸಭೆಯಲ್ಲಿ ಮಂಡಿಸಲಾಗಿತ್ತು. ಸ್ವಾತಂತ್ರ್ಯಾನಂತರ, ೧೯೪೮ರಲ್ಲಿ ಹೊಸ ಸಂಸತ್ತಿನಲ್ಲಿ ಇನ್ನಷ್ಟು ಪರಿಷ್ಕರಿಸಿದ ವಿಧೇಯಕವನ್ನು ಮತ್ತೆ ಮಂಡಿಸಲಾಯಿತು. ಅಲ್ಲಿ ಇದು ತೀವ್ರವಾದ ಮತ್ತು ಆಮೂಲಾಗ್ರವಾದ ಚರ್ಚೆಗೆ ಒಳಪಟ್ಟಿತು. ಈ ವಿಧೇಯಕವನ್ನು ಬೆಂಬಲಿಸಿದ ಮಹಿಳಾ ಸಂಘಟನೆಗಳೂ ಸಹ ತೀವ್ರ ಟೀಕೆಗೆ ಗುರಿಯಾದವು. ಸ್ವತಂತ್ರ ಭಾರತದ ಬಹುತೇಕ ಕಾಂಗ್ರೆಸ್ ನಾಯಕರು ಈ ವಿಧೇಯಕನ್ನು ವಿರೋಧಿಸಿದರು. ಗೃಹಸಚಿವರಾಗಿದ್ದ ವಲ್ಲಭಬಾಯಿ ಪಟೇಲ್ ಹಾಗೂ ರಾಷ್ಟ್ರಾಧ್ಯಕ್ಷರಾಗಿದ್ದ ರಾಜೇಂದ್ರಪ್ರಸಾದ್ ಅವರೂ ಸಹ ಈ ವಿಧೇಯಕಕ್ಕೆ ವಿರೋಧ ವ್ಯಕ್ತಪಡಿಸಿದವರಾಗಿದ್ದರು.

ಈ ವಿರೋಧದ ಹಿನ್ನೆಲೆಯಲ್ಲಿ ಈ ವಿಧೇಯಕ ಅಂಗೀಕಾರವಾಗದೆ ಹಾಗೆಯೇ ಉಳಿಯಿತು. ಇದನ್ನು ಜಾರಿಗೊಳಿಸಬೇಕೆಂಬ ಪ್ರಧಾನಮಂತ್ರಿ ಜವಾಹರಲಾಲ್ ನೆಹರೂ ಅವರ ಇಚ್ಛೆ ನೆರವೇರಲಿಲ್ಲ. ಅಂದಿನ ಕಾನೂನು ಸಚಿವರಾಗಿದ್ದ ಸಂವಿಧಾನ ಶಿಲ್ಪಿ ಡಾ.ಬಿ.ಆರ್.ಅಂಬೇಡ್ಕರ್ ಕೊನೆಯಲ್ಲಿ, ಸಂಸತ್ತಿನ ನಿಲುವನ್ನು ವಿರೋಧಿಸಿ ರಾಜೀನಾಮೆ ನೀಡಿದರು. ೧೯೫೧ರ ನಂತರ ಹಿಂದೂ ಸಂಹಿತೆ ವಿಧೇಯಕದ

ಪ್ರಮುಖ ಅಂಶಗಳು ನಾಲ್ಕು ಪ್ರತ್ಯೇಕ ಅಧಿನಿಯಮಗಳಾಗಿ ಜಾರಿಗೊಂಡವು. ಅವುಗಳಲ್ಲಿ, ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ ಒಂದಾಗಿತ್ತು. ಇದು ಈಗಿನ ಹಿಂದೂ ಉತ್ತರಾಧಿಕಾರ ಕಾನೂನು ಜಾರಿಗೊಂಡುದರ ಹಿನ್ನೆಲೆ.

ಮಹಿಳೆಯರ ವಾರಸುದಾರಿಕೆ ಹಕ್ಕುಗಳು ಬೇರೆ ಬೇರೆ ಧರ್ಮಗಳಲ್ಲಿ ಬೇರೆ ಬೇರೆಯಾಗಿವೆ. ಧರ್ಮಗಳು ಆಸ್ತಿ ವಾರಸುದಾರಿಕೆ ಹಕ್ಕುಗಳ ಮೇಲೆ ತುಂಬ ಪ್ರಭಾವವನ್ನು ಬೀರಿದೆ. ೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮ ಜಾರಿಗೆ ಬರುವವರೆಗೆ ಆಸ್ತಿ ಉತ್ತರಾಧಿಕಾರಕ್ಕೆ ಸಂಬಂಧಿಸಿದ ಕಾನೂನು ಕ್ರೋಡೀಕೃತವಾಗಿರಲಿಲ್ಲ. ಭಾರತದಲ್ಲಿ ಎಲ್ಲ ಧರ್ಮದ ಮಹಿಳೆಯರೂ ಆಸ್ತಿ ವಾರಸುದಾರಿಕೆ ವಿಷಯದಲ್ಲಿ ಎರಡನೆಯ ಸ್ಥಾನವನ್ನೇ ಪಡೆದಿದ್ದಾರೆ. ಇಂಗ್ಲೆಂಡಿನಲ್ಲಿಯೂ, ಇಂಗ್ಲಿಷ್ ಮಹಿಳೆಯರಿಗೆ ಪುರುಷರೊಂದಿಗೆ ಸಮಾನ ಹಕ್ಕುಗಳಿರಲಿಲ್ಲ. ಆದರೆ ಈಕ್ವಿಟಿ ನ್ಯಾಯಾಲಯಗಳು ಸಮಾನತೆಯ ತತ್ತ್ವಗಳನ್ನು ಆಧರಿಸಿ ಕಾನೂನನ್ನು ಅನ್ವಯಿಸಲು ಪ್ರಾರಂಭಿಸಿದ ನಂತರ ಈ ಪರಿಸ್ಥಿತಿಯಲ್ಲಿ ಬದಲಾವಣೆಗಳಾದವು. ಹಿಂದೂಗಳಿಗೆ ಸಂಬಂಧಿಸಿಂತೆ, ಭಾರತದಲ್ಲಿಯೂ, ಸ್ತ್ರೀಪುರುಷರ ನಡುವೆ ಇದ್ದ ಈ ಅಸಮಾನತೆಯನ್ನು ಹಿಂದೂ ಮಹಿಳೆಯರ ಆಸ್ತಿಹಕ್ಕುಗಳ ಅಧಿನಿಮಯಮ, ೧೯೩೭, ಹಿಂದೂ ಆಸ್ತಿ ವಿಲೇ ಅಧಿನಿಯಮ, ೧೯೧೬, ಹಿಂದೂ ವಾರಸುದಾರಿಕೆ (ಅಸಾಮರ್ಥ್ಯಗಳ ನಿವಾರಣೆ) ಅಧಿನಿಮಯ, ೧೯೨೮, ಭಾರತೀಯ ಉತ್ತರಾಧಿಕಾರ ಅಧಿನಿಯಮ, ೧೯೦೨ ಮುಂತಾದ ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಸ್ವಲ್ಪಮಟ್ಟಿಗೆ ನಿವಾರಿಸುವ ಪ್ರಯತ್ನ ಮಾಡಲಾಯಿತು.

ಹಿಂದೂಗಳು, ಕ್ರಿಶ್ಚಿಯನ್ನರು ಮತ್ತು ಪಾರ್ಸಿಗಳು ಮುಂತಾದವರಿಗೆ ಮರಣಸಾಸನ ಮೂಲಕ ಉತ್ತರಾಧಿಕಾರಕ್ಕೆ ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫ ಅನ್ವಯಿಸುತ್ತದೆ. ಇದರಲ್ಲಿ ಸ್ತ್ರೀ ಪುರುಷರ ನಡುವೆ ಯಾವುದೇ ತಾರತಮ್ಯವಿಲ್ಲ.

೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮವನ್ನು ಜಾರಿಗೊಳಿಸುವ ಮೂಲಕ ಸ್ತ್ರೀಯರ ವಾರಸುದಾರಿಕೆ ಹಾಗೂ ಆಸ್ತಿ ಹಕ್ಕುಗಳಲ್ಲಿ ಕೆಲವು ಪ್ರಗತಿಪರ ಬದಲಾವಣೆಗಳನ್ನು ತರಲಾಯಿತು. ಇದಕ್ಕೆ ಮುನ್ನ ಇದ್ದ ಮಿತಾಕ್ಷರ ಮತ್ತು ದಾಯಭಾಗ ಆಸ್ತಿ ಉತ್ತರಾಧಿಕಾರ ಪದ್ಧತಿಗಳನ್ನು ರದ್ದುಗೊಳಿಸಿ ಆಸ್ತಿ ಕಾನೂನನ್ನು ಸರಳಗೊಳಿಸಲಾಯಿತು.

## ೧೯೫೬ಕ್ಕೆ ಮುನ್ನ ಹಿಂದೂ ಮಹಿಳೆಯ ಸ್ಥಾನ

೧೯೫೬ ಮುನ್ನ ಹಿಂದೂ ಮಹಿಳೆಯ ಆಸ್ತಿಯನ್ನು ಎರಡು ವಿಧವಾಗಿ ಗುರುತಿಸಲಾಗುತ್ತಿತ್ತು.

೧. ಸ್ತ್ರೀಧನ

೨. ಮಹಿಳೆಯ ಆಸ್ತಿ

ಸ್ತ್ರೀಧನ ಎಂದರೆ ಅದೇ ಸೂಚಿಸುವಂತೆ ಮಹಿಳೆಯ ಆಸ್ತಿ. ಹಿಂದೂ ಕಾನೂನು, ಸ್ತ್ರೀಧನವನ್ನು ಮಹಿಳೆ ದಾನದ ಮೂಲಕ ಬಂಧುಗಳಿಂದ ಪಡೆದ ಆಸ್ತಿ ಎಂದೇ ಪರಿಭಾಷಿಸಿದೆ. ಇದರಲ್ಲಿ ಚರ ಮತ್ತು ಸ್ಥಿರ ಆಸ್ತಿಗಳೆರಡೂ ಸೇರುತ್ತವೆ. ಹಿಂದಿನ ಶಾಸ್ತ್ರಗ್ರಂಥಗಳಲ್ಲಿ ಸ್ತ್ರೀಧನದ ಉತ್ತರಾಧಿಕಾರ ವಿಷಯವೊಂದನ್ನು ಹೊರತುಪಡಿಸಿ ಮಿಕ್ಕೆಲ್ಲ ವಿಷಯಗಳ ಬಗ್ಗೆ ಸ್ಪಷ್ಟ ಉಲ್ಲೇಖವಿದೆ. ವಿವಾಹವಾಗುವಾಗ ಮತ್ತು ವಿವಾಹಕ್ಕೆ ಮುನ್ನ ಕೊಟ್ಟ, ಪ್ರೀತಿಯ ಸಂಕೇತವಾಗಿ ಕೊಟ್ಟ ಆಸ್ತಿ, ಸಹೋದರ, ತಂದೆ ತಾಯಿಯರಿಂದ ಪಡೆದ ಆಸ್ತಿ. ಎಲ್ಲವೂ ಸ್ತ್ರೀಧನವೆನಿಸಿಕೊಳ್ಳುತ್ತದೆ ಎಂದು ಮನು ಹೇಳಿದ್ದಾನೆ ಎಂದು ಹಿಂದೂ ಕಾನೂನಿನ ಬಗ್ಗೆ ಬೃಹತ್ ಗ್ರಂಥವನ್ನು ಬರೆದ ಮೆಯಿನ್ ಉಲ್ಲೇಖಿಸುತ್ತಾನೆ.[೧] ಆದರೆ ಪುರುಷನಿಂದ ಅಥವಾ ಮಹಿಳೆಯಿಂದ ವಾರಸುದಾರಿಕೆಯಿಂದ ಪಡೆದ ಆಸ್ತಿ ಸ್ತ್ರೀಧನವೆನಿಸಿಕೊಳ್ಳುವುದಿಲ್ಲ ಮತ್ತು ಅದಕ್ಕೆ ಅವಳು ನಿರುಪಾಧಿಕ ಒಡೆಯಳೂ ಆಗುವುದಿಲ್ಲ. ಜೀವನಾಂಶಕ್ಕೆ ಬದಲಾಗಿ ಮಹಿಳೆ ಪಡೆದ ಆಸ್ತಿಯನ್ನು ಹಾಗೂ ಸ್ತ್ರೀಧನದಿಂದ ಖರೀದಿ ಮಾಡಿದ ಆಸ್ತಿಯನ್ನು ಸ್ತ್ರೀಧನವೆಂದು ಎಲ್ಲ ಹಿಂದೂ ಕಾನೂನು ಪದ್ಧತಿಗಳೂ ಪರಿಗಣಿಸುತ್ತದೆ.

ಸ್ತ್ರೀಧನಕ್ಕೆ ಮಹಿಳೆಯೇ ನಿರುಪಾಧಿಕ ಒಡೆಯಳಾಗಿದ್ದರಿಂದ ಆ ಆಸ್ತಿಯನ್ನು ಪರಭಾರೆ ಮಾಡುವ ಹಕ್ಕು ಅವಳಿಗಿತ್ತು. ಅದನ್ನು ಅವಳು ಮಾರಾಟ, ದಾನ, ಅಡಮಾನ, ಗೇಣಿ ಅಥವಾ ವಿನಿಮಯದ ಮೂಲಕ ವಿಲೇ ಮಾಡುವ ಹಕ್ಕನ್ನು ಹೊಂದಿದ್ದಳು. ಮಹಿಳೆಯ ಮರಣದ ನಂತರ ಸ್ತ್ರೀಧನ ಅವಳ ವಾರಸುದಾರರಿಗೆ ಸೇರುತ್ತಿತ್ತೆ ವಿನಃ ಅವಳ ಪತಿಯ ವಾರಸುದಾರರಿಗೆ ಪ್ರಾಪ್ತವಾಗುತ್ತಿರಲಿಲ್ಲ. ಸ್ತ್ರೀಧನವಾಗಿ ಬಂದ ಆಸ್ತಿಯನ್ನು ಅನುಭವಿಸುವ, ಪರಭಾರೆ ಮಾಡುವ ಹಾಗೂ ಅದರ ಸ್ವಾಧೀನತೆಯನ್ನು ಪಡೆಯುವ ಎಲ್ಲ ಹಕ್ಕುಗಳೂ ಅವಳಿಗೆ ಇತ್ತು.

ಸರ್ವೋಚ್ಚ ನ್ಯಾಯಾಲಯ ಇತ್ತೀಚಿನ ಪ್ರಕರಣವೊಂದರಲ್ಲಿ ಸ್ತ್ರೀಧನದ ಅರ್ಥ ಮತ್ತು ಸ್ವರೂಪವನ್ನು ಹೇಳುವಾಗ ಮೇಲೆ ಹೇಳಿದ ವಿವರಣೆಯನ್ನೇ ಪುನರುಚ್ಚರಿಸಿದೆ.[೨] ಅಲ್ಲದೆ ಸ್ತ್ರೀಧನದ ಮೇಲೆ ಪತಿಗೆ ಯಾವುದೇ ರೀತಿಯ ಹಕ್ಕು ಇರುವುದಿಲ್ಲ. ಕಷ್ಟ ಕಾಲದಲ್ಲಿ ಅದನ್ನು ಅವನು ಬಳಸಬಹುದಾಗಿದ್ದರೂ, ಅದನ್ನು ಅಥವಾ ಅದರ ಮೌಲ್ಯವನ್ನು ಅವಳಿಗೆ ಹಿಂತಿರುಗಿಸುವ ನೈತಿಕ ಹೊಣೆಗಾರಿಕೆ ಅವನ ಮೇಲಿರುತ್ತದೆ. ಆದ್ದರಿಂದ ಸ್ತ್ರೀಧನ ಪತಿ ಪತ್ನಿಯರ ಜಂಟಿ ಆಸ್ತಿಯಾಗುವುದಿಲ್ಲ ಮತ್ತು ಅದರ ಮೇಲೆ ಪತಿಗೆ ಯಾವ ಹಕ್ಕು ಇರುವುದಿಲ್ಲ ಎಂದು ಅಭಿಪ್ರಾಯಪಟ್ಟಿದೆ.

### ಮಹಿಳೆಯ ಆಸ್ತಿ

ಮಹಿಳೆಗೆ ಪ್ರಾಪ್ತವಾಗಬಹುದಾದ ಇತರ ಬಗೆಯ ಆಸ್ತಿಯನ್ನು ಮಹಿಳೆಯ ಆಸ್ತಿ ಅಥವಾ ವಿಧವೆಯ ಆಸ್ತಿ ಎಂದು ಗುರುತಿಸಲಾಗುತ್ತಿತ್ತು. ಬೇರೆ ಯಾರೇ ವ್ಯಕ್ತಿಯ ರೀತಿಯಲ್ಲಿ ಮಹಿಳೆಯೂ ಆಸ್ತಿಯ

ಒಡೆಯಳಾಗಬಹುದಿತ್ತು. ಆದರೆ ಈ ಒಡೆತನ ಎರಡು ವಿಧಗಳಲ್ಲಿ ಸೀಮಿತವಾಗಿತ್ತು.

- ಅವಳಿಗೆ ಆಸ್ತಿಯನ್ನು ಪರಭಾರೆ ಮಾಡುವ ಹಕ್ಕು ಇರಲಿಲ್ಲ.
- ಅವಳ ಮರಣಾನಂತರ ಅದು ಅದರ ಹಿಂದಿನ ಪೂರ್ಣಪ್ರಮಾಣದ ಒಡೆಯನ ವಾರಸುದಾರನಿಗೆ ಪ್ರಾಪ್ತವಾಗುತ್ತಿತ್ತು.

ಆದರೆ ಕೆಲವು ಸಂದರ್ಭಗಳಲ್ಲಿ ಮಾತ್ರ ಮಹಿಳೆ ಈ ಬಗೆಯ ಆಸ್ತಿಯನ್ನು ಪರಭಾರೆ ಮಾಡುವ ಹಕ್ಕನ್ನು ಹೊಂದಿರುತ್ತಿದ್ದಳು. ಅದೆಂದರೆ

- ತನ್ನ ಸ್ವಂತ ಅಗತ್ಯಗಳು ಹಾಗೂ ಆಸ್ತಿಯ ಹಿಂದಿನ ಪೂರ್ಣಪ್ರಮಾಣದ ಒಡೆಯನ ಅವಲಂಬಿತರ ಅಗತ್ಯಗಳ ಪೂರೈಕೆ (Legal necessity)
- ಆಸ್ತಿಯ ಅಭಿವೃದ್ಧಿ
- ಕಡ್ಡಾಯದ ಧಾರ್ಮಿಕ ಆಚರಣೆಗಳು ಎಂದರೆ ಹೆಣ್ಣುಮಕ್ಕಳ ಮದುವೆ, ಪತಿಯ ಅಂತ್ಯಸಂಸ್ಕಾರ ಶ್ರಾದ್ಧ ಇತ್ಯಾದಿ

ಮಹಿಳೆಗಿರುವ ಆಸ್ತಿ ಹಕ್ಕು ಅವಳು ಆ ಆಸ್ತಿಯನ್ನು ಪಡೆದ ರೀತಿಯ ಮೇಲೆ ಅವಲಂಬಿಸಿರುತ್ತಿತ್ತು. ೧೯೩೭ರಲ್ಲಿ ಜಾರಿಗೆ ಬಂದ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮ, ಮಿತಾಕ್ಷರ ಪದ್ಧತಿಯಲ್ಲಿ ಹಿಂದೂ ಹೊಂದುವ ಪ್ರತ್ಯೇಕ ಆಸ್ತಿ ಹಾಗೂ ದಾಯಭಾಗ ಪದ್ಧತಿಯ ಎಲ್ಲ ಆಸ್ತಿಗಳ ವಾರಸುದಾರಿಕೆಯ ಬಗ್ಗೆ ಕೆಲವೊಂದು ಬದಲಾವಣೆಗಳನ್ನು ಮಾಡಿತು. ಪಿತ್ರಾರ್ಜಿತ ಆಸ್ತಿಯಲ್ಲಿ ಹಿಂದೂ ವಿಧವೆಗೆ ವಾರಸುದಾರಿಕೆಯ ಹಾಗೂ ಪಾಲು ಕೇಳುವ ಹಕ್ಕನ್ನು ಈ ಕಾನೂನು ನೀಡಿತು. ಆದರೂ ಪುರುಷರಂತೆ ಹುಟ್ಟಿನಿಂದಲೇ ಹಕ್ಕು ಪಡೆಯುವ ಅವಕಾಶವನ್ನು ನೀಡಲಿಲ್ಲ. ೧೯೫೬ರಲ್ಲಿ ಜಾರಿಗೆ ಬಂದ ಹಿಂದೂ ಉತ್ತರಾಧಿಕಾರ ಅಧಿನಿಯಮ ಈ ಕಾನೂನಿಗೆ ಮುಂಚೆ ಮಹಿಳೆಯರಿಗಿದ್ದ ಸೀಮಿತ ಹಕ್ಕುಗಳಿಗೆ ಬದಲಾವಣೆ ತರುವ ಮೂಲಕ ಪ್ರಗತಿಪರ ಕಾನೂನು ಎನಿಸಿಕೊಂಡರೂ ಕೆಲವು ಕಾರಣಗಳಿಗಾಗಿ ಆಸ್ತಿಹಕ್ಕು ವಾರಸುದಾರಿಕೆಯಲ್ಲಿ ಹಿಂದಿನಿಂದ ಉಳಿದು ಬಂದಿದ್ದ ಸ್ತ್ರೀಪುರುಷ ಅಸಮಾನತೆಗಳು ಹಾಗೆಯೇ ಉಳಿದು ಬಂದವು.

ಮೇಲಿನ ಅಧಿನಿಯಮ ತಂದ ಪ್ರಗತಿಪರ ಬದಲಾವಣೆಗಳೆಂದರೆ

- ಮಹಿಳೆ ಹೊಂದಿರುವ ಆಸ್ತಿಯ ಸೀಮಿತ ಹಕ್ಕನ್ನು ನಿರುಪಾಧಿಕ ಹಕ್ಕನ್ನಾಗಿ ಪರಿವರ್ತಿಸಿದುದು.
- ಈ ನಿರುಪಾಧಿಕ ಹಕ್ಕನ್ನು ಈ ಅಧಿನಿಯಮ ಜಾರಿಗೆ ಬರುವುದಕ್ಕೆ ಮುನ್ನ ಮಹಿಳೆ ಸೀಮಿತಾಧಿಕಾರದಲ್ಲಿ ಹೊಂದಿದ ಆಸ್ತಿಗೆ ಪೂರ್ವಾನ್ವಯವನ್ನಾಗಿ ಅನ್ವಯಿಸಿದುದು (ಕೆಲವು ಬಗೆಯಲ್ಲಿ ಪಡೆದ ಆಸ್ತಿಗಳಿಗೆ ಇದು ಅನ್ವಯವಾಗುವುದಿಲ್ಲ.)

- ಹಿಂದೂ ಉತ್ತರಾಧಿಕಾರ ಅಧಿನಿಯಮದ ಪ್ರಾರಂಭಕ್ಕೆ ಮುನ್ನ ಜೀವನಾಂಶಕ್ಕೆ ಬದಲಾಗಿ ಮಹಿಳೆಗೆ ಕೊಡಲಾಗಿರುವ ಆಸ್ತಿಯನ್ನು ನಿರ್ಬಂಧಗಳಿಗೆ ಒಳಪಡಿಸಿ ಕೊಟ್ಟಿದ್ದರೂ ಸಹ ಅಧಿನಿಯಮದ ೧೪(೧)ನೇ ಪ್ರಕರಣದ ಮೇರೆಗೆ ಅದು ಅವಳ ನಿರುಪಾಧಿಕ ಆಸ್ತಿಯಾಗುತ್ತದೆ.

- ಮರಣ ಶಾಸನ ಬರೆಯದೆ ಮರಣ ಹೊಂದುವ ಹಿಂದೂ ಪುರುಷನ ಉತ್ತರಾಧಿಕಾರಿಗಳನ್ನು ನಿಗದಿಪಡಿಸುವಾಗ ಮಹಿಳೆಯರಿಗೆ ಸಾಕಷ್ಟು ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಹಿಂದೂ ಪುರುಷನ ಮರಣ ಶಾಸನ ರಹಿತ ಆಸ್ತಿಯ ೧ನೇ ವರ್ಗದ ವಾರಸುದಾರರಲ್ಲಿ ೮ ಮಂದಿ ಮಹಿಳೆಯರು ಸೇರುತ್ತಾರೆ. ಅವರೆಂದರೆ ೧. ಮಗಳು ೨. ತಾಯಿ ೩. ವಿಧವೆ ೪. ಮೃತಮಗನ ಮಗಳು ೫. ಮೃತಮಗಳ ಮಗಳು ೬. ಮೃತಮಗನ ವಿಧವೆ ೭. ಮೃತ ಮಗನ ಮೃತ ಮಗನ ಮಗಳು ೮. ಮೃತ ಮಗನ ಮೃತಮಗನ ವಿಧವೆ ಇವರೆಲ್ಲರೂ ೧ನೇ ವರ್ಗದ ಪುರುಷ ವಾರಸುದಾರರೊಡನೆ ಆಸ್ತಿಯನ್ನು ಪಡೆಯುತ್ತಾರೆ.

- ಅಧಿನಿಯಮದ ೧೫ನೇ ಪ್ರಕರಣ ಹಿಂದೂ ಮಹಿಳೆಯ ಆಸ್ತಿ ಉತ್ತರಾಧಿಕಾರದ ಬಗ್ಗೆ ಉಪಬಂಧ ಕಲ್ಪಿಸುತ್ತದೆ. ಹಿಂದೂ ಮಹಿಳೆಯ ಆಸ್ತಿಯ ಉತ್ತರಾಧಿಕಾರದ ಬಗ್ಗೆ ರಚಿತವಾಗಿರುವ ಪ್ರಥಮ ಉಪಬಂಧ ಇದು ಎನ್ನಬಹುದು. ಈ ಹಿಂದೆ ಬಂದ ಹಿಂದೂ ವಾರಸುದಾರಿಕೆ (ತಿದ್ದುಪಡಿ) ಅಧಿನಿಯಮ, ೧೯೨೯ ಮತ್ತು ಹಿಂದೂ ಮಹಿಳೆಯ ಆಸ್ತಿ ಹಕ್ಕುಗಳು ೧೯೩೭ ಈ ಕಾನೂನುಗಳು ಪುರುಷನ ಆಸ್ತಿ ಉತ್ತರಾಧಿಕಾರದ ಬಗ್ಗೆ ಉಪಬಂಧ ಕಲ್ಪಿಸಿದವು.

ಉತ್ತರಾಧಿಕಾರದ ಉದ್ದೇಶಕ್ಕಾಗಿ ಹಿಂದೂ ಮಹಿಳೆಯ ಆಸ್ತಿಯನ್ನು ಮೂರು ವರ್ಗಗಳನ್ನಾಗಿ ವಿಭಜಿಸಬಹುದು.

೧. ಮಹಿಳೆ ತನ್ನ ತಾಯಿ ಅಥವಾ ತಂದೆಯಿಂದ ಉತ್ತರಾಧಿಕ್ರಮದಿಂದ ಪಡೆದ ಆಸ್ತಿ- ಮಹಿಳೆಗೆ ಮಗ ಅಥವಾ ಮಗಳಿಲ್ಲದಿದ್ದರೆ ಇದು ಅವಳ ತಂದೆಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

೨. ಮಹಿಳೆ ತನ್ನ ಗಂಡ ಅಥವಾ ಮಾವನಿಂದ (ಗಂಡನ ತಂದೆ) ಪಡೆದ ಆಸ್ತಿ- ಇದು ಆ ಮಹಿಳೆಯ ಉತ್ತರಾಧಿಕಾರಿಯಾಗಿ ಮಗ ಅಥವಾ ಮಗಳು ಇಲ್ಲದಿದ್ದರೆ ಪತಿಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

೩. ಮಹಿಳೆಗೆ ಇತರ ಯಾವುದೇ ರೀತಿಯಿಂದ ಅಥವಾ ಯಾವುದೇ ಮೂಲದಿಂದ ಪಡೆದ ಆಸ್ತಿ-ಇದು ಅವಳ ನಿರುಪಾಧಿಕ ಆಸ್ತಿಯಾಗುತ್ತದೆ. ಇದು ಅಧಿನಿಯಮ ೧೬ನೇ ಪ್ರಕರಣದಲ್ಲಿ ನಿರೂಪಿಸಿರುವ ನಿಯಮಗಳಿಗೆ ಒಳಪಟ್ಟು ೧೫(೧) ನೇ ಪ್ರಕರಣದಲ್ಲಿ ವಿವರಿಸಿರುವ ಐದು ವರ್ಗಗಳ ವಾರಸುದಾರರಿಗೆ ಕ್ರಮವಾಗಿ ಪ್ರಾಪ್ತವಾಗುತ್ತದೆ. ಇಲ್ಲಿ ಪತಿಯ ವಾರಸುದಾರರಿಗಿಂತ ಕ್ರಮದಲ್ಲಿ ಅವಳ ಗಂಡು ಮಕ್ಕಳು ಹಾಗೂ ಹೆಣ್ಣುಮಕ್ಕಳು, ಮೃತ ಮಗ ಅಥವಾ ಮಗಳ ಮಕ್ಕಳೂ ಸೇರಿದಂತೆ ಆದ್ಯತೆ ಪಡೆಯುತ್ತಾರೆ.

ಹಿಂದೂ ಉತ್ತರಾಧಿಕಾರ ಅಧಿನಿಯಮ ಅವಿಭಕ್ತ ಕಟುಂಬದ ವಾಸದ ಮನೆಯನ್ನು ಭಾಗಮಾಡಿಕೊಳ್ಳುವ ಬಗ್ಗೆ ವಿಶೇಷ ಉಪಬಂಧವನ್ನು ರಚಿಸಿದೆ. ಹಿಂದೂ ಪುರುಷನ ಮರಣಶಾಸನ ರಹಿತ ಆಸ್ತಿಯಲ್ಲಿ ವಾಸದ ಮನೆಯೂ ಸೇರಿದ್ದರೆ, ಅವನ ಮರಣಾನಂತರ, ಅದರಲ್ಲಿ ವಾಸಿಸುವ ಗಂಡುಮಕ್ಕಳು ಅದನ್ನು ಭಾಗಮಾಡಿಕೊಳ್ಳಲು ಇಚ್ಛಿಸುವವರೆಗೆ ಸ್ತ್ರೀವಾರಸುದಾರಳು ಅದರಲ್ಲಿ ತನಗಿರುವ ಹಕ್ಕನ್ನು ಚಲಾಯಿಸಿ ಭಾಗ ಮಾಡುವಂತೆ ಕೇಳುವಂತಿಲ್ಲ. ಇದರ ಉದ್ದೇಶ ಒಟ್ಟು ಕುಟುಂಬವನ್ನು ಒಡೆಯದಂತೆ ನೋಡಿಕೊಳ್ಳುವುದು. ಆದರೆ ಅವಿವಾಹಿತ ಹೆಣ್ಣುಮಕ್ಕಳು, ಗಂಡನಿಂದ ಪರಿತ್ಯಕ್ತರಾದ, ಬೇರ್ಪಟ್ಟ ಅಥವಾ ವಿಚ್ಛೇದನೆ ಪಡೆ ಹೆಣ್ಣುಮಕ್ಕಳು ಕುಟುಂಬದ ವಾಸದ ಮನೆಯಲ್ಲಿ ವಾಸಿಸುವ ಹಕ್ಕನ್ನು ಹೊಂದಿರುತ್ತಾರೆ.

ಈ ಅಧಿನಿಯಮದ ೨೪ನೇ ಪ್ರಕರಣದ ಪ್ರಕಾರ ಕೆಲವು ಸ್ತ್ರೀವಾರುಸುದಾರರು ಅವರು ವಿಧವೆಯರಾಗಿದ್ದು ಮರು ವಿವಾಹವಾದರೆ ಉತ್ತರಾಧಿಕಾರದ ಹಕ್ಕುಗಳಿಗೆ ಅನರ್ಹರಾಗುತ್ತಾರೆ. ಈ ಗುಂಪಿಗೆ ಸೇರುವವರು ೧. ಮೃತ ಮಗನ ವಿಧವೆ ೨. ಮೃತಮಗನ ಮೃತಮಗನ ವಿಧವೆ ೩. ಹಿಂದೂ ಮರಣಶಾಸನಕರ್ತನ ಸೋದರನ ವಿಧವೆ. ಉತ್ತರಾಧಿಕಾರ ಪ್ರಕ್ರಿಯೆ ಪ್ರಾರಂಭವಾಗುವುದಕ್ಕೆ ಮುನ್ನ ಮರು ಮದುವೆಯಾದರೆ ಮಾತ್ರ ಮೇಲ್ಕಂಡ ವರ್ಗಕ್ಕೆ ಸೇರಿದ ಸ್ತ್ರೀವಾರಸುದಾರರು ಅನರ್ಹರಾಗುತ್ತಾರೆ. ಆದರೆ ಉತ್ತರಾಧಿಕಾರ ಪ್ರಕ್ರಿಯೆ ಪ್ರಾರಂಭವಾದ ನಂತರ ಮರು ವಿವಾಹಾದರೆ, ಆ ಕಾರಣಕ್ಕಾಗಿ ಅವರನ್ನು ಉತ್ತರಾಧಿಕಾರಕ್ಕೆ ಅರ್ಹರಾಗುವ ವ್ಯಕ್ತಿಗಳಿಂದ ಹೊರಗಿಡಲಾಗುವುದಿಲ್ಲ.

ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಮಿತಾಕ್ಷರ ಉತ್ತರಾಧಿಕಾರ ಪದ್ಧತಿಯನ್ನೇ ಉಳಿಸಿಕೊಂಡಿರುವುದರಿಂದ ಹಿಂದೂ ಪುರುಷರು ಹುಟ್ಟಿನಿಂದಲೇ ದಾಯಾದಿಗಳೆನಿಸಿ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕನ್ನು ಗಳಿಸುತ್ತಾರೆ. ಆದರೆ ಈ ಪದ್ಧತಿಯಲ್ಲಿ ಸ್ತ್ರೀ ದಾಯಾದಿ ಎನಿಸುವುದಿಲ್ಲ. ಆದ್ದರಿಂದ ಅವಳು ಪಿತ್ರಾರ್ಜಿತ ಆಸ್ತಿಯಲ್ಲಿ ಉತ್ತರ ಜೀವಿತಾಧಿಕಾರದಿಂದ(Survivorship) ಆಸ್ತಿ ಹಕ್ಕನ್ನು ಪಡೆಯುವುದಿಲ್ಲ. ಜೀವನಾಂಶಕ್ಕೆ ಮಾತ್ರ ಅವಳು ಹಕ್ಕುಳ್ಳವಳಾಗಿರುತ್ತಾಳೆ. ೧೯೩೭ರ ಹಿಂದೂ ಮಹಿಳೆಯ ಆಸ್ತಿಹಕ್ಕು ಅಧಿನಿಯಮದ ಮೂಲಕ ಮಿತಾಕ್ಷರ ಕುಟುಂಬದಲ್ಲಿ ಪುರುಷದಾಯಾದಿಯ ಮರಣಾನಂತರ ಅವನ ಪತ್ನಿಯನ್ನು ಅವನ ಹಿತಾಸಕ್ತಿಗೆ ಹಕ್ಕುಳ್ಳವಳನ್ನಾಗಿ ಮಾಡುವ ಮೂಲಕ ಉತ್ತರ ಜೀವಿತಾಧಾಕಾರದ ನಿಯಮದಲ್ಲಿ ಮಹತ್ತರ ಬದಲಾವಣೆಯನ್ನು ಮಾಡಲಾಯಿತು. ೧೯೫೬ರ ಅಧಿನಿಯಮದಲ್ಲಿಯೂ ಇದನ್ನೇ ಉಳಿಸಿಕೊಳ್ಳಲಾಗಿದೆ.

ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಕೆಲವು ಮುಖ್ಯ ಲಿಂಗ ಅಸಮಾನತೆಗಳು(Gender inequality) ಉಳಿದುಕೊಂಡುಬಂದಿವೆ. ಕೆಲವು ಅಸಮಾನತೆಗಳು ಅಂತರ್ಗತವಾಗಿದ್ದರೆ ಕೆಲವು ಸ್ಪಷ್ಟವಾಗಿ

ಗೋಚರವಾಗುವಂಥವು. ಉದಾಹರಣೆಗೆ, ಅಧಿನಿಯಮದಲ್ಲಿ ಉಯಿಲಿನ ಮೂಲಕ ಆಸ್ತಿಯನ್ನು ವಿಲೆ ಮಾಡುವ ಹಕ್ಕನ್ನು ಸ್ತ್ರೀಪುರುಷರಿಗೆ ಸಮಾನವಾಗಿ ನೀಡಲಾಗಿದೆ. ಆದರೆ ಸಾಮಾನ್ಯವಾಗಿ ಆಸ್ತಿ ಒಡೆತನವನ್ನು ಹೊಂದಿರುವುದು ಪುರುಷರೇ ಆದ್ದರಿಂದ ಈ ಹಕ್ಕನ್ನು ಸ್ತ್ರೀಯರಿಗೆ ಪ್ರತಿಕೂಲವಾಗುವಂತೆ ಬಳಸುವ ಸಾಧ್ಯತೆಗಳಿವೆ. ಅಧಿನಿಯಮದಲ್ಲಿ ಉಳಿದು ಬಂದಿರುವ, ಸ್ಪಷ್ಟವಾಗಿ ಗೋಚರಿಸುವ ಮತ್ತು ಸಮಾಜದಲ್ಲಿ ಮಹಿಳೆಯ ಸ್ಥಾನಮಾನದ ಮೇಲೆ ನೇರ ಪರಿಣಾಮ ಉಂಟುಮಾಡುವಂಥ ಲಿಂಗ ಅಸಮಾನತೆಯೆಂದರೆ ೧. ಮಿತಾಕ್ಷರ ಅವಿಭಕ್ತ ಕುಟುಂಬದ ಆಸ್ತಿ ಪದ್ಧತಿಯನ್ನು ಮುಂದುವರಿಸಿರುವುದು ಮತ್ತು ೨. ಕೃಷಿ ಆಸ್ತಿಗೆ ಸಂಬಂಧಿಸಿದ ವಿಶೇಷ ಉಪಬಂಧದಿಂದ ಅಸಮಾನತೆ ಉಂಟಾಗಿರುವುದು.

ಅವಿಭಕ್ತ ಕುಟುಂಬದ ಆಸ್ತಿಗೆ ಸಂಬಂಧಿಸಿದಂತೆ ಕಾಲಕ್ರಮದಲ್ಲಿ ಕೆಲವು ರಾಜ್ಯಗಳು ತಿದ್ದುಪಡಿಗಳನ್ನು ತರುವ ಮೂಲಕ ಮೂಲ ಅಧಿನಿಯಮದಲ್ಲಿ ಇದ್ದಂಥ ಕೆಲವು ಅಸಮಾನತೆಗಳನ್ನು ಕಡಿಮೆ ಮಾಡಿವೆ. ರಾಜ್ಯದಲ್ಲಿ ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ಹೆಣ್ಣುಮಕ್ಕಳಿಗೂ ಸಮಾನ ಹಕ್ಕುಗಳನ್ನು ನೀಡಿರುವುದು ಸ್ತ್ರೀ ಪುರುಷ ಸಮಾನತೆಯ ದಿಕ್ಕಿನಲ್ಲಿ ಇಟ್ಟ ಮಹತ್ವದ ಹೆಜ್ಜೆ.

ಆದರೆ, ೧೯೫೬ರಲ್ಲಿ ಜಾರಿಯಾದಾಗ ಇದ್ದಂತೆ ಹಿಂದೂ ಉತ್ತರಾಧಿಕಾರ ಅಧಿನಿಯಮ ಮಹಿಳೆಯರಿಗೆ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಪುರುಷರಿಗೆ ಸಮಾನವಾದ ಹಕ್ಕನ್ನು ನೀಡಿರಲೇ ಇಲ್ಲ.

೧. ಹಿಂದೂ ಅವಿಭಕ್ತ ಕುಟುಂಬದಲ್ಲಿ ಪುರುಷರನ್ನು ಮಾತ್ರವೇ ದಾಯಾದಿಗಳನ್ನಾಗಿ ಪರಿಗಣಿಸುವುದರಿಂದ ಸಹಜವಾಗಿ ಗಂಡುಮಕ್ಕಳು ಆಸ್ತಿಯಲ್ಲಿ ಪಾಲು ಪಡೆಯುತ್ತಾರೆ. ಅಲ್ಲದೆ ತಂದೆಯ ಆಸ್ತಿಯ ಪಾಲಿಗೆ ಬರುವ ಆಸ್ತಿಯಲ್ಲೂ ಪಾಲುಪಡೆಯುತ್ತಾರೆ. ಆದರೆ ಹೆಣ್ಣು ಮಕ್ಕಳಿಗೆ ತಂದೆಯ ಪಾಲಿಗೆ ಬರುವ ಆಸ್ತಿಯಲ್ಲಿ ಮಾತ್ರವೇ ಪಾಲು ದೊರೆಯುವುದು.

೨. ತಂದೆ ಅವಿಭಕ್ತ ಕುಟುಂಬದಲ್ಲಿನ ಅವನ ಪಾಲನ್ನು ಬಿಟ್ಟುಕೊಟ್ಟರೆ ಆಸ್ತಿಯಿಂದ ವಂಚಿತರಾಗುವುದು ಹೆಣ್ಣುಮಕ್ಕಳು ಮಾತ್ರವೇ. ಏಕೆಂದರೆ, ಗಂಡುಮಕ್ಕಳು ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಹುಟ್ಟಿನಿಂದಲೇ ಹಕ್ಕು ಪಡೆಯುತ್ತಾರೆ. ಆದ್ದರಿಂದ ತಂದೆ ತನ್ನ ಆಸ್ತಿಯ ಹಕ್ಕು ಬಿಟ್ಟುಕೊಟ್ಟರೆ ಆ ಮಟ್ಟಿಗೆ ಇತರ ಪುರುಷರು ಪಡೆಯುವ ಆಸ್ತಿಯ ಪ್ರಮಾಣ ಜಾಸ್ತಿಯಾಗುತ್ತದೆ. ಇದಲ್ಲದೆ ತಂದೆ ತನ್ನ ಪಾಲನ್ನು ಗಂಡುಮಕ್ಕಳಿಗೆ ದಾನ(gift)ಕೊಡುವ ಮೂಲಕ ಹೆಣ್ಣುಮಕ್ಕಳನ್ನು ಆಸ್ತಿಯಿಂದ ವಂಚಿತರನ್ನಾಗಿಸಬಹುದು.

೩. ಹಿಂದೂ ಪುರುಷ ತನ್ನ ಪ್ರತ್ಯೇಕ (ಅವಿಭಕ್ತ ಕುಟುಂಬದ ತನ್ನ ಪಾಲನ್ನು) ಆಸ್ತಿ ಅಥವಾ ಸ್ವಯಾರ್ಜಿತ ಆಸ್ತಿಯನ್ನು ಹೆಣ್ಣುಮಕ್ಕಳಿಗೆ ಕೊಡದೆಯೇ ಮರಣ ಶಾಸನದ ಮೂಲಕ ಇತರರ ಹೆಸರಿಗೆ ಮೂಡಿಬಿಡಬಹುದು. ಆದರೆ ಗಂಡುಮಕ್ಕಳು ದಾಯಾದಿಗಳಾಗಿ ಆಸ್ತಿಯಲ್ಲಿ ಹಕ್ಕು ಪಡೆಯುವುದರಿಂದ ಅವಿಭಕ್ತಕುಟುಂಬದ ಜಂಟಿ ಆಸ್ತಿಯಲ್ಲಿ ಹಕ್ಕುದಾರರಾಗುತ್ತಾರೆ.

೪. ವಿವಾಹಿತ ಹೆಣ್ಣುಮಕ್ಕಳಿಗೆ ಅವರು ಕೌಟುಂಬಿಕ ಹಿಂಸೆಗೆ ಒಳಗಾಗುತ್ತಿದ್ದರೂ ತಂದೆಯ ಪಿತ್ರಾರ್ಜಿತ ಮನೆಯಲ್ಲಿ ವಾಸಿಸುವ ಹಕ್ಕು ಇಲ್ಲ. ಅವಿವಾಹಿತರಾದ, ಗಂಡನಿಂದ ಪ್ರತ್ಯೇಕಗೊಂಡ, ಗಂಡನನ್ನು ಬಿಟ್ಟ ಅಥವಾ ವಿಧವೆಯರಾದ ಹೆಣ್ಣುಮಕ್ಕಳಿಗೆ ಆ ಮನೆಯಲ್ಲಿ ವಾಸದ ಹಕ್ಕು ಇದ್ದರೂ ಮನೆಯನ್ನು ಭಾಗ ಮಾಡುವಂತೆ ಕೇಳುವ ಹಕ್ಕು ಇಲ್ಲ. ಇದರ ಉದ್ದೇಶ ಒಟ್ಟು ಕುಟುಂಬವನ್ನು ಒಡೆಯದಂತೆ ನೋಡಿಕೊಳ್ಳುವುದು ಎಂಬ ಕಾರಣವನನಲು ಕೊಡಲಾಗುತ್ತದೆ.

ಹಿಂದೂ ಉತ್ತರಾಧಿಕಾರ ಅಧಿನಿಯಮದ ೨೩ನೇ ಪ್ರಕರಣದಿಂದ ಉಂಟಾಗಿರುವ ಕುಟುಂಬದ ವಾಸದ ಮನೆಯ ಹಕ್ಕಿಗೆ ಸಂಬಂಧಪಟ್ಟ ಸ್ತ್ರೀ ಪುರುಷ ತಾರತಮ್ಯವನ್ನು ಹಾಗೂ ವಾಸದ ಮನೆಯಲ್ಲಿ ವಾಸಿಸುವ ಹಕ್ಕನ್ನು ಹೊಂದಿರುವವರ ಪೈಕಿಯಿಂದ ವಿವಾಹಿತ ಹೆಣ್ಣುಮಕ್ಕಳನ್ನು ಹೊರತುಪಡಿಸಿರುವುದರಿಂದ ಉಂಟಾಗಿರುವ ತಾರತಮ್ಯವನ್ನು ತೊಡೆದು ಹಾಕಬೇಕೆಂಬ ಬಗ್ಗೆ ಬೇಡಿಕೆ ಹಾಗೂ ಒತ್ತಾಯಗಳು ಬಂದಿವೆ. ಆದರೆ ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಅಧ್ಯಯನ ಸಮಿತಿ ತನ್ನ ಸಮಾನತೆಯತ್ತ ವರದಿಯಲ್ಲಿ ಗಂಡುಮಕ್ಕಳು ಕುಟುಂಬದ ವಾಸದ ಮನೆಯನ್ನು ಭಾಗಮಾಡಿಕೊಳ್ಳಲು ಮುಂದಾಗುವವರೆಗೆ ಅದರಲ್ಲಿ ಹಕ್ಕುಳ್ಳ ಸ್ತ್ರೀವಾರಸುದಾರರು ಅದನ್ನು ಭಾಗಮಾಡುವಂತೆ ಕೇಳುವಂತಿಲ್ಲ ಎಂದು ಅಧಿನಿಯಮ ವಿಧಿಸಿರುವ ನಿರ್ಬಂಧವನ್ನು ಸಮರ್ಥಿಸಿದೆ. ಸಮಿತಿಯ ಸಮರ್ಥನೆ ಹೀಗಿದೆ - ''ಈ ಉಪಬಂಧವನ್ನು ರೂಪಿಸುವಾಗ, ಕುಟುಂಬದ ಹಿತಾಸಕ್ತಿ ಹಾಗೂ ವೈಯಕ್ತಿಕ ಹಿತಾಸಕ್ತಿಗಳ ನಡುವೆ ಸಮತೋಲನವಿರುವಂತೆ ನೋಡಿಕೊಳ್ಳುವುದು ಶಾಸಕಾಂಗದ ಉದ್ದೇಶವಾಗಿತ್ತೆಂಬುದು ಸ್ಪಷ್ಟ. ಈ ಪ್ರಕರಣದ ಉದ್ದೇಶ ವೈಯಕ್ತಿಕ ಹಕ್ಕುಗಳಿಗೆ ಪ್ರತಿಯಾಗಿ ಕುಟುಂಬದ ಹಕ್ಕುಗಳ ಉತ್ಕೃಷ್ಟತೆಯನ್ನು ಪ್ರತಿಪಾದಿಸುವುದಾಗಿರುವುದು, ನಿರಾಕ್ಷೇಪವಾದದ್ದು. ಆದ್ದರಿಂದ ಕುಟುಂಬದ ಹಿತಾಸಕ್ತಿಗೆ ವಿರುದ್ಧವಾದ ವಿಭಜನೆಯ ವಿರುದ್ಧ ಇರುವ ನಿರ್ಬಂಧವನ್ನು ಉಳಿಸಿಕೊಳ್ಳುವುದು ಸಮರ್ಥನೀಯ. ಆದ್ದರಿಂದ ಆದನ್ನು ಉಳಿಸಿಕೊಳ್ಳಬೇಕು. ಆದರೆ ವಿವಾಹಿತ ಹೆಣ್ಣುಮಕ್ಕಳು ಮತ್ತು ಇತರ ಹೆಣ್ಣುಮಕ್ಕಳ ನಡುವಿನ ತಾರತಮ್ಯ ಸಮರ್ಥನೀಯವಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿ ಎಲ್ಲ ಹೆಣ್ಣು ಮಕ್ಕಳಿಗೂ ಸಮಾನ ಹಕ್ಕುಗಳನ್ನು ನೀಡಿ ಈ ತಾರತಮ್ಯವನ್ನು ಹೋಗಲಾಡಿಸಬೇಕೆಂದು ಶಿಫಾರಸ್ಸು ಮಾಡಿದೆ.

ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳು ಪಾಲನ್ನು ಕೇಳುವ ಹಕ್ಕು ಹೊಂದಿಲ್ಲದಿರುವುದರಿಂದ ಸ್ತ್ರೀ ಪರುಷರ ನಡುವೆ ಉಂಟಾಗುವ ಆರ್ಥಿಕ ಅಸಮಾನತೆಯನ್ನು ಗಮನದಲ್ಲಿರಿಸಿಕೊಂಡು ಕೆಲವು ರಾಜ್ಯಗಳು ಮಹಿಳೆಯರಿಗೆ ಆ ಹಕ್ಕನ್ನು ನೀಡುವುದಕ್ಕಾಗಿ ಹಿಂದೂ ಉತ್ತರಾಧಿಕಾರ ಅಧಿನಿಯಮಕ್ಕೆ ತಿದ್ದುಪಡಿಗಳನ್ನು ಮಾಡಿದವು.

ಹಿಂದೆ ಹೇಳಿದಂತೆ ೧೯೯೪ರಲ್ಲಿ ಕರ್ನಾಟಕದಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮಕ್ಕೆ ತಿದ್ದುಪಡಿ ಮಾಡುವ ಮೂಲಕ ಹೆಣ್ಣುಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಗಂಡುಮಕ್ಕಳಂತೆಯೇ ಪಾಲು ಪಡೆಯಲು ಸಮಾನ ಹಕ್ಕುಗಳನ್ನು ನೀಡಲಾಯಿತು. ಹಾಗೆಯೇ, ಆಂಧ್ರಪ್ರದೇಶ ೧೯೮೬ರಲ್ಲಿ ತಮಿಳುನಾಡು ೧೯೮೯ರಲ್ಲಿ ಹಾಗೂ ಮಹಾರಾಷ್ಟ್ರ ೧೯೯೪ರಲ್ಲಿ ತಿದ್ದುಪಡಿ ಮಾಡಿದವು. ಈ ತಿದ್ದುಪಡಿಯಿಂದ Iನೇ ವರ್ಗದ ವಾರಸುದಾರರಾದ ವಿಧವೆ ಮತ್ತು ತಾಯಿ ಪಡೆಯುವ ಆಸ್ತಿಯ ಪಾಲು ಕಡಿಮೆಯಾಗುತ್ತದೆ. ಏಕೆಂದರೆ ಇವರು ಆಸ್ತಿಯಲ್ಲಿ ಪಾಲು ಪಡೆಯುವ ಪುರುಷ ದಾಯಾದಿಗಳಿಂದ ಆಸ್ತಿಯನ್ನು ಪಡೆಯುವವರಾಗಿರುತ್ತಾರೆ. ಇದು ಒಂದು ಉದಾಹರಣೆಯಿಂದ ಹೆಚ್ಚು ಸ್ಪಷ್ಟವಾಗುತ್ತದೆ.

ತಂದೆ, ತಾಯಿ, ಇಬ್ಬರು ಗಂಡುಮಕ್ಕಳು ಹಾಗೂ ಇಬ್ಬರು ಹೆಣ್ಣುಮಕ್ಕಳಿರುವ ಕುಟುಂಬದಲ್ಲಿ ಈ ತಿದ್ದುಪಡಿಗೆ ಮೊದಲು ತಂದೆ ಮತ್ತು ಇಬ್ಬರು ಗಂಡುಮಕ್ಕಳು ಮಾತ್ರವೇ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುತ್ತಿದ್ದರು. ಉದಾಹರಣೆಗೆ ಮೂವತ್ತು ಎಕರೆ ಜಮೀನು ಈ ಮೂವರಲ್ಲಿ ಒಬ್ಬೊಬ್ಬರಿಗೆ ಹತ್ತು ಎಕರೆಯಂತೆ ಭಾಗವಾಗುತ್ತಿತ್ತು. ತಂದೆ ಸತ್ತನಂತರ ಅವನ ಭಾಗಕ್ಕೆ ಬಂದಿರುವ ಹತ್ತು ಎಕರೆಯಲ್ಲಿ ಎಲ್ಲರೂ ಸಮಪಾಲು ಪಡೆಯುತ್ತಿದ್ದರು. ಆದರೆ ತಿದ್ದುಪಡಿಯಿಂದ ಹೆಣ್ಣುಮಕ್ಕಳಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕು ಇರುವುದರಿಂದ ಮೊದಲಲ್ಲೆ ಮೂವತ್ತು ಎಕರೆ ಜಮೀನು ತಂದೆ ಇಬ್ಬರು ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು- ಹೀಗೆ ಐದು ಭಾಗವಾಗಬೇಕು ಎಂದರೆ ಒಬ್ಬೊಬ್ಬರ ಪಾಲಿಗೆ ಬರುವುದು ೬ ಎಕರೆ ಜಮೀನು. ತಂದೆ ಸತ್ತನಂತರ ಅವನ ಆಸ್ತಿ ಮತ್ತು ಅವನ ವಿಧವೆ ಮತ್ತು ಮಕ್ಕಳಲ್ಲಿ ಪಾಲಾಗುತ್ತದೆ ಎಂದರೆ ಮತ್ತೆ ಐದು ಭಾಗವಾಗುತ್ತದೆ ಎಂದರೆ ಒಬ್ಬೊಬ್ಬರಿಗೆ ಆರು ಎಕರೆಯಲ್ಲಿ ಒಂದು ಭಾಗ ಮಾತ್ರ ಎಂದರೆ ಒಂದು ಎಕರೆ ಮತ್ತು ೧/೫ ಭಾಗ (೧.೨) ಎಕರೆಗಳು ದೊರೆಯುತ್ತದೆ. ಸಮಾಜದ ಮಹಿಳೆಯರಲ್ಲಿ ವಿಧವೆ ಪತ್ನಿ ಮತ್ತು ತಾಯಂದಿರೂ ಸೇರುವುದರಿಂದ ಸಮಾಜದ ಮಹಿಳೆಯರ ಪರಿಸ್ಥಿತಿಯನ್ನು ಉತ್ತಮಗೊಳಿಸುವ ಉದ್ದೇಶವಿರುವ ಈ ಕಾನೂನಿನಲ್ಲಿ ಆಸ್ತಿಯಲ್ಲಿ ಅವರು ಪಡೆಯುವ ಭಾಗ ಕಡಿಮೆಯಾಗದಂತೆ ನೋಡಿಕೊಳ್ಳಬೇಕಾಗಿತ್ತು. ಹಾಗಾಗಿ ಈ ತಿದ್ದುಪಡಿ ಒಂದೆಡೆ ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳ ನಡುವೆ ಇರುವ ಅಸಮಾನತೆಯನ್ನು ಕಡಿಮೆ ಮಾಡಿದರೆ ಮತ್ತೊಂದೆಡೆ ಹೆಣ್ಣುಮಕ್ಕಳು ಮತ್ತು ಸ್ತ್ರೀವಾರಸುದಾರರ ನಡುವೆ ಇರುವ ಅಸಮಾನತೆಯನ್ನು ಹೆಚ್ಚಿಸುತ್ತದೆ. ಆದ್ದರಿಂದ ಎಲ್ಲ ರೀತಿಯಲ್ಲಿಯೂ ಸಮಾನತೆಯನ್ನು ಸಾಧಿಸುವಂಥ ಕ್ರಮವನ್ನು ಕೈಗೊಳ್ಳಬೇಕಾಗಿತ್ತು. ಈ ರೀತಿಯ ತಿದ್ದುಪಡಿಯನ್ನು ತರದೆ ಇರುವಂಥ ರಾಜ್ಯಗಳಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿರುವ ಸ್ತ್ರೀಪುರುಷ ತಾರತಮ್ಯ ಹಾಗೆಯೇ ಮುಂದುವರಿದಿದೆ.

ವಿವಾಹ, ವಿಚ್ಛೇದನೆ, ಪೋಷಕತ್ವ, ವರದಕ್ಷಿಣೆ (ಮೆಹರ್) ಜೀವನಾಂಶ, ವಾರಸುದಾರಿಕೆ ಮುಂತಾದವುಗಳಿಗೆ ಸಂಬಂಧಿದಂತೆ ಮುಸಲ್ಮಾನರಿಗೆ ಭಾರತದಲ್ಲಿ ಅವರ ವೈಯಕ್ತಿಕ ಕಾನೂನು ಅನ್ವಯಿಸುತ್ತದೆ. ಮುಸ್ಲಿಂರಿಗೆ ಅನ್ವಯವಾಗುವ ವೈಯಕ್ತಿಕ ಕಾನೂನುಗಳೆಂದರೆ-

- ಮುಸ್ಲಿಂ ವೈಯಕ್ತಿಕ ಕಾನೂನೂ (ಶಾರಿಯತ್ ಅಧಿನಿಯಮ), ೧೯೩೭
- ಮುಸ್ಲಿಂ ವಿವಾಹ ವಿಚ್ಛೇದನ ಅಧಿನಿಯಮ, ೧೯೩೯
- ಮುಸ್ಲಿಂ ಮಹಿಳೆಯರ (ವಿಚ್ಛೇದನಾನಂತರದ ಹಕ್ಕುಗಳ ರಕ್ಷಣೆ) ಅಧಿನಿಯಮ, ೧೯೮೬
- ಇತರ ಆಚರಣೆಗಳು ಮತ್ತು ರೂಢಿಗಳು

ಭಾರತದಲ್ಲಿ ಮುಸಲ್ಮಾನರಿಗೆ ಸಂಬಂಧಿಸಿದಂತೆ ಎರಡು ಕಾನೂನು ಪಂಥಗಳು(Schools of Law) ಚಾಲ್ತಿಯಲ್ಲಿವೆ. ಸುನ್ನಿ ಮುಸಲ್ಮಾನರಿಗೆ ಅನ್ವಯಿಸುವ ಹನಾಫಿ ಪಂಥ ಮತ್ತು ಶಿಯಾಮುಸಲ್ಮಾನರಿಗೆ ಅನ್ವಯಿಸುವ ಇತ್ನಾಅಶಾರಿ ಪಂಥ. ಭಾರತದ ಬಹುಪಾಲು ಮುಸಲ್ಮಾನರು ಸುನ್ನಿ ಪಂಥಕ್ಕೆ ಸೇರಿದವರಾಗಿದ್ದು, ಹನಾಫಿ ಪಂಥದ ಕಾನೂನು ಅವರಿಗೆ ಅನ್ವಯಿಸುತ್ತದೆ.

ಹನಾಫಿ ಹಾಗೂ ಶಿಯಾ ಪಂಥಗಳ ವಾರಸುದಾರಿಕೆ ಕ್ರಮದಲ್ಲಿ ಕೆಲವು ಮೂಲಭೂತ ವ್ಯತ್ಯಾಸಗಳಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ, ಹನಾಫಿಪಂಥದಲ್ಲಿ ಮೂರು ಬಗೆಯ ವಾರಸುದಾರರನ್ನು ಗುರುತಿಸಲಾಗುತ್ತದೆ. ಸಗೋತ್ರದ ವಾರಸುದಾರರು, ಕುರಾನ್ ಪ್ರಕಾರ ವಾರಸುದಾರರು ಮತ್ತು ದೂರದ ಬಂಧುಗಳು ಹಾಗೂ ವಿವಾಹದಿಂದ ಬಂಧುವಾದ ವ್ಯಕ್ತಿ (ಪತಿ ಅಥವಾ ಪತ್ನಿ)- ಪುರುಷ ಸಂತಾನದ ಮೂಲಕ ವಾರಸುದಾರಿಕೆ ಮುಂದುವರಿಯುತ್ತದೆ.

ಸಗೋತ್ರಜರು ಬಹುಪಾಲು ಎಲ್ಲರೂ ಪುರುಷರು. ಕುರಾನ್ ಪ್ರಕಾರ ವಾರಸುದಾರರು ಬಹುಪಾಲು ಎಲ್ಲರೂ ಸ್ತ್ರೀಯರು, ದೂರದ ಬಂಧುಗಳು. ರಕ್ತಸಂಬಂಧಿಗಳು ಸಗೋತ್ರಜರೂ ಅಲ್ಲ ಕುರಾನಿನ ಪ್ರಕಾರ ವಾರಸುದಾರರೂ ಅಲ್ಲ.

ಆದರೆ ಶಿಯಾಪಂಥದಲ್ಲಿ, ಲಿಂಗಾಧಾರದ ಮೇಲೆ ವಾರಸುದಾರಿಕೆ ಅಥವಾ ಪಡೆಯುವ ಪಾಲು ವ್ಯತ್ಯಾಸಗೊಳ್ಳುವುದಿಲ್ಲ. ಮೃತ ಪುರುಷನ ಯಾರೇ ಬಂಧು ಆತ/ಅವಳು ಅವನಿಗೆ ಸ್ತ್ರೀಯ ಮೂಲಕ ಬಂಧುವಾಗಿದ್ದಾನೆ/ದ್ದಾಳೆ ಎಂಬ ಕಾರಣಕ್ಕಾಗಿ, ವಾರಸುದಾರಿಕೆಯನ್ನು ಕಳೆದುಕೊಳ್ಳುವುದಿಲ್ಲ. ಮೃತನೊಂದಿಗೆ ಒಂದೇ ರಕ್ತಸಂಬಂಧವನ್ನು ಹೊಂದಿರುವ ಸ್ತ್ರೀ ಪುರುಷರಿಬ್ಬರೂ ವಾರಸುದಾರಿಕೆಗೆ ಅರ್ಹರಾಗುತ್ತಾರೆ. ಆದರೂ ಸ್ತ್ರೀಯರು ಪುರುಷರು ಪಡೆಯುವುದರ ಅರ್ಧದಷ್ಟನ್ನೇ ಪಡೆಯುವುದು. ಉದಾಹರಣೆಗೆ ಮೃತನ ಮಗನ ಮಗನಮಗ ಮತ್ತು ಮಗಳ ಮಗಳು ಇವರಿಬ್ಬರು ವಾರಸುದಾರರಿದ್ದರೆ ಹನಾಫಿ ಪಂಥದಡಿಯಲ್ಲಿ

ಮಗನ ಮಗನ ಮಗ ಮೃತನ ಆಸ್ತಿಗೆ ವಾರಸುದಾರನಾದರೆ, ಶಿಯಾ ಪಂಥದಡಿಯಲ್ಲಿ ಮೃತಮಗಳ ಮಗಳು ವಾರಸುದಾರಳಾಗುತ್ತಾಳೆ. ಇದಕ್ಕೆ ಕಾರಣ ಮಗಳ ಮಗಳು ಹೆಚ್ಚಿನ ಹತ್ತಿರದ ರಕ್ತ ಸಂಬಂಧಿ ಎಂಬುದು ಮಹಿಳೆಯರ ಆಸ್ತಿ ವಾರಸುದಾರಿಕೆಯ ದೃಷ್ಟಿಯಿಂದ ಶಿಯಾಪಂಥ ಹೆಚ್ಚು ಅನುಕೂಲಕರವಾಗಿದೆ.

ಒಟ್ಟಿನಲ್ಲಿ ಎರಡೂ ಪಂಥಗಳೂ ಸ್ಥಿರ ಆಸ್ತಿಯಲ್ಲಿ ಮಹಿಳೆಯರಿಗೆ ಹಕ್ಕು ನೀಡುತ್ತದೆ. ಮತ್ತೊಂದು ಮುಖ್ಯವಾದ ಅಂಶವೆಂದರೆ ಆಸ್ತಿಯ ಮೂರನೇ ಒಂದು ಭಾಗಕ್ಕಿಂತ ಹೆಚ್ಚಿನ ಆಸ್ತಿಯನ್ನು ಉಯಿಲಿನ ಮೂಲಕ ವಿಲೆ ಮಾಡುವಂತಿಲ್ಲ. ಈ ದೃಷ್ಟಿಯಿಂದ ಹಿಂದೂ ಉತ್ತರಾಧಿಕಾರ ಕಾನೂನಿಗಿಂತ ಇದು ಪ್ರಗತಿಗಾಮಿ ಎನ್ನಲಾಗಿದೆ.

೧೯೩೭ರಲ್ಲಿ ಜಾರಿಗೆ ಬಂದ ಮುಸ್ಲಿಂ ವೈಯಕ್ತಿಕ ಕಾನೂನು (ಶಾರಿಯತ್) ಅನ್ವಯ ಅಧಿನಿಯಮ ಇಸ್ಲಾಂ ಧಾರ್ಮಿಕ ಕಾನೂನಿಗೆ ಅನುಗುಣವಾಗಿದ್ದುದರಿಂದ ಸಂಪ್ರದಾಯವಾದಿಗಳು ಈ ಕಾನೂನನ್ನು ವಿರೋಧಿಸಲಾಗಲಿಲ್ಲ. ಈ ಅಧಿನಿಯಮ ಅನೇಕ ಆಚರಣೆಗಳು ಹಾಗೂ ರೂಢಿಗಳನ್ನು ತಳ್ಳಿಹಾಕಿತು. ಆದರೆ ಇಲ್ಲಿಯೂ ಕೃಷಿ ಭೂಮಿಯ ಪ್ರಾಪ್ತಿಯನ್ನು ಅಧಿನಿಯಮದ ವ್ಯಾಪ್ತಿಯಿಂದ ಹೊರಗಿಡಲಾಯಿತು. ಹಾಗಾಗಿ ಅವುಗಳ ಪ್ರಾಪ್ತಿಗೆ(devolution) ಆಚರಣೆಯಲ್ಲಿದ್ದ ಸ್ಥಳೀಯ ಸಂಪ್ರದಾಯಗಳು ಅನ್ವಯವಾದವು. ಮುಸ್ಲಿಂ ಸಮುದಾಯ ಹೊಂದಿದ್ದ ಅತ್ಯಂತ ಪ್ರಮುಖ ಆಸ್ತಿಯಾದ ಕೃಷಿಭೂಮಿಯನ್ನು ಅಧಿನಿಯಮದ ವ್ಯಾಪ್ತಿಯಿಂದ ಹೊರಗಿಟ್ಟಿದ್ದುದರಿಂದ ಮಹಿಳೆಯರಿಗೆ ಆಸ್ತಿಹಕ್ಕು ನೀಡಬೇಕೆಂಬ ಅಧಿನಿಯಮದ ಮೂಲ ಉದ್ದೇಶ ಅಷ್ಟರಮಟ್ಟಿಗೆ ವಿಫಲವಾಯಿತು.

ಯಾವುದೇ ಧರ್ಮದಲ್ಲಿನ ವಿವಾಹ ಹಾಗೂ ಉತ್ತರಾಧಿಕಾರಕ್ಕೆ ಸಂಬಂಧಿಸಿದ ಕಾನೂನುಗಳನ್ನು ಪರಿಶೀಲಿಸಿದಾಗ ಕಂಡುಬರುವ ಸಾಮಾನ್ಯ ಅಂಶ ಎಂದರೆ ಎಲ್ಲ ಧರ್ಮಗಳಲ್ಲೂ ಮಹಿಳೆಯನ್ನು ಆಸ್ತಿ ಹಕ್ಕಿನಿಂದ ವಂಚಿತಳನ್ನಾಗಿಸಿ ಆಸ್ತಿಯ ನಿಯಂತ್ರಣ ಹಾಗೂ ಹಕ್ಕನ್ನು ತಾನು ಹೊಂದಿರಲು ಹಾಗೂ ತನ್ಮೂಲಕ ಮಹಿಳೆಯರ ಮೇಲೆ ಆಧಿಪತ್ಯವನ್ನು ಹೊಂದಿರಲು ಪುರುಷರು ಪುರುಷ ಪರವಾದ ಕಾನೂನುಗಳನ್ನು ರಚಿಸಿರುವುದು. ಹೀಗಾಗಿ ಆಸ್ತಿ ಹಕ್ಕಿಗೆ ಸಂಬಂಧಿಸಿದ ಎಲ್ಲ ಕಾನೂನುಗಳನ್ನೂ ಪುರುಷರು ತಮ್ಮ ಲಾಭಕ್ಕಾಗಿ ಬಳಸಿಕೊಂಡು ಮಹಿಳೆಯರನ್ನು ಪುರುಷಾವಲಂಬಿಗಳನ್ನಾಗಿಸಿ ಸ್ವತಂತ್ರ ಜೀವನ ನಡೆಸಲು ಅಸಮರ್ಥರನ್ನಾಗಿಸಿದ್ದಾರೆ. ಆದರೆ ಇದನ್ನು ಮನಗಾಣಲು ಹಾಗೂ ಪ್ರಶ್ನಿಸಲು ಮಹಿಳೆಯರೇ ಮುಂದಾಗದಿರುವುದರಿಂದಾಗಿ ಅವರಿಗೆಂದು ಕೊಡಮಾಡಿರುವ ಹಕ್ಕುಗಳೂ ಸಹ ಅವರಿಗೆ ದೊರಕದಾಗಿದೆ.

ಚಾಲ್ತಿಯಲ್ಲಿರುವ ವಿವಿಧ ಉತ್ತರಾಧಿಕಾರ ಅಧಿನಿಯಮಗಳ ಮೂಲವನ್ನಾಧರಿಸಿ ಅವುಗಳನ್ನು ಎರಡು ಬಗೆಯ ಗುಂಪುಗಳಿಗೆ ಸೇರಿಸಬಹುದು. ಮೊದಲನೆಯ ಗುಂಪು- ಧಾರ್ಮಿಕ ಮೂಲವನ್ನುಳ್ಳ ಕಾನೂನು-

ಇದು ಪ್ರಾಚೀನವಾದವೂ ಹೌದು. ಎರಡನೆಯಗುಂಪು ವಿದೇಶೀ ಶಾಸನ ಸಭೆಗಳಿಂದ ಹೊರಡಿಸಲಾದವುಗಳು. ಇವುಗಳಿಗೆ ಇಂಗ್ಲಿಷ್, ರೋಮನ್, ಪೋರ್ಚುಗೀಸ್ ಮತ್ತು ಫ್ರೆಂಚ್ ಕಾನೂನು ಪದ್ಧತಿಗಳು ಆಧಾರ. ಭಾರತೀಯ ಉತ್ತರಾಧಿಕಾರ ಅಧಿನಿಯಮ, ೧೯೨೫ ಇಂಡಿಯನ್ ಸಕ್ಸೆಷನ್ ಆಕ್ಟ್ ಈ ಗುಂಪಿಗೆ ಸೇರಿದುದು.

ಮೇಲಿನ ಎರಡೂ ಗುಂಪಿನ ಕಾನೂನುಗಳಲ್ಲಿರುವ ಮೂಲ ವ್ಯತ್ಯಾಸವೆಂದರೆ, ಧಾರ್ಮಿಕ ಮೂಲವುಳ್ಳ ಎಲ್ಲ ಕಾನೂನುಗಳೂ ಮಹಿಳೆಗೆ ಪುರುಷರೊಂದಿಗೆ ಉತ್ತರಾಧಿಕಾರದ ಸಮಾನ ಹಕ್ಕುಗಳನ್ನು ನೀಡಲು ವಿಫಲವಾಗಿವೆ. ಇದಕ್ಕೆ ಕಾರಣ ಆಸ್ತಿಯ ಮೇಲೆ ನಿಯಂತ್ರಣ ಹೊಂದಲು ಮತ್ತು ಸ್ತ್ರೀಯರ ಮೇಲೆ ಅಧಿಕಾರ ಚಲಾಯಿಸಲು ಇರುವ ಪುರುಷರಿಗಿರುವ ಆಸೆ. ಈ ಆರ್ಥಿಕ ಬಲ ಹಾಗೂ ಹಣಕಾಸಿನ ನಿಯಂತ್ರಣಗಳು ಸಮಾಜದಲ್ಲಿ ಸ್ತ್ರೀಯರ ಮೇಲೆ ಹೆಚ್ಚುತ್ತಿರುವ ಅಪರಾಧಗಳಿಗೆ ಕಾರಣ ಎನ್ನಲಾಗಿದೆ.

ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫ರ ಮೂಲ ಆಶಯವಿದ್ದದ್ದು ಎಲ್ಲ ಭಾರತೀಯರಿಗೂ ಅನ್ವಯಿಸುವ ಏಕರೂಪದ ಉತ್ತರಾಧಿಕಾರ ಕಾನೂನನ್ನು ಜಾರಿಗೆ ತರಬೇಕು ಎಂಬುದು. ಆದರೆ ಇದಕ್ಕೆ ಹಿಂದೂ, ಮುಸಲ್ಮಾನ ಹಾಗೂ ಪಾರ್ಸಿ ಸಮುದಾಯಗಳಿಂದ ತೀವ್ರ ವಿರೋಧ ವ್ಯಕ್ತವಾದ್ದರಿಂದ ಇದನ್ನು ಕ್ರಿಶ್ಚಿಯನ್ನರಿಗೆ ಮಾತ್ರ ಸೀಮಿತಗೊಳಿಸಲಾಯಿತು. ಈಗ ಇದು ಜ್ಯೂಗಳಿಗೆ ಕ್ರಿಶ್ಚಿಯನ್ನರಿಗೆ ಮತ್ತು ೧೯೫೪ರ ವಿಶೇಷ ವಿವಾಹ ಅಧಿನಿಯದ ಆಡಿಯಲ್ಲಿ ವಿವಾಹವಾಗುವ ಎಲ್ಲ ಭಾರತೀಯರಿಗೆ ಅನ್ವಯವಾಗುತ್ತದೆ. ಆದರೆ ಭಾರತೀಯ ಉತ್ತರಾಧಿಕಾರ ಅಧಿನಿಯಮ ಬಹುಪಾಲು ಕ್ರಿಶ್ಚಿಯನ್ನರಿಗೆ ಅನ್ವಯವಾದರೂ, ಅವರ ವಾಸಸ್ಥಳವನ್ನು ಆಧರಿಸಿ ಅವರ ಚರಾಸ್ತಿಗೆ ಅನ್ವಯಿಸುವ ಕಾನೂನುಗಳು ಮತ್ತು ಸ್ಥಿರ ಆಸ್ತಿ ಇರುವ ಸ್ಥಳವನ್ನಾಧರಿಸಿ ಸ್ಥಿರಾಸ್ತಿಗೆ ಅನ್ವಯಿಸುವ ಕಾನೂನುಗಳು ಸ್ವಲ್ಪ ವ್ಯತ್ಯಾಸ ಗೊಳ್ಳುತ್ತವೆ. ಉದಾಹರಣೆಗೆ ಗೋವಾದ ಕ್ರಿಶ್ಚಿಯನ್ನರಿಗೆ ಪೋರ್ಚುಗೀಸ್ ಸಿವಲ್ ಕೋಡ್ ಅನ್ವಯಿಸುತ್ತದೆ. ಕೊಚಿನ್ ಮತ್ತು ತಿರುವಾಂಕೂರಿನಲ್ಲಿರುವ ಕ್ರಿಶ್ಚಿಯನ್ನರಿಗೆ ತೀರ ಇತ್ತೀಚಿನವರೆಗೆ ಕೊಚಿನ್ ಕ್ರಿಶ್ಚಿಯನ್ ಉತ್ತರಾಧಿಕಾರ ಅಧಿನಿಯಮ ೧೯೨೧ ಮತ್ತು ತಿರುವಾಂಕೂರು ಕ್ರಿಶ್ಚಿಯನ್ ಉತ್ತರಾಧಿಕಾರ ಅಧಿನಿಯಮ, ೧೯೧೬ ಕ್ರಮವಾಗಿ ಅನ್ವಯಿಸುತ್ತಿದ್ದವು. ಪಜಾಬ್, ಹರ್‍ಯಾಣ, ಹಿಮಾಚಲಪ್ರದೇಶದಲ್ಲಿರುವವರಿಗೆ ಪಂಜಾಬಿನ ಸಾಂಪ್ರದಾಯಿಕ ಕಾನೂನುಗಳು ಮತ್ತು ಈಶಾನ್ಯ ಭಾರತದ ಬುಡಕಟ್ಟು ಕ್ರಿಶ್ಚಿಯನ್ ಸಮುದಾಯಕ್ಕೆ ಅವರ ಸಾಂಪ್ರದಾಯಿಕ ಕಾನೂನುಗಳು ಅನ್ವಯಿಸುತ್ತದೆ. ಇನ್ನುಳಿದ ಕ್ರಿಶ್ಚಿಯನ್ನರಿಗೆ ಭಾರತೀಯ ಉತ್ತರಾಧಿಕಾರ ಅಧಿನಿಯಮ ೧೯೨೫ ಅನ್ವಯಿಸುತ್ತದೆ.

ಕೊಚಿನ್ ಮತ್ತು ತಿರುವಾಂಕೂರು ಅಧಿನಿಯಮಗಳೆರಡರಲ್ಲೂ ಸ್ತ್ರೀ ಪುರುಷರಿಗೆ ನೀಡಿರುವ ಹಕ್ಕುಗಳಲ್ಲಿ ತಾರತಮ್ಯವಿದೆ. ಭಾರತೀಯ ಉತ್ತರಾಧಿಕಾರ ಅಧಿನಿಯಮ ಮೂಲತಃ ರೋಮನ್ ಮತ್ತು ಇಂಗ್ಲಿಷ್

ಉತ್ತರಾಧಿಕಾರ ತತ್ತ್ವಗಳನ್ನಾಧರಿಸಿದೆ. ರಕ್ತ ಸಂಬಂಧ (ಸಗೋತ್ರಜರು) ಒಂದೇ ಇಲ್ಲಿ ವಾರಸುದಾರಿಕೆಗೆ ಅರ್ಹರನ್ನಾಗಿಸುವ ಅಂಶ. ದತ್ತಕದಿಂದ, ಈ ಕಾನೂನಿನ ಅಡಿಯಲ್ಲಿ, ವಾರಸುದಾರಿಕೆಗೆ ಹಕ್ಕು ಪ್ರಾಪ್ತವಾಗುವುದಿಲ್ಲ. ಈ ಅಧಿನಿಯಮದ ಅಡಿಯಲ್ಲಿ ಸ್ತ್ರೀವಾರಸುದಾರರ ಉತ್ತರಾಧಿಕಾರದ ಹಕ್ಕನ್ನು, ಪ್ರತ್ಯೇಕವಾಗಿ ತಾಯಿ, ವಿಧವೆ ಮತ್ತು ಮರಣ ಶಾಸನ ಬರೆಯದೆ ಮರಣ ಹೊಂದುವ ವ್ಯಕ್ತಿಯ ಮಗಳು ಹೊಂದಿರುವ ಹಕ್ಕುಗಳನ್ನು ವಿಶ್ಲೇಷಿಸುವ ಮೂಲಕ ತಿಳಿಯಬಹುದು. ಈ ಅಧಿನಿಯಮದ ಪ್ರಕಾರ ರಕ್ತಸಂಬಂಧಿಗಳಷ್ಟೆ ವಾರಸುದಾರಿಕೆಯ ಹಕ್ಕನ್ನು ಪಡೆಯುವುದರಿಂದ, ಸೊಸೆ ವಾರಸುದಾರಳಾಗುವುದಿಲ್ಲ.

### ತಾಯಿಯ ಹಕ್ಕುಗಳು

ಇಲ್ಲಿ ತಾಯಿ ಎಂದರೆ ಸಹಜ ತಾಯಿ, ದತ್ತಕ ತಾಯಿಯಲ್ಲ. ಮರಣಶಾಸನ ಬರೆಯದ ಮೃತನ ತಾಯಿ ಪ್ರಾಥಮಿಕ ವಾರಸುದಾರಳಲ್ಲವಾದ್ದರಿಂದ, ಮೃತನ ನೇರವಂಶಜರು ಮತ್ತು ಮೃತನ ವಿಧವೆಯಿದ್ದ ಸಂದರ್ಭದಲ್ಲಿ ತಾಯಿಗೆ ಯಾವುದೇ ಭಾಗ ದೊರೆಯುವುದಿಲ್ಲ. ಮೃತನ ವಿಧವೆ ಪತ್ನಿ ಇದ್ದಲ್ಲಿ, ಪತ್ನಿ ಅರ್ಧ ಆಸ್ತಿಯನ್ನು ಪಡೆಯುತ್ತಾಳೆ. ಉಳಿದರ್ಧ ಆಸ್ತಿಯಲ್ಲಿ ಮೃತನ ತಾಯಿ, ಸಹೋದರರು ಸಹೋದರಿಯರು ಹಾಗೂ ಅವರ ಮಕ್ಕಳು ಪಾಲು ಪಡೆಯುತ್ತಾರೆ. ಆದ್ದರಿಂದ ತಾಯಿ ಪಡೆಯುವ ಆಸ್ತಿಯ ಪ್ರಮಾಣ ಮೃತನು ಹೊಂದಿರುವ ಸಹೋದರ ಸಹೋದರಿಯರ ಸಂಖ್ಯೆಯನ್ನು ಅವಲಂಬಿಸುತ್ತದೆ. ಮೃತನಿಗೆ ತಂದೆ ತಾಯಿಯರು ಮಾತ್ರ ಇರುವಲ್ಲಿ, ತಂದೆ ಮೃತನ ಸಮಸ್ತ ಆಸ್ತಿಗೆ ವಾರಸುದಾರನಾಗುತ್ತಾನೆ. ತಾಯಿ ಈ ಆಸ್ತಿಗೆ ವಾರಸುದಾರಳಾಗುವುದಿಲ್ಲ. ಇಲ್ಲಿ ಸ್ತ್ರೀಪುರುಷರ ನಡುವೆ ಇರುವ ತಾರತಮ್ಯಕ್ಕೆ ಕಾರಣ ತಿಳಿಯುವುದಿಲ್ಲ. ಇವರಿಬ್ಬರಲ್ಲಿ ಮೃತನಿಗೆ ಯಾರು ಹತ್ತಿರದವರು ಎಂದು ನಿರ್ಧರಿಸುವುದು ಕಷ್ಟ. ಏಕೆಂದರೆ ಈ ಅಧಿನಿಯಮದ ಮೇರೆಗೆ ವಾರಸುದಾರಿಕೆ ಪ್ರಾಪ್ತವಾಗುವುದು ವ್ಯಕ್ತಿ (ಸ್ತ್ರೀ ಅಥವಾ ಪುರುಷ) ಎಷ್ಟು ಹತ್ತಿರದ ಸಂಬಂಧಿ ಎನ್ನುವುದರ ಮೇಲೆ. ಹಾಗೆ ನೋಡಿದರೆ ಮಕ್ಕಳನ್ನು ನೋಡಿಕೊಳ್ಳುವುದರಲ್ಲಿ ಹಾಗೂ ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ತಾಯಿಯ ಪಾತ್ರವೇ ಹೆಚ್ಚು ಮತ್ತು ತಾಯಿಯೇ ತಂದೆಗೆ ಹೋಲಿಸಿದಾಗ, ಆರ್ಥಿಕವಾಗಿ ಅವಲಂಬಿತಳು. ಬೇರ್ಪಟ್ಟ ತಂದೆ ತಾಯಿಯರ ಸಂದರ್ಭದಲ್ಲಂತೂ ಈ ಆಸ್ತಿವಾರಸುದಾರಿಕೆಯ ಕ್ರಮ ಮಹಿಳೆಗೆ ಅತ್ಯಂತ ಕಷ್ಟವನ್ನುಂಟು ಮಾಡುತ್ತದೆ. ಇದನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಬಹುದು. ವಿಚ್ಛೇದನೆ ಪಡೆದು ಕ್ರಿಶ್ಚಿಯನ್ ದಂಪತಿಗಳು ಬೇರ್ಪಟ್ಟಿದ್ದು, ಮಕ್ಕಳ ಅಭಿರಕ್ಷೆಯನ್ನು ತಾಯಿಗೆ ಕೊಡಲಾಗಿದೆ ಎಂದು ಭಾವಿಸೋಣ. ಮಕ್ಕಳ ತಂದೆ ಮರುಮದುವೆಯಾಗಿ ಸುಖವಾಗಿರುತ್ತಾನೆ. ತಾಯಿ ಕಷ್ಟಪಟ್ಟು ಮಕ್ಕಳನ್ನು ಮುಂದೆ ತಂದು ಸ್ವತಂತ್ರ ಪ್ರಜೆಗಳನ್ನಾಗಿ ರೂಪಿಸುತ್ತಾಳೆ. ಮಗ ಅವಿವಾಹಿತನಾಗಿ ಮೃತಪಟ್ಟರೆ ತಾಯಿ ಯನ್ನು ಹೊರತುಪಡಿಸಿ ಅವನ ಎಲ್ಲ ಆಸ್ತಿಗೂ ತಂದೆ ವಾರಸುದಾರನಾಗುತ್ತಾನೆ. ಇದು ಅಸಂವೈಧಾನಿಕ

ಮತ್ತು ಯಾವುದೇ ಕಾರಣವೂ ಈ ರೀತಿಯ ತಾರತಮ್ಯವನ್ನು ಸಮರ್ಥಿಸಲಾಗದು. ತಾಯಿಗೆ ಅವಳು ಪಡುವ ಶ್ರಮಕ್ಕೆ ಹೆಚ್ಚಿನ ಆಸ್ತಿಯನ್ನು ಕೊಡದಿದ್ದರೂ ತಂದೆಗೆ ಸಮಾನಾಗಿ ಆಸ್ತಿಯನ್ನು ಕೊಡಲೇಬೇಕಾದುದು ನ್ಯಾಯಸಮ್ಮತ ಹಾಗೂ ತರ್ಕಸಮ್ಮತ.

**ವಿಧವೆಯ ಹಕ್ಕುಗಳು**

ಮರಣಶಾಸನ ಬರೆಯದೆ ಮೃತನಾದ ವ್ಯಕ್ತಿಯ ವಿಧವೆ ಪತ್ನಿ ಮೂರನೇ ಒಂದು ಭಾಗದಷ್ಟು ನಿಗದಿತ ಪಾಲನ್ನು ಪಡೆದು ಅವಳ ಮಕ್ಕಳು ಮತ್ತು ನೇರವಂಶಜರೊಡನೆ ಪತಿಯ ಆಸ್ತಿಗೆ ಉತ್ತರಾಧಿಕಾರಿಯಾಗುತ್ತಾಳೆ. ನೇರವಂಶಜರು ಇಲ್ಲದಿದ್ದಲ್ಲಿ ಮಕ್ಕಳೊಡನೆ ಆಸ್ತಿಯ ಅರ್ಧಭಾಗಕ್ಕೆ ಉತ್ತರಾಧಿಕಾರಿಯಾಗುತ್ತಾಳೆ. ವಾರಸುದಾರರೇ ಇಲ್ಲದಿದ್ದ ಪಕ್ಷದಲ್ಲಿ ಮಾತ್ರ ಪೂರ್ಣ ಆಸ್ತಿಯನ್ನು ಪಡೆಯುತ್ತಾಳೆ. ಮೃತನ ಆಸ್ತಿಯ ಬೆಲೆ ೫೦೦೦ರೂ.ಗಳಿಗಿಂತ ಕಡಿಮೆ ಇದ್ದಲ್ಲಿ ವಿಧವೆ ಸಂಪೂರ್ಣ ಆಸ್ತಿಗೆ, ನೇರ ವಂಶಜರು ಇಲ್ಲದಿದ್ದಾಗ, ವಾರಸುದಾರಳಾಗುತ್ತಾಳೆ. ಆಸ್ತಿಯ ಮೌಲ್ಯ ಐದು ಸಾವಿರ ರೂಗಳಿಗಿಂತ ಹೆಚ್ಚಾದಲ್ಲಿ ಅವಳು ಮೊದಲಿಗೆ ೫೦೦೦ರೂಗಳನ್ನು ಪಡೆಯುತ್ತಾಳೆ. ಉಳಿದದ್ದು ವಾರಸುದಾರಿಕೆಯ ಮೂಲಕ ಇತರರಿಗೆ ಪ್ರಾಪ್ತವಾಗುತ್ತದೆ. ಅದರಲ್ಲಿಯೂ ವಿಧವೆ ಪಾಲು ಪಡೆಯುತ್ತಾಳೆ. ಭಾರತದ ಕಾನೂನು ಆಯೋಗ ವಿಧವೆ ಪಡೆಯುವ ಈ ಮೊಬಲಗನ್ನು ೫೦೦೦ರೂ.ಗಳಿಂದ ೨೦,೦೦೦ರೂ.ಗಳಿಗೆ ಹೆಚ್ಚಿಸಬೇಕೆಂದು ಶಿಫಾರಸ್ಸು ಮಾಡಿತ್ತು.

**ಮಗಳ ಹಕ್ಕುಗಳು**

ಮಗಳ ಆಸ್ತಿಹಕ್ಕು ಮಗನ ಆಸ್ತಿ ಹಕ್ಕಿಗೆ ಸಮಾನವಾಗಿದೆ. ವಿಧವೆ ಪತ್ನಿ ಇಲ್ಲದಿದ್ದಲ್ಲಿ ಮಕ್ಕಳು (ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳು) ಹಾಗೂ ನೇರವಂಶಜರು ಅವಳ ಪಾಲಿನ ಆಸ್ತಿಗೆ ವಾರಸುದಾರರಾಗುತ್ತಾರೆ. ಈ ಅಧಿನಿಯಮದಲ್ಲಿ ಹೆಣ್ಣು ಮಕ್ಕಳು ಹಾಗೂ ಗಂಡುಮಕ್ಕಳ ವಿಷಯದಲ್ಲಿ ಆಸ್ತಿಗೆ ಸಂಬಂಧಿಸಿದಂತೆ ತಾರತಮ್ಯ ತೋರಿಲ್ಲ.

ಈ ಅಧಿನಿಯಮ ಅತ್ಯಂತ ಪ್ರಗತಿಪರವಾದ ಕಾನೂನು. ತಂದೆಯಿದ್ದಾಗ ತಾಯಿಯನ್ನು ಹೊರತುಪಡಿಸಲಾಗಿದೆ ಎಂಬುದನ್ನು ಬಿಟ್ಟರೆ, ಸ್ತ್ರೀಯರ ಹಕ್ಕುಗಳನ್ನು ಮೊಟಕುಗೊಳಿಸುವ ಯಾವುದೇ ಉಪಬಂಧವನ್ನು ಈ ಕಾನೂನು ಒಳಗೊಂಡಿಲ್ಲ.

ತಿರುವಾಂಕೂರು ಕ್ರಿಶ್ಚಿಯನ್ ಉತ್ತರಾಧಿಕಾರ ಅಧಿನಿಯಮ ತಿರುವಾಂಕೂರಿನ ಕ್ರಿಶ್ಚಿಯನ್ನರ ಉತ್ತರಾಧಿಕಾರ ಹಕ್ಕುಗಳನ್ನು ನಿರೂಪಿಸುತ್ತದೆ. ಇದರ ಪ್ರಕಾರ, ವಿಧವೆ ಅಥವಾ ತಾಯಿ ಭೂಮಿ ಅಥವಾ ಇತರ ಸ್ಥಿರ ಆಸ್ತಿಯಲ್ಲಿ, ಕೇವಲ ಸೀಮಿತ ಹಕ್ಕನ್ನು ಹೊಂದುತ್ತಾರೆ. ಅವರು ಮರುವಿವಾಹವಾದರೆ ಈ ಹಕ್ಕನ್ನು ಕಳೆದುಕೊಳ್ಳುತ್ತಾರೆ. ಹೆಣ್ಣುಮಕ್ಕಳು, ಗಂಡುಮಕ್ಕಳು ವಾರಸುದಾರಿಕೆಯ ಮೂಲಕ ಪಡೆಯುವ ಪಾಲಿನ

ಮೌಲ್ಯದ ನಾಲ್ಕನೇ ಒಂದು ಭಾಗ ಅಥವಾ ೫೦೦೦ರೂ.ಗಳು ಇದರಲ್ಲಿ ಯಾವುದು ಕಡಿಮೆಯೋ ಅಷ್ಟನ್ನು ಮಾತ್ರ 'ಸ್ತ್ರೀಧನ'ವನ್ನಾಗಿ ಪಡೆಯುತ್ತಾರೆ.

ಆದರೆ, ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೨೫ರ ಮೇರೆಗೆ ತಂದೆಯ ಮರಣ ಶಾಸನ ರಹಿತ ಆಸ್ತಿಯಲ್ಲಿ ಹೆಣ್ಣು ಮತ್ತು ಗಂಡುಮಕ್ಕಳಿಬ್ಬರಿಗೂ ಸಮಾನ ಹಕ್ಕುಗಳನ್ನು ಹೊಂದಿದ್ದಾರೆ. ಆದ್ದರಿಂದ ಕ್ರಿಶ್ಚಿಯನ್ನರ ವಾರಸುದಾರಿಕೆಗೆ ಸಂಬಂಧಿಸಿದಂತೆ, ತಿರುವಾಂಕೂರು ಕ್ರಿಶ್ಚಿಯನ್ನರಿಗೂ, ತಿರುವಾಂಕೂರು ಅಧಿನಿಯಮದ ಬದಲಿಗೆ ಭಾರತೀಯ ಉತ್ತರಾಧಿಕಾರ ಅಧಿನಿಯಮವನ್ನೇ ಅನ್ವಯಿಸ ಬೇಕೆಂದು ಕೋರಿ ೧೯೫೬ರಲ್ಲಿ ಹೂಡಿದ್ದ ದಾವೆಯನ್ನು ನ್ಯಾಯಲಯ ತಳ್ಳಿಹಾಕಿ ತಿರುವಾಂಕೂರು ಅಧಿನಿಯಮದ ಅನ್ವಯವನ್ನೇ ಎತ್ತಿಹಿಡಿತ್ತು. ಮತ್ತೆ ೧೯೮೩ರಲ್ಲಿ ಎಂದರೆ ಸುಮಾರು ಎರಡೂವರೆ ದಶಕಗಳ ನಂತರ ಮೇರಿ ರಾಯ್ ಎಂಬಾಕೆ ತಿರುವಾಂಕೂರು ಅಧಿನಿಯಮ ಸಂವಿಧಾನದ ಸಮಾನತೆಯ ತತ್ತ್ವವನ್ನು ಉಲ್ಲಂಘಿಸುತ್ತದೆ ಎಂಬ ಕಾರಣದಮೇಲೆ ಸರ್ವೋಚ್ಚ ನ್ಯಾಯಾಲಯದಲ್ಲಿ ಇದನ್ನು ಪ್ರಶ್ನಿಸಿದಳು. ಸರ್ವೋಚ್ಚ ನ್ಯಾಯಾಲಯ ೧೯೮೬ರಲ್ಲಿ ಈ ಬಗ್ಗೆ ತೀರ್ಪು ನೀಡಿ ತಿರುವಾಂಕೂರು ಕೊಚಿನ್‌ಗಳು ಭಾರತ ಒಕ್ಕೂಟದ ಭಾಗವಾಗಿರುವುದರಿಂದ ಅಲ್ಲಿಯ ಕ್ರಿಶ್ಚಿಯನ್ನರಿಗೂ ಭಾರತೀಯ ಉತ್ತರಾಧಿಕಾರ ಅಧಿನಿಯಮವೇ ಅನ್ವಯವಾಗಬೇಕು ಎಂಬುದಾಗಿ ಅಭಿಪ್ರಾಯಪಟ್ಟಿತು.

**ಕೃಷಿಭೂಮಿಯ ವಾರಸುದಾರಿಕೆ ಕಾನೂನುಗಳಲ್ಲಿರುವ ಲಿಂಗತಾರತಮ್ಯ**

ಭಾರತದಲ್ಲಿ ಮಹಿಳೆ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಸಬಲಳಾಗಬೇಕಾದರೆ ಆಸ್ತಿಯಲ್ಲಿ ಅದರಲ್ಲೂ ಭೂಮಿಯಲ್ಲಿ ಸಮಾನವಾದ ಹಕ್ಕು ಹೊಂದಿರಬೇಕಾದುದು ಬಹುಮುಖ್ಯ. ಅದರಲ್ಲೂ ಗ್ರಾಮೀಣ ಭಾರತತದ ಸಂದರ್ಭದಲ್ಲಿ ಇದು ಮತ್ತಷ್ಟು ಮುಖ್ಯವಾಗುತ್ತದೆ. ಆದರೆ ಇದನ್ನು ಸಾಧಿಸುವಲ್ಲಿ ಇರುವ ಅಡಚಣೆಗಳು ಅನೇಕ. ಅವೆಂದರೆ ಕಾನೂನು ಸಾಮಾಜಿಕ, ಆಡಳಿತಾತ್ಮಕ, ಭಾವನಾತ್ಮಕ ಮುಂತಾದವು.

ಹಿಂದೂ ಉತ್ತರಾಧಿಕಾರ ಅಧಿನಿಯಮ ಕೃಷಿ ಭೂಮಿಗೆ ಅನ್ವಯಿಸಿದರೂ, ಕೃಷಿ ಭೂಮಿಯ ಗುತ್ತಿಗೆ ಹಕ್ಕುಗಳಿಂದ ಪ್ರಾಪ್ತವಾಗುವ ಕೃಷಿಭೂಮಿಯಲ್ಲಿನ ಇತರ ಹಿತಾಸಕ್ತಿಗಳಿಗೆ ಇದರಿಂದ ವಿನಾಯಿತಿ ನೀಡಲಾಗಿದೆ. ೪(೨)ನೇ ಪ್ರಕರಣದಲ್ಲಿ ಈ ಮುಂದಿನಂತೆ ಉಪಬಂಧಿಸಲಾಗಿದೆ. " ....ಈ ಅಧಿನಿಯಮದಲ್ಲಿ ಇರುವುದಾವುದೂ, ಕೃಷಿ ಹಿಡುವಳಿಗಳ ತುಂಡೀಕರಣವನ್ನು ತಡೆಗಟ್ಟುವುದಕ್ಕಾಗಿ ಅಥವಾ ಅಂಥ ಹಿಡುವಳಿಗಳ ಗರಿಷ್ಠ ಮಿತಿಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅವುಗಳ ಗುತ್ತಿಗೆ ಹಕ್ಕುಗಳ ಪ್ರಾಪ್ತಿಗೆ ಸಂಬಂಧಿಸುವುದಕ್ಕಾಗಿ ಉಪಬಂಧ ಕಲ್ಪಿಸುವ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೆ ಬಾಧಕವುಂಟುಮಾಡುತ್ತದೆಂದು ಭಾವಿಸತಕ್ಕದ್ದಲ್ಲ".

ಈ ಒಂದು ಉಪಬಂಧ ಉಂಟು ಮಾಡುವ ಸ್ತ್ರೀಪುರುಷ ಅಸಮಾನತೆಯನ್ನು ಮೇಲಿನ ಯಾವ ತಿದ್ದುಪಡಿಗಳೂ ಸರಿಪಡಿಸಿಲ್ಲ. ಸ್ತ್ರೀಪುರುಷ ಸಮಾನತೆಯನ್ನು ಸಾಧಿಸಬೇಕೆನ್ನುವ ದೃಷ್ಟಿಯಿಂದ ಹಿಂದೂ ಉತ್ತರಾಧಿಕಾರ ಅಧಿನಿಯಮಕ್ಕೆ ಮಾಡಿದ ಪ್ರಗತಿಪರ ತಿದ್ದುಪಡಿಗಳೂ ಸಹ, ಇವು ಕೃಷಿಭೂಮಿಗೆ ಅನ್ವಯವಾಗದೆ ಇರುವುದರಿಂದ ವಿಫಲಗೊಳ್ಳುತ್ತವೆ ಎನ್ನಬಹುದು.

ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಮತ್ತು ಅದಕ್ಕೂ ಮುಂಚಿನಿಂದಲೂ- ಕೃಷಿ ಭೂಮಿಯನ್ನು ಹೊರತುಪಡಿಸಿ ಉಳಿದ ಆಸ್ತಿಯಲ್ಲಿನ ಮಹಿಳೆಯ ಹಕ್ಕುಗಳು ಮತ್ತು ಕೃಷಿ ಭೂಮಿಯಲ್ಲಿನ ಅವರ ಹಕ್ಕುಗಳು- ಇವೆರಡೂ ಪ್ರತ್ಯೇಕವಾಗಿಯೇ ಉಳಿದಿವೆ. ಇದಕ್ಕೆ ಕಾರಣವಾಗಿರುವ ಅಂಶಗಳು ಮುಖ್ಯವಾಗಿ ಎರಡು- ಮೊದಲನೆಯದಾಗಿ ಶಾಸನರಚನಾ ಅಧಿಕಾರ, ಸಂಯುಕ್ತಸ್ವರೂಪದ ಸರಕಾರ ವ್ಯವಸ್ಥೆಯಲ್ಲಿ ಕೇಂದ್ರ ಹಾಗೂ ರಾಜ್ಯಗಳ (ಹಿಂದೆ ಪ್ರಾಂತ್ಯಗಳ) ನಡುವೆ ಹಂಚಿಕೆಯಾಗುತ್ತದೆ. ಕೃಷಿ ಭೂಮಿಗೆ ಸಂಬಂಧಿಸಿದ ಶಾಸನ ರಚನೆಯಲ್ಲಿ ರಾಜ್ಯಗಳಿಗೆ ಗಣನೀಯ ಅಧಿಕಾರವಿರುತ್ತದೆ. ಹೀಗಾಗಿ, ಆಯಾ ರಾದ್ಯಗಳಲ್ಲಿನ ಸಾಮಾಜಿಕ ಮನೋಭಾವ, ಕಾನೂನುಗಳ ಮೂಲಕ ಸಮಸ್ಯೆಗಳನ್ನು ಎದುರಿಸುವ ರೀತಿ ಹಾಗೂ ಆಯಾ ರಾಜ್ಯಗಳ ಆಡಳಿತ ಹಿನ್ನೆಲೆ ಇವುಗಳನ್ನು ಆಯಾ ರಾಜ್ಯಗಳಲ್ಲಿ ಕೃಷಿ ಭೂಮಿಗೆ (ಕೃಷಿ ಭೂಮಿಯಕೆಲವು ಪ್ರವರ್ಗಗಳಿಗೆ) ಸಂಬಂಧಿಸಿದಂತೆ ಮಹಿಳೆಯರಿಗೆ ನೀಡಿರುವ ಹಕ್ಕುಗಳು ಪ್ರತಿಬಿಂಬಿಸುತ್ತವೆ ಎರಡನೆಯದಾಗಿ ಭೂ ಸುಧಾರಣಾ ನೀತಿಗಳನ್ನು ರೂಪಿಸುವಾಗ ಮರು ಹಂಚಿಕೆ ನ್ಯಾಯದ ತತ್ವಗಳು ಹಾಗೂ ದಕ್ಷತೆಯನ್ನು ಎಂದರೆ ಉಳುವವನಿಗೇ ಭೂಮಿ, ಗರಿಷ್ಠ ಮಿತಿಯ ನಿಗದಿ, ತುಂಡೀಕರಣ ತಡೆ ಮುಂತಾದ ಅಂಶಗಳನ್ನು ಆಧರಿಸಿ ಶಾಸನ ರಚನೆ ಮಾಡಲಾಗುತ್ತದೆ. ಆದರೆ ಯಾವ ಸಂದರ್ಭದಲ್ಲಿಯೂ ಇದರ ಹಿಂದಿರುವ ಸ್ತ್ರೀಪುರುಷ ತಾರತಮ್ಯವನ್ನು ಗಣನೆಗೆ ತೆಗೆದುಕೊಂಡಿಲ್ಲ.

೧೯೩೫ರ ಭಾರತ ಸರ್ಕಾರದ ಅಧಿನಿಯಮ(Govt. of India Act, 1935) ಕೃಷಿ ಭೂಮಿಗೆ ಸಂಬಂಧಿಸಿದ ಶಾಸನ ರಚನೆಯ ಎಲ್ಲ ಅಧಿಕಾರಗಳನ್ನೂ ಪ್ರಾಂತೀಯ (ರಾಜ್ಯ) ಶಾಸನ ಸಭೆಗಳಿಗೆ ವಹಿಸಿಕೊಟ್ಟಿತು. ಹೀಗಾಗಿ ಅಂದಿನಿಂದ ಕೃಷಿ ಭೂಮಿಗೆ ಸಂಬಂಧಿಸಿದ ಎಲ್ಲ ಕಾನೂನುಗಳೂ ಆ ಭೂಮಿಯಿರುವ ಪ್ರದೇಶದಲ್ಲಿ ಜಾರಿಯಲ್ಲಿರುವ ಅದಕ್ಕೆ ಸಂಬಂಧಿಸಿದ ಕಾನೂನುಗಳನ್ನು ಆಧರಿಸಿ ರೂಪುಗೊಂಡವು. ಹೀಗಾಗಿ ಉಳಿದ ಆಸ್ತಿಗೆ ಸಂಬಂಧಿಸಿದ ಯಾವುದೇ ಕಾನೂನೂ ಕೃಷಿಭೂಮಿಗೆ ಸಂಬಂಧಿಸಿದ ಕಾನೂನುಗಳಿಗೆ ಅನ್ವಯವಾಗಲಿಲ್ಲ. ಉದಾಹರಣೆಗೆ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮ, ೧೯೩೭ ಸಹ ಕೃಷಿ ಭೂಮಿಗೆ ಅನ್ವಯವಾಗಲಿಲ್ಲ.

ಸ್ವಾತಂತ್ರ್ಯಾನಂತರವೂ, ಭೂಮಿಗೆ ಸಂಬಂಧಿಸಿದ ಕಾನೂನುಗಳ ರಚನೆಯ ಅಧಿಕಾರವನ್ನು ರಾಜ್ಯ ಶಾಸನ ಸಭೆಗಳೇ ಹೊಂದಿವೆ. ಆಯಾ ರಾಜ್ಯಗಳ ಕಾನೂನು ಅಥವಾ ಆಚರಣೆಯನ್ನು ಆಧರಿಸಿ ಕೃಷಿ

ಭೂಮಿ ಪ್ರಾಪ್ತವಾಗುವುದರಲ್ಲಿ ಸ್ತ್ರೀಪುರುಷ ಅಸಮಾನತೆ ಪ್ರಮುಖವಾಗಿ ಕಾಣುತ್ತದೆ. ಗರಿಷ್ಠ ಮಿತಿಯನ್ನು ನಿಗದಿಪಡಿಸುವಲ್ಲಿಯೂ ಸಹ ಈ ಅಸಮಾನತೆ ಕಂಡುಬರುತ್ತದೆ. ಬಹುಪಾಲು ಗೇಣಿ ಹಕ್ಕುಗಳು ಮತ್ತು ಭೂ ಸುಧಾರಣಾ ಕಾನೂನುಗಳನ್ನು ಭಾರತದ ಸಂವಿಧಾನದ ಒಂಬತ್ತನೇ ಅನುಸೂಚಿಯಲ್ಲಿ ಸೇರಿಸಿರುವುದರಿಂದ ಈ ಯಾವುದೇ ಕಾನೂನಿನ ವಿರುದ್ಧ ಅದು ಮೂಲಭೂತ ಹಕ್ಕನ್ನು ಉಲ್ಲಂಘಿಸುತ್ತದೆಂಬ ಕಾರಣದ ಮೇಲೆ ದಾವೆ ಹೂಡಲು ಅವಕಾಶವಿಲ್ಲ. ಹಕ್ಕಿನಿಂದ ವಂಚಿತರಾದವರ ವರ್ಗ ಇದನ್ನು ಪ್ರಶ್ನಿಸಿ ದಾವೆ ಹೂಡುವ ಮೂಲಕ ಹಸ್ತಕ್ಷೇಪ ಮಾಡದಂತೆ ಅದನ್ನು ಈ ಕ್ರಮ ತಡೆಯುತ್ತದಾದರೂ ಸ್ತ್ರೀಪುರುಷ ತಾರತಮ್ಯದ ಕಾರಣದ ಮೇಲೆಯೂ ಇದನ್ನು ಪ್ರಶ್ನಿಸಿದಂತೆ ಅಷ್ಟೇ ಪರಿಣಾಮಕಾರಿಯಾಗಿ ತಡೆಯುತ್ತದೆ ಎಂಬುದೂ ಅಷ್ಟೇ ಸತ್ಯ. ನಮ್ಮ ಸಂವಿದಾನ ಸ್ತ್ರೀಪುರುಷ ಸಮಾನತೆಯನ್ನು ಎತ್ತಿ ಹಿಡಿಯುತ್ತದೆ. ಆದರೆ ಅಷ್ಟೇ ಮುಖ್ಯವಾದ ಆರ್ಥಿಕ ಸಂಪನ್ಮೂಲಕ್ಕೆ ಸಂಬಂಧಿಸಿದ ವಾರಸುದಾರಿಕೆ ಮತ್ತು ಭೂಗರಿಷ್ಠಮಿತಿಯ ನಿಗದಿಗಳಲ್ಲಿ ಸ್ತ್ರೀಪುರುಷ ಅಸಮಾನತೆ ಅತ್ಯಂತ ಹೆಚ್ಚಿನ ಮಟ್ಟದಲ್ಲಿದೆ. ಆದರೆ ರಾಜ್ಯಗಳಿಗಿರುವ ಈ ಅಧಿಕಾರಗಳಿಗೆ ಕೆಲವು ನಿರ್ಬಂಧಗಳನ್ನು ವಿಧಿಸಿರುವುದು ಸಮಾಧಾನಕರ ಅಂಶ. ಅದರಂತೆ, ಸಂವಿಧಾನದ ಸಮವರ್ತಿ ಪಟ್ಟಿಯಲ್ಲಿ ಇರುವ ಯಾವುದೇ ವಿಷಯದ ಬಗ್ಗೆ ಸಂಸತ್ತು ಶಾಸನವನ್ನು ಈಗಾಗಲೇ ರಚಿಸಿದ್ದು, ಆ ಶಾಸನವನ್ನು ರಾಜ್ಯ ವಿಧಾನಮಂಡಲ ಮಾರ್ಪಾಟು ಮಾಡಲು ಇಚ್ಛಿಸಿದರೆ ಅಂಥ ಮಾರ್ಪಟುಗಳಿಗೆ ರಾಷ್ಟ್ರಾಧ್ಯಕ್ಷರ ಸಮ್ಮತಿಯನ್ನು ಪಡೆಯಬೇಕಾಗುತ್ತದೆ. ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ ಅಂಥ ಶಾಸನಗಳಲ್ಲಿ ಒಂದು. ಹೀಗಾಗಿ ಕೃಷಿ ಭೂಮಿಗೆ ಸಂಬಂಧಿಸಿದ ವಾರಸುದಾರಿಕೆ ನಿಯಮಗಳಲ್ಲಿ ಬದಲಾವಣೆ ತರಬೇಕಾದರೆ ಅಂಥ ಬದಲಾವಣೆಗೆ ರಾಷ್ಟ್ರಾಧ್ಯಕ್ಷರ ಸಮ್ಮತಿ ಅಗತ್ಯವಾಗುತ್ತದೆ.

ಕೃಷಿ ಭೂಮಿಯ ವಾರಸುದಾರಿಂದ ಸ್ತ್ರೀಯರನ್ನು ಹೊರಗಿಡಬೇಕೆಂಬ ರಾಜ್ಯಮಟ್ಟದ ಪ್ರಯತ್ನಗಳನ್ನು ತಡೆಯುವಲ್ಲಿ ಈ ನಿರ್ಬಂಧ ಯಶಸ್ವಿಯಾಗಿದೆ. ಆದರೆ ಗೇಣಿ ಹಕ್ಕು, ಗರಿಷ್ಠಮಿತಿ ನಿಗದಿ ಕಾನೂನುಗಳು ಹಿಂದೂ ಉತ್ತರಾಧಿಕಾರ ಅಧಿನಿಯಮದ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ಸಮ್ಮತಿಯಿಲ್ಲದೆಯೇ ಅದಕ್ಕೆ ಸಂಬಂಧಪಟ್ಟ ಅಂಥ ಕಾನೂನುಗಳನ್ನು ರಾಜ್ಯವಿಧಾನಮಂಡಲಗಳು ರಚಿಸಬಹುದಾಗಿದೆ. ಹೀಗಾಗಿ ಕೃಷಿ ಭೂಮಿಗೆ ಸಂಬಂಧಿಸಿದಂತೆ ಸ್ತ್ರೀಯರಿಗಿರುವ ಹಕ್ಕುಗಳು ತಾರತಮ್ಯದಿಂದ ಕೂಡಿದೆ. ಮತ್ತು ಇವು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗುತ್ತವೆ. ಮೊದಲನೆಯದಾಗಿ, ಗೇಣಿಯಲ್ಲಿ ಇದೆಯೆಂದು ಭಾವಿಸಲಾಗುವ ಭೂಮಿಗೆ ಸಂಬಂಧಿಸಿದಂತೆ ಪ್ರಾಪ್ತಿ ನಿಯಮಗಳು(devolution Rules) ಮತ್ತು ಎರಡನೆಯದಾಗಿ ಗರಿಷ್ಠ ಮಿತಿಯ ನಿಗದಿಗೆ ಮತ್ತು ಗರಿಷ್ಠಮಿತಿಗಿಂತ ಹೆಚ್ಚುವರಿಯಿರುವ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಸಂಬಂಧಿಸಿದ ನಿಯಮಗಳು ಇವುಗಳನ್ನು ಮುಖ್ಯವಾಗಿ ಗಮನಿಸಬೇಕು.

ಅನೇಕ ರಾಜ್ಯಗಳಲ್ಲಿ ಗೇಣಿಗೆ ಕೊಟ್ಟಿರುವ ಭೂಮಿಗೆ ಸಂಬಂಧಿಸಿದ ವಾರಸುದಾರಿಕೆ ನಿಯಮಗಳು ವೈಯಕ್ತಿಕ ಕಾನೂನುಗಳಲ್ಲಿ ನಿರ್ದಿಷ್ಟಪಡಿಸಿರುವ ವಾರಸುದಾರಿಕೆ ಕ್ರಮಕ್ಕಿಂತ ಭಿನ್ನವಾಗಿವೆ. ಹಾಗೆ ಭಿನ್ನವಾಗಿರುವ ಎಲ್ಲ ನಿಯಮಗಳಲ್ಲಿಯೂ ಸುಗೋತ್ರಜರಾದ ಪುರುಷರಿಗೆ ಆದ್ಯತೆ. ವಿಧವೆಯರು ಪುರುಷವಾರಸುದಾರರಿಲ್ಲದಿದ್ದಲ್ಲಿ ಮಾತ್ರ, ಸೀಮಿತ ಹಕ್ಕನ್ನು ಮಾತ್ರ ಪಡೆಯುತ್ತಾರೆ. ಹರಿಯಾಣ, ಹಿಮಾಚಲ ಪ್ರದೇಶ, ಜಮ್ಮು ಮತ್ತು ಕಾಶ್ಮೀರ ಹಾಗೂ ಪಂಜಾಬ್ ರಾಜ್ಯಗಳಲ್ಲಿ ಹೆಣ್ಣುಮಕ್ಕಳು ಮತ್ತು ಅಕ್ಕ ತಂಗಿಯರನ್ನು ಸಂಪೂರ್ಣವಾಗಿ ಬಿಟ್ಟುಬಿಡಲಾಗಿದೆ. ದೆಹಲಿ ಮತ್ತು ಉತ್ತರಪ್ರದೇಶಗಳಲ್ಲಿ ಹೆಣ್ಣುಮಕ್ಕಳನ್ನು ಮತ್ತು ಸಹೋದರಿಯರನ್ನು ವಾರಸುದಾರರೆಂದು ಪರಿಗಣಿಸಿದರೂ ಅವರ ಸ್ಥಾನ ಅತ್ಯಂತ ಕೊನೆಯಲ್ಲಿ. ವಿಧವೆಯರು, ಸ್ತ್ರೀಯರು ಸೀಮಿತ ಹಕ್ಕನ್ನು ಹೊಂದಿದ್ದು ಅವರ ಮರಣಾನಂತರ (ನಿಕಟ ಪೂರ್ವದ ಪುರುಷ ಭೂಮಾಲೀಕನು) ಅವು ಗಂಡನ ವಾರಸುದಾರರಿಗೆ ಸೇರುತ್ತದೆಯೇ ವಿನಃ ಅವಳವಾರಸುದಾರಿಗಲ್ಲ. ವಿಧವೆ ಮತ್ತೆ ವಿವಾಹವಾದರೆ ಅಥವಾ ಭೂಮಿಯನ್ನು ಉಳುಮೆ ಮಾಡದೆ ಬಿಟ್ಟುಬಿಟ್ಟರೆ ಅವಳು ಅದನ್ನು ಕಳೆದುಕೊಳ್ಳುತ್ತಾಳೆ. ಗೇಣಿ ಭೂಮಿಯ ವಾರಸುದಾರಿಕೆ ಕುರಿತು ಪ್ರತ್ಯೇಕ ನಿಯಮಗಳನ್ನು ರಚಿಸದಿದ್ದರೆ ಆಯಾ ಧರ್ಮದವರಿಗೆ ಅನ್ವಯವಾಗುವ ವೈಯಕ್ತಿಕ ಕಾನೂನುಗಳೇ ಅನ್ವಯವಾಗುತ್ತದೆ. ಕರ್ನಾಟಕದಲ್ಲಿಯೂ ಈ ಕುರಿತು ವೈಯಕ್ತಿ ಕಾನೂನುಗಳೇ ಅನ್ವಯವಾಗುತ್ತದೆ.

ಭೂ ಸುಧಾರಣಾ ಕಾನೂನಿನ ಅಡಿಯಲ್ಲಿ ಗರಿಷ್ಠಮಿತಿಯನ್ನು ನಿಗದಿಪಡಿಸುವಲ್ಲಿಯೂ ಲಿಂಗತಾರತಮ್ಯ ಮಾಡಲಾಗಿದೆ. ಈ ಸಂಬಂಧದಲ್ಲಿ ಮೂರು ವಿಷಯಗಳಲ್ಲಿ ಸ್ತ್ರೀಪುರುಷರ ನಡುವೆ ತಾರತಮ್ಯವಾಗಿರುವುದನ್ನು ಗುರುತಿಸಬಹುದು. ಒಂದು: ಕುಟುಂಬದ ಪರಿಭಾಷೆ; ಎರಡು: ವಯಸ್ಕ ಗಂಡುಮಕ್ಕಳಿಗೆ ಹೆಚ್ಚುವರಿ ಹಂಚಿಕೆ ಆದರೆ ವಯಸ್ಕ ಹೆಣ್ಣುಮಕ್ಕಳಿಗೆ ಈ ಅವಕಾಶ ಇಲ್ಲದಿರುವುದು; ಮೂರು: ಪತಿಯನ್ನು ಒಂದು ಘಟಕ ಎಂದು ಪರಿಗಣಿಸಿರುವುದು ಆದರೆ ಪತ್ನಿಯನ್ನು ಒಂದು ಸ್ವತಂತ್ರ ಘಟಕವನ್ನಾಗಿ ಪರಿಗಣಿಸದೆ ಇರುವುದು.

ವಿವಿಧ ರಾಜ್ಯಗಳಲ್ಲಿ ಕುಟುಂಬದ ಪರಿಭಾಷೆಯಲ್ಲಿ ವ್ಯತ್ಯಾಸಗಳಿದ್ದರೂ, ಎಲ್ಲ ರಾಜ್ಯಗಳಲ್ಲಿಯೂ ವಯಸ್ಕ ಗಂಡುಮಕ್ಕಳನ್ನು ವಿಶೇಷವಾಗಿ ಕಾಣಲಾಗಿದೆ. ಜಮ್ಮು ಮತ್ತು ಕಾಶ್ಮೀರ, ಪಶ್ಚಿಮ ಬಂಗಾಳ, ಕರ್ನಾಟಕ, ಕೇರಳ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಮಾತ್ರವೇ ಅವಿವಾಹಿತ ಹೆಣ್ಣುಮಕ್ಕಳನ್ನು ಭೂಮಿಯ ಗರಿಷ್ಠಮಿತಿಯನ್ನು ನಿಗದಿಪಡಿಸುವಾಗ ಕುಟುಂಬದ ಸದಸ್ಯರನ್ನಾಗಿ ಪರಿಗಣಿಸುವುದು. ಉಳಿದ ಯಾವುದೇ ರಾಜ್ಯದಲ್ಲಿಯೂ ಅವಿವಾಹಿತ ಹೆಣ್ಣುಮಕ್ಕಳನ್ನು ಭೂಹಂಚಿಕೆಯ ಸಂದರ್ಭದಲ್ಲಿ ಸ್ವತಂತ್ರ ಘಟಕವಾಗಿ ಅಥವಾ ಕುಟುಂಬದ ಸದಸ್ಯಳನ್ನಾಗಿ ಪರಿಗಣಿಸಿಲ್ಲ. ಕುಟುಂಬದ ಸದಸ್ಯರನ್ನಾಗಿ ಅಥವಾ ಪ್ರತ್ಯೇಕ ಘಟಕ ಎಂದು ಪರಿಗಣಿಸಲಾದವರ ಜೀವನ ನಿರ್ವಹಣೆ ಈ ಗರಿಷ್ಠಮಿತಿಯ

ಭೂಹಂಚಿಕೆ ನಿಯಮಗಳ ಅಡಿಯಲ್ಲಿ ಹಂಚಿಕೆ ಮಾಡಲಾದ ಭೂಮಿಯಿಂದ ನಡೆಯುತ್ತವೆ ಎಂಬುದು ಭೂಮಿಯ ಗರಿಷ್ಠಮಿತಿಯನ್ನು ನಿಗದಿಪಡಿಸುವುದರ ಹಿಂದಿರುವ ತತ್ತ್ವ ಅಥವಾ ಪೂರ್ವಭಾವನೆ. ಆದರೆ ಮೇಲೆ ಹೇಳಿದ ಕೆಲವು ರಾಜ್ಯಗಳನ್ನು ಹೊರತುಪಡಿಸಿದರೆ ಉಳಿದ ಯಾವ ರಾಜ್ಯದಲ್ಲಿಯೂ ಅವಿವಾಹಿತ ಹೆಣ್ಣುಮಕ್ಕಳನ್ನು ಕುಟುಂಬದ ಸದಸ್ಯರನ್ನಾಗಿ ಪರಿಗಣಿಸದೆ ಇರುವುದರಿಂದ ಅವರ ಜೀವನ ನಿರ್ವಹಣೆಗೆ ಯಾವುದೇ ವ್ಯವಸ್ಥೆಯನ್ನು ಮಾಡಲಾಗಿಲ್ಲ. ಆದರೆ ಗಂಡುಮಕ್ಕಳ ವಯಸ್ಸು ಹಾಗು ಅವರ ವೈವಾಹಿಕ ಸ್ಥಾನಮಾನ ಏನೇ ಇದ್ದರೂ, ಹಂಚಿಕೆ ಸಮಯದಲ್ಲಿ ಅವರನ್ನು ಪರಿಗಣಿಸಲಾಗುತ್ತದೆ. ಹೀಗಾಗಿ ವಯಸ್ಕಗಂಡು ಮಕ್ಕಳು ತಾವೇ ಹೆಚ್ಚು ಭೂಮಿಯನ್ನು ಪಡೆಯುತ್ತಾರೆ. ಇಲ್ಲವೇ ಭೂಹಂಚಿಕೆ ಪಡೆಯುವಾಗ ಕುಟುಂಬಕ್ಕಾಗಿ ಹೆಚ್ಚಿನ ಭೂಮಿ ದೊರೆಯುತ್ತದೆ.

೧೯೭೦ರಲ್ಲಿ ಭೂಸುಧಾರಣೆಗಳ ಬಗ್ಗೆ ನಡೆದ ಮುಖ್ಯಮಂತ್ರಿಗಳ ಸಮ್ಮೇಳನದ ನಂತರ ೧೯೭೧ರಲ್ಲಿ ಕೇಂದ್ರ ಕೃಷಿ ಸಚಿವರ ಅಧ್ಯಕ್ಷತೆಯಲ್ಲಿ ಭೂಸುಧಾರಣೆಗಳ ಕೇಂದ್ರ ಸಮಿತಿಯೊಂದನ್ನು ರಚಿಸಲಾಯಿತು. ಇತರ ಶಿಫಾರಸುಗಳೊಡನೆ, ಎಲ್ಲ ರಾಜ್ಯಗಳಲ್ಲಿಯೂ ಕುಟುಂಬ ಎಂಬುದರ ಪರಿಭಾಷೆ ಒಂದೇ ಆಗಿರಬೇಕು ಮತ್ತು ಅದು ಒಬ್ಬ ಪುರುಷ, ಅವನ ಹೆಂಡತಿ ಮತ್ತು ಅವರ ಅಪ್ರಾಪ್ತ ವಯಸ್ಕ ಮಕ್ಕಳನ್ನು ಒಳಗೊಳ್ಳಬೇಕು. ಐದು ಮಂದಿಗಿಂತ ಹೆಚ್ಚಿರುವಲ್ಲಿ, ಐದು ಸದಸ್ಯರ ಕುಟುಂಬಕ್ಕೆ ಅನ್ವಯವಾಗುವ ಗರಿಷ್ಠಮಿತಿಯ ಎರಡರಷ್ಟು ಗರಿಷ್ಠಮಿತಿಗೆ ಒಳಪಟ್ಟು ಪ್ರತಿ ಹೆಚ್ಚಿನ ಸದಸ್ಯನಿಗೆ ಹೆಚ್ಚುವರಿ ಭೂಮಿಯನ್ನು ಹಂಚಿಕೆ ಮಾಡಬೇಕು ಎಂದು ಶಿಫಾರಸು ಮಾಡಿತ್ತು. ಆದರೆ ಈ ಶಿಫಾರಸುಗಳನ್ನು ಪುನರವಲೋಕಿಸಲೆಂದು ರಚಿಸಲಾದ ಉನ್ನತಾಧಿಕಾರ ಸಮಿತಿ ಇದನ್ನು ಒಪ್ಪಲಿಲ್ಲ. ಅದು, ಗರಿಷ್ಠಮಿತಿಯನ್ನು ಪತಿ ಪತ್ನಿ ಮೂವರು ಮಕ್ಕಳು, ಪ್ರಾಪ್ತವಯಸ್ಕ ಗಂಡುಮಕ್ಕಳೂ ಸೇರಿದಂತೆ (ಪ್ರಾಪ್ತ ಅಥವಾ ಅಪ್ರಾಪ್ತವಯಸ್ಕರಿರುವ) ಐದು ಸದಸ್ಯರ ಒಂದು ಕುಟುಂಬಕ್ಕೆ ಅನ್ವಯಿಸಬೇಕೆಂದು ಶಿಫಾರಸು ಮಾಡಿತು. ೧೯೭೨ರಲ್ಲಿ ಕೃಷಿ ಹಿಡುವಳಿಗಳ ಮೇಲೆ ಗರಿಷ್ಠಮಿತಿ ನಿಗದಿಯ ಬಗ್ಗೆ ನಡೆದ ಮುಖ್ಯಮಂತ್ರಿಗಳ ಸಮ್ಮೇಳನದಲ್ಲಿ, ಮೇಲಿನ ಎರಡೂ ಶಿಫಾರಸುಗಳನ್ನು ಪರಿಗಣಿಸಿ, ಕುಟುಂಬವನ್ನು ಪತಿ, ಪತ್ನಿ, ಅಪ್ರಾಪ್ತವಯಸ್ಕ ಮಕ್ಕಳು ಎಂದು ಪರಿಗಣಿಸಬೇಕು ಮತ್ತು ಐದುಮಂದಿಗಿಂತ ಹೆಚ್ಚಿನ ಸದಸ್ಯರಿದ್ದಲ್ಲಿ ಹಾಗೆ ಹೆಚ್ಚಿರುವ ಸದಸ್ಯರಿಗಾಗಿ ಹೆಚ್ಚುವರಿ ಭೂಮಿಯನ್ನು ಮಂಜೂರು ಮಾಡಬೇಕು. ಆದರೆ ಇದು ಐದುಮಂದಿಯ ಸದಸ್ಯರಿರುವ ಒಂದು ಕುಟುಂಬಕ್ಕೆ ನಿಗದಿಪಡಿಸಿರುವ ಗರಿಷ್ಠಮಿತಿಯ ಎರಡರಷ್ಟಕ್ಕಿಂತ ಹೆಚ್ಚಾಗುತಕ್ಕುದಲ್ಲ ಅಲ್ಲದೆ, ಪ್ರಾಪ್ತವಯಸ್ಕನಾದ ಪ್ರತಿಮಗನನ್ನು ಒಂದು ಪ್ರತ್ಯೇಕ ಘಟಕವೆಂದು ಪರಿಗಣಿಸಬೇಕು ಎಂಬ ಮಾನದಂಡವನ್ನು ಅಂಗೀಕರಿಸಲಾಯಿತು. ಸ್ತ್ರೀಪುರುಷ ತಾರತಮ್ಯ ಈ ನಿಯಮಗಳಲ್ಲೂ ವ್ಯಕ್ತಗೊಂಡಿತು. ಇಂದಿಗೂ ಈ ವಿಷಯಗಳಲ್ಲಿ ರಾಜ್ಯಗಳ ನಡುವೆ ಏಕರೂಪತೆಯಿಲ್ಲ. ಆದರೆ ಸ್ತ್ರೀಪುರುಷ ತಾರಮ್ಯ ಮಾತ್ರ ಎಲ್ಲೆಡೆ ಕಂಡುಬರುತ್ತದೆ.

ಈ ಮೇಲಿನ ನಿಯಮಗಳನ್ನು ಅವು ಸ್ತ್ರೀಪುರುಷ ತಾರತಮ್ಯದಿಂದ ಕೂಡಿವೆ ಆದ್ದರಿಂದ ಇವು ಮೂಲಭೂತಹಕ್ಕುಗಳನ್ನು ಉಲ್ಲಂಘಿಸುತ್ತದೆ ಹಾಗಾಗಿ ಅವು ಅಸಂವೈಧಾನಿಕ ಎಂದು ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿತ್ತು. ಆದರೆ, ೧೯೫೧ರಲ್ಲಿ ಸಂವಿಧಾನಕ್ಕೆ ತಂದ ಮೊದಲನೇ ತಿದ್ದುಪಡಿಯಲ್ಲಿಯೇ ಭೂಸುಧಾರಣಾ ಶಾಸನದ ಸಿಂಧುತ್ವದ ರಕ್ಷಣೆಗೆ ಒಂದು ಉಪಬಂಧವನ್ನು ಕಲ್ಪಿಸಲಾಗಿತ್ತು. ಸಂವಿಧಾನದ ೩೧ಬಿ ಅನುಚ್ಛೇದದಲ್ಲಿ ಸಂವಿಧಾನದ ಒಂಬತ್ತನೇ ಅನುಸೂಚಿಯಲ್ಲಿ ಹೇಳಲಾದ ಯಾವುದೇ ಅಧಿನಿಯಮವನ್ನೂ, ಅದು, ಭಾರತದ ಸಂವಿಧಾನದಿಂದ ದತ್ತವಾಗಿರುವ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತವೆ ಎಂಬ ಕಾರಣದ ಮೇಲೆ ಶೂನ್ಯವೆಂದು ಭಾವಿಸತಕ್ಕುದಲ್ಲ ಎಂದು ಉಪಬಂಧ ಕಲ್ಪಿಸಲಾಗಿದೆ. ಸ್ತ್ರೀಪುರುಷ ಅಸಮಾನತೆಯಿಂದ ಕೂಡಿರುವ ಈ ಎಲ್ಲ ಭೂಗರಿಷ್ಠಮಿತಿ ನಿಗದಿಪಡಿಸುವ ಕಾನೂನುಗಳೂ ಸಂವಿಧಾನದ ೯ನೇ ಅನುಸೂಚಿಯಲ್ಲಿಯೇ ಸೇರಿವೆ. ಹೀಗಾಗಿ ಯಾವುದೇ ಕಾರಣಕ್ಕಾಗಿಯೂ ಗರಿಷ್ಠಮಿತಿ ನಿಗದಿಪಡಿಸುವ ಕಾನೂನನ್ನು ಪ್ರಶ್ನಿಸುವ ಅವಕಾಶ ಇಲ್ಲವಾಗಿದೆ.

ಉತ್ತರ ಪ್ರದೇಶ ಜಮೀನ್ದಾರಿ ರದ್ದಿಯಾತಿ ಮತ್ತು ಭೂ ಸುಧಾರಣೆಗಳ ಅಧಿನಿಯಮ ೧೯೫೦ ಅನ್ನು ೧೯೮೦ರಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಈ ಪ್ರಕರಣದಲ್ಲಿ ಹೊರಬಿದ್ದ ತೀರ್ಪು ಅದರಲ್ಲಿನ ಸ್ತ್ರೀಪುರುಷ ಅಸಮಾನತೆಯ ಬಗ್ಗೆ ನ್ಯಾಯಾಧೀಶರು ತಳೆದ ನಿಲುವಿನ ದೃಷ್ಟಿಯಿಂದ ಮುಖ್ಯವಾಗುತ್ತದೆ. ಇದರಲ್ಲಿ ತೀರ್ಪುನೀಡಿದ ನ್ಯಾಯಾಧೀಶರು, ಮಹಿಳಾ ಹಕ್ಕುಗಳನ್ನು ಎತ್ತಿ ಹಿಡಿಯುವವರೆಂದೇ ಖ್ಯಾತರಾದ, ಸಮಸ್ಯೆಯ ತಲಸ್ಪರ್ಶಿ ಹಾಗೂ ಆಮೂಲಾಗ್ರ ವಿಶ್ಲೇಷಣೆಗೆ ಹೆಸರಾದಂಥ ಸನ್ಮಾನ್ಯ ಕೃಷ್ಣಅಯ್ಯರ್ ಅವರು. ಈ ಪ್ರಕರಣದಲ್ಲಿ ಪ್ರಶ್ನಿಸಿದ್ದು, ಇತರ ವಿಷಯಗಳ ಜೊತೆಗೆ, ಅಧಿನಿಯಮದಲ್ಲಿ, ಪ್ರಾಪ್ತವಯಸ್ಕ ಗಂಡುಮಕ್ಕಳಿಗೆ ಹೆಚ್ಚಿನ ಭೂಮಿಯನ್ನು ಮಂಜೂರು ಮಾಡುವ ಅವಕಾಶವಿದೆ. ಆದರೆ ಪ್ರಾಪ್ತವಯಸ್ಕ ಅವಿವಾಹಿತ ಹೆಣ್ಣುಮಕ್ಕಳಿಗೆ ಈ ರೀತಿಯ ಅವಕಾಶ ಕಲ್ಪಿಸದೆ ತಾರತಮ್ಯವೆಸಗಲಾಗಿದೆ ಎಂಬುದನ್ನು ಮತ್ತು ಗರಿಷ್ಠಮಿತಿಯನ್ನು ನಿಗದಿಪಡಿಸುವಾಗ ಪತ್ನಿ ಭೂಮಾಲೀಕಳಾಗಿರುವ ಸಂದರ್ಭದಲ್ಲಿಯೂ ಪತಿಯನ್ನೂ (ಹಿಡುವಳಿದಾರ) ಗೇಣಿದಾರನೆಂದು ಪರಿಗಣಿಸುವ ಮೂಲಕ ತಾರತಮ್ಯ ಮಾಡಲಾಗಿದೆ ಎಂಬುದನ್ನು ನ್ಯಾಯಮೂರ್ತಿ ಕೃಷ್ಣಅಯ್ಯರ್ ಅವರು ಈ ವಾದವನ್ನು ತಳ್ಳಿಹಾಕಿದರು. ಸಾಮಾಜಿಕವಾಗಿ ಅಪೇಕ್ಷಣೀಯವಾದುದನ್ನು ಧ್ವಂಸಗೊಳಿಸಲು ಲಿಂಗತಾರತಮ್ಯ ವನ್ನು ಮಾಧ್ಯಮವನ್ನಾಗಿ ಬಳಸಿಕೊಂಡು ಈ ಕ್ರಮವನ್ನು ನಾಶಗೊಳಿಸುವ ಯಾವುದೇ ವಾದಕ್ಕೂ ಅನುಮತಿ ನೀಡಲಾಗುವುದಿಲ್ಲ. ಪ್ರಾಪ್ತವಯಸ್ಕ ಗಂಡುಮಕ್ಕಳಿಗೆ ಹೆಚ್ಚುವರಿ ಭೂಮಿಯನ್ನು ಮಂಜೂರು ಮಾಡಬಹುದು. ಆದರೆ ಪ್ರಾಪ್ತವಯಸ್ಕ ಅವಿವಾಹಿತ ಹೆಣ್ಣುಮಕ್ಕಳಿಗೆ ಈ ಸೌಲಭ್ಯ ನೀಡಿಲ್ಲದಿರುವುದು ಲಿಂಗತಾರತಮ್ಯದಿಂದ ಕೂಡಿದೆ ಎಂಬುದನ್ನು. ನ್ಯಾಯಮೂರ್ತಿಗಳು ಒಪ್ಪಿಕೊಂಡರೂ. ಪ್ರಾಪ್ತವಯಸ್ಕ

ಮಗನಿಗೆ ನೀಡಲಾಗುವ ಹೆಚ್ಚುವರಿ ಭೂಮಿಯೂ ಒಡುವಳಿದಾರನಾದ ತಂದೆಗೇ ಸೇರುತ್ತದ್ದಾದ್ದರಿಂದ ಇದು ಅಂಥ ಹೆಚ್ಚಿನ ವ್ಯತ್ಯಾಸವನ್ನುಂಟು ಮಾಡುವುದಿಲ್ಲ ಎಂದು ಸಮರ್ಥಿಸಿಕೊಂಡಿದ್ದಾರೆ. ಅಲ್ಲದೆ ಗಂಡಂದಿರನ್ನು ಹಿಡುವಳಿದಾರರೆಂದು ಗುರುತಿಸಿ, ಹೆಂಡತಿಯರು ಭೂಮಾಲೀಕರಾಗಿರುವ ಸಂದರ್ಭದಲ್ಲಿಯೂ ಅವರನ್ನು ಹಿಡುವಳಿದಾರರೆಂದು ಗುರುತಿಸದಿರುವ ಬಗ್ಗೆ 'ಕಾನೂನು ಕ್ರಮವನ್ನು ಸರಳೀಕರಿಸಲು ಕೈಗೊಂಡ ಶಾಸನಾತ್ಮಕ ಕ್ರಮ' ಎಂದು ತೀರ್ಪಿನಲ್ಲಿ ಹೇಳಲಾಗಿದೆ. ಮತ್ತು 'ಎಲ್ಲಕ್ಕಿಂತ ಕೊನೆಯದಾಗಿ ನಮ್ಮ ಗ್ರಾಮೀಣ ಮಹಿಳೆಯರು ತಮ್ಮ ಗಂಡಂದಿರನ್ನು ಅವಲಂಬಿಸುತ್ತಾರೆ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಅವರ ಮೂಲಕ ಮಾತನಾಡುತ್ತಾರೆ' ಎಂದು ಸಮರ್ಥಿಸಿಕೊಂಡಿದ್ದಾರೆ. ಇದನ್ನು ಪುರುಷ ಪ್ರಧಾನ ಚಿಂತನೆಯ ಫಲ ಎಂದು ಬೇರೆ ಹೇಳಬೇಕಿಲ್ಲ.

ಗರಿಷ್ಠ ಮಿತಿಯನ್ನು ನಿಗದಿಪಡಿಸುವ ಕ್ರಮ ಹಾಗೂ ಕುಟುಂಬದ ಪರಿಭಾಷೆ ಇವುಗಳು ಭೂಸುಧಾರಣಾ ಕ್ರಮಗಳಿಗಷ್ಟೇ ಸೀಮಿತವಾಗದೆ, ಸ್ಥಳಾಂತರಿತ ವ್ಯಕ್ತಿಗಳ ಪುನರ್ವಸತಿ ಯೋಜನೆಗಳಿಗೂ ಅನ್ವಯಿಸುತ್ತದ್ದಾದ್ದರಿಂದ ಸ್ತ್ರೀಪುರುಷ ತಾರತಮ್ಯ ಅಂಥಯೋಜನೆಗಳಡಿಯಲ್ಲಿ ಭೂಮಂಜೂರು ಮಾಡುವಾಗಲೂ ವ್ಯಕ್ತಗೊಳ್ಳುತ್ತಿದೆ. ಇದಕ್ಕೆ ಗುಜರಾತಿನಲ್ಲಿ ನರ್ಮದಾ ಕಣಿವೆ ಅಣೆಕಟ್ಟು ಯೋಜನೆಯಿಂದ ಸ್ಥಳಾಂತರಗೊಳ್ಳುವ ಕೃಷಿ ಕುಟುಂಬಗಳಿಗೆ ಭೂಮಿಯನ್ನು ನೀಡುವ ಬಗೆಗಿನ ಯೋಜನೆಯನ್ನು ನೋಡಬಹುದು. ಒಂದು ಕುಟುಂಬವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಎರಡು ಹೆಕ್ಟೇರುಗಳನ್ನು ಹಾಗೂ ಪ್ರಾಪ್ತವಯಸ್ಕ ಮಗನಿಗೆ, ಪ್ರತಿಯೊಬ್ಬನಿಗೂ ಎರಡು ಹೆಕ್ಟೇರು ಭೂಮಿಯನ್ನು ಮಂಜೂರು ಮಾಡುವುದಾಗಿ ಭರವಸೆ ನೀಡಲಾಯಿತು. ಆದರೆ ಪ್ರಾಪ್ತವಯಸ್ಕ ಹೆಣ್ಣುಮಕ್ಕಳಿಗೆ ಹೆಚ್ಚುವರಿ ಭೂಮಿಯನ್ನು ಮಂಜೂರುಮಾಡಲು ಯಾವುದೇ ಉಪಬಂಧ ಕಾನೂನಿನಲ್ಲಿ ಇಲ್ಲ ಎಂಬುದನ್ನು ಗಮನಿಸಬೇಕಾಗುತ್ತದೆ. ಇದು ಲಿಂಗತಾರತಮ್ಯದಿಂದ ಕೂಡಿರುವುದಷ್ಟೇ ಅಲ್ಲದೆ ಪ್ರಾಪ್ತವಯಸ್ಕ ಗಂಡುಮಕ್ಕಳನ್ನು ಹೊಂದಿಲ್ಲದಿರುವುದಕ್ಕೆ ಕುಟುಂಬಗಳು ಕಷ್ಟಗಳನ್ನೆದುರಿಸಬೇಕಾದ ಪರಿಸ್ಥಿತಿಯುಂಟು ಮಾಡುತ್ತದೆ. ಪುನರ್ವಸತಿ ಕಲ್ಪಿಸಲು ಇಲ್ಲಿ ಅನುಸರಿಸುವ ಮಾನದಂಡ ಇತರ ಪುನರ್ವಸತಿ ಯೋಜನೆಗಳಿಗೆ ಪೂರ್ವನಿದರ್ಶನವಾಗುವ ಸಂಭವವಿರುವುದರಿಂದ ಇಲ್ಲಿ ಅಂತರ್ಗತವಾಗಿರುವ ಲಿಂಗತಾರತಮ್ಯವನ್ನು ತೊಡೆದು ಹಾಕಬೇಕಾಗಿರುವುದು ಹೆಚ್ಚು ಮುಖ್ಯವಾಗುತ್ತದೆ.

ಹೆಚ್ಚುವರಿ ಭೂಮಿಯ ನಿರ್ಧರಣೆಗೆ ಸಂಬಂಧಿಸಿದಂತೆ ಇರುವ ಮಾರ್ಗದರ್ಶನಗಳೂ ಸಹ ಲಿಂಗ ತಾರತಮ್ಯದಿಂದ ಕೂಡಿವೆ. ಕೃಷಿ ಹಿಡುವಳಿಗಳ ಗರಿಷ್ಠಮಿತಿ ನಿಗದಿಯ ಬಗ್ಗೆ ೧೯೭೨ರಲ್ಲಿ ನಡೆದ ಮುಖ್ಯಮಂತ್ರಿಗಳ ಸಮಾವೇಶದಲ್ಲಿ ಪತಿಪತ್ನಿಯರಿಬ್ಬರೂ ಪ್ರತ್ಯೇಕವಾಗಿ ತಮ್ಮ ಹೆಸರಿನಲ್ಲಿ ಭೂಮಿಯನ್ನು ಹೊಂದಿದ್ದರೆ ಆಗ ಹೆಚ್ಚುವರಿ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಪ್ರಮಾಣ ನಿರ್ಧರಣೆಯ ಬಗ್ಗೆ ಮಾರ್ಗದರ್ಶನ ಸೂತ್ರಗಳನ್ನು ಹೊರಡಿಸಲಾಗಿತ್ತು. ಈ ಮಾರ್ಗದರ್ಶನದಲ್ಲಿ "ಪತಿಪತ್ನಿಯರಿಬ್ಬರೂ

ಪ್ರತ್ಯೇಕವಾಗಿ ತಮ್ಮ ಹೆಸರಿನಲ್ಲಿ ಭೂಮಿಯನ್ನು ಹೊಂದಿದ್ದರೆ, ಗರಿಷ್ಠಮಿತಿಯನ್ನು ಅನ್ವಯಿಸುವುದಕ್ಕೆ ಮುನ್ನ ತಮ್ಮ ಹೆಸರಿನಲ್ಲಿ ಪ್ರತ್ಯೇಕವಾಗಿ ಹೊಂದಿದ್ದ ಭೂಮಿಯ ಮೌಲ್ಯಕ್ಕೆ ಪ್ರಮಾಣಾನುಸಾರವಾಗಿ ಗರಿಷ್ಠಮಿತಿಯೊಳಗೆ ಆಸ್ತಿಯನ್ನು ಹೊಂದಲು ಇಬ್ಬರೂ ಹಕ್ಕುಳ್ಳವರಾಗಿರುತ್ತಾರೆ" ಎಂದು ನಿರ್ದಿಷ್ಟಪಡಿಸಿತ್ತು.

ಕೆಲವು ದಕ್ಷಿಣ ಭಾಗದ ರಾಜ್ಯಗಳಲ್ಲಿ ಮಹಿಳೆಯರ ಹೆಸರಿನಲ್ಲಿರುವ ಭೂಮಿಗೆ ಸ್ವಲ್ಪಮಟ್ಟಿಗೆ ರಕ್ಷಣೆಯಿದೆ ಮತ್ತು ತಮಿಳುನಾಡಿನಲ್ಲಿ ಅವರಿಗೆ ವಿಶೇಷವಾದ ಮತ್ತು ಅನುಕೂಲಕರವಾದ ಉಪಬಂಧವನ್ನೂ ಮಾಡಲಾಗಿದೆ. ಆದರೆ ಆಚರಣೆಯಲ್ಲಿ ಮಾತ್ರ, ಬಹುಮಟ್ಟಿಗೆ ಯಾರಿಗೆ ಸೇರಿದ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂಬ ಬಗ್ಗೆ ಕಟ್ಟುನಿಟ್ಟಾದ ನಿಯಮಗಳಿಲ್ಲ ಮತ್ತು ಈ ಬಗ್ಗೆ ಪತಿಯನ್ನು ಮಾತ್ರವೇ ಸಮಾಲೋಚಿಸುವುದರಿಂದ ಬಹಳಷ್ಟು ಸಂದರ್ಭಗಳಲ್ಲಿ ಮಹಿಳೆ ಕಳೆದುಕೊಂಡಿರುವುದೇ ಹೆಚ್ಚು. ಇದರಿಂದಾಗಿ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಬಹುದಾದ ಪ್ರಮುಖ ಮತ್ತು ಏಕೈಕ ಮೂಲವೂ ಅವಳ ಪಾಲಿಗೆ ಇಲ್ಲವಾಗಿಬಿಡುತ್ತದೆ. ಇಂಥ ಸಂದರ್ಭಗಳಲ್ಲಿ ತಮ್ಮ ಹಕ್ಕನ್ನು ಚಲಾಯಿಸಲು ಮಹಿಳೆಯರು ಮುಂದೆ ಬರುವುದು ಅಪರೂಪ. ಈ ದೃಷ್ಟಿಯಿಂದ ಕಾನೂನಿನಲ್ಲಿ ಏಕರೂಪತೆಯನ್ನು ತರುವುದಕ್ಕಾಗಿ ಹಾಗೂ ಅದರಲ್ಲಿನ ಲಿಂಗತಾರತಮ್ಯವನ್ನೂ ತೆಗೆದುಹಾಕುವುದಕ್ಕಾಗಿ ಭೂಮಿಗೆ ಸಂಬಂಧಿಸಿದ ಈಗಿರುವ ಕಾನೂನುಗಳಿಗೆ ತಿದ್ದುಪಡಿ ಮಾಡುವುದು ಅವಶ್ಯಕವಾಗಿದೆ.

**ಅಡಿಟಿಪ್ಪಣಿಗಳು**

೧. ಹಿಂದೂ ಲಾ ಮತ್ತು ಯೂಸೇಜ್-ಮೇಯಿನ್ ೧೩ನೇ ಆವೃತ್ತಿ ೧೯೯೫

೨. ರಶ್ಮಿ ಕುಮಾರ್-ವಿ-ಮಹೇಶ್ ಕುಮಾರ್ ಭಾವ(೧೯೯೭)೨ ಎಸ್ ಸಿಸಿ ៩೯೭

## ಅಧ್ಯಾಯ ೫

# ಕೆಲವು ಮಾದರಿ ತೀರ್ಪುಗಳ ವಿಶ್ಲೇಷಣೆ

- ವಿವಾಹ ಸಂಬಂಧೀ ಪ್ರಕರಣಗಳು
- ಕ್ರಿಮಿನಲ್ ಪ್ರಕರಣಗಳು
- ಆಸ್ತಿಹಕ್ಕಿನ ಪ್ರಕರಣಗಳು

# ಕೆಲವು ಮಾದರಿ ತೀರ್ಪುಗಳ ವಿಶ್ಲೇಷಣೆ

## ವಿವಾಹ ಸಂಬಂಧೀ ಕಾನೂನುಗಳು

ಹಿಂದೂ ವಿವಾಹ ಅಧಿನಿಯಮ ೧೯೫೫ ಹಿಂದೂಗಳಿಗೆ ಅನ್ವಯಿಸುವ ವಿವಾಹ ಸಂಬಂಧಿ ವೈಯಕ್ತಿಕ ಕಾನೂನು. ಇದು ಒಂದೇ ಬಾರಿಗೆ ಹಿಂದೂ ವಿಧವಾ ಪುನರ್ವಿವಾಹ ನಿಷೇಧ, ಬಾಲ್ಯ ವಿವಾಹ ಹಾಗೂ ದ್ವಿಪತ್ನಿತ್ವ(ಅಥವಾ ಬಹುಪತ್ನಿತ್ವ)ವನ್ನು ನಿವಾರಿಸುವಂಥ ಪ್ರಗತಿಗಾಮಿ ವೈಯಕ್ತಿಕ ಕಾನೂನು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಸಮಾಜ ಸುಧಾರಣೆಯ ದೃಷ್ಟಿಯಿಂದ ಹಾಗೂ ಸಂವಿಧಾನದತ್ತ ಸ್ತ್ರೀಪುರುಷ ಸಮಾನತೆಯ ತತ್ತ್ವಕ್ಕೆ ಪೂರಕವಾಗಿ ಜಾರಿಗೆ ತರುವ ಯಾವುದೇ ಕಾನೂನು ಸಹ ಸ್ವಾಗತಾರ್ಹ. ಆದರೆ ಆ ಕಾನೂನುಗಳು ತಮ್ಮ ಇಚ್ಛಿತ ಗಮ್ಯವನ್ನು ತಲುಪುತ್ತದೆಯೇ ಎಂಬುದು ಅನೇಕ ಅಂಶಗಳನ್ನು ಅವಲಂಬಿಸುತ್ತದೆ.

ಒಂದು ಕಾನೂನು ಅದರ ರಚನೆಯ ಹಿಂದಿರುವ ಉದ್ದೇಶವನ್ನು ಸಾಧಿಸಿದಾಗ ಮಾತ್ರ ಅದು ಯಶಸ್ವಿಯಾದ ಕಾನೂನು ಎನಿಸಿಕೊಳ್ಳುತ್ತದೆ. ಕಾನೂನು ಅದರ ಹಿಂದಿರುವ ಉದ್ದೇಶವನ್ನು ಸಾಧಿಸಲಾಗದಿರುವುದಕ್ಕೆ ಕಾನೂನು ರಚನೆಯ ಹಂತದಲ್ಲಿರುವ ದೋಷ ಮುಖ್ಯವಾದ ಕಾರಣಗಳಲ್ಲೊಂದಾಗುತ್ತದೆ. ಈ ದೋಷಕ್ಕೆ

೧. ಬಳಸಿರುವ ಭಾಷೆಯಲ್ಲಿನ ಅಸ್ಪಷ್ಟತೆ

೨. ಪರ ಹಾಗೂ ವಿರೋಧ ಭಾವಾರ್ಥಗಳಿಗೆ ಎಡೆಕೊಡುವಂತೆ ವ್ಯಾಖ್ಯಾನ ಮಾಡುವ ಸಾಧ್ಯತೆಗಳಿರುವಂಥೆ ಭಾಷೆಯ(ಪದ) ಬಳಕೆ

೩. ಒಂದೇ ಪ್ರಕರಣದ ಎರಡು ಉಪಪ್ರಕರಣಗಳ ಅರ್ಥಸಂವಹನೆಯಲ್ಲಿರುವ ಅಸ್ಪಷ್ಟತೆ ಹಾಗೂ

೪. ನಿರ್ದಿಷ್ಟ ಪದ ಬಳಕೆಯಿಂದಾಗಿ ವಿಸ್ತೃತ ವ್ಯಾಖ್ಯಾನದ ಅಸಾಧ್ಯತೆ ಕಾರಣಗಳಾಗಬಹುದು.

ಕಾನೂನಿನಲ್ಲಿ ಬಳಸಿರುವ ನಿರ್ದಿಷ್ಟ ಸೀಮಿತ ಅರ್ಥವುಳ್ಳ ಪದದ ಬಳಕೆ ಕಾನೂನಿನ ಆ ಉಪಬಂಧದ ಆಶಯವನ್ನು ಹೇಗೆ ಮೊಟಕುಗೊಳಿಸಿಬಿಡಬಹುದು ಎಂಬುದಕ್ಕೆ ಹಿಂದೂ ವಿವಾಹ ಅಧಿನಿಯಮ ೧೯೫೫ರ ದ್ವಿಪತ್ನಿತ್ವವನ್ನು ಅಪರಾಧವನ್ನಾಗಿಸುವ ೧೭ನೇ ಪ್ರಕರಣದಲ್ಲಿ ಬಳಸಲಾಗಿರುವ Solemnisation

"ಅನುಷ್ಠಾನ" ಎಂಬ ಪದ ಒಂದು ಅತ್ಯುತ್ತಮ ಉದಾಹರಣೆ. ತೀರ್ಪು ಹೊರಬಿದ್ದ ಪ್ರಕರಣಗಳ ವಿಸ್ತೃತ ಪರ್ಯಾಲೋಚನೆ ಇದನ್ನು ಮತ್ತಷ್ಟು ವಿಷದ ಪಡಿಸುವುದರ ಜೊತೆಗೆ ವಾಸ್ತವಿಕ ನ್ಯಾಯ ಒದಗಿಸಬೇಕಾದರೆ ಕಾನೂನಿನ ವ್ಯಾಖ್ಯಾನದಲ್ಲಿ ನ್ಯಾಯಿಕ ಕ್ರಿಯಾಶೀಲತೆ ಎಷ್ಟು ಮಹತ್ವವಾದದ್ದು ಎಂಬುದನ್ನು ಮನಗಾಣಿಸುತ್ತದೆ. ಅರ್ಜಿದಾರಳಿಗೆ ಅನ್ಯಾಯವಾಗಿದೆಯೆಂದು ಪ್ರಕರಣದ ವಿವರಗಳಿಂದ ಮೇಲ್ನೋಟಕ್ಕೆ ಕಂಡು ಬಂದಾಗಲೂ ಅದನ್ನು ಕಡೆಗಣಿಸಿ ಕಾನೂನಿನ/ಕಾನೂನಿನಲ್ಲಿ ಬಳಸಿರುವ ಪದಗಳ ವಾಚ್ಯಾರ್ಥಕ್ಕೆ ಜೋತು ಬೀಳುವುದು, ಆ ಪ್ರಕಾರ ನ್ಯಾಯ ವಿತರಣೆ ಮಾಡುವುದು ನ್ಯಾಯವ್ಯವಸ್ಥೆಯ ವಿಡಂಬನೆಗಳಲ್ಲೊಂದು.

ದ್ವಿಪತ್ನಿತ್ವ ಹಿಂದೂ ವಿವಾಹ ಅಧಿನಿಯಮ ೧೯೫೫ರ ಪ್ರಕಾರ ಊರ್ಜಿತವಲ್ಲ, ಭಾರತ ದಂಡಸಂಹಿತೆಯ ೪೯೪ ಮತ್ತು ೪೯೫ನೇ ಪ್ರಕರಣಗಳ ಪ್ರಕಾರ ಒಂದು ದಂಡನೀಯ ಅಪರಾಧ.

ಶ್ರೀಮತಿ ಪ್ರಿಯಾ ಬಾಲಾ ಘೋಷ್ -ವಿ- ಸುರೇಶ್ ಚಂದ್ರಘೋಷ್ (ಎಐಆರ್ ೧೯೭೧, ಎಸ್ ಸಿ ೧೧೫೩) ಪ್ರಕರಣ ದ್ವಿಪತ್ನಿತ್ವ ಕುರಿತಂತೆ ಎದುರಾಗುವ ಕಾನೂನಿನ ನಿರ್ಬಂಧಗಳು, ಕಾನೂನಿನ ಆಶಯವನ್ನು(spirit of law) ಬದಿಗಿರಿಸಿ, ಕಾನೂನಿನಲ್ಲಿ ಬಳಕೆಯಾಗಿರುವ ಪದವನ್ನು ಅರ್ಥೈಸುವ ರೀತಿ, ಅದರ ಹಿಂದೆ ಕೆಲಸ ಮಾಡುವ ಪುರುಷಪ್ರಧಾನ ಚಿಂತನೆ ಇವುಗಳ ದೃಷ್ಟಿಯಿಂದ ಮುಖ್ಯವಾಗುತ್ತದೆ. ಈ ಪ್ರಕರಣದಲ್ಲಿ ತೀರ್ಪು ನೀಡುವ ಮುನ್ನ ಅವರ ತೀರ್ಪಿಗೆ ಬೆಂಬಲವಾಗಿ ಅಂಥದೇ ಪ್ರಕರಣಗಳಲ್ಲಿ ಹೊರಬಿದ್ದಿರುವ ತೀರ್ಪುಗಳು(Precedents), ಆ ತೀರ್ಪಿಗೆ ಆಧಾರವಾಗಿರುವ ಅಂಶಗಳನ್ನು ಆಧರಿಸುತ್ತಾರೆ. ಈ ಪ್ರಕರಣದಲ್ಲಿ ತೀರ್ಪುನೀಡುವಾಗ ಅವರು ಭಾವುರಾವ್ ಶಂಕರ್ ಲೋಖಂಡೆ-ವಿ-ಮಹಾರಾಷ್ಟ್ರ ರಾಜ್ಯ(೧೯೬೫), ೨ SCR ೮೩೭ (ಎಐಆರ್ ೧೯೬೫ ಎಸ್ ಸಿ ೧೫೬೪) ಪ್ರಕರಣ ಹಾಗೂ ಕನ್ವಲ್ ರಾಮ್ -ವಿ-ಹಿಮಾಚಲ ಪ್ರದೇಶ ಆಡಳಿತ(೧೯೬೬) (ಎಐಆರ್ ೧೯೬೬ ಎಸ್ ಸಿ ೬೧೪) ಪ್ರಕರಣವನ್ನು ಆಧರಿಸುತ್ತಾರೆ.

ಮೊದಲನೆಯದಾಗಿ ಭಾವುರಾವ್ ಶಂಕರ್ ಲೋಖಂಡೆ -ವಿ- ಮಹಾರಾಷ್ಟ್ರ ಪ್ರಕರಣದಲ್ಲಿ ಉಂಟಾದ ಪ್ರಶ್ನೆಯೆಂದರೆ, ದ್ವಿಪತ್ನಿತ್ವದ ಅಪರಾಧಕ್ಕಾಗಿ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕಣದ ಮೇರೆಗೆ ಕಾನೂನು ವ್ಯವಹರಣೆ ನಡೆಸಲು, ಎರಡನೆಯ ವಿವಾಹದಲ್ಲಿ ಅಗತ್ಯ ಧಾರ್ಮಿಕ ಆಚರಣೆಗಳನ್ನು ಅನುಸರಿಸಲಾಗಿದೆ ಎಂಬುದನ್ನು ರುಜುವಾತು ಪಡಿಸುವುದು ಅಗತ್ಯವೇ ಎಂಬುದು.

ಪತ್ನಿ ಜೀವಂತವಿರುವಾಗ ಮಾಡಿಕೊಂಡ ಮದುವೆ ಎನ್ನುವ ಕಾರಣಕ್ಕಾಗಿಯೇ ಶೂನ್ಯವಾಗುವ(void), ಎರಡನೆಯ ವಿವಾಹ ಮಾಡಿಕೊಂಡಿದ್ದಾನೆ ಎಂಬುದಕ್ಕಾಗಿ ಮೇಲಿನ ಪ್ರಕರಣದಲ್ಲಿ ಅವನನ್ನು ಭಾರತ ದಂಡ ಸಂಹಿತೆಯ ೪೯೪ ನೇ ಪ್ರಕರಣದ ಮೇರೆಗೆ ಅಪರಾಧಿ ಎಂದು ತೀರ್ಮಾನಿಸಲಾಗಿತ್ತು. ಆದರೆ

ಅಪೀಲುದಾರ, ಎರಡನೇ ವಿವಾಹವನ್ನು ಅಗತ್ಯ ಧಾರ್ಮಿಕ ಆಚರಣೆಗಳನ್ನನುಸರಿಸಿ ಮಾಡಿಕೊಳ್ಳಲಾಗಿದೆ ಎಂಬುದನ್ನು ಪ್ರಾಸಿಕ್ಯೂಷನ್ನಿನವರು ರುಜುವಾತುಪಡಿಸಬೇಕು ಎಂದು ವಾದಿಸಿದ. ಆದರೆ ರಾಜ್ಯ ಸರ್ಕಾರ ಭಾರತ ದಂಡಸಂಹಿತೆಯ ೪೯೪ ನೇ ಪ್ರಕರಣದ ಮೇರೆಗೆ ದ್ವಿಪತ್ನಿತ್ವ ಅಪರಾಧವೆನಿಸಬೇಕಾದರೆ ವಿವಾಹ ಎಲ್ಲ ಧಾರ್ಮಿಕ ಆಚರಣೆಗಳನ್ನು ಅನುಸರಿಸಿ ಮಾಡಿಕೊಂಡ ಊರ್ಜಿತ ವಿವಾಹವೇ ಆಗಿರಬೇಕಿಲ್ಲ, ಮೊದಲನೇ ಹೆಂಡತಿ ಜೀವಂತವಿರುವಾಗಿ ವಿವಾಹ ಮಾಡಿಕೊಂಡರೆ, ಕಾನೂನು ಮಾನ್ಯವಾಗಿರಲಿ ಅಥವಾ ಇಲ್ಲದಿರಲಿ, ಅದು ಅಪರಾಧವೆನಿಸುತ್ತದೆ ಎಂದು ವಾದಿಸಿತು. ಆದರೆ ಸರ್ವೋಚ್ಚ ನ್ಯಾಯಾಲಯ ರಾಜ್ಯಸರ್ಕಾರದ ವಾದವನ್ನು ತಳ್ಳಿಹಾಕಿ ಈ ಮುಂದಿನಂತೆ ಅಭಿಪ್ರಾಯಪಟ್ಟಿತು. "ಯಾರೇ ವಿವಾಹಿತನಾದರೆ ಎಂದರೆ, 'ಕಾನೂನು ಸಮ್ಮತವಾಗಿ ವಿವಾಹವಾದರೆ' ಅಥವಾ 'ವಿವಾಹವಾದರೆ ಮತ್ತು ಅಂಥ ವಿವಾಹ ಕಾನೂನು ಸಮ್ಮತವಾಗಿದ್ದರೆ' ಎಂದು ಅರ್ಥ. ವಿವಾಹಿತ ಪಕ್ಷಕಾರರಿಗೆ ಅನ್ವಯವಾಗುವ ಕಾನೂನಿನ ಪ್ರಕಾರ ವಿವಾಹ ಕಾನೂನು ಸಮ್ಮತ ವಿವಾಹವಾಗಿದ್ದರೆ, ಅದು ಮೊದಲನೆಯ ಪತ್ನಿಯ ಜೀವಿತಕಾಲದಲ್ಲಿ ನಡೆದ ವಿವಾಹವಾದ್ದರಿಂದ ಅದು ಶೂನ್ಯ ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ವಿವಾಹ ಕಾನೂನು ಸಮ್ಮತ ವಿವಾಹವಾಗಿಲ್ಲದಿರುವಲ್ಲಿ ಅಂಥ ವಿವಾಹ ಕಾನೂನಿನ ಕಣ್ಣಿನಲ್ಲಿ ವಿವಾಹವೇ ಆಗುವುದಿಲ್ಲ". ಇನ್ನು ಮುಂದುವರಿದು, ಹಿಂದು ವಿವಾಹ ಅಧಿನಿಯಮದ ೧೭ನೇ ಪ್ರಕರಣದಲ್ಲಿ ಬಳಸಲಾಗಿರುವ (solemnize) 'ಅನುಷ್ಠಾನ' ಎಂಬ ಪದವನ್ನು ಸದರಿ ಪ್ರಕರಣದಲ್ಲಿ ವ್ಯಾಖ್ಯಾನ ಮಾಡಲಾಯಿತು.

"ವಿವಾಹದ ಸಂದರ್ಭದಲ್ಲಿ 'ಅನುಷ್ಠಾನಗೊಳಿಸುವುದು' ಎಂಬ ಪದಕ್ಕೆ ಸಂಕ್ಷಿಪ್ತ ಆಕ್ಸ್‌ಫರ್ಡ್ ನಿಘಂಟಿನಲ್ಲಿ ಸರಿಯಾದ ಆಚರಣೆಗಳೊಂದಿಗೆ ಮತ್ತು ವಿದ್ಯುಕ್ತ ರೀತಿಯಲ್ಲಿ ವಿವಾಹವನ್ನು ನೆರವೇರಿಸುವುದು ಎಂಬ ಅರ್ಥವಿದೆ. ಆದ್ದರಿಂದ ವಿವಾಹವನ್ನು ಸರಿಯಾದ ಆಚರಣೆಗಳಿಂದ ಮತ್ತು ವಿದ್ಯುಕ್ತ ರೀತಿಯಲ್ಲಿ ಆಚರಿಸಿದ ಅಥವಾ ನೆರವೇರಿಸಿದ ಹೊರತು ವಿವಾಹವನ್ನು 'ಅನುಷ್ಠಾನಗೊಳಿಸಲಾಗಿದೆ' ಎಂದು ಹೇಳಲಾಗುವುದಿಲ್ಲ. ಆದ್ದರಿಂದ, ಅಧಿನಿಯಮದ ೧೭ನೇ ಪ್ರಕರಣದ ಉದ್ದೇಶಕ್ಕಾಗಿ, ಅಧಿನಿಯಮದ ಉಪಬಂಧಗಳ ಕಾರಣದಿಂದ ಭಾರತ ದಂಡಸಂಹಿತೆಯ ೪೯೪ನೇ ಪ್ರಕರಣವು ಅನ್ವಯಿಸುವಂಥ ವಿವಾಹವು ಸರಿಯಾದ ಆಚರಣೆಗಳಿಂದ ಮತ್ತು ವಿದ್ಯುಕ್ತ ರೀತಿಯಲ್ಲಿ ಆಚರಿಸಿದಂಥ ವಿವಾಹವಾಗಿರ ತಕ್ಕುದು..."

ಮೇಲಿನ ಎರಡು ಉದ್ಧೃತ ಭಾಗಗಳಿಂದ ಎರಡು ಅಂಶಗಳು ಸ್ಪಷ್ಟವಾಗುತ್ತವೆ.

೧. ಪತ್ನಿ ಜೀವಂತವಿರುವಾಗಲೇ ಪ್ರತಿವಾದಿ ಇನ್ನೊಂದು ವಿವಾಹವಾದ ಎಂಬ ಕಾರಣ ಮಾತ್ರದಿಂದಲೇ ಆ ವಿವಾಹ ಶೂನ್ಯವಾಗುವುದಿಲ್ಲ ಮತ್ತು ಆ ಕಾರಣಕ್ಕಾಗಿ ಭಾ.ದಂ.ಸಂ.ಯ ೪೯೪ನೇ ಪ್ರಕರಣದ ಮೇರೆಗೆ ಅಪರಾಧವೆನಿಸುವುದಿಲ್ಲ.

೨. ಎರಡನೇ ವಿವಾಹವನ್ನು ಅನುಷ್ಠಾನಗೊಳಿಸಲಾಗಿದೆ ಎಂದು ಭಾವಿಸಬೇಕಾದರೆ ಆ ವಿವಾಹವನ್ನು ಧಾರ್ಮಿಕ ಆಚರಣೆಗಳ ಪ್ರಕಾರ ವಿಧ್ಯುಕ್ತ ರೀತಿಯಲ್ಲಿ ನೆರವೇರಿಸಿರಬೇಕು. ಈ ಎರಡೂ ಅಂಶಗಳನ್ನು ಪ್ರಸ್ತುತ ಪ್ರಕರಣದಲ್ಲಿ ಆಧರಿಸಲಾಯಿತು.

ಮತ್ತೊಂದು ಪ್ರಕರಣವಾದ ಕನ್ವಲ್ ರಾಮ್ -ವಿ-ಹಿಮಾಚಲ ಪ್ರದೇಶ ಆಡಳಿತ ಪ್ರಕರಣದಲ್ಲಿ ಮೇಲೆ ಹೇಳಿದ ಎರಡು ಅಂಶಗಳನ್ನು ಒತ್ತಿ ಹೇಳಲಾಯಿತು. ಇದಲ್ಲದೆ ಇದರಲ್ಲಿ ವ್ಯಕ್ತವಾದ ಮತ್ತೊಂದು ಅಂಶವೆಂದರೆ-

"ದ್ವಿಪತ್ನಿತ್ವ ಅಥವಾ ವ್ಯಭಿಚಾರವನ್ನು ರುಜುವಾತುಪಡಿಸುವ ಉದ್ದೇಶಕ್ಕಾಗಿ, ಆರೋಪಿಯೇ ವಿವಾಹವಾದುದನ್ನು ಒಪ್ಪಿಕೊಂಡರೂ, ಅದು ವಿವಾಹಕ್ಕೆ ಸಾಕ್ಷ್ಯವಲ್ಲ" ಎಂಬುದು. ಬಹುಶಃ ಇದಕ್ಕಿಂತ ಮತ್ತೊಂದು ವಿಪರ್ಯಾಸವಿಲ್ಲ. 'ತಾನು ಎರಡನೇ ವಿವಾಹವಾಗಿದ್ದೇನೆ' ಎಂದು ಆರೋಪಿಯೇ ಒಪ್ಪಿಕೊಂಡ ನಂತರವೂ ಸಾಕ್ಷಿಗಳು ಅದನ್ನು ಸರಿಯಾಗಿ ರುಜುವಾತು ಪಡಿಸಲಿಲ್ಲ ಎಂಬ ಕಾರಣಕ್ಕಾಗಿ ಅಪರಾಧ ಸಾಬೀತಾಗಿಲ್ಲ ಎಂಬ ನಿಲುವನ್ನು ತಳೆಯುವುದಾದರೆ, ಮಹಿಳೆಯರಿಗೆ ವಾಸ್ತವಿಕ ನ್ಯಾಯ ದೊರೆಯುವುದು ಎಷ್ಟು ದೂರದ ಮಾತು ಎಂಬುದು ಸ್ವಯಂಸ್ಪಷ್ಟ.

'ಎರಡನೆಯ ವಿವಾಹದ ಬಗ್ಗೆ ಆರೋಪಿ ತಾನೇ ಒಪ್ಪಿಕೊಂಡಾಗ ಅಂಥ ಒಪ್ಪಿಗೆ ಎರಡನೇ ವಿವಾಹಕ್ಕೆ ನಿರ್ಣಾಯಕ ಸಾಕ್ಷ್ಯವಾಗುತ್ತದೆ. ಆದ್ದರಿಂದ ಬೇರೆ ಯಾವುದೇ ಸಾಕ್ಷ್ಯವನ್ನೂ ಅಗತ್ಯಪಡಿಸದೆ, ಹಾಗೆ ಒಪ್ಪಿಕೊಂಡಿದುದರ ಆಧಾರದ ಮೇಲೆ ಅವನನ್ನು ಅಪರಾಧಿಯೆಂದು ನಿರ್ಣಯಿಸಬಹುದು' ಎಂಬ ವಾದವನ್ನು ಸರ್ವೋಚ್ಚ ನ್ಯಾಯಾಲಯ ತಳ್ಳಿಹಾಕಿತು. ಈ ವಾದವನ್ನು ತಳ್ಳಿಹಾಕಲು ಸರ್ವೋಚ್ಚ ನ್ಯಾಯಾಲಯ ನೀಡಿದ ಕಾರಣ "ಎರಡನೇ ವಿವಾಹವನ್ನು ಕಾನೂನು ಮಾನ್ಯಗೊಳಿಸುವ ಧಾರ್ಮಿಕ ಆಚರಣೆಗಳ ನೆರವೇರಿಕೆಯನ್ನು ರುಜುವಾತುಪಡಿಸಬೇಕು" ಎಂಬುದು.

ಪ್ರಸ್ತುತ ಪ್ರಕರಣದ ತೀರ್ಪಿನಲ್ಲಿಯೇ ಕೊಟ್ಟಿರುವ ವಿವರಗಳಿಂದ ಈ ಮುಂದಿನ ಅಂಶಗಳನ್ನು ಗ್ರಹಿಸಬಹುದು. ಅಪೀಲುದಾರಳಾದ ಪ್ರಿಯಾಬಾಲಾ ಘೋಷ್, ದಂಡಪ್ರಕ್ರಿಯಾ ಸಂಹಿತೆಯ ೪೮೮ನೇ ಪ್ರಕರಣದ ಅಡಿಯಲ್ಲಿ ಜೀವನಾಂಶಕ್ಕಾಗಿ ಅರ್ಜಿ ಹಾಕಿದ್ದಳು. ಇದಕ್ಕೆ ಉತ್ತರವಾಗಿ ಪ್ರತಿವಾದಿ(ಸುರೇಶ್ ಚಂದ್ರಘೋಷ್) ಸಲ್ಲಿಸಿದ ಪ್ರತ್ಯರ್ಜಿಯಲ್ಲಿ ತಾನು ಎರಡನೇ ವಿವಾಹವಾಗಿರುವುದನ್ನು ಒಪ್ಪಿಕೊಂಡಿದ್ದಾನೆ. ಅವನು ವಾದಿ(ಪ್ರಿಯಾ)ಯ ವಿರುದ್ಧ ದುರ್ವರ್ತನೆಯ ಅನೇಕ ಆರೋಪಗಳನ್ನು ಹೊರಿಸಿ ಎರಡನೇ ವಿವಾಹವಾಗುವುದು ತನಗೆ ಅನಿವಾರ್ಯವಾಯಿತು ಎಂದು ಹೇಳಿದ್ದಾನೆ. ಇದರ ಹೊರತು ಬೇರೆ ಯಾವುದೇ ವಿವರಗಳನ್ನು ಅವನು ಕೊಟ್ಟಿಲ್ಲ. ಇದನ್ನು ಆಧರಿಸಿ ವಿಚಾರಣಾ ನ್ಯಾಯಾಲಯ ಪ್ರತಿವಾದಿ ಎರಡನೇ ವಿವಾಹವನ್ನು ಮಾಡಿಕೊಂಡಿದ್ದ ಎಂಬ ನಿರ್ಣಯಕ್ಕೆ ಬಂದಿದೆ.

ಪ್ರಕರಣ ಉಚ್ಚ ನ್ಯಾಯಾಲಯದ ಮುಂದೆ ಬಂದಾಗ ಪ್ರಿಯಾ ಮೇಲೆ ಆಧರಿಸಿದ ಪ್ರತಿವಾದಿಯ ಹೇಳಿಕೆಯನ್ನು ಆಧರಿಸಿಲ್ಲ. ಆದರೆ ಇದಕ್ಕೂ ಮುಂಚೆ ಪ್ರತಿವಾದಿ ಸಂಧ್ಯಾರಾಣಿ ಎಂಬುವಳೊಡನೆ ಎರಡನೆಯ ವಿವಾಹವಾಗಿದ್ದಾನೆಂದು ಆರೋಪಿಸಿ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ ದೂರು ನೀಡಿದ್ದಳು. ಆದರೆ ಆ ನಿರ್ದಿಷ್ಟ ನ್ಯಾಯಾಲಯ ಅಧಿಕಾರವ್ಯಾಪ್ತಿಯನ್ನು ಹೊಂದಿಲ್ಲವೆಂಬ ಕಾರಣಕ್ಕೆ ದೂರನ್ನು ಹಿಂತೆಗೆದುಕೊಳ್ಳಲಾಗಿತ್ತು. ಅದರಲ್ಲಿ ಸಂಧ್ಯಾರಾಣಿಯನ್ನು ಸಾಕ್ಷಿಯಾಗಿ ಕರೆಸಬೇಕೆಂದು ಕೋರಲಾಗಿತ್ತು. ಈ ಅರ್ಜಿಗೆ ಪ್ರತಿಯಾಗಿ ಪ್ರತಿವಾದಿಯು ಸಲ್ಲಿಸಿದ ಪ್ರತ್ಯರ್ಜಿಯಲ್ಲಿ ಅವನು ಸಂಧ್ಯಾರಾಣಿಯನ್ನು ತನ್ನ ಪತ್ನಿ ಎಂದು ಮತ್ತು ವಾದಿ(ಪ್ರಿಯಾಳ)ಯ ದುರ್ವರ್ತನೆಯಿಂದಾಗಿ ತಾನು ಅವಳನ್ನು ಮದುವೆಯಾಗಿದ್ದು ಉಂಟು ಎಂಬುದನ್ನು ಒಪ್ಪಿಕೊಂಡಿದ್ದ. ತಾನು ಸಂಧ್ಯಾರಾಣಿಯನ್ನು ಮದುವೆಯಾಗಿದ್ದೆ ಎಂಬ ಆರೋಪಿಯ ಹೇಳಿಕೆಯನ್ನು ಎರಡನೇ ಮದುವೆಯ ವಾಸ್ತವಾಂಶದ ಒಪ್ಪಿಗೆ ಎಂಬುದಾಗಿ ಸ್ವೀಕರಿಸಬಹುದೇ ಎಂಬುದನ್ನು ಉಚ್ಚ ನ್ಯಾಯಾಲಯ ಪರಿಶೀಲಿಸಿ ಪ್ರತಿವಾದಿಯ ಹೇಳಿಕೆ ತಪ್ಪೊಪ್ಪಿಗೆಯ ಹೇಳಿಕೆ(confession statement) ಆಗಿದ್ದು, ಅದನ್ನು ಎರಡನೆ ಮದುವೆಯ ರುಜುವಾತಾಗಿ ಸ್ವೀಕರಿಸಲು ಎರಡು ಕಾರಣಗಳಿಗಾಗಿ ನಿರಾಕರಿಸಿತು. ಮೊದಲನೆಯದಾಗಿ ಪ್ರತಿವಾದಿಯನ್ನು ದಂಡಪ್ರಕ್ರಿಯಾ ಸಂಹಿತೆಯ ೩೪೨ನೇ ಪ್ರಕಣದ ಮೇರೆಗೆ ಪರೀಕ್ಷಿಸುವಾಗ ಈ ಹೇಳಿಕೆಯ ಬಗ್ಗೆ ವಿವರಣೆ ನೀಡಲು ಅವನಿಗೆ ಅವಕಾಶ ಕೊಟ್ಟಿಲ್ಲ. ಎರಡನೆಯದಾಗಿ, ಈ ಹೇಳಿಕೆಯನ್ನು ಪರಿಗಣನೆಗೆ ತೆಗೆದುಕೊಂಡರೂ ವಿವಾಹವೊಂದು ಕಾನೂನು ಸಮ್ಮತವಾಗಲು ಅಗತ್ಯವಾದ ಆಚರಣೆಗಳನ್ನು ನೆರವೇರಿಸಿದೆ ಎಂಬುದನ್ನು ಅದು ರುಜುವಾತು ಪಡಿಸುವುದಿಲ್ಲ ಎಂಬುದು.

ವಾದಿಯ(ಅಪೀಲುದಾರಳು- ಪ್ರಿಯಾ ಬಾಲಾ) ಪರ ವಾದಿಸಿದ ಮಜೂಮ್‌ದಾರ್, ಸರ್ವೋಚ್ಚ ನ್ಯಾಯಾಲಯ ಭರತ್ ಸಿಂಗ್ -ವಿ-ಭಾಗೀರಥಿ (ಎಐಆರ್೧೯೬೬ ಎಸ್‌ಸಿ ೪೦೫) ಪ್ರಕರಣದಲ್ಲಿ ನೀಡಿದ ತೀರ್ಪನ್ನು ಆಧರಿಸಿದ್ದರು. ಆ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಹೀಗೆ ಅಭಿಪ್ರಾಯ ಪಟ್ಟಿತು. "ಭಾರತೀಯ ಸಾಕ್ಷ್ಯ ಅಧಿನಿಯಮದ ೧೭ ಮತ್ತು ೨೧ನೇ ಪ್ರಕರಣಗಳ ದೃಷ್ಟಿಯಿಂದ ಪಕ್ಷಕಾರನ ತಪ್ಪೊಪ್ಪಿಗೆ ಹೇಳಿಕೆಗಳು ತಮ್ಮಷ್ಟಕ್ಕೆ ಮುಖ್ಯ ಸಾಕ್ಷ್ಯವೆನಿಸಿಕೊಳ್ಳುತ್ತವೆ. (snbstantive evidence). ಆ ಹೇಳಿಕೆಗಳು ರುಜುವಾತಾದರೆ, ಅಂಥ ಹೇಳಿಕೆಗಳನ್ನು ನೀಡಿದ ಪಕ್ಷಕಾರನನ್ನು ಸಾಕ್ಷಿ ಕಟ್ಟೆಗೆ ಕರೆಸಲಿ ಕರೆಸದೆ ಇರಲಿ ಅಥವಾ ಆ ಹೇಳಿಕೆಗಳನ್ನು ಮತ್ತೊಮ್ಮೆ ಅವನು ಪರಿಶೀಲಿಸಲಿ ಅಥವಾ ಪರಿಶೀಲಿಸದಿರಲಿ ಅವುಗಳನ್ನು ಸಾಕ್ಷ್ಯವೆಂದು ಅವಲಂಬಿಸಬಹುದು."

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಪ್ರಿಯಾಬಾಲಾ ಘೋಷ್ -ವಿ- ಸುರೇಶ್ ಚಂದ್ರಘೋಷ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪು ಪಕ್ಷಕಾರರಿಗೆ ಅನ್ವಯವಾಗುವ ಕಾನೂನಿನ

ಪ್ರಕಾರ ಹೋಮ ಮತ್ತು ಸಪ್ತಪದಿ ವಿವಾಹದ ಅಗತ್ಯ ಆಚರಣೆಗಳು ಮತ್ತು ಪ್ರತಿವಾದಿ ಸಂಧ್ಯಾರಾಣಿಯನ್ನು ವಿವಾಹವಾಗಿದ್ದಾನೆ ಎಂದು ಹೇಳಿದರೂ ಈ ಅಗತ್ಯ ಆಚರಣೆಗಳನ್ನು ನೆರವೇರಿಸಿದ ಬಗ್ಗೆ ಸಾಕ್ಷ್ಯವಿಲ್ಲ ಎಂಬುದನ್ನು ಸತ್ರ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯ ಸಂದೇಹಕ್ಕೆ ಆಸ್ಪದವಿಲ್ಲದಂತೆ ಕಂಡುಕೊಂಡಿವೆ. ಆದ್ದರಿಂದ ಪ್ರತಿವಾದಿಯ ಹೇಳಿಕೆಯನ್ನು ಆಧಾರವನ್ನಾಗಿ ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಮೇಲಿನ ಈ ಕಾರಣಗಳಿಗಾಗಿ ಅಪೀಲನ್ನು ವಜಾಗೊಳಿಸಲಾಗಿದೆ. ಎಂದರೆ ತೀರ್ಪು ಪ್ರಿಯಾಬಾಲಾಳ ವಿರುದ್ಧವಾಗಿತ್ತು.

ಪ್ರಕರಣದಲ್ಲಿ ಪ್ರಿಯಾಬಾಲಾಳ ಪರವಾಗಿ ತೀರ್ಪು ಹೊರ ಬೀಳಬಹುದಿತ್ತು ಎಂಬುದಕ್ಕೆ ಕಾರಣಗಳು ಅವಳ ವಿರುದ್ಧ ಹೊರಬಿದ್ದ ತೀರ್ಪಿನ ಅಧ್ಯಯನದಿಂದಲೇ ದೊರೆಯುತ್ತದೆ ಎಂಬುದು ಒಂದು ವಿಪರ್ಯಾಸ.

ಕಾನೂನಿನ ಆಶಯವನ್ನು ಕಡೆಗಣಿಸಿ ಕಾನೂನಿನ ವಾಚ್ಯಾರ್ಥಕ್ಕೆ ಕಟ್ಟುಬಿದ್ದು, ತೀರ್ಪು ನೀಡಿದಾಗ, ಮಹಿಳೆ ಎಷ್ಟು ಅಸಹಾಯಕಳಾಗುತ್ತಾಳೆ. ಅವಳ ಸಾಮಾಜಿಕ ಸ್ಥಿತಿಗತಿಯನ್ನು ಸುಧಾರಿಸಲು ರೂಪುಗೊಂಡ ಕಾನೂನು ಇದ್ದಾಗ್ಯೂ ಸಹ ಅವಳಿಗೆ ಹೇಗೆ ಅನ್ಯಾಯವಾಗುತ್ತದೆ ಎಂಬುದಕ್ಕೆ ಶ್ರೀಮತಿ ಲಕ್ಷ್ಮೀದೇವಿ -ವಿ- ಸತ್ಯನಾರಾಯಣ ಮತ್ತಿತರರ ಪ್ರಕರಣ ಸಾಕ್ಷಿ. ಇಲ್ಲಿ ಸತ್ಯನಾರಾಯಣ ಎಂಬಾತ ಭಾರತ ದಂಡ ಸಂಹಿತೆಯ ೪೯೪ ನೇ ಪ್ರಕರಣದ ಮೇರೆಗೆ ಅಪರಾಧ(ದ್ವಿಪತ್ನಿತ್ವ)ವೆಸಗಿದ್ದಾನೆಂದು ಆರೋಪಿಸಲಾಗಿತ್ತು. ವಿಚಾರಣೆ ಬಿಕನೀರ್‌ನ ನ್ಯಾಯಿಕ ಮ್ಯಾಜಿಸ್ಟ್ರೇಟ್ ಸಂ.೧ ಇವರ ಮುಂದೆ ನಡೆಯಿತು. ಆ ಸಮಯದಲ್ಲಿ ಎರಡನೇ ಮದುವೆ ನಡೆದಿದೆ ಎಂಬುದಕ್ಕೆ ಸಪ್ತಪದಿಯ ಆಚರಣೆ ನಡೆದಿರುವ ಬಗ್ಗೆ ಪ್ರಾಸಿಕ್ಯೂಷನ್ ಅವರು ಸರಿಯಾಗಿ ರುಜುವಾತು ಪಡಿಸಿಲ್ಲ ಎಂದು ಅಭಿಪ್ರಾಯ ಪಡಲಾಯಿತು. ಉಚ್ಚ ನ್ಯಾಯಾಲಯವೂ ಸಹ ಇದೇ ಅಭಿಪ್ರಾಯವನ್ನು ಎತ್ತಿ ಹಿಡಿಯಿತು. ಈಗ, ಸರ್ವೋಚ್ಚ ನ್ಯಾಯಾಲಯದಲ್ಲಿ ಅಪೀಲು ಹೂಡಿದುದರ ಪರಿಣಾಮ ಇದು ಸರ್ವೋಚ್ಚ ನ್ಯಾಯಾಲಯದ ಮುಂದೆ ವಿಚಾರಣೆ ನಡೆಯಿತು.(೧೯೯೪ ೫ ಎಸ್‌ಸಿಸಿ ೫೪೫)

ಹಿಂದೆ ಪ್ರಿಯಾಬಾಲಾಳ ಪ್ರಕರಣದಲ್ಲಿ ತೀರ್ಪು ನೀಡುವಲ್ಲಿ ನ್ಯಾಯಾಧೀಶರು ಯಾವ ಪೂರ್ವ ನಿದರ್ಶನಗಳನ್ನು ಆಧರಿಸಿದ್ದರೋ ಅದನ್ನೇ ಇಲ್ಲಿಯೂ ಆಧರಿಸಲಾಯಿತು. ಆದರೆ ಇಲ್ಲಿ 'ಸಪ್ತಪದಿ'ಯ ಆಚರಣೆಯೊಂದನ್ನು ಬಿಟ್ಟು ಎರಡನೇ ವಿವಾಹ ನಡೆದಿತ್ತು ಎಂಬುದಕ್ಕೆ ಎಲ್ಲ ಸಾಕ್ಷ್ಯಗಳೂ ಇದ್ದವು. ಪರ ಹಾಗೂ ವಿರುದ್ಧ ವಾದಗಳೆರಡನ್ನೂ ಕೇಳಿದ ನ್ಯಾಯಾಧೀಶರು ಮತ್ತೆ ಹೋಮ ಹಾಗೂ ಸಪ್ತಪದಿಯ ಆಚರಣೆಗಳನ್ನು ರುಜುವಾತುಪಡಿಸುವುದು ಎರಡನೇ ವಿವಾಹ ನಡೆದಿದೆ ಎಂಬ ತೀರ್ಮಾನಕ್ಕೆ ಬರಲು ಅತ್ಯಗತ್ಯ ಎಂಬ ನಿಲುವನ್ನೇ ತಳೆದಿದ್ದಾರೆ. ಆದರೆ ಈ ತೀರ್ಪಿನ ಕೊನೆಯ ಪ್ಯಾರಾ ನ್ಯಾಯ ಕೈಗೆಟುಕದೆ

ನುಸುಳಿ ಹೋಗುವ ಪರಿಯನ್ನು ಬಿಚ್ಚಿಡುತ್ತದೆ. ಕಾನೂನಿನ ಆಶಯ ವಿಫಲಗೊಳ್ಳುತ್ತದೆ. ನ್ಯಾಯಾಧೀಶರ ತೀರ್ಪಿನ ಹಿಂದಿನ ಕಳಕಳಿಯನ್ನು ಗಮನಿಸಿ-

"ನಾವು ಮೇಲಿನ ತೀರ್ಮಾನಕ್ಕೆ ಬಂದಿದ್ದರೂ, ಮೊದಲ ಪ್ರತಿವಾದಿ(ಸತ್ಯನಾರಾಯಣ) ಬಿಮ್ಲಾ ಎಂಬುವವಳೊಡನೆ ಪತಿಪತ್ನಿಯರ ರೀತಿಯಲ್ಲಿ ನಿಸ್ಸಂದೇಹವಾಗಿ ವಾಸಿಸುತ್ತಿದ್ದಾನೆ. ಆದರೆ ಲಕ್ಷ್ಮೀದೇವಿ, ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಮೇರೆಗೆ ಶಿಕ್ಷಾರ್ಹವಾದ ಎರಡನೇ ಮದುವೆಯನ್ನು ರುಜುವಾತು ಪಡಿಸಲು ವಿಫಲಳಾಗಿದ್ದಾಳೆ ಎಂಬ ಒಂದೇ ಕಾರಣಕ್ಕೆ ಅವಳನ್ನು ಕೈಬಿಡುವುದು ಸರಿಯಲ್ಲ. ಆದ್ದರಿಂದ ಭಾರತ ಸಂವಿಧಾನದ ೧೪೨ನೇ ಅನುಚ್ಛೇದದ ಅಡಿಯಲ್ಲಿ ನಮಗಿರುವ ಅಧಿಕಾರಗಳನ್ನು ಚಲಾಯಿಸಿ ಅವಳಿಗೆ ಪರಿಹಾರಧನ ನೀಡುವ ಮೂಲಕ ಕತ್ತಲಿನಿಂದ ತುಂಬಿದ ಅವಳ ಬಾಳಿಗೆ ಸ್ವಲ್ಪ ವಾದರೂ ಸಮಾಧಾನ ನೀಡುವುದು ಉಚಿತವೆಂದು ನಾವು ಭಾವಿಸುತ್ತೇವೆ. ಆದ್ದರಿಂದ ಪರಿಹಾರ ಧನವನ್ನು ೨೫,೦೦೦ ರೂ.ಗಳೆಂದು ನಿಗದಿಪಡಿಸಿ ಅದನ್ನು ಮೊದಲನೇ ಪ್ರತಿವಾದಿ (ಸತ್ಯನಾರಾಯಣ) ಇಂದಿನಿಂದ ಎಂಟು ವಾರಗಳೊಳಗೆ ಅಪೀಲುದಾರಳಿಗೆ(ಲಕ್ಷ್ಮೀದೇವಿಗೆ) ನೀಡತಕ್ಕದ್ದು."

ಈ ಪ್ರಕರಣದಲ್ಲಿ ಹೊರಬಿದ್ದಿರುವ ತೀರ್ಪಿನ ಬಗ್ಗೆ ಹೆಚ್ಚಿನ ವ್ಯಾಖ್ಯಾನ ಅನಗತ್ಯವೆನಿಸುತ್ತದೆ. ಒಂದು ಕಾನೂನಿನ ಆಶಯ ಈಡೇರಬೇಕಾದರೆ ಮತ್ತು ಅದರ ಮೂಲಕ ತರಲಿಚ್ಛಿಸಿದ ಸುಧಾರಣೆಯನ್ನು ಕಾರ್ಯರೂಪಕ್ಕೆ ತರಬೇಕಾದರೆ, ಕಾನೂನಿನ ವ್ಯಾಖ್ಯಾನ, ಅನ್ವಯ ಎಷ್ಟು ಮುಖ್ಯ ಎಂಬುದು ಮನವರಿಕೆಯಾಗುತ್ತದೆ.

ದ್ವಿಪತ್ನಿತ್ವಕ್ಕೆ ಸಂಬಂಧಿಸಿದ ಇನ್ನೊಂದು ಮುಖ್ಯವಾದ ಪ್ರಕರಣವೆಂದರೆ, ಸರಳಾ ಮುದ್ಗಲ್ (ಶ್ರೀಮತಿ) ಅಧ್ಯಕ್ಷರು-ಕಲ್ಯಾಣಿ ಮತ್ತು ಇತರರು -ವಿ- ಭಾರತ ಸರ್ಕಾರ ಮತ್ತು ಇತರರು. ((೧೯೯೫)೩ ಎಸ್‌ಸಿಸಿ ೫೪೫ ಇಲ್ಲಿನ ಪ್ರಶ್ನೆಗಳೆಂದರೆ, ಹಿಂದೂ ಕಾನೂನಿನ ಮೇರೆಗೆ ವಿವಾಹವಾದ ಹಿಂದೂ ಪತಿ ಮುಸ್ಲಿಂ ಧರ್ಮಕ್ಕೆ ಮತಾಂತರಗೊಳ್ಳುವ ಮೂಲಕ ಎರಡನೇ ವಿವಾಹವನ್ನು ಅನುಷ್ಠಾನಗೊಳಿಸಬಹುದೇ? ಮೊದಲನೇ ವಿವಾಹವನ್ನು ವಿಘಟಿಸದೆಯೇ, ಮೊದಲ ಹೆಂಡತಿ ಹಿಂದೂವಾಗಿಯೇ ಉಳಿದಿದ್ದಾಗ್ಯೂ ಮಾಡಿಕೊಂಡ ಅಂಥ ಮದುವೆ ಕಾನೂನು ಸಮ್ಮತ ಮದುವೆಯಾಗುತ್ತದೆಯೇ? ಸ್ವಧರ್ಮ ಪರಿತ್ಯಾಗಿ ಪತಿ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ ಶಿಕ್ಷಾರ್ಹನಾಗುತ್ತಾನೆಯೇ? ಎಂಬುದು.

ಇವು ಭಾರತದ ಸಂವಿಧಾನದ ೩೨ನೇ ಅನುಚ್ಛೇದದ ಮೇರೆಗೆ ಸಲ್ಲಿಸಲಾದ ನಾಲ್ಕು ಅರ್ಜಿಗಳು. ಮೊದಲನೆಯ ರಿಟ್ ಅರ್ಜಿಯಲ್ಲಿ ಇಬ್ಬರು ಅರ್ಜಿದಾರರಿದ್ದಾರೆ.(೧೯೮೯ರ ರಿಟ್ ಅರ್ಜಿ ಸಂ.೧೦೭೯) ಮೊದಲನೆಯ ಅರ್ಜಿದಾರಳು - 'ಕಲ್ಯಾಣಿ' ಎಂಬ ಬಡಕುಟುಂಬಗಳ ಹಾಗೂ ತೊಂದರೆಯಲ್ಲಿರುವ ಮಹಿಳೆಯರ ಕಲ್ಯಾಣಕ್ಕಾಗಿ ದುಡಿಯುತ್ತಿರುವ ಒಂದು ನೋಂದಾಯಿತ ಸಂಘದ ಅಧ್ಯಕ್ಷಳು. ಎರಡನೆ

ಅರ್ಜಿದಾರಳು ಮೀನಾ ಮಾಥುರ್ ಎಂಬಾಕೆ. ೨೭-೨-೧೯೭೮ರಂದು, ಈಕೆಯನ್ನು ಜಿತೇಂದ್ರ ಮಾಥುರ್ ಎಂಬುವವನಿಗೆ ಮದುವೆ ಮಾಡಿಕೊಡಲಾಗಿತ್ತು. ಈ ಮದುವೆಯಿಂದ ಅವರಿಗೆ ಮೂವರು ಮಕ್ಕಳಾದರು.(ಇಬ್ಬರು ಗಂಡು ಮಕ್ಕಳು ಒಂದು ಹೆಣ್ಣು ಮಗು) ೧೯೮೮ರ ಪ್ರಾರಂಭದಲ್ಲಿ ತನ್ನ ಗಂಡ ಸುನಿತಾ ನರುಲಾ ಅಲಿಯಾಸ್ ಫಾತಿಮಾ ಎಂಬಾಕೆಯೊಂದಿಗೆ ವಿವಾಹವನ್ನು ಅನುಷ್ಠಾನಗೊಳಿಸಿದ್ದಾನೆಂದು ತಿಳಿದುಬಂದು ಆಘಾತವಾಯಿತು. ಮದುವೆಯನ್ನು ಅವರಿಬ್ಬರೂ ಇಸ್ಲಾಂ ಧರ್ಮಕ್ಕೆ ಪರಿವರ್ತನೆ ಹೊಂದಿದ ನಂತರ ವಿವಾಹವನ್ನು ಅನುಷ್ಠಾನಗೊಳಿಸಿದ್ದರು. ಅರ್ಜಿದಾರಳ ವಾದವೆಂದರೆ, ಎರಡನೆ ಮದುವೆಯಾಗಬೇಕೆಂಬ ಒಂದೇ ಕಾರಣದಿಂದ ಮತ್ತು ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಉಪಬಂಧಗಳಿಂದ ತಪ್ಪಿಸಿಕೊಳ್ಳಬೇಕೆಂದು, ಮುಖ್ಯವಾಗಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿದ್ದಾನೆ ಎಂಬುದು. ಆದರೆ ಇಸ್ಲಾಂ ಧರ್ಮಕ್ಕೆ ಸೇರಿದ ನಂತರ, ತನ್ನ ಪತ್ನಿ ಹಿಂದೂವಾಗಿಯೇ ಉಳಿದಿದ್ದರೂ ಸಹ, ತಾನು ಇಸ್ಲಾಂ ಧರ್ಮಕ್ಕೆ ಸೇರಿದವನಾಗಿರುವುದರಿಂದ ನಾಲ್ಕು ಹೆಂಡತಿಯರನ್ನು ಹೊಂದಿರಬಹುದು ಎಂದು ವಾದಿಸಿದ.

ಕುತೂಹಲಕಾರಿಯಾದ ಅಂಶವೆಂದರೆ, ಇನ್ನೊಂದು ರಿಟ್ ಅರ್ಜಿಯಲ್ಲಿ ಸುನಿತಾ ಅಲಿಯಾಸ್ ಫಾತಿಮಾ ಅರ್ಜಿದಾರಳು(ರಿಟ್ ಅರ್ಜಿ ೧೯೯೦ರ ಸಂ.೩೪೭) ಇದರಲ್ಲಿ ಅವಳು ಜಿತೇಂದ್ರ ಮಾಥುರ್ ಮೊದಲು ಮೀನಾಳೊಂದಿಗೆ ವಿವಾಹವಾಗಿದ್ದು, ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ ನಂತರ ತನ್ನನ್ನು ವಿವಾಹವಾದನೆಂದೂ ಅನಂತರ ಅವರಿಗೆ ಒಂದು ಗಂಡುಮಗು ಹುಟ್ಟಿತೆಂದು ತಿಳಿಸಿದ್ದಾಳೆ. ಆದರೆ ಈಗ ತನ್ನ ಹಿಂದೂ ಪತ್ನಿಯ ಪ್ರಭಾವಕ್ಕೆ ಒಳಗಾಗಿ ತಾನು ಮತ್ತೆ ಹಿಂದೂ ಧರ್ಮಕ್ಕೆ ಮತಾಂತರ ಹೊಂದಿರುವುದಾಗಿ ೨೮-೪-೧೯೮೮ರಂದು ಒಂದು ಮುಚ್ಚಳಿಕೆ ಪತ್ರವನ್ನು ಸಹ ಬರೆದುಕೊಟ್ಟಿದ್ದಾನೆ. ಅಲ್ಲದೆ ತನ್ನ ಹೆಂಡತಿ ಮತ್ತು ಮೂವರು ಮಕ್ಕಳನ್ನು ನೋಡಿಕೊಳ್ಳುವುದಾಗಿ ಸಹ ಒಪ್ಪಿಕೊಂಡಿದ್ದಾನೆ. ಈಗ ಅವಳ ತೊಂದರೆ ಎಂದರೆ, ಅವಳು ಮುಸ್ಲಿಂ ಆಗಿಯೇ ಉಳಿದಿದ್ದಾಳೆ ಮತ್ತು ಅವಳನ್ನೆ ಅವಳ ಪತಿ ನೋಡಿಕೊಳ್ಳುತ್ತಿಲ್ಲ ಮತ್ತು ಎರಡೂ ಧರ್ಮಗಳ ವೈಯಕ್ತಿಕ ಕಾನೂನುಗಳ ಅಡಿಯಲ್ಲಿಯೂ ತನಗೆ ರಕ್ಷಣೆಯಿಲ್ಲ ಎಂಬುದು.

ಗೀತಾ ರಾಣಿ ಮತ್ತೊಬ್ಬಳು ಅರ್ಜಿದಾರಳು.(೧೯೯೨ ರ ರಿಟ್ ಅರ್ಜಿ ಸಂಖ್ಯೆ ೪೨೪) ಈಕೆ ಪ್ರದೀಪ್ ಕುಮಾರ್ ಎಂಬಾತನನ್ನು ೧೩-೧೧-೧೯೮೮ರಂದು ಹಿಂದೂ ಸಂಪ್ರದಾಯದ ಪ್ರಕಾರ ವಿವಾಹವಾದಳು. ತನ್ನ ಪತಿ ತನ್ನನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಳ್ಳುತ್ತಿದ್ದ ಮತ್ತು ಒಮ್ಮೆ ಅವನ ಹೊಡೆತದಿಂದ ಅವಳ ದವಡೆಯ ಮೂಳೆ ಮುರಿದು ಹೋಯಿತು ಎಂಬುದಾಗಿ ಅರ್ಜಿಯಲ್ಲಿ ತಿಳಿಸಿದ್ದಾಳೆ. ೧೯೯೧ರ ಡಿಸೆಂಬರ್ ನಲ್ಲಿ ಪ್ರದೀಪ್ ಕುಮಾರ್ ದೀಪಾ ಎಂಬುವವಳೊಡನೆ ಓಡಿಹೋಗಿ, ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡು

ವಿವಾಹವಾಗಿರುವುದಾಗಿ ತಿಳಿದು ಬಂದಿತೆಂದು ತಿಳಿಸಿದ್ದಾಳೆ. ಮತ್ತು ಎರಡನೆಯ ವಿವಾಹವಾಗುವುದಕ್ಕಾಗಿಯೇ ಅವನು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ್ದಾನೆಂದೂ ಸಹ ತಿಳಿಸಿದ್ದಾಳೆ.

ಸುಸ್ಮಿತಾ ಘೋಷ್ ಎಂಬಾಕೆ ಇನ್ನೊಬ್ಬ ನತದೃಷ್ಟ ಅರ್ಜಿದಾರಳು.(೧೯೯೨ರ ರಿಟ್ ಅರ್ಜಿ ಸಂಖ್ಯೆ ೫೦೯) ಅವಳ ವಿವಾಹವನ್ನು ಜಿ.ಸಿ.ಘೋಷ್ ಎಂಬುವವನೊಡನೆ ೧೦.೫-೧೯೮೪ರಂದು ಹಿಂದೂ ಸಂಪ್ರದಾಯಿಕ ಆಚರಣೆಗಳೊಂದಿಗೆ ನೆರವೇರಿಸಲಾಗಿತ್ತು. ೨೦-೪-೧೯೯೨ರಂದು ಅವಳ ಪತಿ ಅವಳೊಡನೆ ತನಗೆ ಬಾಳಲು ಇಷ್ಟವಿಲ್ಲದಿರುವುದರಿಂದ ಪರಸ್ಪರ ಸಮ್ಮತಿಯಿಂದ ವಿಚ್ಛೇದನೆ ಪಡೆಯಲು ಒಪ್ಪಿಗೆ ನೀಡಬೇಕೆಂದು ಕೇಳಿದ. ಆಘಾತಕ್ಕೆ ಒಳಗಾದ ಅರ್ಜಿದಾರಳು ತಾನು ಅವನ ಕಾನೂನು ಸಮ್ಮತ ಪತ್ನಿಯಾಗಿರುವುದರಿಂದ ವಿಚ್ಛೇದನೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎಂದು ತಿಳಿಸಿದಳು. ಆಗ ಪತಿ ತಾನು ಇಸ್ಲಾಂಧರ್ಮಕ್ಕೆ ಮತಾಂತರ ಹೊಂದಿರುವುದಾಗಿಯೂ ವಿನಿತಾ ಗುಪ್ತ ಎಂಬುವವಳನ್ನು ಇಷ್ಟರಲ್ಲೇ ಮದುವೆಯಾಗುವುದಾಗಿಯೂ ತಿಳಿಸಿದನು. ತನ್ನ ಪತಿ ಎರಡನೇ ವಿವಾಹವಾಗದಂತೆ ಅವನನ್ನು ನಿರ್ಬಂಧಿಸ ಬೇಕೆಂದು ನ್ಯಾಯಾಲಯವನ್ನು ಕೋರಿದ್ದಾಳೆ. ಇಲ್ಲಿ ಎಲ್ಲ ಧರ್ಮಗಳಿಗೂ ಸಮಾನವಾಗಿ ಅನ್ವಯಿಸುವ ಕಾನೂನು ಜಾರಿಯಲ್ಲಿದ್ದಿದ್ದರೆ, ಮೇಲಿನ ನಾಲ್ಕು ಪ್ರಕರಣಗಳ ಸ್ವರೂಪವೇ ಬೇರೆಯಾಗಿರುತ್ತಿತ್ತು. ಅಂಥದೊಂದು ಸಾಮಾನ್ಯಾನ್ವಯದ ಕಾನೂನು ಜಾರಿಗೆ ಬರುವುದು ಸಾಮಾನ್ಯ ನಾಗರಿಕ ಸಂಹಿತೆ ಜಾರಿಯಲ್ಲಿ ಬಂದಾಗ ಮಾತ್ರ. ಸಾಮಾನ್ಯ ನಾಗರಿಕ ಸಂಹಿತೆಯ ಅಗತ್ಯವಿದೆಯೆ? ಅಗತ್ಯವಿದ್ದರೆ, ಎಲ್ಲ ಧರ್ಮಗಳ ಶೋಷಿತ ವರ್ಗವಾದ ಮಹಿಳೆಯರಿಗೆ ನ್ಯಾಯ ದೊರಕಿಸಿ ಕೊಡಲು ಅವಶ್ಯವಾದಂಥ ಮತ್ತು ಸಂವಿಧಾನ ಶಿಲ್ಪಿಗಳನ್ನು ಒಳಗೊಂಡಂತೆ ಧರ್ಮಾಭಿಮಾನವನ್ನು ಬದಿಗಿರಿಸಿ ಸಮಾಜದ ಹಿತದೃಷ್ಟಿಯನ್ನುಳ್ಳ ಎಲ್ಲ ಚಿಂತನಶೀಲ ಮನಸ್ಸುಗಳೂ ಒಪ್ಪುವಂಥ ಸಾಮಾನ್ಯ ನಾಗರಿಕ ಸಂಹಿತೆಯ ಪರಿಕಲ್ಪನೆಯನ್ನೇ ವಿರೋಧಿಸುತ್ತಿರುವ ಶಕ್ತಿಗಳು ಯಾವುವು? ಮುಂತಾದ ಪ್ರಶ್ನೆಗಳಿಗೆ ಉತ್ತರಿಸಲು ಮತ್ತೊಂದು ವಿಸ್ತೃತವಾದ ಅಧ್ಯಯನ ಅಗತ್ಯವಾಗುತ್ತದೆ. ಆದರೆ ಪ್ರಸ್ತುತದಲ್ಲಿ ಜಾರಿಯಲ್ಲಿರುವ ಕಾನೂನುಗಳ ಅಡಿಯಲ್ಲಿ ಈ ಪ್ರಕರಣಗಳಲ್ಲಿ ಆರೋಪಿತ ವ್ಯಕ್ತಿಗಳ ಹಾಗೂ ಅಪರಾಧಕ್ಕೊಳಗಾದ ಮಹಿಳೆಯರ ಪರಿಸ್ಥಿತಿ ಏನು ಎಂಬ ವಿಶ್ಲೇಷಣೆ ಸದ್ಯದಲ್ಲಿ ಈ ಅಧ್ಯಯನದ ಚೌಕಟ್ಟಿನಲ್ಲಿ ಮುಖ್ಯವಾಗುತ್ತದೆ.

ಭಾರತದ ಎಲ್ಲ ನಾಗರಿಕರಿಗೆ ಸಮಾನವಾಗಿ ಅನ್ವಯಿಸುವಂಥ ಸಾಮಾನ್ಯ ನಾಗರಿಕ ಸಂಹಿತೆ ಜಾರಿಯಲ್ಲಿ ಬರುವವರೆಗೆ ಮೊದಲನೆಯ ಪತ್ನಿ ಜೀವಂತವಿರುವಾಗಲೇ ಎರಡನೇ ವಿವಾಹವಾಗ ಬಯಸುವ ಹಿಂದೂ ಪುರುಷರಿಗೆ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದುವ ಮೂಲಕ ಹಿಂದೂ ಧರ್ಮದ ಕಟ್ಟಳೆಯನ್ನು ಧಿಕ್ಕರಿಸುವ ಅವಕಾಶ ಇದ್ದೇ ಇರುತ್ತದೆ.

ಸಾಂಪ್ರದಾಯಿಕ ಹಿಂದೂ ಕಾನೂನಿನಲ್ಲಿ ವಿವಾಹ ವಿಘಟನೆಗೆ ಅವಕಾಶವಿರಲಿಲ್ಲವಾಗಿ, ಮತಾಂತರವೂ ಹಿಂದೂ ವಿವಾಹವನ್ನು ವಿಘಟಿಸುವ ಪರಿಣಾಮವನ್ನು ಹೊಂದಿರಲಿಲ್ಲ. ಪತಿ ಅಥವಾ ಪತ್ನಿ ಅಥವಾ ಇಬ್ಬರೂ ತಮ್ಮ ಧರ್ಮದಿಂದ ಇನ್ನೊಂದು ಧರ್ಮಕ್ಕೆ ಮತಾಂತರ ಹೊಂದಿದರೂ ವಿವಾಹವನ್ನು ಅದು ವಿಘಟನಗೊಳಿಸುವುದಿಲ್ಲ. ಈ ಅಂಶವನ್ನು ಪೂರ್ವ ನಿರ್ಧರಿತ ಪ್ರಕರಣಗಳಲ್ಲಿ ನ್ಯಾಯಾಲಯಗಳು ಎತ್ತಿ ಹಿಡಿದಿವೆ.

ವಿವಾಹ ನಾಗರಿಕ ಸಮಾಜದ ಅಡಿಗಲ್ಲು. ವಿವಾಹದ ಮೂಲಕ ಸಂಬಂಧ ಏರ್ಪಟ್ಟ ನಂತರ ಕಾನೂನು ಅವರಿಬ್ಬರ ನಡುವೆ ಅನೇಕ ಕರ್ತವ್ಯಗಳನ್ನೂ ಬಾಧ್ಯತೆಗಳನ್ನೂ ಸೃಷ್ಟಿಸುತ್ತದೆ. ಎಲ್ಲ ನಾಗರಿಕ ಸಮಾಜಗಳ ಉದ್ದೇಶವೂ ವಿವಾಹ ಬಂಧನವನ್ನು ಉಳಿಸಿಕೊಂಡು ಹೋಗುವುದೇ ಆಗಿರುತ್ತದೆ. ಪ್ರಾಚೀನ ಹಿಂದೂ ಸಮಾಜದಲ್ಲಿ ವಿವಾಹ ಬಂಧನ ಯಾವುದೇ ಕಾರಣದಿಂದಲೂ ಬೇರ್ಪಡುವ ಬಂಧನವಾಗಿರಲಿಲ್ಲ. ಹಾಗಾಗಿ ಸ್ವಧರ್ಮ ಪರಿತ್ಯಾಗ ವ್ಯಕ್ತಿಗೆ ಎಲ್ಲ ಕರ್ತವ್ಯಗಳಿಂದ ಉನ್ಮುಕ್ತಿ ನೀಡುತ್ತಿರಲಿಲ್ಲ. ಅದು ಹಿಂದೂ ಧರ್ಮದ ಆಶಯಕ್ಕೆ ವಿರುದ್ಧವಾದುದಾಗಿತ್ತು. ೧೮೯೧ರಷ್ಟು ಹಿಂದೆಯೇ ರಾಮಕುಮಾರಿ ಪ್ರಕರಣದಲ್ಲಿ [ಐಎಲ್‌ಆರ್ (೧೮೯೧) ೧೮ ಕಲ್ಕತ್ತ ೨೬೪] ಹಿಂದೂ ಪತ್ನಿ ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡು ಮುಸಲ್ಮಾನನನ್ನು ವಿವಾಹವಾದ ಸಂದರ್ಭದಲ್ಲಿ, ಅವಳ ಮತಾಂತರದಿಂದಾಗಿ ಹಿಂದೂ ಪುರುಷನ ಜೊತೆ ಆಗಿರುವ ಅವಳ ವಿವಾಹ ವಿಘಟನೆಗೊಳ್ಳುವುದಿಲ್ಲ ಎಂದು ತೀರ್ಪು ನೀಡಲಾಗಿತ್ತು. ಇದನ್ನೇ ಪೂರ್ವ ನಿದರ್ಶನವನ್ನಾಗಿರಿಸಿಕೊಂಡು ಮುಂದಿನ ಅನೇಕ ಸದೃಶ ಪ್ರಕರಣಗಳಲ್ಲಿ ಇದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಮತ್ತು ಹಾಗೆ ಎರಡನೆಯ ವಿವಾಹವಾಗುವ ಪತಿ ಅಥವಾ ಪತ್ನಿ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ, ದ್ವಿಪತ್ನಿತ್ವ ಅಥವಾ ದ್ವಿಪತಿತ್ವದ ಅಪರಾಧಕ್ಕಾಗಿ ಶಿಕ್ಷಾರ್ಹರಾಗುತ್ತಾರೆ ಎಂಬ ತೀರ್ಪನ್ನು ನೀಡಲಾಗಿದೆ.

ಹಿಂದೆ ನಿರ್ಧರಿತವಾದ ಅನೇಕ ಪ್ರಕರಣಗಳಲ್ಲಿ ಒಂದು ಧರ್ಮಕ್ಕೆ ಅನ್ವಯಿಸುವ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಅನುಷ್ಠಾನಗೊಂಡ ವಿವಾಹವನ್ನು ಪತಿ/ಪತ್ನಿ ಮತಾಂತರಗೊಂಡಂಥ ಇನ್ನೊಂದು ಧರ್ಮದ ವೈಯಕ್ತಿಕ ಕಾನೂನನ್ನು ಅನ್ವಯಿಸಿ ವಿಘಟನೆಗೊಳಿಸಲು ಸಾಧ್ಯವಿಲ್ಲ. "ವಿವಾಹ ಹಿಂದೂ ಕಾನೂನಿನ ಪ್ರಕಾರ ಅನುಷ್ಠಾನಗೊಂಡಿದ್ದರೆ, ಪಕ್ಷಕಾರರು ಹಿಂದೂ ವಿವಾಹಗಳಿಗೆ ಅನ್ವಯಿಸುವ ಕಾನೂನಿನ ಮೇರೆಗೆ ವಿವಾಹದಿಂದಾಗಿಯೇ ಸ್ಥಾನಮಾನವನ್ನು ಹಾಗೂ ಕೆಲವೊಂದು ಹಕ್ಕು ಪಡೆಯುತ್ತಾರೆ. ಒಂದು ಪಕ್ಷಕಾರರು ಹೊಸ ವೈಯಕ್ತಿಕ ಕಾನೂನನ್ನು ಅಳವಡಿಸಿಕೊಂಡು ಜಾರಿಗೆ ತರುವ ಮೂಲಕ ವಿವಾಹವನ್ನು ವಿಘಟನೆಗೊಳಿಸಲು ಅವಕಾಶ ನೀಡಿದರೆ, ಹಿಂದೂವಾಗಿಯೇ ಮುಂದುವರಿಯುವ ಇನ್ನೊಬ್ಬ ಪಕ್ಷಕಾರನ ಹಕ್ಕುಗಳನ್ನು ನಾಶಗೊಳಿಸಿದಂತಾಗುತ್ತದೆ. ಅದ್ದರಿಂದ ಹಿಂದೂ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಮತ್ತು

ಅದನ್ನು ೧೯೫೫ರಲ್ಲಿ ಕ್ರೋಡೀಕರಿಸುವ ಮುನ್ನ ಇದ್ದಂಥ ಕಾನೂನಿನ ಅಡಿಯಲ್ಲಿ, ಪತಿ ಪತ್ನಿಯರಲ್ಲಿ ಒಬ್ಬರು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ ನಂತರ ಸಹ ಹಿಂದೂ ವಿವಾಹ ಊರ್ಜಿತವಾಗಿರುತ್ತದೆ. ವಿವಾಹ ತಾನೇ ತಾನಾಗಿ ವಿಘಟನೆಗೊಳ್ಳುವುದಿಲ್ಲ'' ಎಂದು ಈ ಪ್ರಕರಣದಲ್ಲಿ ತೀರ್ಪು ನೀಡಿದ ನ್ಯಾಯಾಧೀಶರಾದ ಸನ್ಮಾನ್ಯ ಕುಲದೀಪ್ ಸಿಂಗ್ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣವನ್ನು ಅನ್ವಯಿಸಬೇಕಾದರೆ ನಾಲ್ಕು ಅಂಶಗಳನ್ನು ಪೂರೈಸಿರಬೇಕು.

೧. ಜೀವಂತ ಪತಿ ಅಥವಾ ಪತ್ನಿ ಇರಬೇಕು.

೨. ಮತ್ತೊಮ್ಮೆ ಮದುವೆಯಾಗಿರಬೇಕು.

೩. ಅಂಥ ವಿವಾಹ ಶೂನ್ಯವಾಗಿರಬೇಕು.

೪. ಅಂಥ ವಿವಾಹ ಅಂಥ ಪತ್ನಿ ಅಥವಾ ಪತಿಯ ಜೀವಿತ ಕಾಲದಲ್ಲಿ ನಡೆದಿರಬೇಕು.

ಕಟ್ಟುನಿಟ್ಟಾಗಿ ಕಾನೂನಿನ ಪ್ರಕಾರವೇ ವ್ಯಾಖ್ಯಾನ ಮಾಡುವುದಾದರೆ ಅಂಥ ವಿವಾಹ ಶೂನ್ಯ ವಿವಾಹವೇ ಆಗುವುದಿಲ್ಲ. ಏಕೆಂದರೆ ಪತಿ/ಪತ್ನಿ ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ ಕೂಡಲೇ ಅವನಿಗೆ ಹಿಂದೂ ಕಾನೂನು ಅನ್ವಯಿಸುವುದು ನಿಂತುಹೋಗುತ್ತದೆ. ಆದರೂ ಕಾನೂನಿನ ಆಶಯ ಎಂಬುದಕ್ಕಿಂತ ಹೆಚ್ಚಾಗಿ ನ್ಯಾಯ, ನ್ಯಾಯಸಮ್ಮತತೆ ಹಾಗೂ good conscience ಇವುಗಳ ದೃಷ್ಟಿಯಿಂದ ಹಿಂದೂ ಪತ್ನಿ/ಪತಿಯ ಈ ಕೃತ್ಯವನ್ನು ಅಧಿನಿಯಮದ ಉಲ್ಲಂಘನೆ ಎಂದೇ ಪರಿಗಣಿಸಬೇಕು. ಏಕೆಂದರೆ ಮೊದಲನೆಯ ವಿವಾಹವಾದ ಸಂದರ್ಭದಲ್ಲಿ ಅವನಿಗೆ/ಅವಳಿಗೆ ಅನ್ವಯಿಸುತ್ತಿದ್ದುದು ಏಕಪತ್ನಿತ್ವ/ಪತಿತ್ವವನ್ನು ಅತ್ಯಂತ ಕಟ್ಟುನಿಟ್ಟಾಗಿ ವಿಧಿಸುವಂಥ ಹಿಂದೂ ವಿವಾಹ ಅಧಿನಿಯಮ.

ನ್ಯಾಯ ನೀಡಿಕೆಯಲ್ಲಿ ಕಾನೂನಿನ ವ್ಯಾಖ್ಯಾನ ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ಕಾನೂನಿನ ಯಾವುದೇ ಉಪಬಂಧವನ್ನಾಗಲೀ ಅದರಲ್ಲಿ ಬಳಸಿದ ಪದವನ್ನಾಗಲೀ ವ್ಯಾಖ್ಯಾನ ಮಾಡುವಾಗ ಅದರ ರಚನೆ ಅಥವಾ ಬಳಕೆಯ ಹಿಂದಿನ ಆಶಯ ಬಹಳ ಮುಖ್ಯವಾಗುತ್ತದೆ. ಆಶಯವನ್ನು ಗಮನದಲ್ಲಿಟ್ಟುಕೊಂಡು ನ್ಯಾಯ ಪ್ರದಾನ ಮಾಡಿದಾಗ ಅಂಥ ನ್ಯಾಯ ಔಪಚಾರಿಕ ನ್ಯಾಯವಾಗದೆ ವಾಸ್ತವಿಕ ನ್ಯಾಯವಾಗಲು ಸಾಧ್ಯವಾಗುತ್ತದೆ.

'ಶೂನ್ಯ' ಎಂಬ ಅಭಿವ್ಯಕ್ತಿಯನ್ನು ಅಧಿನಿಯಮದ ಉದ್ದೇಶಕ್ಕಾಗಿ ಅಧಿನಿಯಮದ ೧೧ನೇ ಪ್ರಕರಣದಲ್ಲಿ ಪರಿಭಾಷಿಸಲಾಗಿದೆ. ಈ ಪ್ರಕರಣದ ಅಡಿಯಲ್ಲಿ ಅದು ಸೀಮಿತ ವ್ಯಾಪ್ತಿಯನ್ನು ಹೊಂದಿದೆ. ಆದರೆ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದಲ್ಲಿ ಬಳಸಲಾದ ಅದೇ ಪದ 'ಶೂನ್ಯ' ಎಂಬುದನ್ನು

ಬೇರೆಯ ಉದ್ದೇಶಕ್ಕಾಗಿ ಬಳಸಲಾಗಿದೆ. ಆದ್ದರಿಂದ ಅದಕ್ಕೆ ಪ್ರಕರಣದ ರಚನೆಯ ಹಿಂದಿನ ಆಶಯವನ್ನು ಗಮನಿಸಿ ಅರ್ಥಪೂರ್ಣ ವ್ಯಾಖ್ಯಾನವನ್ನು ನೀಡಬೇಕಾಗುತ್ತದೆ.

ನ್ಯಾಯಾಧೀಶರ ಅಭಿಪ್ರಾಯದಲ್ಲಿ 'ಶೂನ್ಯ' ಎಂಬ ಪದವನ್ನು ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದಲ್ಲಿ ಹೆಚ್ಚು ವಿಸ್ತೃತಾರ್ಥದಲ್ಲಿ ಬಳಸಲಾಗಿದೆ. ಕಾನೂನಿನ ಯಾವುದೇ ಉಪಬಂಧಗಳ ಉಲ್ಲಂಘನೆಯಲ್ಲಿ ಆದ ವಿವಾಹ ೪೯೪ನೇ ಪ್ರಕರಣದ ಮೇರೆಗೆ ಶೂನ್ಯವಾಗುತ್ತದೆ.

ಹಿಂದೂ ಅಧಿನಿಯಮದ ಅಡಿಯಲ್ಲಿ ಅನುಷ್ಠಾನಗೊಳಿಸಲಾದ ವಿವಾಹವನ್ನು ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಒಂದು ಕಾರಣದ ಮೇಲೆ ವಿಘಟನೆಗೊಳಿಸಬಹುದು. ಆ ಸಮಯದವರೆಗೆ ಪತಿ ಅಥವಾ ಪತ್ನಿ ಎರಡನೆ ವಿವಾಹವನ್ನು ಆಗುವಂತಿಲ್ಲ. ಮತಾಂತರದಿಂದಾಗಿ ವಿವಾಹ ತಾನೇ ತಾನಾಗಿ ವಿಘಟನೆಗೊಳ್ಳುವುದಿಲ್ಲವಾದ್ದರಿಂದ ಮತಾಂತರ ಹೊಂದಿದ ವ್ಯಕ್ತಿ ಮಾಡಿಕೊಳ್ಳುವ ವಿವಾಹ ಅಧಿನಿಯಮವನ್ನು ಉಲ್ಲಂಘಿಸುತ್ತಿದ್ದುದರಿಂದ ಅಂಥ ವಿವಾಹ ಶೂನ್ಯವಾಗುತ್ತದೆ. ಮತ್ತು ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಮೇರೆಗೆ ತಾನೇ ತಾನಾಗಿ ಶೂನ್ಯವೆನಿಸಿಕೊಳ್ಳುತ್ತದೆ.

ಇಲ್ಲಿ ಎರಡನೇ ವಿವಾಹ ಶೂನ್ಯವೆನಿಸಿಕೊಳ್ಳುವುದು ಮೊದಲನೆಯ ವಿವಾಹ ಇನ್ನೂ ಊರ್ಜಿತವಿದೆ. ಮತ್ತು ಮತಾಂತರದ ಕಾರಣದಿಂದ ಅದು ವಿಘಟನೆಗೊಂಡಿಲ್ಲ ಎಂಬ ಕಾರಣದಿಂದ. ಮತಾಂತರಗೊಂಡಿರುವ ಧರ್ಮವನ್ನು ಅನ್ವಯಿಸಿ ಎರಡನೆಯ ವಿವಾಹವನ್ನು ಕಾನೂನು ಸಮ್ಮತ ಎಂದುಬಿಟ್ಟರೆ ಕಾನೂನಿನ ವಸ್ತು ವಿಷಯವನ್ನೆ ಕಡೆಗಣಿಸಿದಂತೆ ಮತ್ತು ಕಾನೂನಿನ ಆಶಯವನ್ನು ವಿರೋಧಿಸಿ ತೀರ್ಪನ್ನು ನೀಡಿದಂತೆ ಎಂದು ನ್ಯಾಯಾಧೀಶರು ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ ಸ್ವಧರ್ಮ ಪರಿತ್ಯಾಗ ಮಾಡಿದ ಪತಿ ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಮೇರೆಗೆ ಅಪರಾಧದ ದೋಷಿಯಾಗುತ್ತಾನೆ ಎಂದು ತೀರ್ಪು ನೀಡಿದ್ದಾರೆ.

ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ ದ್ವಿಪತ್ನಿತ್ವ/ದ್ವಿಪತಿತ್ವದ ಅಪರಾಧವನ್ನು ರುಜುವಾತು ಪಡಿಸಲು ಎರಡನೇ ವಿವಾಹದ ಅನುಷ್ಠಾನವಾಗಿದೆ ಎಂಬುದನ್ನು ಸಾಬೀತು ಪಡಿಸುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ವಾದಿ ತಾನು ಅವನ(ಅವಳ) ಮೊದಲ ಪತ್ನಿ(ಪತಿ) ಎಂದು ರುಜುವಾತು ಪಡಿಸುವುದು. ಈ ಕಾರಣಕ್ಕಾಗಿಯೇ(ಇತರ ಕಾರಣಗಳ ಜೊತೆಗೆ) ವಿವಾಹದ ನೋಂದಣಿಯನ್ನು ಕಡ್ಡಾಯಗೊಳಿಸಬೇಕೆಂದು ಮಹಿಳಾ ಸಂಘಟನೆಗಳು ಒತ್ತಾಯಿಸುತ್ತಿರುವುದು. 'ಸಮಾನತೆಯತ್ತ' ವರದಿ ಯಲ್ಲಿಯು ಸಹ ವಿವಾಹ ನೋಂದಣಿಯನ್ನು ಕಡ್ಡಾಯ ಮಾಡಬೇಕು ಎಂದು ಶಿಫಾರಸ್ಸು ಮಾಡಲಾಗಿದೆ. ಆದರೆ ಇಲ್ಲಿಯವರೆಗೂ ಯಾವುದೇ ರೀತಿಯ ಕ್ರಮ ಕೈಗೊಂಡಿಲ್ಲ. ಹಿಂದೂ ಕಾನೂನಿನ ಮೇರೆಗಾಗಲೀ

ಗುಡ್ಡಗಾಡು ಜನರ ಕಾನೂನಿನ ಮೇರೆಗಾಗಲಿ ಹಾಗೂ ಮುಸ್ಲಿಂ ಕಾನೂನಿನ ಮೇರೆಗಾಗಲೀ, ಸಂಪ್ರದಾಯಿಕ ಆಚರಣೆಗಳ ಪ್ರಕಾರ ವಿವಾಹ ನಡೆಯುವುದರಿಂದ ವಿವಾಹದ ನೋಂದಣಿ ಕಡ್ಡಾಯವಲ್ಲ.

ದಂಡ ಸಂಹಿತೆಯ ೪೯೪ನೇ ಪ್ರಕರಣದ ಮೇರೆಗೆ ದ್ವಿಪತ್ನಿತ್ವ ಅಥವಾ ದ್ವಿಪತಿತ್ವದ ಅಪರಾಧಕ್ಕಾಗಿ ದಂಡಿಸಲು ಎರಡನೆಯ ಮದುವೆಯನ್ನು ರುಜುವಾತುಪಡಿಸುವುದು ಮುಖ್ಯವಾದರೆ, ಪತಿ ಎರಡನೆಯ ಮದುವೆಯಾಗಿದ್ದಾನೆಂಬ ಕಾರಣಕ್ಕೆ ವಿವಾಹ ವಿಚ್ಛೇದನೆ, ಜೀವನಾಂಶ ಪಡೆಯಲು ಪತ್ನಿ ತನ್ನ ಪತಿಯ ಕಾನೂನುಮಾನ್ಯ ಪತ್ನಿ ಎಂಬುದನ್ನು ರುಜುವಾತುಪಡಿಸುವುದು ಮುಖ್ಯವಾಗುತ್ತದೆ. ಬದರಿಪ್ರಸಾದ್ -ವಿ-ಡೆಪ್ಯೂಟಿ ಡೈರೆಕ್ಟರ್ ಆಫ್ ಕನ್ಸಾಲಿಡೇಷನ್ ಮತ್ತು ಇತರರು (ಎಐಆರ್ ೧೯೭೮ ಎಸ್‌ಸಿ ೧೫೫೭) ಪ್ರಕರಣದಲ್ಲಿ ನ್ಯಾಯಧೀಶ ಸನ್ಮಾನ್ಯ ವಿ.ಆರ್.ಕೃಷ್ಣ ಅಯ್ಯರ್ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಅತ್ಯಂತ ಮೌಲಿಕವಾದವು.

"ಸುಮಾರು ೫೦ ವರ್ಷಗಳ ಕಾಲ ಪತಿ ಪತ್ನಿಯರಂತೆ ಬಾಳಿದ ನಂತರ ಅವರ ವಿವಾಹವನ್ನು ಯಾರಾದರೂ ಪ್ರಶ್ನಿಸಿದ ಸಂದಭರದಲ್ಲಿ ನ್ಯಾಯಾಲಯ ದೀರ್ಘಕಾಲ ಪತಿ ಪತ್ನಿಯರಾಗಿ ಬಾಳಿದವರ ಪರವಾಗಿ ಪೂರ್ವಭಾವನೆ ಮಾಡುತ್ತದೆ. ಆದರೆ ಈ ಪೂರ್ವಭಾವನೆಯನ್ನು ಸುಳ್ಳೆಂದು ರುಜುವಾತು ಪಡಿಸುವ ಹೊಣೆ ವಿವಾಹವನ್ನು ಅಲ್ಲಗೆಳೆಯುವ ವ್ಯಕ್ತಿಯ ಮೇಲಿರುತ್ತದೆ -Law leans in favour of legitimacy and frowns upon bastardly.... ಸಮಾಜದಲ್ಲಿ ಪತಿಪತ್ನಿಯರಾಗಿ ಬಾಳಿದವರನ್ನು ೫೦ ವರ್ಷಗಳ ನಂತರ ನಿಮ್ಮ ವಿವಾಹವನ್ನು ಪ್ರತ್ಯಕ್ಷ ಸಾಕ್ಷಿಗಳನ್ನು ಹಾಜರು ಪಡಿಸುವ ಮೂಲಕ ರುಜುವಾತುಪಡಿಸಿ ಎಂದರೆ ಬಹಳಷ್ಟು ಮಂದಿ ವಿಫಲರಾಗುತ್ತಾರೆ. ಆದ್ದರಿಂದ ಈ ವಾದವನ್ನು ಒಪ್ಪಲಾಗದು."

ಸುಭಾಷ್ ಪೋಪಟ್ ಲಾಲ್ ಷಾ -ವಿ- ಲತಾ ಸುಭಾಷ್ ಷಾ ಪ್ರಕರಣದಲ್ಲಿ (೧೯೯೪) ೧ ಡಿಎಂಸಿ ೧೮೫) ಮುಂಬಯಿ ಉಚ್ಚ ನ್ಯಾಯಾಲಯ ಇದೇ ನಿಲುವನ್ನು ತಳೆದಿದೆ.

ಈ ಪ್ರಕರಣದಲ್ಲಿ ಪ್ರತಿವಾದಿ(ಲತಾ) ವಿವಾಹ ವಿಚ್ಛೇದನೆಗಾಗಿ ೧೯೫೫ರ ಹಿಂದೂ ವಿವಾಹ ಅಧಿನಿಯಮದ ೧೩(೧)(i), ೧೩(೧)(ib) ಮತ್ತು ೧೩(೨)(i)ನೇ ಪ್ರಕರಣಗಳ ಮೇರೆಗೆ ಅರ್ಜಿಯನ್ನು ಮತ್ತು ಭಾರತ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೆ ತನಗೆ ಮತ್ತು ತನ್ನ ಮಗ ಆನಂದನಿಗಾಗಿ ಜೀವನಾಂಶ ಕೋರಿ ಕುಟುಂಬ ನ್ಯಾಯಾಲಯದಲ್ಲಿ ಪ್ರತ್ಯೇಕ ಅರ್ಜಿಗಳನ್ನು ಸಲ್ಲಿಸಿದ್ದಳು.

ಪ್ರಕರಣದ ವಿವರಗಳೆಂದರೆ, ಲತಾ ಮತ್ತು ಸುಭಾಷ್ (ಅಪೀಲುದಾರ) ಇಬ್ಬರ ವಿವಾಹ ಮುಂಬಯಿಯಲ್ಲಿ ಹಿಂದೂ ವೈದಿಕ ಸಂಪ್ರದಾಯಗಳ ಪ್ರಕಾರ ೧೯೭೬ರ ಏಪ್ರಿಲ್ ತಿಂಗಳಿನಲ್ಲಿ ನಡೆಯಿತು. ಆ ನಂತರ

ಅವಳು ತನ್ನ ಪತಿಯ ಜೊತೆ ಪೂನಾ ಮತ್ತು ಮಹಾಬಲೇಶ್ವರಗಳಲ್ಲಿ ಸಂಸಾರ ಮಾಡಿದಳು. ಆನಂತರ ಸುಭಾಷ್ ಲತಾಳನ್ನು ಕರೆತಂದು ಮುಂಬಯಿಯಲ್ಲಿ ಅವಳ ತಂದೆಯ ಮನೆಯಲ್ಲಿ ಬಿಟ್ಟು ತೆರಳಿದ. ವಿವಾಹದ ಫಲವಾಗಿ ಅವಳು ಆನಂದ್ ಎಂಬ ಮಗುವಿಗೆ ಜನ್ಮನೀಡಿದಳು. ತನ್ನ ಗಂಡ ಬೇರೆ ಊರಿನಲ್ಲಿ ಹೋಟೆಲ್ ವ್ಯಾಪಾರವನ್ನು ನಡೆಸುತ್ತಿದ್ದ. ಅಲ್ಲಿಂದ ಜೀವನಕ್ಕಾಗಿ ತನಗೆ ಹಣ ಕಳುಹಿಸುತ್ತಿದ್ದ. ಆದರೆ ಸ್ವಲ್ಪ ಸಮಯದ ನಂತರ ಹಣ ಕಳುಹಿಸುವುದನ್ನು ನಿಲ್ಲಿಸಿಬಿಟ್ಟ. ೧೯೭೫ರ ಜೂನ್ ೩ ರಂದು ಅವನು ರಸೀಲಾ ಎಂಬುವಳೊಡನೆ ಎರಡನೆ ಮದುವೆಯನ್ನು ಮಾಡಿಕೊಂಡಿದ್ದ, ಆದರೆ ಅದು ತನಗೆ ತಿಳಿದದ್ದು, ೧೯೮೮ರಲ್ಲಿ ಎಂದು ತಿಳಿಸಿದ್ದಾಳೆ. ಆದರೆ ಅಪೀಲುದಾರ(ಸುಭಾಷ್ ) ಅವಳು(ಪ್ರತಿವಾದಿ) ತನಗೆ ಗೊತ್ತೇ ಇಲ್ಲ, ತಾನು ಅವಳನ್ನು ವಿವಾಹವಾಗಿಯೇ ಇಲ್ಲ, ಹಾಗೂ ಅವಳ ಜೊತೆ ವಾಸ ಮಾಡಿಲ್ಲ, ಹಾಗಾಗಿ ಅವಳು ಹೇಳುವಂತೆ ಆನಂದ ತನ್ನ ಮಗನಲ್ಲವೇ ಅಲ್ಲ. ತಾನು ಅವಳ ತಂದೆಯ ಮನೆಯ ಬಳಿ ಇರುವ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದುದರಿಂದ ಅದರ ಪ್ರಯೋಜನ ಪಡೆದು ತನ್ನ ವಿರುದ್ಧ ಸುಳ್ಳು ಮೊಕದ್ದಮೆ ಹೂಡಲಾಗಿದೆ ಎಂದು ಹೇಳಿದ್ದಾನೆ. ಅವಳು ಕಾನೂನುಬದ್ಧವಾಗಿ ತನ್ನನ್ನು ವಿವಾಹವಾದ ಪತ್ನಿಯಲ್ಲದಿರುವುದರಿಂದ ಭಾರತ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿ ಜೀವನಾಂಶಕ್ಕಾಗಿ ಹಾಕಿದ ಅರ್ಜಿಗೂ ಯಾವುದೇ ಆಧಾರವಿಲ್ಲದಿರುವುದರಿಂದ ಅವಳನ್ನು ಹಾಗೂ ಅವಳ ಮಗನ ಪೋಷಣೆಗಾಗಿ ಹಣ ಕೊಡಲು ತಾನು ಬದ್ಧನಾಗಿಲ್ಲ ಎಂದು ವಾದಿಸಿದ.

ವಿಚಾರಣೆಯು ನ್ಯಾಯಾಲಯದಲ್ಲಿ ಪ್ರತಿವಾದಿ(ಲತಾ) ಇಬ್ಬರು ಸ್ವತಂತ್ರ ಸಾಕ್ಷಿಗಳನ್ನು ಹಾಜರು ಪಡಿಸಿದುದೇ ಅಲ್ಲದೆ, ತನ್ನ ಮತ್ತು ಮಗ ಆನಂದನ ಸಾಕ್ಷ್ಯಗಳನ್ನೂ ನೀಡಿದಳು. ಅಪೀಲುದಾರನೂ(ಸುಭಾಷ್) ತನ್ನ ಸಾಕ್ಷ್ಯವನ್ನು ನೀಡಿದ.

ದಸ್ತಾವೇಜೀಯ ಹಾಗೂ ಮೌಖಿಕ ಸಾಕ್ಷ್ಯಗಳನ್ನು ಆಧರಿಸಿ ವಿಚಾರಣಾ ನ್ಯಾಯಧೀಶರು ಪ್ರತಿವಾದಿ ಹಾಗೂ ಅಪೀಲುದಾರರು ಕಾನೂನು ರೀತ್ಯಾ ವಿವಾಹವಾದ ಪತಿಪತ್ನಿಯರೆಂದೂ ಮತ್ತು ಅಪೀಲುದಾರ ತನ್ನ ಪತ್ನಿಯನ್ನು ಅತ್ಯಂತ ಕ್ರೌರ್ಯದಿಂದ ನಡೆಸಿಕೊಂಡಿರುವುದರಿಂದ ಅವಳು ವಿಚ್ಛೇದನೆ ಪಡೆಯಲು ಅರ್ಹಳಾಗಿದ್ದಾಳೆಂದೂ ತಿಳಿಸಿ ವಿವಾಹ ವಿಚ್ಛೇದನೆಗೆ ಆದೇಶ ನೀಡಿದುದೇ ಅಲ್ಲದೆ, ತಾಯಿ ಮತ್ತು ಮಗ ಇಬ್ಬರಿಗೂ ಅರ್ಜಿ ದಿನಾಂಕದಿಂದ ಜೀವನಾಂಶವನ್ನು ಮುಂಜೂರು ಮಾಡಿ ಅದೇಶ ಹೊರಡಿಸಿದರು. ವಿಚಾರಣಾ ನ್ಯಾಯಾಲಯಾದ ಈ ಅದೇಶವನ್ನು ಪ್ರಶ್ನಿಸಿ ಅಪೀಲುದಾರ ಎರಡು ಅಪೀಲುಗಳನ್ನು ಸಲ್ಲಿಸಿದ್ದಾನೆ.

ಈ ಪ್ರಕರಣದಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ, ಕಾನೂನಿನ ಆಶಯಕ್ಕೆ ಗಮನ ನೀಡಿ ಕಾನೂನನ್ನು ಅನ್ವಯಿಸಿದಾಗ ಮಾತ್ರವೇ ಮಹಿಳೆಗೆ ವಾಸ್ತವಿಕ ನ್ಯಾಯ ದೊರೆಯಲು ಸಾಧ್ಯ ಎಂಬುದು

ನಿರೂಪಿತವಾಗಿರುವ ಬಗೆಯನ್ನು. ಕಾನೂನಿನ ಉಪಬಂಧಗಳ ಮೂಲಕ ಔಪಚಾರಿಕ ಸಮಾನತೆ ದೊರೆಯುಬಹುದು, ಆದರೆ ಆ ಉಪಬಂಧಗಳ ಆಶಯವನ್ನು ಪರಿಗಣಿಸಿ ಕಾನೂನನ್ನು ಅನ್ವಯಿಸಿದಾಗ ಎಂದರೆ, ಕಾನೂನು ರಚನೆಯ ಹಿಂದಿರುವ ಉದ್ದೇಶ, ಆಗಿನ ಸಾಮಾಜಿಕ ಪರಿಸ್ಥಿತಿ, ಕಾನೂನು ರಚನೆಯ ಕಾಲದಲ್ಲಿದ್ದ ಮಹಿಳೆಯ ಸ್ಥಾನಮಾನ, ಇವುಗಳನ್ನು ಪರಿಗಣಿಸಿದಾಗ ಮಾತ್ರವೇ ಮಹಿಳೆಗೆ ವಾಸ್ತವಿಕ ನ್ಯಾಯ ದೊರೆಯುವುದು ಸಾದ್ಯವಾಗುತ್ತದೆ.

ಪ್ರಸ್ತುತ ಪ್ರಕರಣದಲ್ಲಿ, ಅಪೀಲುದಾರನ(ಸುಭಾಷ್) ಪರ ವಾದಿಸಿದ ವಕೀಲರು ಆಧರಿಸಿದುದು ೧೯೫೫ರ ಹಿಂದೂ ವಿವಾಹ ಅಧಿನಿಯಮದ ೭ನೇ ಪ್ರಕರಣವನ್ನು. ಅಧಿನಿಯಮದ ೭ನೇ ಪ್ರಕರಣ "ವಿವಾಹದ ಎರಡು ಪಕ್ಷಕಾರರ ಮತಾಚರಣೆಗಳು ಮತ್ತು ಸಂಪ್ರದಾಯಗಳಿಗೆ ಅನುಸಾರವಾಗಿ ಹಿಂದೂ ವಿವಾಹವನ್ನು ಅನುಷ್ಠಾನಗೊಳಿಸಬಹುದು ಮತ್ತು ಅಂಥ ಆಚರಣೆಗಳು ಮತ್ತು ಸಂಪ್ರದಾಯಗಳಲ್ಲಿ 'ಸಪ್ತಪದಿ'ಯೂ ಸೇರಿದ್ದರೆ, ಆಗ ಏಳನೇ ಹೆಜ್ಜೆಯನ್ನು ಇಟ್ಟಾಗ ವಿವಾಹ ಪೂರ್ಣಗೊಳ್ಳುತ್ತದೆ. ಮತ್ತು ಬಂಧನಕಾರಿಯಾಗುತ್ತದೆ ಎನ್ನುತ್ತದೆ. ಎರಡೂ ಪಕ್ಷಕಾರರಿಗೆ ಸಂಬಂಧಿಸಿದ ಮತಾಚರಣೆಗಳು ಮತ್ತು ಸಂಪ್ರದಾಯಗಳಲ್ಲಿ ಸಪ್ತಪದಿಯ ಆಚರಣೆ ಇಲ್ಲ ಎಂಬ ಬಗ್ಗೆ ದಾಖಲೆಗಳಿಲ್ಲವಾದ್ದರಿಂದ ಸಪ್ತಪದಿಯ ಆಚರಣೆಯನ್ನು ವಿವಾಹ ವಿಧಿಯ ಒಂದು ಭಾಗ ಎಂದು ಪರಿಗಣಿಸಬೇಕು ಮತ್ತು ಮೇಲೆ ಹೇಳಿದ ಪಕ್ಷಕಾರರ ವಿವಾಹ ವಿಧಿಯಲ್ಲಿ ಸಪ್ತಪದಿಯನ್ನು ಆಚರಿಸಿರುವ ಬಗ್ಗೆ ರುಜುವಾತು ಇಲ್ಲದಿರುವ ಕಾರಣ ಅವರ ವಿವಾಹ ಕಾನೂನುಬದ್ಧವಾದ ವಿವಾಹ ಅಲ್ಲ ಮತ್ತು ಅವರಿಬ್ಬರೂ ಕಾನೂನು ರೀತ್ಯಾ ವಿವಾಹವಾದ ಪತಿ ಪತ್ನಿಯರಲ್ಲ ಎಂಬ ವಾದವನ್ನೂ ಅಪೀಲುದಾರ ಸುಭಾಷ್‌ನ ವಕೀಲರು ಮಂಡಿಸಿದರು. ಇದಲ್ಲದೆ, ಇದಕ್ಕೆ ಪೂರ್ವ ನಿದರ್ಶನವಾಗಿ, ಸಪ್ತಪದಿಯಂಥ ಧಾರ್ಮಿಕ ಆಚರಣೆಯನ್ನು ನೆರವೇರಿಸಲಾಗಿದೆ ಎಂಬುದನ್ನು ರುಜುವಾತುಪಡಿಸದಿದ್ದರೆ, ಪಕ್ಷಕಾರರ ನಡುವೆ ನೆರವೇರಿರುವ ವಿವಾಹ ಕಾನೂನುಬದ್ಧ ವಿವಾಹವಾಗುವುದಿಲ್ಲ ಎಂಬ ಸರ್ವೋಚ್ಚನ್ಯಾಯಾಲಯದ ತೀರ್ಪನ್ನು ತಮ್ಮ ವಾದಕ್ಕೆ ಸಮರ್ಥನೆಯಾಗಿ ಬಳಸಿಕೊಂಡರು.(ಉದಹಾರಣೆಗೆ ಹಿಂದೆ ಚರ್ಚಿಸಲಾಗಿರುವ ಪ್ರಿಯಾ ಬಾಲಾ-ವಿ-ಸುರೇಶ ಚಂದ್ರ (೧೯೭೧ ಸಿಆರ್‌ಪಿಎಲ್‌ಜೆ ೯೩೯) ಆದರೆ ಅಪೀಲುದಾರನ ಪರ ಮಂಡಿಸಲಾದ ಎಲ್ಲ ವಾದವನ್ನು ನ್ಯಾಯಾಧೀಶರು ತಳ್ಳಿಹಾಕಿದರು.

ಪ್ರಸ್ತುತ ಪ್ರಕರಣದ ಪಕ್ಷಕಾರರ ನಡುವಿನ ವಿವಾಹಾಚರಣೆಗಳಲ್ಲಿ ಸಪ್ತಪದಿ ಕಡ್ಡಾಯ ವಿಧಿ ಎಂದು ಎಲ್ಲೂ ದಾಖಲೆ ಇಲ್ಲದಿರುವುದರಿಂದ ಸಪ್ತಪದಿ ಕಾನೂನುಬದ್ಧ ವಿವಾಹವನ್ನು ರುಜುವಾತು ಪಡಿಸಲು ಅಗತ್ಯವಾದ ಅಂಶವಾಗುವುದಿಲ್ಲ. ಅಲ್ಲದೆ ಅಪೀಲುದಾರನ ವಕೀಲರು ತಮ್ಮ ವಾದದ ಸಮರ್ಥನೆಗಾಗಿ ಅವಲಂಬಿಸಿರುವ ಪ್ರಕರಣಗಳು ಕ್ರಿಮಿನಲ್ ಪ್ರಕರಣಗಳಲ್ಲಿ ನೀಡಲಾದ ತೀರ್ಪುಗಳು. ಇಲ್ಲಿ "ವಿವಾಹದ

ಇಬ್ಬರು ಪಕ್ಷಕಾರರೂ ಹಿಂದೂಗಳಾಗಿದ್ದು, ಸಪ್ತಪದಿಯನ್ನು ಆಚರಿಸಲಾಗಿದೆ ಎಂಬುದನ್ನು ರುಜುವಾತು ಪಡಿಸಲಾಗದಿದ್ದರೆ, ಎರಡನೆಯ ಮದುವೆಯನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತುಪಡಸಲಾಗಿದೆ ಎಂದು ಭಾವಿಸಲಾಗದು'' ಎಂದು ತಿಳಿಸಿದೆ. ಆದರೆ ಇದು ಭಾರತ ದಂಡ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ ಶಿಕ್ಷಾರ್ಹವಾದ ದ್ವಿಪತ್ನಿತ್ವದ ಅಪಾರಾಧದ ಬಗೆಗಿನ ರುಜುವಾತನ್ನು ಕುರಿತದ್ದಾಗಿದೆ. ಕ್ರಿಮಿನಲ್ ವ್ಯವಹರಣೆಗಳಲ್ಲಿ ಅನ್ವಯಿಸಲಾದ ಪ್ರಕ್ರಿಯೆಯನ್ನು ವೈವಾಹಿಕ ಪ್ರಕರಣಗಳ ವ್ಯವಹರಣೆಗಳಲ್ಲಿ ಅನ್ವಯಿಸಲಾಗದು ಎಂದು ಪ್ರಸ್ತುತ ಪ್ರಕಣದಲ್ಲಿ ತೀರ್ಪು ನೀಡುತ್ತಾ ಅಭಿಪ್ರಾಯಪಟ್ಟರು. ಇದೇ ನ್ಯಾಯಾಲಯದಿಂದ ಇತ್ಯಾರ್ಥವಾದ ಹೂವಯ್ಯ ಕಾಂತಪ್ಪ ಶೆಟ್ಟಿ - ವಿ-ರೇಣುಕಾ ಎಸ್.ಶೆಟ್ಟಿ(ಎಐಆರ್, ೧೯೮೪ ಮುಂಬಯಿ ೨೭೯) ಪ್ರಕರಣದಲ್ಲಿ ನ್ಯಾಯಾಲಯ ಯಾವಾಗಲೂ ವಿವಾಹದ ಪರವಾಗಿ ಮತ್ತು ನ್ಯಾಯಸಮ್ಮತವಾದುದು ಎಂದು ಪೂರ್ವಭಾವನೆ ಮೂಡುತ್ತದೆ. ಅದು ಹಾಗಲ್ಲವೆಂದು, ವಸ್ತುಸ್ಥಿತಿ ಬೇರೆಯೇ ಇದೆ ಎಂಬುದನ್ನು ರುಜುವಾತು ಪಡಿಸುವ ಹೊಣೆ ಅಂಥ ವಿವಾಹವನ್ನು ಮತ್ತು ಅಂಥ ವಿವಾಹದಿಂದ ಹುಟ್ಟಿದ ಮಕ್ಕಳ ನ್ಯಾಯಸಮ್ಮತತೆಯನ್ನು ಪ್ರಶ್ನಿಸುವ ವ್ಯಕ್ತಿಯಿಂದಾಗಿರುತ್ತದೆ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ನಿಂಗು ವಿರು -ವಿ- ಸದಾಶಿವ ನಿಂಗು(೧೯೮೬ ಎಂಎಲ್‌ಜೆ ೧೮೬) ಪ್ರಕರಣದಲ್ಲಿ ತೀರ್ಪು ನೀಡಿದ ಏಕಸದಸ್ಯ ನ್ಯಾಯಪೀಠ (ಸನ್ಮಾನ್ಯ ನ್ಯಾಯಾಧೀಶರಾದ ಎಚ್ .ಎಚ್ .ಕಾಂತಾರಿಯಾ) ಹೀಗೆ ಅಭಿಪ್ರಾಯ ಪಟ್ಟಿದೆ. "...ಭಾರತ ಸಾಕ್ಷ್ಯ ಅಧಿನಿಯಮದ ೫೦ನೇ ಪ್ರಕರಣ ಮತ್ತು ೧೧೪ನೇ ಪ್ರಕರಣಗಳ ಮೇರೆಗಿನ ವಿವಾಹದ ಪರವಾಗಿ ಪೂರ್ವಭಾವನೆ ಮೂಡುವ ಬಗ್ಗೆ ಇರುವ ಕಾನೂನಿನಲ್ಲಿ ಯಾವುದೇ ಸಂದೇಹಕ್ಕೆ ಆಸ್ಪದವಿಲ್ಲ. ಅದರಂತೆ ಒಬ್ಬ ಪುರುಷ ಮತ್ತು ಸ್ತ್ರೀ ಧೀರ್ಘಕಾಲ ಪತಿಪತ್ನಿಯರಂತೆ ವಾಸಮಾಡುತ್ತಿದ್ದು, ಅವರನ್ನು ಪತಿಪತ್ನಿಯರೆಂದು ಗೆಳೆಯರು, ಸಂಬಂಧಿಗಳು ಹಾಗೂ ಅಕ್ಕಪಕ್ಕದವರು ಪರಿಗಣಿಸಿದ್ದಾರೆ. ಅವರು ಕಾನೂನು ಸಮ್ಮತವಾಗಿ ವಿವಾಹವಾಗಿದ್ದಾರೆಂದು ಪೂರ್ವಭಾವನೆ ಮಾಡಲಾಗುತ್ತದೆ. ಅಂಥ ದಂಪತಿಗಳಿಗೆ ಮಕ್ಕಳು ಹುಟ್ಟಿದಲ್ಲಿ ಅವರ ವಿವಾಹದ ಕಾನೂನು ಸಮ್ಮತತೆಯ ಬಗ್ಗೆ ಮೂಡಿದ ಪೂರ್ವಭಾವನೆ ಮತ್ತಷ್ಟು ಗಟ್ಟಿಯಾಗುತ್ತದೆ. ಆದ್ದರಿಂದಲೇ ಈ ವಿವಾಹದ ಪರವಾಗಿ ಮಾಡಲಾಗುವ ಈ ಪೂರ್ವಭಾವನೆಯನ್ನು ವಿವಾಹವಾಗಿರುವ ಬಗ್ಗೆ ಯಾವುದೇ ಸ್ಪಷ್ಟ ರುಜುವಾತಿಲ್ಲ ಎಂಬ ಕಾರಣ ದುರ್ಬಲಗೊಳಿಸುವುದಿಲ್ಲ, ಮತ್ತು ಅಂಥ ವಿವಾಹವನ್ನು ಸುಳ್ಳೆಂದು ವಾದಿಸುವ ವ್ಯಕ್ತಿ ಹಾಜರುಪಡಿಸುವ ಸಾಕ್ಷ್ಯಗಳು ಬಲವಾಗಿರಬೇಕು, ಸೂಕ್ತವಾಗಿರಬೇಕು ಮತ್ತು ನಿರ್ಣಾಯಕವಾಗಿರಬೇಕು. ಈ ಪೂರ್ವಭಾವನೆ ಯನ್ನು ದುರ್ಬಲ ಸಾಕ್ಷ್ಯಗಳ ಮೂಲಕ ಅಲ್ಲಗಳೆಯಲು ಅವಕಾಶ ನೀಡಿದರೆ, ಸಮಾಜದ ದುರ್ಬಲ ಹಾಗೂ ಶೋಷಿತ ವರ್ಗಗಳಾದ ಸ್ತ್ರೀಯರು ಮತ್ತು ಮಕ್ಕಳು ತಮ್ಮ ಇರುವಿಕೆ ಹಾಗೂ ಸ್ಥಾನಮಾನಕ್ಕೆ

ಸಂಬಂಧಿಸಿದಂತೆ ಅನಿಶ್ಚಿತತೆಯ ಹುಚ್ಚಾಟಕ್ಕೆ ಬಲಿಯಾಗಿ ಬಿಡುತ್ತಾರೆ. ಇದು ಮನುಷ್ಯನಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸೂಕ್ತ ವಾತಾವರಣವನ್ನು ಕಲ್ಪಿಸುವುದಿಲ್ಲ. ಅವರು ಸಮಾಜದ ಅತ್ಯಂತ ಶೋಷಿತ ವರ್ಗವಾಗಿ ಬಿಡುತ್ತಾರೆ. ವಿವಾಹದ ಕಾನುನು ಸಮ್ಮತತೆಯ ಬಗ್ಗೆ ನ್ಯಾಯಾಲಯಗಳೂ ವ್ಯಕ್ತಪಡಿಸಿರುವ ಈ ಅಭಿಪ್ರಾಯಗಳು ಮಹಿಳೆಗೆ ಕಾನೂನಿನ ಮೂಲಕ ವಾಸ್ತವಿಕ ನ್ಯಾಯವನ್ನು ದೊರಕಿಸಿಕೊಡುವ ಪ್ರಯತ್ನಗಳಾಗಿವೆ.

ಸುಮಿತ್ರಾದೇವಿ -ವಿ- ಭಿಕನ್ ಚೌಧರಿ [(೧೯೮೫)೧ ಎಸ್‌ಸಿಸಿ ೬೩೭] ಪ್ರಕರಣದಲ್ಲಿ ಸುಮಿತ್ರಾ ದೇವಿ ಎಂಬಾಕೆ(ಅಪೀಲುದಾರಳು) ಭಾರತ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿ ತನಗೆ ಮತ್ತು ತನ್ನ ಅಪ್ರಾಪ್ತ ವಯಸ್ಕ ಮಗಳಿಗೆ ಜೀವನಾಂಶ ಕೋರಿ ಅರ್ಜಿಹಾಕಿದ್ದಾರೆ. ಅಪೀಲುದಾರಳೂ ಪ್ರತಿವಾದಿಯನ್ನು(ಭಿಕನ್ ಚೌಧರಿಯನ್ನು) ೧೯೭೧ರಲ್ಲಿ ಮದುವೆಯಾದುದಾಗಿಯೂ, ಮದುವೆಯ ನಂತರ ಅವರಿಬ್ಬರಿಗೆ ಹೆಣ್ಣು ಮಗುವಾಯಿತೆಂದು ತಿಳಿಸಿದ್ದಾರೆ. ಆದರೆ ಪ್ರತಿವಾದಿಗೆ ಆ ವೇಳೆಗಾಗಲೇ ಮದುವೆಯಾಗಿ ಪತ್ನಿ ಜೀವಂತವಿದ್ದಳೆಂದೂ, ಆ ವಿಷಯ ತನಗೆ ತಿಳಿದಿರಲಿಲ್ಲವೆಂದೂ ತಿಳಿಸಿದ್ದಾಳೆ. ತನಗೆ ಮದುವೆಯ ವಿಷಯ ತಿಳಿದ ನಂತರ, ತಮ್ಮಿಬ್ಬರ ಸಂಬಂಧದಲ್ಲಿ ಬಿರುಕುಂಟಾಯಿತೆಂದೂ ಕ್ರಮೇಣ ತನ್ನನ್ನು ಅವನು ಸಂಪೂರ್ಣವಾಗಿ ನಿರ್ಲಕ್ಷಿಸಿದುದಾಗಿಯೂ ತನ್ನನ್ನು ನೋಡಿಕೊಳ್ಳಲೂ ಅವನು ನಿರಾಕರಿಸಿದನೆಂದೂ ತಿಳಿಸಿದ್ದಾರೆ. ಆದ್ದರಿಂದ ಬೇರೇನೂ ದಾರಿ ಕಾಣದೆ ಆಕೆ ತನಗಾಗಿ ಮತ್ತು ತನ್ನ ಮಗಳಿಗಾಗಿ ಜೀವನಾಂಶ ಕೋರಿದ್ದಾರೆ.

ಪ್ರತಿವಾದಿ ತಾನು ಅಪೀಲುದಾರಳನ್ನು ವಿವಾಹವಾದುದನ್ನು ನಿರಾಕರಿಸದಿದ್ದರೂ ಅಂಥ ವಿವಾಹ ಶೂನ್ಯವೆಂದು ವಾದಿಸಿದ್ದಾನೆ. ಅಪೀಲುದಾರಳ ತಂದೆ ಗ್ರಾಮದಲ್ಲಿ ಪ್ರಭಾವಶಾಲೀ ವ್ಯಕ್ತಿಯಾಗಿದ್ದ. ಅವನು ಅಪೀಲುದಾರಳನನ್ನು ವಿವಾಹವಾಗುವಂತೆ ಬಲವಂತಪಡಿಸಿದುದರಿಂದ ತಾನು ವಿವಾಹವಾಗ ಬೇಕಾಯಿತು. ವಿವಾಹದ ವೇಳೆಗಾಗಲೇ ಅಪೀಲುದಾರಳು ಮೂರು ತಿಂಗಳ ಗರ್ಭಿಣಿಯಾಗಿದ್ದಳು. ಇದನ್ನು ತಿಳಿದ ನಂತರ ಅವನು ಅವಳೊಂದಿಗೆ ವಾಸಿಸಲಿಲ್ಲವೆಂದೂ, ಮಗು ತನ್ನದಲ್ಲವೆಂದೂ ತಿಳಿಸಿದ್ನೆ. ಸಬ್ ಡಿವಿಷನಲ್ ಮ್ಯಾಜಿಸ್ಟ್ರೇಟರು ಲಭ್ಯವಿದ್ದ ಸಾಕ್ಷ್ಯಾಧಾರಗಳನ್ನು ಅವಲಂಬಿಸಿ ಅಪೀಲುದಾರಳು ಮತ್ತು ಪ್ರತಿವಾದಿ ಪತಿಪತ್ನಿಯರೆಂದೂ, ಮತ್ತು ಅಪೀಲುದಾರಳು ಹೇಳುವಂತೆ ಮಗು ಅವರಿಗೆ ಹುಟ್ಟಿದ ಮಗುವೆಂದೂ ತೀರ್ಪುನೀಡಿ ಪ್ರತಿವಾದಿ ಇಬ್ಬರಿಗೂ(ತಾಯಿ ಮತ್ತು ಮಗಳು) ಜೀವನಾಂಶ ನೀಡಬೇಕೆಂದು ಆದೇಶಿಸಿದರು. ಆದರೆ ಈ ಆದೇಶದ ವಿರುದ್ಧ ಪ್ರತಿವಾದಿ ಸತ್ರ ನ್ಯಾಯಾಲಯಕ್ಕೆ ಅಪೀಲು ಹೂಡಿದ. ಸತ್ರ ನ್ಯಾಯಾಲಯದಲ್ಲಿ ನ್ಯಾಯಾಧೀಶರು, ಅಪೀಳುದಾರಳು ವಿವಾಹವಾದುದನ್ನು ರುಜುವಾತು ಪಡಿಸಲು ವಿಫಲಳಾಗಿದ್ದಾಳೆ ಎಂಬ ಕಾರಣ ನೀಡಿ ಸಬ್ ಡಿವಿಷನಲ್ ಜುಡಿಷಿಯಲ್ ಮ್ಯಾಜಿಸ್ಟ್ರೇಟರ ಆದೇಶವನ್ನು

ರದ್ದುಪಡಿಸಿದರು. ಈ ಆದೇಶದ ವಿರುದ್ಧ ಉಚ್ಚನ್ಯಾಯಾಲಯಕ್ಕೆ ಹೂಡಿದ ಅಪೀಲಿನಲ್ಲಿ ಹೊರಬಿದ್ದ ಆದೇಶವೂ ಅಪೀಲುದಾರಳಿಗೆ ವಿರುದ್ಧವಾಗಿಯೇ ಇದೆ ಆದ್ದರಿಂದ ಈ ಆದೇಶದ ವಿರುದ್ಧ ಈಗ ನ್ಯಾಯಾಲಯದಲ್ಲಿ ಅಪೀಲುದಾರಳು ಅಪೀಲು ಹೂಡಿದ್ದಾಳೆ. ಈ ಪ್ರಕರಣದಲ್ಲಿ ತೀರ್ಪು ನೀಡುತ್ತಾ "ಹೆಚ್ಚುವರಿ ಸತ್ರ ನ್ಯಾಯಾಧೀಶರು ಹಾಗೂ ಉಚ್ಚನ್ಯಾಯಾಲಯದ ನ್ಯಾಯಾಧೀಶರಿಬ್ಬರೂ ಎರಡೂ ತೀರ ತಾಂತ್ರಿಕ ರೀತಿಯಲ್ಲಿ ಈ ಪ್ರಕರಣವನ್ನು ವಿಶ್ಲೇಷಿಸಿದ್ದಾರೆ. ಒಂದು ಹಿಂದೂ ವಿವಾಹ ಕಾನೂನು ಸಮ್ಮತವೆನಿಸಬೇಕಾದರೆ ಸಾಂಪ್ರದಾಯಿಕ ಆಚರಣೆಗಳಾದ ಹೋಮ ಮತ್ತು ಸಪ್ತಪದಿಗಳ ನೆರವೇರಿಕೆ ಕಡ್ಡಾಯವಾದರೂ ಅವಿಲ್ಲದ ವಿವಾಹ ಪದ್ಧತಿಯೂ ಕಾನೂನು ರೀತ್ಯಾ ಅಂಗೀಕಾರಾರ್ಹವಾಗುತ್ತದೆ ಮತ್ತು ಅಂಥ ವಿವಾಹಗಳು ಕಾನೂನು ಸಮ್ಮತ ಸಂಬಂಧಗಳನ್ನು ಸೃಜಿಸುತ್ತವೆ. ಸತ್ರ ನ್ಯಾಯಾಧೀಶರಾಗಲಿ, ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಲಿ, ಪ್ರತಿವಾದಿ ಹಾಗೂ ಅಪೀಲುದಾರರಿಬ್ಬರೂ ಒಂದು ದಶಕದ ಕಾಲ ಪತಿಪತ್ನಿಯರಾಗಿ ಬಾಳಿದ್ದರು, ಮತದಾರರ ಪಟ್ಟಿಯನ್ನೂ ಒಳಗೊಂಡಂತೆ ಇತರ ಸಾರ್ವಜನಿಕ ದಾಖಲೆಗಳಲ್ಲಿ ಅವರನ್ನು ಪತಿಪತ್ನಿಯರೆಂದೇ ತೋರಿಸಲಾಗಿದೆ. ಪತ್ನಿಯ ಗ್ರಾಮದ ಸಾಕ್ಷಿಗಳು ಮದುವೆಯ ವಿಷಯವನ್ನು ದೃಢೀಕರಿಸಿದ್ದಾರೆ ಎಂಬ ವಿಷಯಗಳನ್ನು ಪೂರ್ಣವಾಗಿ ಕಡೆಗಣಿಸಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ವಿಚಾರಣೆಯ ಕಾಲದಲ್ಲಿ ವಕೀಲರ ತಪ್ಪಿನಿಂದಾಗಿ ವಿವಾಹ ಕಾಲದಲ್ಲಿ ನೆರವೇರಿಸಿದ ಸಂಪ್ರದಾಯಿಕ ಆಚರಣೆಗಳ ಬಗ್ಗೆ ಸಾಕ್ಷಿಗಳು ಹೇಳಿಲ್ಲದಿರಬಹುದು. ಅಥವಾ ಸಾಕ್ಷ್ಯವನ್ನು ದಾಖಲಿಸುವಾಗ ಮ್ಯಾಜಿಸ್ಟ್ರೇಟರು ವಿವಾಹದ ವಿವರಗಳನ್ನು ದಾಖಲು ಮಾಡದೆ ಕೇವಲ ವಿವಾಹವಾದ ಘಟನೆಯ ಬಗ್ಗೆ ದಾಖಲು ಮಾಡಿರಬಹುದು. ವಿವಾಹದ ರೀತಿಯನ್ನು ಇಲ್ಲಿ ದಾಖಲು ಮಾಡಿಲ್ಲದಿರುವುದರಿಂದ ಮತ್ತು ಸಾಂಪ್ರದಾಯಿಕ ಹಿಂದೂ ವಿವಾಹ ಕಾನೂನು ಮಾನ್ಯವಾಗ ಬೇಕಾದರೆ ಹಿಂದೂ ಕಾನೂನು ಕೆಲವೊಂದು ಮತಾಚರಣೆಗಳ ನೆರವೇರಿಕೆಯನ್ನು ಅಗತ್ಯಪಡಿಸುವುದರಿಂದ ಈ ವಿವರಗಳ ಬಗ್ಗೆ ಹೊಸದಾಗಿ ವಿಚಾರಣೆ ನಡೆಸುವಂತೆ ತಿಳಿಸಿ ಮ್ಯಾಜಿಸ್ಟ್ರೇಟರಿಗೆ ಪ್ರಕರಣವನ್ನು ಹಿಂದಕ್ಕೆ ಕಳುಹಿಸಲಾಗಿದೆ." ಇದರ ಜೊತೆಗೆ ಈ ಸಂದರ್ಭದಲ್ಲಿ ಹೇಳಿದ ನ್ಯಾಯಾಧೀಶರ ಮಾತುಗಳು ಮಹತ್ವ ವಾದವುಗಳು. "ನ್ಯಾಯಾಲಯದ ಪಾತ್ರ ಕೇವಲ ಮೌನ ವೀಕ್ಷಕನ ಇಲ್ಲವೇ ನಿಷ್ಕ್ರಿಯ ಏಜೆನ್ಸಿಯ ಪಾತ್ರವಲ್ಲ. ನ್ಯಾಯಾಲಯದ ಮುಂದಿರುವ ಇಂಥ ವಿವಾದಗಳಲ್ಲಿ ಎಂದರೆ ಅಲಕ್ಷಿತ ಪತ್ನಿ ಹಾಗೂ ಅಪ್ರಾಪ್ತವಯಸ್ಕ ಮಗಳ ಜೀವನಾಂಶ ಕುರಿತ ಇಂಥ ಪ್ರಕರಣಗಳಲ್ಲಿ ನಿಜಾಂಶವನ್ನು ತಿಳಿಯಲು ನ್ಯಾಯಾಲಯ ಪ್ರಾಮಾಣಿಕ ಪ್ರಯತ್ನ ಮಾಡಬೇಕು" ನ್ಯಾಯಾಧೀಶರು ಮುಂದುವರಿದು, "ಸಾಕ್ಷಿಗಳು ತಮ್ಮ ಮುಂದೆ ಹೇಳಿಕೆ ನೀಡುವಾಗ, ಸರಿಯಾದ ಪ್ರಶ್ನೆಗಳನ್ನು ಹಾಕಿದ್ದಿದ್ದರೆ ಒಂದಲ್ಲ ಒಂದು ರೀತಿಯಲ್ಲಿ ಸರಿಯಾದ ಸಾಕ್ಷ್ಯ ಹೊರಬರುತ್ತಿತ್ತು. ಹಾಗೆಯೇ ಅಪೀಲುದಾರಳ ಪರ ವಕೀಲರು ಸರಿಯಾದ

ಸಮಯದಲ್ಲಿ ಸರಿಯಾದ ಪಾತ್ರವಹಿಸ ಬೇಕಾಗಿತ್ತು. ಆದರೆ ಲೋಪದಿಂದ ದೀರ್ಘಕಾಲ ವ್ಯಯವಾಗಿದೆ. ಅಪೀಲುದಾರಳು ಜೀವನಾಂಶಕ್ಕೆ ಹಕ್ಕುಳ್ಳವಳಾಗಿದ್ದರೆ ಈ ಎಲ್ಲ ವರ್ಷಗಳೂ ಅವಳು ಅದರಿಂದ ವಂಚಿತಳಾದಂತಾಗುತ್ತದೆ'' ಎಂದೂ ಅಭಿಪ್ರಾಯಪಟ್ಟಿದ್ದಾರೆ.

ನ್ಯಾಯ ನೀಡಿಕೆಯ ಸಂದರ್ಭದಲ್ಲಿ ವ್ಯವಹರಣೆಗಳನ್ನು ತಾಂತ್ರಿಕವಾಗಿ ನಡೆಸದೆ ನಿಜವಾದ ಕಳಕಳಿಯಿಂದ ನಡೆಸಬೇಕು. ಕಾನೂನಿನ ಆಶಯವನ್ನು ಈಡೇರಿಸುವ ದೃಷ್ಟಿಯಿಂದ ಕಾನೂನುಗಳ ಅನ್ವಯ ಹಾಗೂ ವ್ಯಾಖ್ಯಾನ ಮಾಡಬೇಕು ಎಂಬುದಲ್ಲದೆ, ಈ ದೃಷ್ಟಿ ಪ್ರತಿ ಹಂತದಲ್ಲಿಯೂ ಪ್ರತಿಫಲಿತವಾಗಬೇಕು ಎಂಬ ಕಳಕಳಿ ಈ ತೀರ್ಪಿನಲ್ಲಿ ವ್ಯಕ್ತವಾಗಿದೆ. ಇದೇ ದೃಷ್ಟಿಕೋನವನ್ನು ಭಾರತ ದಂಡ ಪ್ರಕ್ರಿಯಾ ಸಂಹಿತೆಯ ೪೯೪ನೇ ಪ್ರಕರಣದ ಅಡಿಯಲ್ಲಿ ದ್ವಿಪತ್ನಿತ್ವವನ್ನು ರುಜುವಾತು ಪಡಿಸುವಾಗಲೂ ನ್ಯಾಯಾಲಯಗಳಲ್ಲಿ ಇತ್ತೀಚೆಗೆ ಅನ್ವಯಿಸುತ್ತಿದ್ದು, ಕಾನೂನಿನಲ್ಲಿ ಬಳಸಿರುವ ಪದದ ಶಬ್ದಶಃ ಅರ್ಥಕ್ಕೆ ಕಟ್ಟುಬಿದ್ದು ವ್ಯಾಖ್ಯಾನಿಸುವ ಪರಿಪಾಠವನ್ನು ಬಿಡುವ ಮೂಲಕ ಅಪರಾಧಿಯನ್ನು ಕಾನೂನಿನ ಕೈಗಳಿಂದ ತಪ್ಪಿಸಿಕೊಳ್ಳದಂತೆ ಮಾಡಲಾಗುತ್ತದೆ. ಇದು ಸ್ವಾಗತಾರ್ಹ ಬೆಳವಣಿಗೆ.

ಸುರೇಶ್ ಕುಮಾರ್ ಆಸ್ಥಾನಾ -ವಿ- ಶ್ರೀಮತಿ ಕಮಲೇಶ ಅಸ್ಥಾನ,(ಎಐಆರ್ ೭೪, ಅಲಹಾಬಾದ್ ೧೧೦) ಪ್ರಕರಣದಲ್ಲಿ ಕಾನೂನಿನ ರಚನೆಯಲ್ಲಿ ಬಳಕೆಯಾದ ಪದಗಳ ಉದ್ದೇಶವನ್ನು ಹಾಗೂ ಆಶಯವನ್ನು ವಿಫಲಗೊಳಿಸಲು ಬಳಸಬಹುದು ಎಂಬುದು ಸ್ಪಷ್ಟವಾಗುತ್ತದೆ. ಅಂಥ ಸಂದರ್ಭಗಳಲ್ಲಿ ನ್ಯಾಯ ನೀಡುವ ನ್ಯಾಯಾಧೀಶರು ಅತ್ಯಂತ ಎಚ್ಚರಿಕೆಯಿಂದ ಇದ್ದ ಹೊರತು ಹಾಗೆ ವಿಫಲಗೊಳಿಸುವ ಪ್ರಯತ್ನಗಳು ಯಶಸ್ವಿಯಾಗಿ ಬಿಡಬಹುದು.

ಈ ಪ್ರಕರಣದಲ್ಲಿ, ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣದ ಅಡಿಯಲ್ಲಿ ಅಧೀನ ನ್ಯಾಯಾಲಯ ನೀಡಿದ ಆದೇಶವನ್ನು ಪ್ರಶ್ನಿಸಿ ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೧೫ನೇ ಪ್ರಕರಣದ ಅಡಿಯಲ್ಲಿ ಪುನರೀಕ್ಷಣಾ ಅರ್ಜಿಯನ್ನು ಅಲಹಾಬಾದ್ ಉಚ್ಚನ್ಯಾಯಾಲಯದಲ್ಲಿ ಸಲ್ಲಿಸಲಾಗಿದೆ. ವಿಚಾರಣೆ ನಡೆಸಲು ಅಪೀಲು ನ್ಯಾಯಾಲಯಕ್ಕೆ ಅಧಿಕಾರವ್ಯಾಪ್ತಿಯಿಲ್ಲ ಎಂದು ವಾದಿಸಿ ಪುನರೀಕ್ಷಣಾ ಅರ್ಜಿಯಲ್ಲಿ ನೀಡಿದ ಪರಿಹಾರವನ್ನು ಅಪೀಲುದಾರ ಪ್ರಶ್ನಿಸಿದ್ದಾನೆ. ತನ್ನ ಕಕ್ಷಿದಾರನ ಪರವಾಗಿ ವಾದಿಸಿದ ವಕೀಲರು ಆಧರಿಸಿದ್ದು ಹಿಂದೂವಿವಾಹ ಅಧಿನಿಯಮದ ೨೧ಮತ್ತು ೨೪ನೇ ಪ್ರಕರಣಗಳನ್ನು ಈ ಬಗ್ಗೆ ವಿಶ್ಲೇಷಣೆ ಮಾಡುತ್ತಾ ನ್ಯಾಯಾದೀಶರು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ- ಈ ಪ್ರಕರಣದಲ್ಲಿ ಎತ್ತಿರುವ ವಾದ ೨೪ನೇ ಪ್ರಕರಣದಲ್ಲಿ ಬಳಸಿರುವ ''ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ವ್ಯವಹರಣೆಯಲ್ಲಿ'' ಎಂಬ ಪದಗಳನ್ನು ಆಧರಿಸಿವೆ. ಇದನ್ನು ಆಧರಿಸಿ, ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೧೫ನೇ ಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಪುನರೀಕ್ಷಣಾ ಅರ್ಜಿ ಈ ಅಧಿನಿಯಮದ ಅಡಿಯಲ್ಲಿನ

ವ್ಯವಹರಣೆಯಾಗುವುದಿಲ್ಲ ಎಂಬ ವಾದವನ್ನು ಮಂಡಿಸಲಾಗಿದೆ. ಈ ಅಧಿನಿಯಮದ ವ್ಯವಹರಣೆಗಳಲ್ಲಿ ಹೊರಡಿಸಲಾದ ಆದೇಶಗಳ ಮೇಲೆ ಅಪೀಲು ಹೂಡುವುದಕ್ಕಾಗಲೀ, ಪುನರೀಕ್ಷಣಾ ಅರ್ಜಿಯನ್ನು ಸಲ್ಲಿಸುವುದಕ್ಕಾಗಲೀ ಅದರಲ್ಲಿ ನೇರವಾಗಿ ಉಪಬಂಧ ಕಲ್ಪಿಸಿಲ್ಲ. ಅಧಿನಿಯಮದ ೨೧ನೇ ಪ್ರಕರಣ ಅಧಿನಿಯಮದಲ್ಲಿರುವ ಇತರ ಉಪಬಂಧಗಳಿಗೆ ಮತ್ತು ಉಚ್ಚನ್ಯಾಯಾಲಯವು ಮಾಡಿದ ಆದೇಶಗಳಿಗೆ ಒಳಪಟ್ಟು, ಅಧಿನಿಯಮದ ಅಡಿಯಲ್ಲಿನ ಎಲ್ಲ ವ್ಯವಹರಣೆಗಳೂ ಸಾಧ್ಯವಾದಷ್ಟು ಸಿವಿಲ್ ಪ್ರಕ್ರಿಯಾ ಸಂಹಿತೆ, ೧೯೦೮ರಿಂದ ವಿನಿಯಮಿತವಾಗತಕ್ಕದು ಎಂದು ಉಪಬಂಧ ಕಲ್ಪಿಸುತ್ತದೆ. ೨೮ನೇ ಪ್ರಕರಣ ಈ ಅಧಿನಿಯಮದ ಅಡಿಯಲ್ಲಿ ನ್ಯಾಯಾಲಯವು ಮಾಡಿದ ಎಲ್ಲ ಆದೇಶಗಳು ಮತ್ತು ಡಿಕ್ರಿಗಳನ್ನು ನ್ಯಾಯಾಲಯವು ತನ್ನ ಮೂಲ ಸಿವಿಲ್ ಅಧಿಕಾರವ್ಯಾಪ್ತಿಯನ್ನು ಚಲಾಯಿಸಿ ಹೊರಡಿಸಿದ ಡಿಕ್ರಿಗಳು ಮತ್ತು ಆದೇಶಗಳ ರೀತಿಯಲ್ಲಿ ಜಾರಿಗೊಳಿಸತಕ್ಕದ್ದು ಮತ್ತು ಅವುಗಳ ಮೇಲೆ ಅಪೀಲುಗಳನ್ನು ಸಿವಿಲ್ ಪ್ರಕ್ರಿಯಾ ಸಂಹಿತೆಯ ಅಡಿಯಲ್ಲಿ ಹೂಡತಕ್ಕದ್ದು ಎಂದು ಉಪಬಂಧ ಕಲ್ಪಿಸುತ್ತದೆ. ಹಾಗೆಯೇ ಅಧಿನಿಯಮದ ಅಡಿಯಲ್ಲಿನ ವ್ಯವಹರಣೆಗಳಲ್ಲಿ ಹೊರಡಿಸಿದ ಆದೇಶಗಳ ವಿರುದ್ಧ ಪುನರೀಕ್ಷಣೆಗಾಗಿ ಹಾಕುವ ಅರ್ಜಿಗಳನ್ನು ಸಹ ಸಿವಿಲ್ ಪ್ರಕ್ರಿಯಾ ಸಂಹಿತೆಯ ಅಡಿಯಲ್ಲಿಯೇ ಸಲ್ಲಿಸಬಹುದು.

ಮೇಲೆ ಹೇಳಿದಂತೆ, ನ್ಯಾಯಾಲಯದ ಅಧಿಕಾರ ವ್ಯಾಪ್ತಿಯನ್ನು ಪ್ರಶ್ನಿಸಿದಾಗಲೂ ಸಹ, ಆ ಪ್ರಶ್ನೆಯನ್ನು ತೀರ್ಮಾನಿಸುವುದಕ್ಕೆ ಮುಂಚೆಯೇ ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣದ ಅಡಿಯಲ್ಲಿ ಪರಿಹಾರವನ್ನು ನೀಡಲು ನ್ಯಾಯಾಲಯಕ್ಕೆ ಅಧಿಕಾರವಿರುತ್ತದೆ.

೨೪ನೇ ಪ್ರಕರಣದ ಅಡಿಯಲ್ಲಿ ಪರಿಹಾರದ ಮಂಜೂರಾತಿ, ಪ್ರಕರಣದ ಗುಣಗಳನ್ನು(merits) ಅವಲಂಬಿಸುವುದಿಲ್ಲ. ಹಾಗೆಯೇ ಪ್ರಕರಣದಲ್ಲಿ ಜೀವನಾಂಶ ಕೋರಿದ ವ್ಯಕ್ತಿ ಗೆಲ್ಲುತ್ತಾನೆ/ಳೆ ಅಥವಾ ಸೋಲುತ್ತಾನೆ/ಳೆ ಎಂಬುದನ್ನು ಅವಲಂಬಿಸಿರುವುದಿಲ್ಲ. ಪಕ್ಷಕಾರರು ವಿವಾಹವಾಗಿರುವುದನ್ನು ಒಪ್ಪಿಕೊಂಡಿರುವಲ್ಲಿ, ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಪತಿ/ಪತ್ನಿ ಬಡತನದಲ್ಲಿರುವ ಪತ್ನಿ/ಪತಿಯನ್ನು ನೋಡಿಕೊಳ್ಳುವುದು ಕರ್ತವ್ಯವಾಗಿರುತ್ತದೆ ಎಂಬುದು ೨೪ನೇ ಪ್ರಕರಣದ ಅಡಿಯಲ್ಲಿ ವಿಚಾರಣಾಕಾಲೀನ ಜೀವನಾಂಶ ಮಂಜೂರಾತಿಯ ಹಿಂದಿರುವ ಉದ್ದೇಶ. ಎದುರು ಪಕ್ಷಕಾರನು ಮಾಡುವ ಯಾವುದೇ ವಾದ, ಅಂಥ ವಾದ ನ್ಯಾಯಾಲಯದ ಅಧಿಕಾರವ್ಯಾಪ್ತಿಗೆ ಸಂಬಂಧಿಸಿದುದಾಗಿದ್ದರೂ ಸಹ ಈ ಜೀವನಾಂಶ ಮಂಜೂರಾತಿಗೆ ಅಡ್ಡ ಬರುವುದಿಲ್ಲ. ಸಾಕಷ್ಟು ವರಮಾನವಿಲ್ಲದಿರುವ ಪತಿ ಅಥವಾ ಪತ್ನಿ ವ್ಯವಹರಣೆಗಳ ಖರ್ಚನ್ನು ಭರಿಸಲಾರದೆ, ಅದರಿಂದಾಗಿ ವ್ಯವಹರಣೆಯನ್ನು ಮುಂದುವರಿಸಲು ಆಗದಂಥ ಪರಿಸ್ಥಿತಿ ಉಂಟಾಗಬಾರದು ಎಂಬುದು ಇಂಥ ಜೀವನಾಂಶ ಮಂಜೂರಾತಿಯ ಹಿಂದಿರುವ ಉದ್ದೇಶ. ಆದ್ದರಿಂದ, ಈ ಅಧಿನಿಯಮದ ೨೪ನೇ ಪ್ರಕರಣದ ಅಡಿಯಲ್ಲಿ ಮಾಡಿದ ಅರ್ಜಿಯ ಮೇರೆಗೆ ಪರಿಹಾರವನ್ನು,

ಪುನರೀಕ್ಷಣಾ ಅರ್ಜಿಯನ್ನು ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೧೫ನೇ ಪ್ರಕರಣದ ಮೇರೆಗೆ ಹೂಡಿದ್ದರೂ ಸಹ, ಮಂಜೂರು ಮಾಡಲು ಈ ನ್ಯಾಯಾಲಯ ಸಕ್ಷಮವಾಗಿರುತ್ತದೆ ಎಂದು ಅಭಿಪ್ರಾಯ ಪಟ್ಟಿತು.

ಕಾನೂನು ರಚನೆಯಲ್ಲಿ ಅದರ ಆಶಯಕ್ಕೆ ವಿರುದ್ಧವಾದ ವ್ಯಾಖ್ಯಾನ ಕೊಡಲು ಅವಕಾಶವಿದ್ದಲ್ಲಿ ಅಂಥ ಅವಕಾಶವನ್ನು ಅಂಥ ಜೀವನಾಂಶದ ಯಾವುದೇ ಕ್ಲೇಮನ್ನು ಮಾಡುವ ಎಲ್ಲ ಪ್ರಯತ್ನಗಳಲ್ಲಿ ಬಳಸಿಕೊಳ್ಳಲಾಗುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಅಂಥ ಒಂದೊಂದು ಪ್ರಯತ್ನವೂ, ನ್ಯಾಯ ನೀಡಿಕೆಯಲ್ಲಿ ಎದುರಾಗುವ ತೊಡಕು. ಕಾನೂನು ರಚನೆಯಲ್ಲಿರುವ ದೋಷವನ್ನು ಸರಿಪಡಿಸಲು ತಿದ್ದುಪಡಿಗಳನ್ನು ತರುವಂತೆ ಹೋರಾಡುವ ಮಹಿಳಾ ಸಂಘಸಂಸ್ಥೆಗಳು ತಮ್ಮ ಕಾರ್ಯಕ್ಷೇತ್ರವನ್ನು ಕಾನೂನಿನ ಸುಧಾರಣೆಯತ್ತ ಮಾತ್ರ ಗಮನವನ್ನು ಕೇಂದ್ರೀಕರಿಸದೆ, ಮಹಿಳಾಪರ ಕಾನೂನುಗಳನ್ನು ಎಷ್ಟರಮಟ್ಟಿಗೆ ಅನುಷ್ಠಾನಕ್ಕೆ ತರಲಾಗಿದೆ, ಅದನ್ನು ವಿಫಲಗೊಳಿಸುವ ಪ್ರಯತ್ನಗಳು ಯಾವ ರೀತಿಯಲ್ಲಿ ಆಗಬಹುದು, ಅವುಗಳನ್ನು ಮಹಿಳೆಯರು ತಮ್ಮ ಹಕ್ಕುಗಳಿಂದ ವಂಚಿತರನ್ನಾಗಿಸುವಂತೆ ಯಾವ ರೀತಿಯಲ್ಲಿ ತಿರುಚಿ ವ್ಯಾಖ್ಯಾನ ಮಾಡಬಹುದು ಇವುಗಳ ಬಗ್ಗೆಯೂ ತಮ್ಮ ಗಮನ ಹರಿಸಬೇಕಾಗುತ್ತದೆ. ಕಾನೂನಿನ ಯಾವುದೇ ಉಪಬಂಧವನ್ನು ಪ್ರಸ್ತುತ ಪ್ರಕರಣಕ್ಕೆ ಅನ್ವಯಿಸುವಾಗ ಅಂಥ ಉಪಬಂಧದ ಹಿಂದಿರುವ ಆಶಯಕ್ಕೆ ಬಾಧಕವಾಗದ ರೀತಿಯಲ್ಲಿ ಅನ್ವಯಿಸುವುದು ಮುಖ್ಯ. ಈ ಜವಾಬ್ದಾರಿ ಅಂಥ ಕಾನೂನಿನ ಉಪಬಂಧಗಳನ್ನು ಪ್ರಸ್ತುತ ವಿಚಾರಣೆಯಲ್ಲಿರುವ ಪ್ರಕರಣದ ವಿವರಗಳನ್ನಾಧರಿಸಿ ತೀರ್ಪು ಕೊಡುವ ನ್ಯಾಯಾಧೀಶರ ಮೇಲಿರುತ್ತದೆ. ಶ್ರೀಮತಿ ಗಂಗೂ ಪುಂಡಲೀಕ್ ವಾಗಮೇರ್ -ವಿ- ಪುಂಡಲೀಕ್ ಮರೋಟಿ ವಾಗಮೇರ್ ಮತ್ತು ಇತರರು(ಎಐಆರ್ ೭೯ ಮುಂಬಯಿ ೨೬೪) ಈ ಪ್ರಕರಣದಲ್ಲಿ, ವಿಚಾರಣಾಕಾಲೀನ ಜೀವನಾಂಶ ಕೋರಿ ವಿಚಾರಣಾ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದ್ದು, ಅದು ಹೊರಡಿಸಿದ ತೀರ್ಪನ್ನು ಪ್ರಶ್ನಿಸಿ ಮುಂಬಯಿ ಉಚ್ಚನ್ಯಾಯಾಲಯಕ್ಕೆ ಅರ್ಜಿ ಅಪೀಲು ಸಲ್ಲಿಸಲಾಯಿತು. ವಿಚಾರಣಾಕಾಲೀನ ಜೀವನಾಂಶ ನೀಡಲು ತಿರಸ್ಕರಿಸಿರುವುದಕ್ಕೆ ವಿಚಾರಣಾ ನ್ಯಾಯಾಲಯ ನೀಡಿದ ಕಾರಣ ಅರ್ಜಿದಾರಳು ದುರ್ವರ್ತನೆ ಅಥವಾ ವೈವಾಹಿಕ ಅಪರಾಧದ ದೋಷಿಯಾಗಿದ್ದಾಳೆ ಎಂಬುದು. ಅಧಿನಿಯಮದ ೨೪ನೇ ಪ್ರಕರಣ ಪತಿ/ಪತ್ನಿಗೆ ವ್ಯಾಜ್ಯ ಇತ್ಯರ್ಥಗೊಳ್ಳುವತನಕ ಜೀವನ ನಿರ್ವಹಣೆಗಾಗಿ ಹಾಗೂ ವ್ಯವಹರಣೆಗಳ ವೆಚ್ಚವನ್ನು ಭರಿಸುವುದಕ್ಕಾಗಿ ಜೀವನಾಂಶ ನೀಡಬೇಕೆಂದು ಉಪಬಂಧ ಕಲ್ಪಿಸುತ್ತದೆ. ಆದರೆ, ಅರ್ಜಿ ಸಲ್ಲಿಸುವ ವ್ಯಕ್ತಿ(ಪತಿ/ಪತ್ನಿ) ದುರ್ವರ್ತನೆ ಅಥವಾ ವೈವಾಹಿಕ ಅಪರಾಧದ ದೋಷಿಯಾಗಿದ್ದರೆ ಈ ಪ್ರಕರಣದ ಅಡಿಯಲ್ಲಿನ ಪರಿಹಾರಕ್ಕೆ ಹಕ್ಕುಳ್ಳವಳಾ/ನಾಗುವುದಿಲ್ಲ ಎನ್ನುವ ಯಾವುದೇ ಉಪಬಂಧವನ್ನು ಸಹ ಕಲ್ಪಿಸುವುದಿಲ್ಲ. ಇದಕ್ಕೆ ಕಾರಣ, ವಿಚ್ಛೇದನೆ ಅಥವಾ ನ್ಯಾಯಿಕ ಬೇರ್ಪಡೆ ಅಥವಾ ಇನ್ನಾವುದೇ ವೈವಾಹಿಕ ಪರಿಹಾರಕ್ಕಾಗಿ ದಾವೆ ಹೂಡಿದಾಗ ಸಹಜವಾಗಿಯೇ

ಸಂಬಂಧಗಳು ಇನ್ನಷ್ಟು ಕೆಡುತ್ತದೆ. ಪತಿ/ಪತ್ನಿ ಮನೆಯಿಂದ ಹೊರದೂಡಲ್ಪಡುತ್ತಾಳೆ. ಪತ್ನಿಗೆ ಜೀವನ ನಿರ್ವಹಣೆ ಹಾಗೂ ಕಾನೂನು ವ್ಯವಹಾರಣೆಗಳ ವೆಚ್ಚವನ್ನು ತೂಗಿಸುವುದು ಕಷ್ಟವಾಗುತ್ತದೆ. ಇದರ ನಿವಾರಣೆಯೇ ಈ ಪ್ರಕರಣದ ಪರಮೋದ್ದೇಶ. ಆದ್ದರಿಂದ ಅರ್ಜಿದಾರಳು ದುರ್ವರ್ತನೆ ಅಥವಾ ವೈವಾಹಿಕ ಅಪರಾಧದ ದೋಷಿಯಾಗಿದ್ದಾಳೆ ಎಂಬುದು ಇಂಥ ಜೀವನಾಂಶ ಮಂಜೂರಾತಿಗೆ ಅಡ್ಡ ಬರಬಾರದು. ಅಲ್ಲದೆ, ೨೪ನೇ ಪ್ರಕರಣದ ಅಡಿಯಲ್ಲಿನ ವ್ಯವಹರಣೆಗಳು ಸಂಕ್ಷಿಪ್ತ ಸ್ವರೂಪದ್ದಾದ್ದರಿಂದ ಈ ಹಂತದಲ್ಲಿಯೇ ಅರ್ಜಿಹಾಕಿರುವ ಪತಿ/ಪತ್ನಿ ದುರ್ವರ್ತನೆ ಅಥವಾ ವೈವಾಹಿಕ ಅಪರಾಧದ ದೋಷಿ ಎಂಬ ಕಾರಣಕ್ಕಾಗಿ ಜೀವನಾಂಶಕ್ಕೆ ಹಕ್ಕುಳ್ಳವಳಾಗಿಲ್ಲ ಎಂದು ತೀರ್ಮಾನಿಸುವುದು ಸೂಕ್ತವಾಗುವುದಿಲ್ಲ. ಈ ಪ್ರಕರಣದ ಮೇರೆಗೆ ಜೀವನಾಂಶವನ್ನು ಮಂಜೂರು ಮಾಡುವುದು ಸಂಪೂರ್ಣವಾಗಿ ನ್ಯಾಯಾಲಯದ ವಿವೇಚನೆಗೆ ಬಿಟ್ಟ ಸಂಗತಿ. ಆದರೆ, ಈ ವಿವೇಚನೆಯನ್ನು ಸದರಿ ಪ್ರಕರಣದಲ್ಲಿ ವಿಧಿಸಲಾಗಿರುವ ಅಗತ್ಯತೆಗಳನ್ನು ಆಧರಿಸಿ ಚಲಾಯಿಸಬೇಕಾಗುತ್ತದೆ. ಈ ಪ್ರಕರಣದಲ್ಲಿ ದುರ್ವರ್ತನೆಯ ಕಾರಣಕ್ಕಾಗಿ ಜೀವನಾಂಶದ ಮಂಜೂರಾತಿಯನ್ನು ನಿಷೇಧಿಸಬೇಕೆಂಬ ಬಗ್ಗೆ ಯಾವುದೇ ನಿರ್ದೇಶನವನ್ನು ನೀಡುವುದಿಲ್ಲ. ಆದ್ದರಿಂದ ಆ ಕಾರಣದ ಮೇಲೆ ಜೀವನಾಂಶ ಮಂಜೂರಾತಿಯನ್ನು ನಿರಾಕರಿಸುವುದು ಈ ಪ್ರಕರಣದ ಆಶಯಕ್ಕೆ ಪೂರಕವಾದುದಾಗಿಲ್ಲ. ಆದ್ದರಿಂದ "ಅರ್ಜಿದಾರ/ರಳೂ ಇನ್ನೂ ತನ್ನ ವಿವರಣೆಯನ್ನು ನೀಡುವುದಕ್ಕೆ ಮುನ್ನ ಮತ್ತು ತನ್ನ ಬಗ್ಗೆ ಮಾಡಿದ ಆರೋಪಗಳನ್ನು ನಿರಾಕರಿಸದೆ ಇರುವ ಈ ಹಂತದಲ್ಲಿ ವಿಚಾರಣಾ ನ್ಯಾಯಾಲಯ ಈ ನಿರ್ಧಾರಕ್ಕೆ ಬಂದಿರುವುದು ಸರಿಯಲ್ಲ" ಎಂದು ನ್ಯಾಯಾಧೀಶರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಪ್ರತ್ಯರ್ಜಿದಾರನು ವಿಚ್ಛೇದನೆಗಾಗಿ ಕೋರಿರುವ ಮುಖ್ಯ ಅರ್ಜಿಯಲ್ಲಿ ಹೊರಿಸಿರುವ ಮುಖ್ಯ ಆರೋಪವಾದ 'ಅರ್ಜಿದಾರಳು ವಿವಾಹ ಸಂಬಂಧದ ಕಾಲದಲ್ಲಿ ಗರ್ಭಿಣಿಯಾಗಿಲ್ಲ ಬೇರೆ ವ್ಯಕ್ತಿಯಿಂದ ಗರ್ಭಿಣಿಯಾಗಿದ್ದಾಳೆ' ಎಂಬುದರ ಬಗ್ಗೆ ಅರ್ಜಿದಾರಳಾಗಲೀ ಪ್ರತ್ಯರ್ಜಿದಾರನಾಗಲೀ ಅದಕ್ಕೆ ಪರವಾದ ಅಥವಾ ಅದಕ್ಕೆ ವಿರುದ್ಧವಾದ ಯಾವುದೇ ಸಾಕ್ಷ್ಯವನ್ನು ಈ ಹಂತದಲ್ಲಿ ಒದಗಿಸಿಲ್ಲವಾದ್ದರಿಂದ ಆ ಬಗ್ಗೆ ನ್ಯಾಯಾಧೀಶರೇ ಅರ್ಜಿದಾರಳು ಪ್ರತ್ಯರ್ಜಿದಾರನ ವಿವಾಹ ಸಂಬಂಧದಿಂದ ಗರ್ಭಿಣಿಯಾಗಿಲ್ಲ ಎಂಬ ಅನುಮಾನ ಹಾಗೂ ಊಹೆಯನ್ನಾಧರಿಸಿ ನಿರ್ಧಾರಕ್ಕೆ ಬಂದಿರುವುದಾಗಿ ಕಾಣುತ್ತದೆ. ವಿಚಾರಣಾ ನ್ಯಾಯಾಧೀಶರು ಇಂಥ ನಿರ್ಧಾರಕ್ಕೆ ಬಂದುದು ಸರಿಯಲ್ಲ" ಎಂಬುದಾಗಿ ಮುಂಬಯಿ ಉಚ್ಚನ್ಯಾಯಾಲಯ ತೀರ್ಪುನೀಡಿತು.

ಹಿಂದೂ ವಿವಾಹ ಅಧಿನಿಯಮದ ೨೪ನೇ ಪ್ರಕರಣ ವಿವಾಹದಿಂದ ಪತಿಪತ್ನಿಯರ ನಡುವೆ ಏರ್ಪಡುವ ಸಂಬಂಧವಾಗಿದ್ದು, ಇಬ್ಬರೂ ಪರಸ್ಪರ ಬದ್ಧರಾಗಿರಬೇಕೆಂದು ನಿರೀಕ್ಷಿಸುತ್ತದೆ. ಈ ನಿರೀಕ್ಷೆಯ ಫಲವಾಗಿಯೇ ವೈವಾಹಿಕ ವಿವಾದಕ್ಕೆ ಸಂಬಂಧಿಸಿದಂತೆ ಯಾವುದೇ ದಾವೆ ಹೂಡಿದ್ದರೂ ದಾವೆಯ ವಿಚಾರಣೆಯ

ಕಾಲದಲ್ಲಿ ಜೀವನ ನಿರ್ವಹಣೆಗಾಗಿ ಮತ್ತು ವ್ಯವಹರಣೆಯ ಖರ್ಚುಗಳನ್ನು ಭರಿಸುವುದಕ್ಕಾಗಿ ಪತಿ/ಪತ್ನಿಗೆ ಸಾಕಷ್ಟು ವರಮಾನವಿಲ್ಲದಿದ್ದು, ಪತ್ನಿ/ಪತಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರೆ, ಆಗ ಜೀವನಾಂಶವನ್ನು ನೀಡಬೇಕು ಎಂದು ಈ ಉಪಬಂಧವನ್ನು ಕಲ್ಪಿಸಲಾಗಿದೆ. ಉಪಬಂಧ ಸ್ತ್ರೀಪುರುಷ ಭೇದವಿಲ್ಲದೆ ಪತಿ/ಪತ್ನಿಯರಿಗೆ ಸಮಾನವಾಗಿ ಅನ್ವಯಿಸುತ್ತದೆ. ಕಾನೂನನ್ನು ಅನ್ವಯಿಸಿ ತೀರ್ಪು ನೀಡುವಾಗ ಅತ್ಯಂತ ವಿವೇಚನಾಯುಕ್ತವಾಗಿ ಕಾನೂನಿನ ಹಿಂದಿರುವ ಆಶಯವನ್ನು ಅತ್ಯಗತ್ಯವಾಗಿ ಗಮನಿಸಬೇಕಾಗುತ್ತದೆ. ಇಲ್ಲದಿದ್ದಲ್ಲಿ ಕಾನೂನಿನ ಆಶಯ ವಿಫಲವಾಗುತ್ತದೆ.

ಶ್ರೀಮತಿ ಗುರುಮಿತ್ ಕೌರ್ -ವಿ- ಗುರುರಾಜ್ ಸಿಂಗ್ (ಎಐಆರ್ ೮೯ ಪಂಜಾಬ್ ೨೨೩) ಪ್ರಕರಣದಲ್ಲಿ, ಅಪೀಲುದಾರಳು ತನಗೆ ಮಧ್ಯಂತರ ಜೀವನಾಂಶವನ್ನು ನಿರಾಕರಿಸಿ, ಅಮೃತಸರದ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು ಹೊರಡಿಸಿದ ಆದೇಶವನ್ನು ಪ್ರಶ್ನಿಸಿ ಅಪೀಲು ಹೂಡಿದ್ದಾಳೆ. ಅಪೀಲುದಾರಳಿಗೆ ಮಧ್ಯಂತರ ಜೀವನಾಂಶವನ್ನು ನಿರಾಕರಿಸಲು ನ್ಯಾಯಾಧೀಶರು ನೀಡಿರುವ ಕಾರಣವೆಂದರೆ, ''ನಾನು ಗುರುಮಿತ್ ಕೌರ್ ಮತ್ತು ಅವಳ ಮಗನ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಜೀವನಾಂಶವನ್ನು ಹಾಗೂ ವ್ಯವಹರಣೆ ಖರ್ಚುಗಳನ್ನು ಈ ಹಂತದಲ್ಲಿ ಮಂಜೂರು ಮಾಡಲು ನಿರಾಕರಿಸಿದ್ದೇನೆ. ಇದರಿಂದಾಗಿ ಅವಳು ಗುರುರಾಜ್ ಸಿಂಗ್ ನ ವರ್ತನೆಯ ಬಗ್ಗೆ ಹೆಚ್ಚು ಕಠೋರಳಾಗದಂತೆ ಅವಳನ್ನು ಒತ್ತಾಯಿಸುತ್ತದೆ...'' ಅಧಿನಿಯಮದ ೨೪ನೇ ಪ್ರಕರಣದ ಮೇರೆಗೆ ಜೀವನಾಂಶ ಮಂಜೂರಾತಿ ನ್ಯಾಯಾಧೀಶರ ವಿವೇಚನೆಗೆ ಬಿಟ್ಟುದುದಾದರೂ ಈ ವಿವೇಚನೆಯನ್ನು ಆ ಪ್ರಕರಣದ ಆಶಯದ ವ್ಯಾಪ್ತಿಯಲ್ಲಿ ಅದಕ್ಕೆ ಪೂರಕವಾಗುವಂತೆ ಚಲಾಯಿಸಬೇಕೇ ವಿನಃ ಅಧಿನಿಯಮದಿಂದ ಅವಳಿಗೆ ಪ್ರದತ್ತವಾದ ಹಕ್ಕಿನಿಂದ ಅವಳನ್ನು ವಂಚಿತಳನ್ನಾಗಿಸುವ ರೀತಿಯಲ್ಲಿ ಅಲ್ಲ. ಜಿಲ್ಲಾ ನ್ಯಾಯಾಧೀಶರ ಈ ಆದೇಶವನ್ನು ಕಾನೂನು ಅಗತ್ಯಪಡಿಸಿದಂತೆ ಇಲ್ಲ ಮತ್ತು ಇದು ಕಾನೂನಿಗೆ ವಿರುದ್ಧವಾಗಿದೆ ಎಂಬ ಕಾರಣಕ್ಕೆ ಉಚ್ಚನ್ಯಾಯಾಲಯ ರದ್ದುಗೊಳಿಸಿ, ಅಪೀಲುದಾರಳಿಗೆ ಮತ್ತು ಅವಳ ಮಗನ ಜೀವನಾಂಶ ಹಾಗೂ ವ್ಯವಹರಣೆಯ ಖರ್ಚುಗಳ ಕ್ಲೇಮುಗಳನ್ನು ನಿರ್ಧರಿಸಬೇಕೆಂದು ನಿರ್ದೇಶನ ನೀಡಿತು.

ಪಟೇಲ್ ಧರಮ್‌ಶೀ ಪ್ರೇಮ್‌ಜಿ -ವಿ- ಬಾಯಿ ಸಾಕಾರ್ ಕಾಂಜಿ(ಎಐಆರ್ ೬೮ ಗುಜರಾತ್ ೧೫೦) ಪ್ರಕರಣದಲ್ಲಿ ಅಪೀಲುದಾರನ ವಾದವೆಂದರೆ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆಗಾಗಿ ನ್ಯಾಯಾಲಯ ಹೊರಡಿಸಿದ ಡಿಕ್ರಿಯನ್ನು ಪ್ರತ್ಯರ್ಜಿದಾರಳು ಪಾಲಿಸಲಿಲ್ಲವಾದ ಕಾರಣ ತಾನು ವಿಚ್ಛೇದನೆ ಪಡೆಯಬೇಕಾಯಿತು ಎಂದರೆ ಪತ್ನಿಯ ತಪ್ಪಿನಿಂದಾಗಿ ತಾನು ವಿಚ್ಛೇದನೆ ಪಡೆಯಬೇಕಾಯಿತು. ಆದ್ದರಿಂದ ತಾನು ಅವಳಿಗೆ ಕಾಯಂ ಜೀವನಾಂಶ ನೀಡಲು ಬದ್ಧನಾಗಿಲ್ಲ ಎಂಬುದು. ಆದ್ದರಿಂದ ಕಾಯಂ ಜೀವನಾಂಶವನ್ನು

ಮಂಜೂರು ಮಾಡಿ ಅಧೀನ ಅಪೀಲು ನ್ಯಾಯಾಲಯ ಹೊರಡಿಸಿದ ಆದೇಶವನ್ನು ಉಚ್ಚನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿದೆ.

ವಿವಾಹ ಸಂಬಂಧ ಒಂದು ಕೊನೆಗೊಳಿಸಲಾಗದ ಸಂಬಂಧ ಎಂಬ ಪರಿಕಲ್ಪನೆ ಇದ್ದ ಹಿಂದಿನ ಸಂದರ್ಭದಲ್ಲಿ ಪತ್ನಿಯನ್ನು ಅವಳ ಜೀವನ ಪರ್ಯಂತ ನೋಡಿಕೊಳ್ಳಲು ಪತಿ ಬದ್ಧನಾಗಿರುತ್ತಿದ್ದ, ಆದರೆ ಹಿಂದೂ ಕಾನೂನನ್ನು ಕ್ರೋಡೀಕರಿಸಿ, ವಿಚ್ಛೇದನೆಯ ಪರಿಕಲ್ಪನೆಯನ್ನು ಹಿಂದೂ ಕಾನೂನಿನಲ್ಲಿ ಅಳವಡಿಸಿಕೊಂಡಾಗ ಅದರ ಜೊತೆಯಲ್ಲಿಯೇ, ಹಾಗೆ ವಿಚ್ಛೇದಿತ ಮಹಿಳೆಗೆ(ಪತ್ನಿಗೆ) ಅವನಿಂದ ಬೇರೆಯಾದರೂ, ಅವಳ ಜೀವನ ನಿರ್ವಹಣೆಗಾಗಿ ಜೀವನಾಂಶ ಕೊಡುವುದಕ್ಕೆ ಅವನನ್ನು ಬದ್ಧನನ್ನಾಗಿ ಮಾಡಲಾಯಿತು. ಈ ಮೂಲಕ ಅವಳಿಗೆ ಆರ್ಥಿಕ ಭದ್ರತೆಯನ್ನು ಒದಗಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಆದ್ದರಿಂದ ಯಾವುದೇ ಕಾರಣವೂ ಅವಳಿಗೆ ಕಾನೂನಿನ ಮೂಲಕ ನೀಡಿರುವ ಈ ಹಕ್ಕನ್ನು ಕಸಿದುಕೊಳ್ಳಲಾರದು.

ಅಧಿನಿಯಮದ ೨೫ನೇ ಪ್ರಕರಣದಲ್ಲಿ ಪತ್ನಿಯ ವಿರುದ್ಧ ನ್ಯಾಯಿಕ ಬೇರ್ಪಡೆ ಅಥವಾ ವಿಚ್ಛೇದನೆಯ ಡಿಕ್ರಿಯನ್ನು ಹೊರಡಿಸಿದ್ದು, ಅದಕ್ಕೆ ಕಾರಣ ಅವಳು ವೈವಾಹಿಕ ಅಪರಾಧದ ದೋಷಿಯಾಗಿದ್ದರೆ ಅವಳಿಗೆ ಜೀವನಾಂಶ ನೀಡಬಾರದು ಎಂಬ ಯಾವುದೇ ಷರತ್ತನ್ನು ವಿಧಿಸಿಲ್ಲ. ಹಾಗೆ ಈ ಕಾರಣದ ಮೇಲೆ ಪತ್ನಿಗೆ ಜೀವನಾಂಶವನ್ನು ನಿರಾಕರಿಸಿದರೆ, ಜೀವನಾಂಶ ನೀಡಿಕೆಗಾಗಿ ಮಾಡಿರುವ ಕಾನೂನಿನ ಆಶಯವೇ ವಿಫಲವಾಗುತ್ತದೆ.

ಯಾವುದೇ ಕಾನೂನಿನ ಆಶಯದ ನೆರವೇರಿಕೆ ಕಾನೂನಿನ ಅನ್ವಯದಷ್ಟೇ ಪ್ರಮುಖವಾಗಿ ಕಾನೂನಿನ ವ್ಯಾಖ್ಯಾನವನ್ನೂ ಅವಲಂಬಿಸಿರುತ್ತದೆ. ಈ ವ್ಯಾಖ್ಯಾನ ಮೇಲ್ನೋಟಕ್ಕೆ ತರ್ಕಬದ್ಧವಾಗಿದ್ದರೆ ಸಾಲದು, ಅದು ಕಾನೂನು ರಚನೆಯ ಆಶಯಕ್ಕೆ ಪೂರಕವಾಗಿರಬೇಕಾಗುತ್ತದೆ. ವ್ಯಾಖ್ಯಾನ ತರ್ಕಬದ್ಧವಾಗಿದ್ದೂ ಆಶಯಕ್ಕೆ ಪೂರಕವಾದ ನಿರ್ಧಾರಕ್ಕೆ ಬರಲು ಅಂಥ ವ್ಯಾಖ್ಯಾನ ಸಹಾಯ ಮಾಡದಿದ್ದರೆ, ಅಂಥ ತರ್ಕಬದ್ಧ ವ್ಯಾಖ್ಯಾನವನ್ನು ನಿರಾಕರಿಸಿ ಆಶಯಕ್ಕೆ ಪ್ರಾಮುಖ್ಯತೆ ಕೊಡಬೇಕಾಗುತ್ತದೆ.

ನ್ಯಾಯಾಲಯದ ಮುಂದೆ ಬರುವ ಪ್ರಕರಣಗಳಲ್ಲಿ ವಾದಿ ಪ್ರತಿವಾದಿಗಳ ಪರ ವಾದಿಸುವ ವಕೀಲರು ತಮ್ಮ ಕಕ್ಷಿದಾರರ ಗೆಲುವಿಗಾಗಿ ಕಾನೂನಿಗೆ ಇಂಥ ತರ್ಕಬದ್ಧ ವ್ಯಾಖ್ಯಾನಗಳನ್ನು ಮಂಡಿಸುತ್ತಾರೆ. ನ್ಯಾಯ ಯಾವ ಕಡೆಗಿದೆ ಎಂಬುದಕ್ಕಿಂತ ಹೆಚ್ಚಾಗಿ ಇಲ್ಲಿ ಅವರಿಗೆ ಮುಖ್ಯವಾಗುವುದು ಅವರವರ ಕಕ್ಷಿದಾರರ ಗೆಲುವು ಮಾತ್ರ. ಹಾಗಾಗಿ ಇಂಥ ತರ್ಕಬದ್ಧ ವ್ಯಾಖ್ಯಾನ ಕಾನೂನಿನ ಆಶಯವನ್ನು ನೆರವೇರಿಸುವಂಥದ್ದೇ ಆಗಿರುತ್ತದೆಂದು ಹೇಳಲಾಗದು. ಆದರೆ ನ್ಯಾಯ ಪ್ರದಾನ ಮಾಡುವ ಗುರುತರ ಜವಾಬ್ದಾರಿಯನ್ನು

ಹೊತ್ತಿರುವ ನ್ಯಾಯಾಧೀಶರು ಇದನ್ನು ಅಳೆದು ತೂಗಿ ಕಾನೂನಿನ ಆಶಯ ನೆರವೇರುವ ರೀತಿಯಲ್ಲಿ ತೀರ್ಪನ್ನು ನೀಡಬೇಕಾಗುತ್ತದೆ.

ಶ್ರೀಮತಿ ಅರುಣಾ ಬಸುಮಲ್ಲಿಕ್ -ವಿ- ಶ್ರೀಮತಿ ಡೊರೊಥಿಯಾ ಮಿತ್ರ (ಎಐಆರ್ ೮೩ ಎಸ್‌ಸಿ ೯೧೬) ಪ್ರಕರಣದಲ್ಲಿ ನಿರ್ಣಯವಾಗಿದ್ದ ಮುಖ್ಯ ಪ್ರಶ್ನೆ ವಿಶೇಷ ವಿವಾಹ ಅಧಿನಿಯಮ, ೧೯೫೪ರ ೩೭ನೇ ಪ್ರಕರಣದ ಅಡಿಯಲ್ಲಿ ಕಾಯಂ ಜೀವನಾಂಶಕ್ಕಾಗಿ ಮಾಡಿದ ಡಿಕ್ರಿ ಪತಿಯ-ತೀರ್ಪು ಋಣಿ-ಸಾವಿನೊಂದಿಗೆ ಕೊನೆಗೊಳ್ಳುತ್ತದೆಯೇ? ಎಂಬುದು.

ತೀರ್ಪು ಋಣಿಯಾದ ಪತಿಯ ಮರಣದೊಡನೆ ಕಾಯಂ ಜೀವನಾಂಶಕ್ಕಾಗಿ ಮಾಡಿದ ಡಿಕ್ರಿ ಕೊನೆಗೊಳ್ಳುತ್ತದೆ ಎಂದು ತೀರ್ಮಾನಕ್ಕೆ ಬರಲು ಪ್ರಕರಣದಲ್ಲಿ ಬಳಸಲಾದ ಭಾಷೆ ಯಾವುದೇ ಸಮರ್ಥನೆಯನ್ನು ನೀಡುವುದಿಲ್ಲ. ಈ ವಿಷಯದ ಬಗ್ಗೆ ಈ ಹಿಂದೆ ಯಾವುದೇ ತೀರ್ಪು ಹೊರಬಿದ್ದಿಲ್ಲವಾದ್ದರಿಂದ ನಿರ್ಧಾರವನ್ನು ಕೈಗೊಳ್ಳಲು ಬ್ರಿಟನ್ನಿನ ತೀರ್ಪುಗಳನ್ನು ಅವಲಂಬಿಸಲಾಗಿದೆ.

ವಿಶೇಷ ವಿವಾಹ ಅಧಿನಿಯಮದ ೩೭ನೇ ಪ್ರಕರಣ ಬ್ರಿಟನ್ನಿನ ವೈವಾಹಿಕ ವ್ಯಾಜ್ಯಗಳ ಅಧಿನಿಯಮ ೧೯೫೦ರ ೧೯, ೨೦ ಮತ್ತು ೨೨ನೇ ಪ್ರಕರಣಗಳಿಗೆ ಸರಿ ಸುಮಾರು ಸಂವಾದಿಯಾಗಿದೆ. ಒಂದೇ ವ್ಯತ್ಯಾಸವೆಂದರೆ, ಭಾರತೀಯ ಅಧಿನಿಯಮದ (೩)ನೇ ಉಪಬಂಧಕ್ಕೆ ಬ್ರಿಟನ್ನಿನ ಅಧಿನಿಯಮದಲ್ಲಿ ಸಂವಾದಿಯಾದ ಉಪಬಂಧ ಇಲ್ಲ. ಇಂಗ್ಲಿಷ್ ಅಧಿನಿಯಮ ೧೯ನೇ ಪ್ರಕರಣದ (೨) ಮತ್ತು (೩)ನೇ ಪ್ರಕರಣವನ್ನು ಗಮನಿಸಿದರೆ, ಜೀವನಾಂಶವನ್ನು ಪತ್ನಿಯ ಜೀವಿತಾವಧಿಯನ್ನು ಮೀರದ ಅವಧಿಗೆ ಅಥವಾ ಪತಿ ಮತ್ತು ಪತ್ನಿಯರಿಬ್ಬರ ಜೀವಿತಾವಧಿಗೆ ಸಂದಾಯ ಮಾಡುವುದನ್ನು ಅಗತ್ಯ ಪಡಿಸಬಹುದಾಗಿದೆ ಎಂದು ಸೂಚಿಸುತ್ತದೆ. ಈ ಅಧಿನಿಯಮದ ಈ ಎರಡು ಉಪ ಪ್ರಕರಣಗಳು ಕೆಳಕಂಡಂತಿದೆ.

"(೨) ವಿಚ್ಛೇದನೆ ಅಥವಾ ವಿವಾಹ ಅಕ್ರಮವೆಂದು ವಾದಿಸಿ ಸಲ್ಲಿಸಿದ ಯಾವುದೇ ಅರ್ಜಿಯ ಮೇಲೆ ನ್ಯಾಯಾಲಯವು ಉಚಿತವೆಂದು ಭಾವಿಸಿದರೆ ನ್ಯಾಯಾಲಯಕ್ಕೆ ಸಮಾಧಾನವಾಗುವ ರೀತಿಯಲ್ಲಿ, ಅವಳ ಭವಿಷ್ಯಕ್ಕೆ ಮತ್ತು ಪತಿಯ ಸಾಮರ್ಥ್ಯ ಹಾಗೂ ಪತಿ ಪತ್ನಿಯರಿಬ್ಬರ ನಡತೆಗಳಿಗೆ ಗಮನ ನೀಡಿ, ನ್ಯಾಯಾಲಯವು ಯಥೋಚಿತವೆಂದು ಭಾವಿಸುವ ಹಣದ ಒಟ್ಟು ಮೊತ್ತವನ್ನು ಅಥವಾ ವಾರ್ಷಿಕ ಮೊತ್ತವನ್ನು ಪತಿ ನೀಡಬೇಕೆಂದು ಆದೇಶಿಸಬಹುದು.

(೩) ವಿಚ್ಛೇದನೆ ಅಥವಾ ವಿವಾಹದ ಅಕ್ರಮದ ಬಗ್ಗೆ ನೀಡಲಾದ ಯಾವುದೇ ಡಿಕ್ರಿಯ ನಂತರ, ನ್ಯಾಯಾಲಯವು ಯಥೋಚಿತವೆಂಧು ಭಾವಿಸುವಂಥ ಮಾಸಿಕ ಅಥವಾ ಸಾಪ್ತಾಹಿಕ ಮೊತ್ತವನ್ನು ಪತ್ನಿಯ ಜೀವನಾಂಶ ಮತ್ತು ಜೀವನ ನಿರ್ವಹಣೆಗಾಗಿ ಅವರಿಬ್ಬರ ಜೀವನ ಪರ್ಯಂತ ಪತ್ನಿಗೆ ಪತಿ ಸಂದಾಯ

ಮಾಡಬೇಕೆಂದು ನಿರ್ದೇಶಿಸುವುದು ಸೂಕ್ತವೆಂದು ಭಾವಿಸಿದರೆ ನ್ಯಾಯಾಲಯ ಹಾಗೆಂದು ನಿರ್ದೇಶಿಸಬಹುದು. ಅಂಥ ಆದೇಶವು ಹಿಂದಿನ ಉಪಪ್ರಕರಣದ ಮೇರೆಗೆ ಮಾಡಲಾದ ಆದೇಶಕ್ಕೆ ಹೆಚ್ಚಿಗೆಯಾಗಿ ಅಥವಾ ಬದಲಾಗಿ ಇರತಕ್ಕದ್ದು"

ಮೇಲಿನ ಈ ಎರಡು ಉಪಪ್ರಕರಣಗಳ ಮೇರೆಗೆ ಕೆಲವು ಬ್ರಿಟನ್ನಿನ ನ್ಯಾಯಾಲಯಗಳು, ಜೀವನಾಂಶವನ್ನು ಪತ್ನಿಯ ಜೀವನ ಪರ್ಯಂತ ಅವಳಿಗೆ ಸಂದಾಯ ಮಾಡಬೇಕೆಂದು ನ್ಯಾಯಾಲಯ ನಿರ್ದೇಶಿಸಿದ್ದರೂ ಸಹ, ಪತಿಯ ಸಾವಿನೊಂದಿಗೆ ಪತ್ನಿಯ ಈ ಹಕ್ಕು ಕೊನೆಗೊಳ್ಳುತ್ತದೆ ಎಂಬ ನಿಲುವನ್ನು ತಳೆದಿದೆ. ಯಾವುದೇ ವೈವಾಹಿಕ ವ್ಯಾಜ್ಯಕ್ಕೆ ಸಂಬಂಧಿಸಿದಂತೆ ನೀಡಲಾದ ಡಿಕ್ರಿ ನಿರುಪಾಧಿಕವಾಗುವುದಕ್ಕೆ ಮುನ್ನವೆ ಪತಿ ಮರಣ ಹೊಂದಿದರೆ ಆಗ ವೈವಾಹಿಕ ಪರಿಹಾರದ(ವಿಚ್ಛೇದನೆ ಇತ್ಯಾದಿ) ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೆ ಡಿಕ್ರಿಯನ್ನು ನೀಡಿದ ನಂತರ ಪತಿ ಮರಣ ಹೊಂದಿದರೆ ಅಂಥ ಡಿಕ್ರಿ ಅನೂರ್ಜಿತವಾಗುತ್ತದೆಯೇ ಎಂಬುದು ಇಲ್ಲಿ ಉಂಟಾದ ಪ್ರಶ್ನೆ.

ಈ ಪ್ರಕರಣದ ಅಪೀಲುದಾರರ ಪರ ವಾದಿಸಿದ ವಕೀಲರು ಬ್ರಿಟನ್ನಿನ ತೀರ್ಪುಗಳನ್ನು ಅವಲಂಬಿಸಿದರೂ ಪ್ರಸ್ತುತ ಪ್ರಕರಣಕ್ಕೆ ಸಂಗತವಾದ ಯಾವುದೇ ಕಾರಣವನ್ನು ನೀಡಲು ಅಸಮರ್ಥರಾದರು. ವಿಶೇಷ ವಿವಾಹ ಅಧಿನಿಯಮ, ಸ್ವಾತಂತ್ರ್ಯಾನಂತರ ೧೯೫೪ರಲ್ಲಿ ಭಾರತದ ಸಂಸತ್ತು ಹೊರಡಿಸಿದ ಕಾನೂನು. ಆದರೆ ಇದರಲ್ಲಿನ ಯಾವುದೇ ಉಪಬಂಧದ ವ್ಯಾಖ್ಯಾನಕ್ಕೆ ಬ್ರಿಟನ್ನಿನ ತೀರ್ಪುಗಳನ್ನು ಆಧರಿಸುವ ಅಗತ್ಯವಿಲ್ಲ. ಅಲ್ಲದೆ, ಈ ಅಧಿನಿಯಮದ ೩೭ನೇ ಪ್ರಕರಣ ಯಾವುದೇ ಸಂದಿಗ್ಧತೆಗೆ ಎಡೆ ಮಾಡಿಕೊಡದಷ್ಟು ಸ್ಪಷ್ಟವಾಗಿದೆ. ಆದ್ದರಿಂದ ಉಪಬಂಧದಲ್ಲಿ ಹೇಳಿರುವುದಲ್ಲದೆ ವ್ಯಾಖ್ಯಾನದ ಮೂಲಕ ಅದರ ಆಶಯವನ್ನು ಕಂಡುಕೊಳ್ಳುವ ಅಗತ್ಯ ಉಂಟಾಗುವುದಿಲ್ಲ. ನ್ಯಾಯಾಲಯ ಯಾವಾಗಲೂ ಡಿಕ್ರಿಯನ್ನು ಜಾರಿಗೊಳಿಸುವತ್ತ ಒಲವು ತೋರಿಸಬೇಕು ಮತ್ತು ವಿಶೇಷ ಕಾರಣಗಳಿದ್ದ ಹೊರತು, ಡಿಕ್ರಿಯ ಪ್ರಯೋಜನ ದೊರೆಯದಂತೆ ಮಾಡುವುದಕ್ಕೆ ಅನುಮತಿ ನೀಡಬಾರದು ಎಂಬುದು ಕಾನೂನಿನ ನೆಲಗೊಂಡ ಸಿದ್ಧಾಂತ. ೩೭ನೇ ಪ್ರಕರಣದ ಮೂಲಕ ವಿಚ್ಛೇದನೆಯ ಸಂದರ್ಭದಲ್ಲಿ ಪತ್ನಿಗೆ ಜೀವನಾಂಶ ಸಂದಾಯ ಮಾಡುವಂತೆ ಮಾಡುವ ಮೂಲಕ, ಪತ್ನಿಯನ್ನು ರಕ್ಷಿಸುವುದು ಸಂಸತ್ತಿನ ಆಶಯ. ಪತಿ ತನ್ನ ಮರಣ ಕಾಲದಲ್ಲಿ ಸ್ಥಿರಾಸ್ತಿ ಹೊಂದಿದ್ದರೆ, ಅವನ ಸಾವು, ಡಿಕ್ರಿಯನ್ನು ಅನೂರ್ಜಿತಗೊಳಿಸಿ ಅದರ ವಾರಸುದಾರರು ಡಿಕ್ರಿಯ ಹೊಣೆಗಾರಿಕೆಯನ್ನು ಪಾಲಿಸದೆಯೇ ಅದಕ್ಕೆ ವಾರಸುದಾರರಾಗುವುದು ಯಾವುದೇ ರೀತಿಯಲ್ಲಿಯೂ ಸಮರ್ಥನೀಯವಲ್ಲ. ಅಲ್ಲದೆ ಯಾರೊಬ್ಬರು ಪಕ್ಷಕಾರರು ಎಂಬ ಪದಗಳ ಪ್ರಯೋಗ ಕೇವಲ ಪತಿ ಅಥವಾ ಪತ್ನಿಯನ್ನು ಸೂಚಿಸುತ್ತದೆ ಎಂಬ ಅಭಿಪ್ರಾಯಕ್ಕೆ ಬರಲು ಪ್ರಕರಣದಲ್ಲಿ ಯಾವುದೇ ಆಧಾರವೂ ಇಲ್ಲ. ಅಲ್ಲದೆ, ಕಾನೂನಿನ ಉದ್ದೇಶ ಮತ್ತು ಅಂಥದೊಂದು ಉಪಬಂಧವನ್ನು ಸೇರಿಸಿರುವ

ಆಶಯವನ್ನು ಪರಿಶೀಲಿಸಿದಾಗ, 'ಯಾರೊಬ್ಬ ಪಕ್ಷಕಾರರು' ಎಂಬುದರಲ್ಲಿ ಕಾನೂನಿನ ಮೇರೆಗೆ ಅವರ ಕಾನೂನು ಸಮ್ಮತ ವಾರಸುದಾರರಾದರೂ ಸೇರುತ್ತಾರೆ. ಅಲ್ಲದೆ ಅದರಲ್ಲಿ ತತ್ಕಾಲದಲ್ಲಿ ಕಾನೂನು ಸಮ್ಮತ ಹಕ್ಕನ್ನು ಹೊಂದಿದ್ದು ಆಸ್ತಿಯನ್ನು ಹೊಂದಿರುವ ವ್ಯಕ್ತಿಗಳೂ ಸೇರುತ್ತಾರೆ.

'ಯಾರೊಬ್ಬರು ಪಕ್ಷಕಾರರು' ಎಂಬುದಕ್ಕೆ ಅಪೀಲುದಾರರು ಕಟ್ಟುನಿಟ್ಟಾಗಿ ಪದದ ಅರ್ಥಕ್ಕೆ ಕಟ್ಟುಬಿದ್ದು ಮಾಡಿದ ವ್ಯಾಖ್ಯಾನದಂತೆ ಪತಿ ಅಥವಾ ಪತ್ನಿ ಎಂದಾಗದೆ ಪತಿಯ ಸಾವಿನ ನಂತರ ಅವನ ಆಸ್ತಿಗೆ ಹಕ್ಕನ್ನು ಹೊಂದಿರುವ ಕಾನೂನುಸಮ್ಮತ ವಾರಸುದಾರರೂ ಸೇರುತ್ತಾರೆ ಎಂದಾಗಿ ಬಿಟ್ಟರೆ, ಅಪೀಲುದಾರರ ವಕೀಲರ ವಾದಕ್ಕೆ ಯಾವುದೇ ಸಮರ್ಥನೆಯಿರುವುದಿಲ್ಲ.

ಕಾನೂನಿನ ಆಶಯವನ್ನು ಪರಿಗಣಿಸದೆ ಪದಗಳ ಪ್ರತ್ಯೇಕ ಅರ್ಥಕ್ಕಷ್ಟೆ ಕಟ್ಟುಬಿದ್ದು ವ್ಯಾಖ್ಯಾನ ಮಾಡುವುದು ಕಾನೂನುಗಳ ವ್ಯಾಖ್ಯಾನ ತತ್ತ್ವಗಳಿಗೇ ವಿರುದ್ಧವಾದುದು. ಅಂಥ ವ್ಯಾಖ್ಯಾನಗಳಿಂದ ಕಾನೂನಿನ ಆಶಯ ನೆರವೇರದೆ ಇರುವುದರಿಂದ ಮಹಿಳೆಗೆ ಸಾಮಾಜಿಕ ನ್ಯಾಯ ಒದಗಿಸಬೇಕೆಂಬ ರಾಜ್ಯದ ಆಶಯವೂ ವಿಫಲಗೊಳ್ಳುತ್ತದೆ.

ಕಾನೂನನ್ನು ಅದರ ರಚನೆಯಲ್ಲಿರುವ ಅಸ್ಪಷ್ಟತೆ ಅಥವಾ ನ್ಯೂನತೆಗಳಿಂದ ಪ್ರಯೋಜನ ಪಡೆದು ತಮ್ಮ ಕಕ್ಷಿದಾರರಿಗೆ ಅನುಕೂಲವಾಗುವಂತೆ ವ್ಯಾಖ್ಯಾನ ಮಾಡುವ ಮೂಲಕ ನ್ಯಾಯಾಲಯವನ್ನು ತಪ್ಪುದಾರಿಗೆಳೆವ ಪ್ರಯತ್ನಗಳು ನಡೆಯುತ್ತಲೇ ಇರುತ್ತವೆ. ಇಂಥ ಸಂದರ್ಭಗಳಲ್ಲಿ ನೆರವಿಗೆ ಬರುವುದು ನ್ಯಾಯಾಧೀಶರ ಇಂಥ ವ್ಯಾಖ್ಯಾನಗಳನ್ನು ಪರಿಶೀಲಿಸುವಂಥ ವಿವೇಚನೆ ಮತ್ತು ಸಾಮಾಜಿಕ ನ್ಯಾಯದ ಪ್ರಜ್ಞೆ.

ಶ್ರೀಮತಿ ಚಂದ್ ಧವನ್ -ವಿ-ಜವಹರಲಾಲ್ ಧವನ್ (ಎಐಆರ್ ೮೩ ಎಸ್ ಸಿ ೯೧೬) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಇದ್ದ ನಿರ್ಧರಿಸಬೇಕಾದಂಥ ಪ್ರಶ್ನೆ ಎಂದರೆ, ಪತಿಪತ್ನಿಯರ ನಡುವಿನ ಸಂಬಂಧವನ್ನು ಕೊನೆಗೊಳಿಸದೆಯೇ ಜೀವನಾಂಶ ಸಂದಾಯಕ್ಕೆ ಅವಕಾಶವಿದೆಯೇ ಎಂಬುದು. ಹಿಂದೂ ವಿವಾಹ ಅಧಿನಿಯಮ ೧೯೫೫ರ ೨೫ನೇ ಪ್ರಕರಣ ಕಾಯಂ ಜೀವನಾಂಶಕ್ಕಾಗಿ ಉಪಬಂಧ ಕಲ್ಪಿಸುತ್ತದೆ. ೨೫ನೇ ಪ್ರಕರಣ ಈಳ ಮುಂದಿನಂತಿದೆ-

"೨೫ ಕಾಯಂ ಜೀವನಾಂಶ ಮತ್ತು ಜೀವವಾಂಶ -(೧) ಈ ಅಧಿನಿಯಮದ ಮೇರೆಗೆ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವ ಯಾವುದೇ ನ್ಯಾಯಾಲಯ ಯಾವುದೇ ಡಿಕ್ರಿಯನ್ನು ಹೊರಡಿಸುವ ಸಮಯದಲ್ಲಿ ಅಥವಾ ಆ ತರುವಾಯ, ಸಂದರ್ಭಾನುಸಾರ, ಪತ್ನಿ ಅಥವಾ ಪತಿ ಈ ಉದ್ದೇಶಕ್ಕಾಗಿ ಅರ್ಜಿ ಸಲ್ಲಿಸಿದಲ್ಲಿ, ಪ್ರತ್ಯರ್ಜಿದಾರನ ಪರಮಾನ ಮತ್ತು ಇತರ ಆಸ್ತಿ ಇದ್ದಲ್ಲಿ ಅದನ್ನು ಮತ್ತು

ಅರ್ಜಿದಾರಳ ವರಮಾನ ಮತ್ತಿತರ ಆಸ್ತಿಯನ್ನು ಪಕ್ಷಕಾರರ ನಡತೆ ಮತ್ತು ಪ್ರಕರಣದ ಸನ್ನಿವೇಶಗಳನ್ನು ಗಮನಿಸಿ ನ್ಯಾಯಾಲಯಕ್ಕೆ ನ್ಯಾಯಯುತವಾದದ್ದೆಂದು ಕಂಡುಬರುವಷ್ಟು ಒಟ್ಟು ಮೊತ್ತವನ್ನು ಅಥವಾ ಅರ್ಜಿದಾರನ/ಳ ಜೀವಿತಾವಧಿಗೆ ಮೀರದ ಅವಧಿಯವರೆಗೆ ಅಂಥ ಮಾಸಿಕ ಅಥವಾ ನಿಯತಕಾಲಿಕ ಮೊತ್ತವನ್ನು ಅರ್ಜಿದಾರನಿಗೆ/ಳಿಗೆ ಅವನ/ಅವಳ ಜೀವನ ನಿರ್ವಹಣೆ ಮತ್ತು ಬೆಂಬಲಕ್ಕಾಗಿ ಕೊಡುವಂತೆ ಪ್ರತ್ಯರ್ಜಿದಾರನಿಗೆ ಆದೇಶ ಮಾಡಬಹುದು ಮತ್ತು ಯಾವುದೇ ಅಂಥ ಸಂದಾಯಕ್ಕೆ ಪ್ರತ್ಯರ್ಜಿದಾರನ/ಳ ಸ್ಥಿರಾಸ್ತಿಯ ಮೇಲೆ ಹೊಣೆಗಾರಿಕೆಯನ್ನು ಸೃಜಿಸುವ ಮೂಲಕ ಭದ್ರತೆಯನ್ನೊದಗಿಸಬಹುದು.

(೨) (೧)ನೇ ಉಪ-ಪ್ರಕರಣದ ಮೇರೆಗೆ ಆದೇಶವನ್ನು ಮಾಡಿದ ನಂತರ ಯಾವುದೇ ಸಮಯದಲ್ಲಿ ಎರಡು ಪಕ್ಷಕಾರರಲ್ಲಿ ಯಾರೊಬ್ಬರ ಸನ್ನಿವೇಶಗಳಲ್ಲಿ ಬದಲಾವಣೆಯಾಗಿದೆಯೆಂದು ನ್ಯಾಯಾಲಯಕ್ಕೆ ಮನದಟ್ಟಾದರೆ, ಅದು ಆ ಎರಡೂ ಪಕ್ಷಕಾರರಲ್ಲಿ ಯಾರೊಬ್ಬರ ಕೋರಿಕೆಯ ಮೇರೆಗೆ, ನ್ಯಾಯಾಲಯವು ಉಚಿತವೆಂದು ಭಾವಿಸುವಂಥ ರೀತಿಯಲ್ಲಿ ಅಂಥ ಆದೇಶವನ್ನು ಬದಲಾಯಿಸಬಹುದು, ತಿದ್ದುಪಡಿ ಮಾಡಬಹುದು ಅಥವಾ ರದ್ದುಗೊಳಿಸಬಹುದು.

(೩) ಈ ಪ್ರಕರಣದ ಮೇರೆಗೆ ಆದೇಶವನ್ನು ಯಾರ ಪರವಾಗಿ ಮಾಡಲಾಯಿತೋ ಆ ವ್ಯಕ್ತಿ ಮರುವಿವಾಹವಾಗಿದ್ದಾನೆಂದು/ಳೆಂದು ಅಥವಾ ಅಂಥ ಪಕ್ಷಕಾರರು ಪತ್ನಿಯಾಗಿದ್ದು ಅವಳು ಶೀಲವಂತಳಾಗಿ ಉಳಿದಿಲ್ಲವೆಂದು ಅಥವಾ ಅಂಥ ಪಕ್ಷಕಾರರು ಪತಿಯಾಗಿದ್ದರೆ ಅದನ್ನು ವಿವಾಹ ಬಂಧನದಿಂದ ಹೊರಗೆ ಯಾರೇ ಮಹಿಳೆಯೊಂದಿಗೆ ಲೈಂಗಿಕ ಸಂಭೋಗ ನಡೆಸಿದ್ದಾನೆಂದು ನ್ಯಾಯಾಲಯಕ್ಕೆ ಮನದಟ್ಟಾದರೆ, ಅದು ಇತರ ಪಕ್ಷಕಾರನ ಕೋರಿಕೆಯ ಮೇರೆಗೆ, ನ್ಯಾಯಾಲಯವು ಉಚಿತವೆಂದು ಭಾವಿಸುವಂಥ ರೀತಿಯಲ್ಲಿ ಅಂಥ ಯಾವುದೇ ಆದೇಶವನ್ನು ಬದಲಾಯಿಸಬಹುದು, ತಿದ್ದುಪಡಿಮಾಡಬಹುದು ಅಥವಾ ರದ್ದುಗೊಳಿಸಬಹುದು."

ಮೇಲಿನ ಪ್ರಶ್ನೆಯನ್ನು ನಿರ್ಧರಿಸಲು, ಅಧಿನಿಯಮದ ೨೮ನೇ ಪ್ರಕರಣವನ್ನು ತಿಳಿದುಕೊಳ್ಳುವುದೂ ಮುಖ್ಯವಾಗುತ್ತದೆ.

**"೨೮ ಡಿಕ್ರಿ ಮತ್ತು ಆದೇಶಗಳ ವಿರುದ್ಧ ಅಪೀಲುಗಳು-**

೧. ಈ ಅಧಿನಿಯಮದ ಮೇರೆಗಿನ ಯಾವುದೇ ವ್ಯವಹರಣೆಯಲ್ಲಿ ನ್ಯಾಯಾಲಯವು ಹೊರಡಿಸುವ ಎಲ್ಲ ಡಿಕ್ರಿಗಳೂ, (೩)ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ನ್ಯಾಯಾಲಯವು ಅದರ ಮೂಲ ಅಧಿಕಾರವ್ಯಾಪ್ತಿಯನ್ನು ಚಲಾಯಿಸುವಂಥ ಸಂದರ್ಭದಲ್ಲಿ ಹೊರಡಿಸಲಾದ ಡಿಕ್ರಿಗಳಂತೆ ಅಪೀಲೀಯ ವಾಗಿರತಕ್ಕದು ಮತ್ತು ಅಂಥ ಪ್ರತಿಯೊಂದು ಅಪೀಲನ್ನು ಸಹ ನ್ಯಾಯಾಲಯವು ತನ್ನ ಮೂಲ

ಸಿವಿಲ್ ಅಧಿಕಾರ ವ್ಯಾಪ್ತಿಯ ಚಲಾವಣೆಯಲ್ಲಿ ನೀಡಲಾದ ನಿರ್ಧಾರಗಳ ವಿರುದ್ಧ ಸಾಮಾನ್ಯವಾಗಿ ಯಾವ ನ್ಯಾಯಾಲಯದಲ್ಲಿ ಅಪೀಲುಗಳನ್ನು ಹೂಡಲಾಗುತ್ತದೆಯೋ ಅದೇ ನ್ಯಾಯಾಲಯದಲ್ಲಿ ಹೂಡತಕ್ಕದ್ದು.

೨. ಈ ಅಧಿನಿಯಮದ ಮೇರೆಗೆ ೨೫ನೇ ಪ್ರಕರಣದ ಅಥವಾ ೨೬ನೇ ಪ್ರಕರಣದ ಅಡಿಯಲ್ಲಿನ ಯಾವುದೇ ವ್ಯವಹರಣೆಯಲ್ಲಿ ನ್ಯಾಯಾಲಯವು ಮಾಡಿದ ಆದೇಶಗಳು ಅವು ಮಧ್ಯಂತರ ಆದೇಶಗಳಾಗಿರದಿದ್ದಲ್ಲಿ, (೩)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಅಪೀಲೀಯವಾಗಿರತಕ್ಕದ್ದು ಮತ್ತು ಅಂಥ ಪ್ರತಿಯೊಂದು ಅಪೀಲನ್ನೂ ನ್ಯಾಯಾಲಯವು ತನ್ನ ಮೂಲ ಸಿವಿಲ್ ಅಧಿಕಾರವ್ಯಾಪ್ತಿಯ ಚಲಾವಣೆಯಲ್ಲಿ ನೀಡಲಾದ ನಿರ್ಧಾರಗಳ ವಿರುದ್ಧ ಸಾಮಾನ್ಯವಾಗಿ ಯಾವ ನ್ಯಾಯಾಲಯದಲ್ಲಿ ಅಪೀಲುಗಳನ್ನು ಹೂಡಲಾಗುತ್ತದೆಯೋ ಅದೇ ನ್ಯಾಯಾಲಯದಲ್ಲಿ ಹೂಡತಕ್ಕದ್ದು.

೩. ವೆಚ್ಚಗಳ ವಿಷಯಕ್ಕೆ ಮಾತ್ರವಾದರೆ ಈ ಪ್ರಕರಣದ ಮೇರೆಗೆ ಅಪೀಲು ಹೂಡತಕ್ಕದ್ದಲ್ಲ.

೪. ಈ ಪ್ರಕರಣದ ಮೇರೆಗಿನ ಪ್ರತಿಯೊಂದು ಅಪೀಲನ್ನು ಡಿಕ್ರಿ ಅಥವಾ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗಾಗಿ ಹೂಡತಕ್ಕದ್ದು"

ಅಧಿನಿಯಮದ ೨೫ನೇ ಪ್ರಕರಣದ ಮೇರೆಗೆ ಪತಿ ಅಥವಾ ಪತ್ನಿ ಈ ಅಧಿನಿಯಮದ ಅಡಿಯಲ್ಲಿನ ವ್ಯವಹರಣೆಗಳಿಗೆ ಸಂಬಂಧಿಸಿದಂತೆ ಯಾವುದೇ ಡಿಕ್ರಿಯನ್ನು ಹೊರಡಿಸುವ ಸಮಯದಲ್ಲಿ ಅಥವಾ ಆ ತರುವಾಯ ಪ್ರತಿವಾದಿಯಿಂದ ಕಾಯಂ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ. ಇಲ್ಲಿ ಈ ಅಧಿನಿಯಮದ ಅಡಿಯಲ್ಲಿನ ವ್ಯವಹರಣೆಗಳು ಎಂದರೆ, ೯ ರಿಂದ ೧೩ರವರೆಗಿನ ಪ್ರಕರಣಗಳಲ್ಲಿ ಎಂದರೆ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆ(ಪ್ರಕರಣ.೯); ನ್ಯಾಯಿಕ ಬೇರ್ಪಡೆ(ಪ್ರಕರಣ.೧೦); ಶೂನ್ಯ ವಿವಾಹಗಳು(ಪ್ರಕರಣ.೧೨); ವಿಚ್ಛೇದನೆ(ಪ್ರಕರಣ.೧೩)ಯ ಪ್ರಕರಣಗಳಲ್ಲಿ ಡಿಕ್ರಿ ಅಥವಾ ಆದೇಶ ಹೊರಡಿಸುವ ಸಂದರ್ಭದಲ್ಲಿ ಅಥವಾ ಆ ತರುವಾಯ ಕಾಯಂ ಜೀವಾನಾಂಶಕ್ಕೆ ಪತಿ/ಪತ್ನಿ ಹಕ್ಕುಳ್ಳವರಾಗಿರುತ್ತಾರೆ. ಎಂದರೆ ಇದರರ್ಥ ಈ ಪ್ರಕರಣಗಳ ಮೇರೆಗಿನ ವೈವಾಹಿಕ ವ್ಯಾಜ್ಯದಲ್ಲಿ ಯಾವುದೇ ಪರಿಹಾರವನ್ನು ನೀಡುವ ಡಿಕ್ರಿಯನ್ನು ಹೊರಡಿಸಿದಾಗ ಮಾತ್ರ ಇಂಥ ಹಕ್ಕು ಒದಗುತ್ತದೆ. ಆದರೆ ಈ ಪ್ರಕರಣಗಳ ಅಡಿಯಲ್ಲಿ ಹಾಕಿದ ಅರ್ಜಿಯನ್ನು ವಜಾಮಾಡಿದಾಗ ಅಥವಾ ಹಿಂತೆಗೆದುಕೊಂಡಾಗ ಇಂಥ ಹಕ್ಕು ಪ್ರಾಪ್ತವಾಗುವುದಿಲ್ಲ.

ಅಧಿನಿಯಮದ ೨೫ನೇ ಪ್ರಕರಣದಲ್ಲಿ ಬಳಸಿರುವ 'ಡಿಕ್ರಿ' ವೈವಾಹಿಕ ವ್ಯಾಜ್ಯದಲ್ಲಿ ಪರಿಹಾರ ನೀಡಿ ಹೊರಡಿಸಿದ 'ಡಿಕ್ರಿ'ಗೆ ಸಂಬಂಧಿಸಿದರೆ, 'ಡಿಕ್ರಿಗಳು ಮತ್ತು ಆದೇಶಗಳ ವಿರುದ್ಧ ಅಪೀಲು' ಪ್ರಕರಣ(೨೮)ದಲ್ಲಿ

ಉಲ್ಲೇಖಿಸಲಾದ ಡಿಕ್ರಿ ೨೫ ನೇ ಪ್ರಕರಣದ ಅಡಿಯಲ್ಲಿ ಯಾವುದೇ ವೈವಾಹಿಕ ಪರಿಹಾರ ಕೋರಿ ಸಲ್ಲಿಸಿದ ಅರ್ಜಿಯನ್ನು ವಜಾ ಮಾಡಿದ ಡಿಕ್ರಿಗೂ ಅನ್ವಯವಾಗುತ್ತದೆ. ಎಂದರೆ ಪರಿಹಾರ ನೀಡಿ ಹೊರಡಿಸಿದ ಡಿಕ್ರಿಯ ವಿರುದ್ಧ ಅಪೀಲು ಹೂಡಬಹುದಾಗಿರುವಂತೆಯೇ ಮೂಲ ದಾವೆಯನ್ನೇ ವಜಾಮಾಡಿ ಹೊರಡಿಸಿದ ಡಿಕ್ರಿಯ ವಿರುದ್ಧವೂ ಅಪೀಲು ಹೂಡಬಹುದಾಗಿದೆ.

೨೫ನೇ ಪ್ರಕರಣದಲ್ಲಿ ಬಳಸಲಾಗಿರುವ "ಡಿಕ್ರಿಯನ್ನು ಹೊರಡಿಸುವ ಸಮಯದಲ್ಲಿ ಅಥವಾ ತರುವಾಯ ಯಾವುದೇ ಸಮಯದಲ್ಲಿ" ಎಂಬ ಪದಾವಳಿಗಳು ಪ್ರಾರಂಭದಿಂದಲೂ ಗೊಂದಲವನ್ನುಂಟು ಮಾಡಿದೆ.

ಕಾಯಂ ಜೀವನಾಂಶದ ಪರಿಹಾರ ಯಾವಾಗಲೂ ಮುಖ್ಯ ಪರಿಹಾರಕ್ಕೆ ಪೂರಕವಾಗಿ ಅಥವಾ ಅನುಷಂಗಿಕವಾಗಿ ಬರುತ್ತದೆ. ಆದ್ದರಿಂದ ೨೫ನೇ ಪ್ರಕರಣದಲ್ಲಿ ಮೂಲ ದಾವೆಯನ್ನು ವಜಾ ಮಾಡಿ ಹೊರಡಿಸಿದ ಡಿಕ್ರಿ ೨೮ನೇ ಪ್ರಕರಣದ ಅಡಿಯಲ್ಲಿ ಅಪೀಲು ಹೂಡಬಹುದಾದ ಡಿಕ್ರಿಯಾಗಿದ್ದರೂ, ಮೂಲದಾವೆಯಲ್ಲಿ ಯಾವುದೇ ವೈವಾಹಿಕ ಪರಿಹಾರ ನೀಡಿಲ್ಲವಾದ್ದರಿಂದ (ವೈವಾಹಿಕ ಸಂಬಂಧ ಯಾವುದೇ ರೀತಿಯಲ್ಲಿ ಈ ಡಿಕ್ರಿಯಿಂದ ವ್ಯತ್ಯಾಸಗೊಂಡಿಲ್ಲವಾದ್ದರಿಂದ) ಅದರೊಡನೆಯೇ ಪ್ರಾಪ್ತವಾಗುವ ಜೀವನಾಂಶದ ಪರಿಹಾರಕ್ಕೆ ಅರ್ಜಿದಾರ ಹಕ್ಕುಳ್ಳವನಾ/ಳಾಗುವುದಿಲ್ಲ. ಅಂಥ ಸಂದರ್ಭದಲ್ಲಿ, ವೈವಾಹಿಕ ಸಂಬಂಧ ಊರ್ಜಿವಿದ್ದೂ ಜೀವನಾಂಶವನ್ನು ಪಡೆಯಬಹುದಾದ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ, ೧೯೫೬ರ ಅಡಿಯಲ್ಲಿ ಜೀವನಾಂಶಕ್ಕಾಗಿ ದಾವೆ ಹೂಡಬೇಕಾಗುತ್ತದೆ.

ಕಾನೂನಿನ ಅನ್ವಯ ಹಾಗೂ ಸೂಕ್ಷ್ಮತೆಗಳನ್ನು ತಿಳಿಯದ ಪಕ್ಷಕಾರರಿಗೆ ಸರಿಯಾದ ಸಲಹೆ ಮಾರ್ಗದರ್ಶನಗಳಿಲ್ಲದಿದ್ದರೆ, ಆ ಹಂತದಲ್ಲಿಯೂ ಪಕ್ಷಕಾರರು(ಮುಖ್ಯವಾಗಿ ಮಹಿಳೆ) ಅನವಶ್ಯಕ ಖರ್ಚು, ಕಾಲಹರಣ, ಆತಂಕಗಳಿಗೆ ಒಳಗಾಗಬೇಕಾಗುತ್ತದಲ್ಲದೆ ಆರ್ಥಿಕವಾಗಿ ಸಂಕಷ್ಟದಲ್ಲಿರುವವರಿಗೆ ಇಂಥ ಸಂದರ್ಭ ಮತ್ತಷ್ಟು ಕಷ್ಟವನ್ನು ತಂದೊಡ್ಡುತ್ತದೆ. ಆದ್ದರಿಂದ ಸೂಕ್ತ ಕಾನೂನು ಸಲಹೆ ಹಾಗೂ ನೆರವನ್ನು ಕೊಡಿಸುವ ಕ್ರಮಗಳೂ ಸಹ ಮಹಿಳೆಯ ಪರಿಸ್ಥಿತಿಯನ್ನು ಉತ್ತಮಗೊಳಿಸಲು ಅತ್ಯವಶ್ಯಕವಾಗುತ್ತದೆ. 'ನ್ಯಾಯ' ಒದಗಿಸುವ ಮಾರ್ಗವಾಗುತ್ತದೆ.

ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಅಡಿಯಲ್ಲಿ ಜೀವನಾಂಶ-

ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮ, ೧೯೫೬ರ ಅಡಿಯಲ್ಲಿ ಹಿಂದೂ ಪತ್ನಿ ಜೀವನಾಂಶ ಪಡೆಯುವ ಹಕ್ಕನ್ನು ಬಿಟ್ಟುಕೊಡದೆಯೇ ಪತಿಯಿಂದ ಬೇರೆಯಾಗಿ ವಾಸಿಸಲು ಹಕ್ಕುಳ್ಳವಳಾಗಿರುತ್ತಾಳೆ. ಅಧಿನಿಯಮದ ೧೮ನೇ ಪ್ರಕರಣದ (೨)ನೇ ಉಪ-ಪ್ರಕರಣದ ಮೇರೆಗೆ ಹಲವು ಕಾರಣಗಳಿಗಾಗಿ ಪತ್ನಿಯ ಪ್ರತ್ಯೇಕ ವಾಸ ಸಮರ್ಥನೀಯವಾಗುತ್ತದೆ. ಅದೆಂದರೆ

ಎ. ಪತಿಯಿಂದ ಪರಿತ್ಯಾಗ

ಬಿ. ಕ್ರೌರ್ಯ

ಸಿ. ಪತಿ ಸಾಂಕ್ರಾಮಿಕ ಕುಷ್ಠ ರೋಗದಿಂದ ನರಳುತ್ತಿರುವುದು.

ಡಿ. ಜೀವಂತ ಪತ್ನಿಯನ್ನು ಹೊಂದಿರುವುದು.

ಇ. ಉಪಪತ್ನಿಯನ್ನು ಅದೇ ಮನೆಯಲ್ಲಿ ಇರಿಸಿಕೊಂಡಿರುವುದು.

ಎಫ್. ಪತಿ ಇತರ ಧರ್ಮಕ್ಕೆ ಮತಾಂತರ ಹೊಂದಿರುವುದು.

ಜಿ. ಪತಿಯಿಂದ ಪ್ರತ್ಯೇಕವಾಗಿ ವಾಸಿಸಲು ಪತ್ನಿಗೆ ಇರುವ ಮತ್ತಾವುದೇ ಸಮರ್ಥನೀಯ ಕಾರಣ.

ಮೇಲಿನ ಯಾವೊಂದು ಕಾರಣಕ್ಕಾಗಿಯೂ ಪತ್ನಿ ಪತಿಯಿಂದ ಪ್ರತ್ಯೇಕವಾಗಿ ವಾಸಿಸಬಹುದು ಮತ್ತು ಪ್ರತ್ಯೇಕವಾಗಿ ವಾಸಿಸಿಯೂ ಜೀವನಾಂಶವನ್ನು ಪಡೆಯುವ ಹಕ್ಕನ್ನು ಹೊಂದಿರುತ್ತಾಳೆ. ಆದರೆ ಸಮರ್ಥನೀಯವಾದ ಕಾರಣವಿಲ್ಲದೆ, ಮತ್ತು ಪತಿಯ ಸಮ್ಮತಿಯಿಲ್ಲದೆ ಮತ್ತು ಅವನ ಇಚ್ಛೆಗೆ ವಿರುದ್ಧವಾಗಿ ಪತ್ನಿ ಪತಿಯಿಂದ ಪ್ರತ್ಯೇಕವಾಗಿ ವಾಸಿಸಿದರೆ ಜೀವನಾಂಶವನ್ನು ಪಡೆಯಲು ಅವಳು ಹಕ್ಕುಳ್ಳವಳಾಗುವುದಿಲ್ಲ.

ಮಹಾರಾಜಾ ನಾದರ್ -ವಿ- ಮುತುಕಣಿ ಅಮ್ಮಾಳ್ (ಎಐಆರ್ ೮೬ ಮದ್ರಾಸ್ ೩೪೬) ಪ್ರಸ್ತುತ ಪ್ರಕಣದಲ್ಲಿ, ಪತಿ ಪತ್ನಿಯನ್ನು 'ಬಂಜೆ' ಎಂದು ಕರೆದು ಹೀಯಾಳಿಸುತ್ತಿದ್ದ, ಇದರಿಂದಾಗಿ ಅವಳು ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದಳು. ಅದರಲ್ಲೂ ಪತಿಯೇ ಅವಳನ್ನು ಹಾಗೆಂದು ಹೀಯಾಳಿಸಿದಾಗ ಉಂಟಾಗುವ ಮಾನಸಿಕ ಹಿಂಸೆ ಮತ್ತಷ್ಟು ತೀವ್ರವಾದುದು. ಅಲ್ಲದೆ ಅಪೀಲುದಾರ(ಪತಿ) ತಾನು 'ನಪುಂಸಕ'ನಲ್ಲವೆಂಬ ಬಗ್ಗೆ ಯಾವುದೇ ವೈದ್ಯಕೀಯ ರುಜವಾತನ್ನೂ ಹಾಜರುಪಡಿಸಿಲ್ಲ. ಇಂಥ ಸಂದರ್ಭದಲ್ಲಿ ಪತಿಯಿಂದ ಅಂಥ ಅವಹೇಳನ ಪತ್ನಿಗೆ ಮಾನಸಿಕ ಹಿಂಸೆಯನ್ನುಂಟು ಮಾಡುವುದರಲ್ಲಿ ಯಾವುದೇ ಸಂಶಯವಿಲ್ಲ. ಕಾನೂನಿನ ಅಡಿಯಲ್ಲಿ ಇದು ಕ್ರೌರ್ಯವೆನಿಸುತ್ತದೆ.

ಅಲ್ಲದೆ ಅಪೀಲುದಾರ(ಪತಿ) ಪತ್ನಿಯನ್ನು ಬಿಟ್ಟು ಬೊಮ್ಮ ಅಮ್ಮಾಳ್ ಜೊತೆಯಲ್ಲಿ ವಾಸಿಸುತ್ತಿದ್ದಾನೆ ಎಂಬ ಅಂಶ ಅವರಿಬ್ಬರೂ ವಿವಾಹವಾಗಿದ್ದಾರೆ ಎಂಬುದನ್ನು ರುಜುವಾತು ಪಡಿಸದಿದ್ದರೂ, ಪತ್ನಿಯನ್ನು ಬಿಟ್ಟುಬಿಟ್ಟಿದ್ದಾನೆ ಎಂಬುದನ್ನು ರುಜುವಾತುಪಡಿಸುತ್ತದೆ. ಆದ್ದರಿಂದ ಇಲ್ಲಿ ಪತ್ನಿ ಪ್ರತ್ಯೇಕವಾಗಿ ವಾಸಿಸುತ್ತಿರುವುದಕ್ಕೆ ಸಮರ್ಥನೀಯ ಕಾರಣಗಳಿರುವುದರಿಂದ ಅವಳು ಪತಿಯಿಂದ ಪ್ರತ್ಯೇಕವಾಗಿ ವಾಸಿಸಯೂ ಜೀವನಾಂಶವನ್ನು ಕ್ಲೇಮು ಮಾಡಲು ಹಕ್ಕುವಳಾಗಿದ್ದಾಳೆ. ಪತಿಯಿಂದ ಪ್ರತ್ಯೇಕವಾಗಿ ವಾಸಮಾಡುತ್ತಾ ಈ ಅಧಿನಿಯಮದ ಅಡಿಯಲ್ಲಿ ಜೀವನಾಂಶ ಕ್ಲೇಮು ಮಾಡುವ ಪ್ರತಿ ಸಂದರ್ಭದಲ್ಲಿಯೂ ಪ್ರತ್ಯೇಕವಾಗಿ ವಾಸಮಾಡಲು ಪತ್ನಿಗೆ ಸಮರ್ಥನೀಯ ಕಾರಣಗಳಿರಲಿಲ್ಲ ಎಂಬುದನ್ನೇ ರುಜುವಾತುಪಡಿಸಲು

ಪ್ರಯತ್ನಿಸಲಾಗುತ್ತದೆ. ಅಧಿನಿಯಮದ ಆರು ನಿರ್ದಿಷ್ಟ ಕಾರಣಗಳನ್ನು ಹೇಳಿ ವಿಳನೆಯದಾಗಿ ಯಾವುದೇ ಇತರ ಸಮರ್ಥನೀಯ ಕಾರಣ ಎಂದು ಹೇಳುವುದರ ಮೂಲಕ ನ್ಯಾಯಾಲಯಕ್ಕೆ ವಿಸ್ತೃತ ವಿವೇಚನೆಯನ್ನು ನೀಡಲಾಗಿದೆ. ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿಲ್ಲದ ಯಾವುದೇ ಇತರ ಕಾರಣವೂ ಸಮರ್ಥನೀಯವೇ ಅಲ್ಲವೇ ಎಂಬುದು ಸಂಪೂರ್ಣವಾಗಿ ಆಯಾ ಪ್ರಕರಣದ ವಿವರಗಳನ್ನೇ ಅವಲಂಬಿಸಿರುತ್ತದೆ. ಮತ್ತು ನ್ಯಾಯ ಪ್ರದಾನ ಮಾಡುವ ನ್ಯಾಯಾಧೀಶರ ವಿವೇಚನೆಯನ್ನು ಅವಲಂಬಿಸಿರುತ್ತದೆ. ಇಂಥ ವಿವೇಚನೆ ಕಾನೂನಿನ ಚೌಕಟ್ಟಿನಲ್ಲಿದ್ದು ಕಾನೂನಿನ ಆಶಯಕ್ಕೆ ಪೂರಕವಾಗಿರಬೇಕಾಗುತ್ತದೆ.

ಉದಾಹರಣೆಗೆ, ಪತ್ನಿ ಪತಿಯಿಂದ ಪ್ರತ್ಯೇಕವಾಗಿ ಜೀವಿಸಿಯೂ ಜೀವನಾಂಶವನ್ನು ಪಡೆಯಬೇಕಾದರೆ ಹಾಗೆ ಪ್ರತ್ಯೇಕವಾಗಿ ಜೀವಿಸಲು ಪತ್ನಿಗೆ ಸಮರ್ಥನೀಯ ಕಾರಣವಿರಬೇಕು. ಇಲ್ಲವೇ ಪತಿ ಪತ್ನಿಯನ್ನು ತೊರೆದಿರಬೇಕು. ಪತ್ನಿಯನ್ನು ತೊರೆಯಲು ಪತಿಗೆ ಸಮರ್ಥನೀಯ ಕಾರಣವಿದ್ದರೂ ಪತ್ನಿ ಜೀವನಾಂಶ ಕೇಳಲು ಹಕ್ಕು ಹೊಂದಿರುವುದಿಲ್ಲ.

ರಾಘವನ್ ರಾಧಾಕೃಷ್ಣನ್ -ವಿ- ಸತ್ಯಭಾಮಾ ಜಯಕುಮಾರಿ(ಎಐಆರ್ ೮೫ ಕೇರಳ ೧೯೩) ಈ ಪ್ರಕರಣದಲ್ಲಿ ಇತ್ಯಾರ್ಥವಾಗಬೇಕಿದ್ದ ಕಾನೂನಿನ ಪ್ರಶ್ನೆ ಎಂದರೆ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಅಡಿಯಲ್ಲಿ ೧೮(೨)(ಎ) ಪ್ರಕರಣದ ಪರಿತ್ಯಾಗವನ್ನು ರುಜುವಾತು ಪಡಿಸಲು animus decidendiಯನ್ನು ಎಂದರೆ ಸಹವಾಸವನ್ನು ಶಾಶ್ವತವಾಗಿ ಕೊನೆಗೊಳಿಸುವ ಉದ್ದೇಶ ಇತ್ತೆ ಎಂಬುದನ್ನು ರುಜುವಾತುಪಡಿಸುವ ಅಗತ್ಯವಿದೆಯೇ ಎಂಬುದು.

ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿ 'ಪರಿತ್ಯಾಗ'ದ ಕಾರಣದ ಮೇಲೆ ವಿಚ್ಛೇದನೆ ಪಡೆಯಲು ಅವಕಾಶವಿದೆ. ಬಿಪಿನ್ ಚಂದ್ರ ಜೈಸಿಂಗ್ ಷಾ-ವಿ-ಪ್ರಭಾವತಿ (ಎಪಿಆರ್ ೧೯೫೭ ಎಸ್ ಸಿ ೧೭೬:೧೯೫೭ ಎಸ್ ಸಿಜೆ ೧೪೪) ಪ್ರಕರಣದಲ್ಲಿ, ಸರ್ವೋಚ್ಚ ನ್ಯಾಯಾಲಯ, ಪತಿ/ಪತ್ನಿ ಪರಿತ್ಯಾಗದ ದೋಷಿಯಾಗಬೇಕಾದರೆ ಎರಡು ಅಗತ್ಯ ಅಂಶಗಳನ್ನು ಹೊಂದಿರಬೇಕೆಂದು ಅಭಿಪ್ರಾಯಪಟ್ಟಿದೆ. ಅವೆಂದರೆ-

೧. ಪ್ರತ್ಯೇಕಗೊಂಡಿರುವ ಅಂಶ

೨. ಸಹವಾಸವನ್ನು ಶಾಶ್ವತವಾಗಿ ಕೊನೆಗೊಳಿಸುವ ಉದ್ದೇಶ(ಅನಿಮಸ್ ಡಿಸಿಡೆಂಡಿ)

ಹಾಗೆಯೇ ಪರಿತ್ಯಜಿಸಲ್ಪಟ್ಟ ಪತಿ/ಪತ್ನಿಯ ವಿಷಯದಲ್ಲಿಯೂ ಎರಡು ಅಂಶಗಳು ರುಜುವಾತಾಗಬೇಕು ಎಂದು ಅಭಿಪ್ರಾಯಪಟ್ಟಿತು.

೧. ಒಪ್ಪಿಗೆ ಇಲ್ಲದಿರುವುದು.

೨. ವೈವಾಹಿಕ ಗೃಹ ತೊರೆಯುವ ಪತಿ/ಪತ್ನಿಗೆ ಹಿಂದೆ ಹೇಳಿದಂಥ ಉದ್ದೇಶ ಇತ್ತೆಂದು ಭಾವಿಸಲು ಕಾರಣವಾಗುವಂಥ ಯಥೋಚಿತ ಕಾರಣ ಇಲ್ಲದಿರುವುದು

ಇಲ್ಲಿ ಪರಿತ್ಯಾಗ ಎಂಬುದು ವಿಚ್ಛೇದನೆಗೆ ಕಾರಣವಾಗಿ ವೈವಾಹಿಕ ಸಂಬಂಧವನ್ನು ಶಾಶ್ವತವಾಗಿ ಮುರಿದುಬಿಡುವುದರಿಂದ, ಇದನ್ನು ರುಜುವಾತು ಪಡಿಸುವ ಮಾನದಂಡವೂ ಹೆಚ್ಚು ಕಟ್ಟುನಿಟ್ಟಾಗಿರಬೇಕಾಗುತ್ತದೆ.

ಆದರೆ ಪ್ರಸ್ತುತ ಪ್ರಕರಣದಲ್ಲಿ, ಪರಿತ್ಯಾಗವನ್ನು ಜೀವನಾಂಶ ಪಡೆಯುವುದಕ್ಕಾಗಿ ಹಿಂದೂ ಪತ್ನಿ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಅಡಿಯಲ್ಲಿ ಕಾರಣವನ್ನಾಗಿ ತೋರಿಸಲಾಗುತ್ತದೆ. ಆದರೆ ಇಲ್ಲಿ ಪರಿತ್ಯಜಿಸಲ್ಪಟ್ಟ ಪತ್ನಿ 'ಸಹವಾಸವನ್ನು ಶಾಶ್ವಾತವಾಗಿ ಕೊನೆಗೊಳಿಸುವ ಉದ್ದೇಶ ಪತಿಗೆ ಇತ್ತೆಂಬುದನ್ನು ರುಜುವಾತುಪಡಿಸಬೇಕಿಲ್ಲ. ಈ ಅಧಿನಿಯಮದ ಉದ್ದೇಶಗಳಿಗಾಗಿ 'ಪರಿತ್ಯಜಿಸಲ್ಪಟ್ಟಿದ್ದಾಳೆ' ಎಂಬುದನ್ನು ಅವಳು ರುಜುವಾತುಪಡಿಸಿದರೆ ಸಾಕು.

ಈ ಅಧಿನಿಯಮದ ಮೂಲಕ ಸಾಧಿಸಬೇಕಾದ ಉದ್ದೇಶವನ್ನು ಮತ್ತು ತಡೆಹಾಕಬೇಕಾದ ಕಿರುಕುಳವನ್ನು ಗಮನದಲ್ಲಿಟ್ಟುಕೊಂಡು, ಪರಿತ್ಯಜಿಸಲ್ಪಟ್ಟ ಅಥವಾ ನಿರ್ಲಕ್ಷ್ಯಕ್ಕೀಡಾದ ಮಹಿಳೆಯರ ರಕ್ಷಣೆ ಮತ್ತು ಕಲ್ಯಾಣದ ದೃಷ್ಟಿಯಿಂದ ಜಾರಿಗೆ ತಂದಿರುವ ಈ ಕಾನೂನಿನ ಉಪಬಂಧಗಳನ್ನು ಉದಾರವಾಗಿ ವ್ಯಾಖ್ಯಾನಿಸಬೇಕಾಗುತ್ತದೆ.

ಜೀವನಾಂಶಕ್ಕಾಗಿ ಕ್ಲೇಮು ಮಾಡುವ ಪರಿತ್ಯಜಿಸಲ್ಪಟ್ಟ ಹಾಗೂ ನಿರ್ಲಕ್ಷ್ಯಕ್ಕೆ ಒಳಗಾದ ಹಿಂದೂ ಪತ್ನಿ ತನ್ನ ಪತಿಗೆ ತನ್ನನ್ನು ಪರಿತ್ಯಜಿಸುವ ಉದ್ದೇಶವಿತ್ತು ಎಂಬುದನ್ನು ರುಜುವಾತುಪಡಿಸಬೇಕೆಂದು ನ್ಯಾಯಾಲಯಗಳು ಒತ್ತಾಯಮಾಡಿದರೆ, ಅದು ಅನುಕೂಲ ಉಂಟುಮಾಡಲೆಂದು ಜಾರಿಗೊಳಿಸಲಾದ ಕಾನೂನಿನ ಉಪಬಂಧಗಳ ಆಶಯ ಹಾಗೂ ಉದ್ದೇಶಕ್ಕೆ ವಿರುದ್ಧವಾದುದಾಗುತ್ತದೆ. ಅಲ್ಲದೆ ಸಂವಿಧಾನದ ಅಡಿಯಲ್ಲಿ ನ್ಯಾಯಾಲಯಗಳು ಒತ್ತಾಸೆ ನೀಡಬೇಕಾದ ಸಾಮಾಜಿಕ ನ್ಯಾಯದ ಮಾರ್ಗದಿಂದ ಹಿನ್ನಡೆದಂತೆಯೂ ಆಗುತ್ತದೆ.

ಆದ್ದರಿಂದ ಹಿಂದೂ ವಿವಾಹ ಅಧಿನಿಯಮದ ಅಡಿಯಲ್ಲಿ 'ಪರಿತ್ಯಾಗ'ದ ಕಾರಣವನ್ನು ನಿರ್ಧರಿಸುವಾಗ ಬಳಸುವ ಮಾನದಂಡವನ್ನೆ ಇಲ್ಲಿಯೂ ಬಳಸಿ ಹಿಂದೂ ದತ್ತಕ ಮತ್ತು ಜೀವವಾಂಶ ಅಧಿನಿಯಮದ ಆಶಯ ಹಾಗೂ ಉದ್ದೇಶವನ್ನೆ ವಿಫಲಗೊಳಿಸುವ ಪ್ರಯತ್ನಗಳು ಸಹ ಮಹಿಳೆಗೆ ನ್ಯಾಯದೊರಕಿಸಿಕೊಡುವಲ್ಲಿ ಅಡ್ಡಿಯುಂಟು ಮಾಡುವ ಅಂಶಗಳಾಗುತ್ತವೆ. ಮಹಿಳೆಗೆ ನ್ಯಾಯ ಒದಗಿಸುವ ದೃಷ್ಟಿಯಿಂದಲೇ ರಚಿತವಾದ ಕಾನೂನುಗಳ ಮೂಲಕ, ಅವುಗಳ ವಿಭಿನ್ನ ವ್ಯಾಖ್ಯಾನ ಹಾಗೂ ಅನ್ವಯಗಳ ಕಾರಣದಿಂದಾಗಿ ನ್ಯಾಯ ದೊರೆಯದೇ ಹೋಗುವ ಸಂಭವವಿರುತ್ತದೆ. ಇಂಥಲ್ಲಿ ನ್ಯಾಯಾಲಯ ತೋರುವ ವಿವೇಚನೆ ಮಾತ್ರವೇ ನ್ಯಾಯ ಒದಗಿಸುವಲ್ಲಿ ಸಹಾಯಕವಾಗುವುದು.

ವೈಜಯಂತಬಾಯಿ, ಕೇರುಗಂಗಾರ್ಡೆಯ ಪತ್ನಿ ಮತ್ತು ಮತ್ತೊಬ್ಬರು -ವಿ-ಕೇರು ಅನಂತ ಗಂಗಾಡೆ, ಮೃತನಾದ್ದರಿಂದ ಕಾನೂನು ಸಮ್ಮತ ಪ್ರತಿನಿಧಿಗಳ ಮೂಲಕ (೧೯೯೨ ಮಹಾರಾಷ್ಟ್ರ ಲಾ ಜರ್ನಲ್ ೫೧೭) ಪ್ರಕರಣಕ್ಕೆ ಸಂಬಂಧಿಸಿದ ಅಪೀಲಿನಲ್ಲಿ ಎತ್ತಲಾದ ಪ್ರಶ್ನೆಯೆಂದರೆ ಅಪೀಲುದಾರಳಾದ ವೈಜಯಂತ ಬಾಯಿ ತನ್ನ ಪತಿಯ ಎರಡನೇ ಹೆಂಡತಿಯಾದ್ದರಿಂದ ಅವಳ ವಿವಾಹ ಹಿಂದು ವಿವಾಹ ಅಧಿನಿಯಮ ೧೯೫೫ರ ಉಪಬಂಧಗಳ ಅಡಿಯಲ್ಲಿ ಕಾನೂನು ಸಮ್ಮತ ವಿವಾಹವಾಗುವುದಿಲ್ಲವಾದ್ದರಿಂದ ಅವಳು ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ೧೮(೨)(ಡಿ) ಪ್ರಕರಣದ ಮೇರೆಗೆ ಜೀವನಾಂಶವನ್ನು ಕ್ಲೇಮು ಮಾಡಲು ಹಕ್ಕುಳ್ಳವಳಾಗುತ್ತಾಳೆಯೇ ಎಂಬುದು. ವಿಚಾರಣಾ ನ್ಯಾಯಾಲಯ ಅವಳಿಗೆ ಹಕ್ಕು ಇರುವುದಿಲ್ಲವೆಂದು ತೀರ್ಪು ನೀಡಿದೆ. ಇದನ್ನು ಪ್ರಶ್ನಿಸಿ ಮುಂಬಯಿ ಉಚ್ಚ ನ್ಯಾಯಾಲಯದಲ್ಲಿ ಅಪೀಲು ಹೂಡಲಾಗಿದೆ.

ವಿಚಾರಣಾ ನ್ಯಾಯಾಲಯದ ನ್ಯಾಯಾಧೀಶರು ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ೧೮ನೇ ಪ್ರಕರಣದ ಮೇರೆಗೆ ಜೀವನಾಂಶವನ್ನು ಕೇವಲ ಕಾನೂನು ಸಮ್ಮತವಾಗಿ ವಿವಾಹವಾದ ಪತ್ನಿಗೆ ನೀಡಲಾಗುತ್ತದೆಯೇ ವಿನಃ ಇತರ ಯಾರೇ ಮಹಿಳೆಗೆ ಯಾವುದೇ ಸಂದರ್ಭದಲ್ಲಿಯೂ ನೀಡಲಾಗುವುದಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

ನ್ಯಾಯಾಧೀಶರು ಈ ತೀರ್ಮಾನಕ್ಕೆ ಬಂದಿರುವುದಕ್ಕೆ ಕಾರಣ ಕೇರು ಮತ್ತು ಅಂಬಾಯಿಯವರ ವಿವಾಹ ಊರ್ಜಿತವಿರುವಾಗಲೇ ಕೇರು ವೈಜಯಂತಳನ್ನು(ಅಪೀಲುದಾರಳು) ವಿವಾಹವಾದ್ದರಿಂದ ಈ ವಿವಾಹ ಕಾನೂನು ಸಮ್ಮತವಲ್ಲ ಹಾಗೂ ಹಿಂದೂ ವಿವಾಹ ಅಧಿನಿಯಮದ ಮೇರೆಗೆ ಅಂಥ ವಿವಾಹ ಶೂನ್ಯ ವಾಗುತ್ತದೆ ಎಂಬುದು. ಕೇರು ವೈಜಯಂತಳನ್ನು ಇಪ್ಪತ್ತೆರಡು ವರ್ಷಗಳ ಹಿಂದೆ ವಿವಾಹವಾದನೆಂದು ಮತ್ತು ಅವನು ಅಂಬಾಯಿಯನ್ನು ಮೊದಲನೇ ಪತ್ನಿಯಾಗಿ ಹಾಗೂ ವೈಜಯಂತಳನ್ನು(ಅಪೀಲುದಾರಳು) ಎರಡನೇ ಪತ್ನಿಯನ್ನಾಗಿ ಸ್ವೀಕರಿಸಿದ್ದನೆಂದೂ ಈ ಪ್ರಕರಣದಲ್ಲಿ ಹಾಜರುಪಡಿಸಿದ ಸಾಕ್ಷ್ಯಗಳು ಹಾಗೂ ಕೇರು ನೀಡಿದ ಹೇಳಿಕೆಗಳ ಆಧಾರದ ಮೇಲೆ ನ್ಯಾಯಧೀಶರು ಮೇಲಿನ ತೀರ್ಮಾನಕ್ಕೆ ಬಂದಿದ್ದಾರೆ.

ಈ ಪ್ರಕರಣದಲ್ಲಿ ಕೇರು ತಾನು ವೈಜಯಂತಳನ್ನು ವಿವಾಹವಾಗಿರುವುದಾಗಿ ಒಪ್ಪಿಕೊಂಡಿದ್ದಾನೆ. ಅಲ್ಲದೆ ಕೇರು ಅವಳಿಗೆ ಪತ್ನಿಯ ಸ್ಥಾನಮಾನ ನೀಡಿ ಹದಿನೈದು ವರ್ಷಗಳು ಅವಳೊಡನೆ ವಾಸಮಾಡಿರುವುದೇ ಅಲ್ಲದೆ ಅವರು ಇಬ್ಬರು ಹೆಣ್ಣುಮಕ್ಕಳಿಗೆ ಜನ್ಮ ನೀಡಿದ್ದಾರೆ. ವಿಚಾರಣಾ ನ್ಯಾಯಾಲಯದ ತೀರ್ಪಿನ ವಿರುದ್ಧ ಅಪೀಲುದಾರರ ಪರವಾಗಿ ವಾದಿಸಿದ ವಕೀಲರು, ಅಪೀಲುದಾರಳಾದ ವೈಜಯಂತ, ಹಿಂದೂ ವಿವಾಹ ಅಧಿನಿಯಮದ ಉಪಬಂಧಗಳ ಪ್ರಕಾರ ಕೇರುವಿನ ಕಾನೂನು ಸಮ್ಮತ ಪತ್ನಿ ಅಲ್ಲದಿದ್ದರೂ

ಸಹ, ಜೀವನಾಂಶವನ್ನು ಕ್ಲೇಮುಮಾಡಬಹುದು ಎಂದು ವಾದ ಮಂಡಿಸಿದ್ದಾರೆ. ಇದಕ್ಕಾಗಿ ಅವರು ಎರಡು ಪೂರ್ವನಿದರ್ಶನಗಳನ್ನು ಉದ್ಧರಿಸುತ್ತಾರೆ.

ಒಂದು - ರಾಜೇಶಬಾಯ್ -ವಿ- ಶಾಂತಾಬಾಯಿ ೧೯೮೧ ಮಹಾರಾಷ್ಟ್ರ ಎಲ್ ಜೆ ೬೨೦ರಲ್ಲಿ ಇದೇ ನ್ಯಾಯಾಲಯ ನೀಡಿದ ತೀರ್ಪು; ಎರಡು- ಟಿಪಿಕೆ ನಟೇಶನ್ ಕ-ವಿ-ಅಚಿಯಾಯಿ -ಎಐಆರ್ , ೧೯೭೫ ಮದರಾಸ್ ೨೦೨ರಲ್ಲಿ ಮದರಾಸು ಉಚ್ಚನ್ಯಾಯಾಲಯ ನೀಡಿದ ತೀರ್ಪು. ಈ ಎರಡೂ ತೀರ್ಪುಗಳನ್ನಾಧರಿಸಿ, ಮೊದಲನೇ ಪತ್ನಿ ಜೀವಂತವಿರುವಾಗಲೇ ಎರಡನೇ ವಿವಾಹವಾದ ಕಾರಣಕ್ಕಾಗಿ ಎರಡನೆಯ ವಿವಾಹ, ಹಿಂದೂ ವಿವಾಹ ಅಧಿನಿಯಮದ ಉಪಬಂಧಗಳ ಮೇರೆಗೆ ಕಾನೂನು ಸಮ್ಮತ ವಿವಾಹವಲ್ಲದಿದ್ದರೂ, ಎರಡನೆಯ ಪತ್ನಿ ತನ್ನನ್ನು ತಾನು ನೋಡಿಕೊಳ್ಳುವ ಪರಿಸ್ಥಿತಿಯಲ್ಲಿ ಇಲ್ಲದಿದ್ದರೆ ಮತ್ತು ಶೀಲವಂತಳಾಗಿ ಹಾಗೂ ಮರುವಿವಾಹವಾಗದೆ ಉಳಿದರೆ, ತಾನು ಜೊತೆಯಲ್ಲಿ ಜೀವನ ನಡೆಸಿದ ಮೃತ ಪತಿಯ ಸ್ಥಿರಾಸ್ತಿಯಿಂದ ಜೀವನಾಂಶವನ್ನು ಪಡೆಯಲು ಹಕ್ಕುಹೊಂದಿರುತ್ತಾಳೆ ಎಂದು ಅಪೀಲುದಾರಳ ಪರ ವಕೀಲರು ವಾದ ಮಂಡಿಸಿದ್ದಾರೆ.

ನಟೇಶನ್ ಪ್ರಕರಣದಲ್ಲಿ, ಜೀವನಾಂಶಕ್ಕೆ ಕ್ಲೇಮು ಮಾಡಿದುದು ಪತಿಯ ಮೊದಲನೇ ಹೆಂಡತಿ. ಈ ಪ್ರಕರಣದಲ್ಲಿಯೂ ಎರಡನೆಯ ವಿವಾಹವನ್ನು ಪತಿ ಒಪ್ಪಿಕೊಂಡಿದ್ದ. ಈ ಕಾರಣದ ಮೇಲೆ ಎರಡನೆಯ ವಿವಾಹ ಕಾನೂನು ರೀತ್ಯಾ ಮಾನ್ಯವಲ್ಲವೆಂಬ ಕಾರಣವನ್ನು ನೀಡಿ ಮೊದಲನೆಯ ಪತ್ನಿಯ ಜೀವನಾಂಶದ ಕ್ಲೇಮನ್ನು ನ್ಯಾಯಾಲಯ ಮಾನ್ಯ ಮಾಡಿತ್ತು.

ರಾಜೇಶ್ ಬಾಯ್ ಪ್ರಕರಣದಲ್ಲಿ ತೀರ್ಪು ನೀಡುತ್ತಾ ಇದೇ ನ್ಯಾಯಾಲಯ ಹೀಗೆ ಅಭಿಪ್ರಾಯ ಪಟ್ಟಿತ್ತು. ''ಪತ್ನಿ'' ಎಂಬ ಪದ ಕಾನೂನುಮಾನ್ಯ ವಿವಾಹದಿಂದ ಉಂಟಾದ ಕಾನೂನುಮಾನ್ಯ ಹಾಗೂ ನ್ಯಾಯಯುತವಾದ ಸಂಬಂಧವನ್ನು ಸೂಚಿಸುತ್ತಾದೆ. ಜೀವನ ನಿರ್ವಹಣೆಗಾಗಿ ವ್ಯವಸ್ಥೆ ಮಾಡುವ ಯಾವುದೇ ಕ್ರಮಗಳು, ಇವುಗಳಿಂದ ಸ್ವತಂತ್ರವಾಗಿ, ಲೌಕಿಕ ಹಾಗೂ ಸಾಮಾಜಿಕ ಸ್ವರೂಪದವು. ಈ ಕ್ರಮಗಳು ಅನೈತಿಕತೆ ಹಾಗೂ ನಿರ್ಗತಿಕತೆಗಳನ್ನು ಹೋಗಲಾಡಿಸುವ ಉದ್ದೇಶವನ್ನು ಹೊಂದಿರುತ್ತವೆ. ವಸತಿ, ಊಟ, ಬಟ್ಟೆ ಹಾಗೂ ಆರೋಗ್ಯಗಳಿಗೆ ಬೇಕಾದ ಆರ್ಥಿಕ ಹಾಗೂ ಸಾಂಸ್ಕೃತಿಕ ಅಗತ್ಯಗಳನ್ನು ಒದಗಿಸಲು ಅವಶ್ಯ ಏರ್ಪಾಡುಗಳನ್ನು ಮಾಡುವಂಥ ವ್ಯವಹಾರಿಕ ಪ್ರಯೋಜನವುಳ್ಳ ಉದ್ದೇಶವನ್ನು ನ್ಯಾಯಿಕ ಉದ್ದೇಶಕ್ಕಾಗಿ ಜೀವನಾಂಶ ಹೊಂದಿರುತ್ತದೆ. ಆದ್ದರಿಂದ ಜೀವನಾಂಶದ ಪರಿಹಾರವನ್ನು ನೀಡುವ ಅಗತ್ಯ ಸಾಮಾಜಿಕ ನೈತಿಕತೆ ಹಾಗೂ ವೈಯಕ್ತಿಕ ಆರ್ಥಿಕತೆಗಳಿಂದ ಉಂಟಾಗುವಂಥವು. ಜೀವನಾಂಶ ನೀಡಿಕೆ ನೈತಿಕ ಹಾಗೂ ಸಾಂಸಾರಿಕ ಅಗತ್ಯವಾಗುತ್ತದೆ. ಹಾಗಾಗಿ ಜೀವನಾಂಶ ನೀಡಿಕೆ

ವೈಯಕ್ತಿಕ ಹೊಣೆಗಾರಿಕೆಯಾಗಿದ್ದು, ಸ್ಥಿರಾಸ್ತಿ ಇದ್ದಲ್ಲಿ, ಸ್ಥಿರಾಸ್ತಿಯ ಮೇಲೆ ಅಂಥ ಜೀವನಾಂಶ ನೀಡಿಕೆಯ ಹೊರೆ ಹೊರಿಸಬಹುದಾಗಿರುತ್ತದೆ.

ಹಿಂದೂ ವೈಯಕ್ತಿಕ ಕಾನೂನು ನಿರ್ಗತಿಕತೆಯ ವಿರುದ್ಧ ನ್ಯಾಯಯುತ ಏರ್ಪಾಟು ಮಾಡಬೇಕೆಂಬ ಕಾಳಜಿ ಹಾಗೂ ಕಳಕಳಿಯಿಂದಾಗಿ ವಿಕಸಿತಗೊಂಡು ಅಭಿವೃದ್ಧಿಗೊಂಡಿರುವ ಒಂದು ವ್ಯವಸ್ಥೆ. ಇತರ ಗುಂಪುಗಳಿಗಿಂತ ಸಣ್ಣ ಸಾಮಾಜಿಕ ಗುಂಪುಗಳ ಸದಸ್ಯರಿಗೆ ಜೀವನ ನಿರ್ವಹಣೆಗೆ ಅಗತ್ಯವಿರುವ ಕನಿಷ್ಠ ಸೌಲಭ್ಯಗಳನ್ನು ದೊರಕಿಸಿಕೊಡುವ ವ್ಯವಹಾರಿಕ(ಲೌಕಿಕ) ಅಪೇಕ್ಷೆಯಿಂದ ಈ ಜೀವನಾಂಶದ ಪರಿಕಲ್ಪನೆ ಮೂಡಿದೆ ಎನ್ನಬಹುದು. ಹಿಂದೂಗಳಲ್ಲಿ ಆಸ್ತಿಯ ಪರಿಕಲ್ಪನೆಯೂ, ಹಕ್ಕುಗಳು ಮತ್ತು ಕರ್ತವ್ಯಗಳು, ಋಣ ಮತ್ತು ಬಾಧ್ಯತೆಗಳ ಮಿಶ್ರಣ. ಇದರ ಉದ್ದೇಶ ಹಕ್ಕು ಸಾಧಿಸುವ ಅಥವಾ ಅದನ್ನು ಪಡೆಯುವ ಅರ್ಹತೆಯನ್ನು ಸೃಜಿಸುವುದು. ಹಿಂದೂ ಕಾನೂನಿನ ಕ್ರೋಡೀಕರಣದ ನಂತರ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಜಾರಿಯಿಂದಾಗಿ ಪ್ರತಿವಾದಿಗಳಿಗೆ ಸಾಮಾಜಿಕ ಭದ್ರತೆಯನ್ನೊದಗಿಸಬೇಕೆಂಬ ಮೂಲ ಪರಿಕಲ್ಪನೆಯೇ ಬದಲಾಗಿಬಿಡುತ್ತದೆಂದ ಇದೇ ನ್ಯಾಯಾಲಯ ಇನ್ನೊಂದು ಪ್ರಕರಣದಲ್ಲಿ, "ಜೀವನಾಂಶದ ಬದ್ಧತೆ ಸಂಬಂಧದ ಅಸ್ತಿತ್ವದಿಂದ ಮತ್ತು ಆಸ್ತಿಯನ್ನು ಹೊಂದಿರುವುದರಿಂದ ಉದ್ಭವವಾಗುತ್ತದೆ''[೩]ಎಂದು ಅಭಿಪ್ರಾಯಪಟ್ಟಿದೆ.

ಇದೇ ನ್ಯಾಯಾಲಯ ಮತ್ತೊಂದು ಪ್ರಕರಣದಲ್ಲಿ ಹಿಂದೂ ವಿವಾಹ ಅಧಿನಿಯಮ, ೧೯೫೫ರ ೨೫(೧)ನೇ ಪ್ರಕರಣದ ಅಡಿಯಲ್ಲಿ ಕಾಯಂ ಜೀವನಾಂಶ ನೀಡಿಕೆಗೆ ಸಂಬಂಧಿಸಿದಂತೆ ನ್ಯಾಯಾಲಯ ತನ್ನ ವಿವೇಚನೆಯ ಅನುಸಾರ ತೀರ್ಪುನೀಡಿತು. ಇದರಲ್ಲಿ ವಿವಾಹ ಶೂನ್ಯವೆಂದು ಡಿಕ್ರಿಯನ್ನು ಹೊರಡಿಸುವುದರ ಜೊತೆಗೇ ಜೀವನಾಂಶವನ್ನು ಮಂಜೂರು ಮಾಡಿ ಹಿಂದೂ ವಿವಾಹ ಅಧಿನಿಯಮದ ೨೫(೧)ನೇ ಪ್ರಕರಣ ಹಾಗೂ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ಉಪಬಂಧಗಳ ನಡುವೆ ಅಸಂಗತತೆ ಇಲ್ಲವೆಂದೂ ಅಭಿಪ್ರಾಯಪಟ್ಟಿತು.[೪]

ಈ ಎರಡು ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳನ್ನಾಧರಿಸಿ ರಾಜೇಶ್ ಬಾಯ್ ಪ್ರಕರಣದಲ್ಲಿ ನ್ಯಾಯಾಲಯ ವಿವಾಹ ಶೂನ್ಯವೆಂದು ಡಿಕ್ರಿ ನೀಡಿಯೂ, ಆ ಶೂನ್ಯ ವಿವಾಹದಿಂದ ಪತ್ನಿಯಾದವಳಿಗೆ ಹಿಂದೂ ವಿವಾಹ ಅಧಿನಿಯಮದ ೨೫ನೇ ಪ್ರಕರಣದ ಮೇರೆಗೆ ಕಾಯಂ ಜೀವನಾಂಶಕ್ಕೆ ಹಕ್ಕುಳ್ಳವಳಾಗುತ್ತಾಳೆಂದು ಪರಿಗಣಿಸಿತು. ಇಂಥ ತೀರ್ಪು ನೀಡುವ ಮೂಲಕ, ಜೀವನಾಂಶದಂಥ ಪ್ರಕರಣಗಳಲ್ಲಿ ನ್ಯಾಯ ದೊರಕಿಸಿಕೊಡಲು ಅಗತ್ಯವಾದ ಇಂಥ ಆದೇಶಗಳನ್ನು ಮಾಡುವ ಅಂತರ್ಗತ ಅಧಿಕಾರವನ್ನು ಹೊಂದಿದೆ ಎಂಬುದನ್ನು ತೋರಿಸಿಕೊಟ್ಟಿದೆ. ಇದರೊಡನೆ ನ್ಯಾಯಾಲಯದ ಮುಂದಿರುವ ಪಕ್ಷಕಾರರಿಗೆ ನ್ಯಾಯಾಯುತವಾದ ಹಾಗೂ ಸೂಕ್ತವಾದ ನ್ಯಾಯ ಒದಗಿಸುವುದಕ್ಕಾಗಿ ಅಂಥ ಅಧಿಕಾರವನ್ನು

ನ್ಯಾಯಾಲಯಗಳು ನಿಸ್ಸಂಶಯವಾಗಿ ತಪ್ಪದೇ ಚಲಾಯಿಸಬೇಕು. ಪ್ರಸ್ತುತ ಪ್ರಕರಣ ರಾಜೇಶ್ ಬಾಯ್ ಪ್ರಕರಣಕ್ಕೆ ಸದೃಶವಾಗಿದೆ. ಎರಡೂ ಪ್ರಕರಣಗಳಲ್ಲಿಯೂ ಮೊದಲನೇ ಪತ್ನಿ ಜೀವಂತ ಇದ್ದಾಳೆ ಎನ್ನುವ ಕಾರಣಕ್ಕೆ ಎರಡನೆಯ ವಿವಾಹ ಶೂನ್ಯವಾಗಿದೆ.

ಅಪೀಲುದಾರಳಾದ ವೈಜಯಂತ ಬಾಯಿಯ ಪರವಾಗಿ ವಾದಿಸುತ್ತ ತಮ್ಮ ವಾದದ ಸಮರ್ಥನೆಗಾಗಿ ವಕೀಲರು ಮತ್ತೊಂದು ಪ್ರಕರಣವನ್ನು ಆಧರಿಸುತ್ತಾರೆ. ಓಬುಲ ಕೊಂಡರೆಡ್ಡಿ -ವಿ- ಸಿಪಿವಿ ಲಕ್ಷಮ್ಮ(ಎಐಆರ್ ೧೯೭೬ ಎಪಿ ೪೩) ಪ್ರಕರಣದಲ್ಲಿ ಪತ್ನಿಯ ಜೀವನಾಂಶದ ಕ್ಲೇಮನ್ನು ವಿವಾಹ ಶೂನ್ಯವಾದುದೆಂಬ ಕಾರಣಕ್ಕಾಗಿ ತಿರಸ್ಕರಿಸಲಾಗಿತ್ತು. ಆದರೆ ಇದರ ವಿರುದ್ಧ ಹೂಡಿದ ಅಪೀಲಿನಲ್ಲಿ ಆಂಧ್ರಪ್ರದೇಶ ಉಚ್ಚನ್ಯಾಯಾಲಯ ಅಧಿನಿಯಮದಲ್ಲಿ ಎಲ್ಲಿಯೂ 'ಪತ್ನಿ' ಎಂಬುದನ್ನು ಪರಿಭಾಷಿಸಿಲ್ಲ. ಈ ಸಂದರ್ಭ ದಲ್ಲಿ ಹಿಂದೂ ವಿವಾಹ ಅಧಿನಿಯಮದ ಉಪಬಂಧಗಳ ಪ್ರಕಾರ ವಿವಾಹ ಊರ್ಜಿತವಿರಬೇಕು ಎಂದು ವ್ಯಾಖ್ಯಾನಿಸಿದ್ದಾರೆ. ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ೧೮ನೇ ಪ್ರಕರಣದ ಉದ್ದೇಶವೇ ವಿಫಲವಾಗುತ್ತದೆ. ಹಾಗೊಂದು ವೇಳೆ ವಿವಾಹ ಶೂನ್ಯವಾಗುತ್ತದೆಂಬ ಕಾರಣಕ್ಕೆ ಅಂಥ ಶೂನ್ಯ ವಿವಾಹ ದಿಂದಾಗಿ ಪತ್ನಿಯ ಸ್ಥಾನ ಪಡೆದ ಮಹಿಳೆಗೆ ಜೀವನಾಂಶ ನಿರಾಕರಿಸಿದಲ್ಲಿ ಒಂದು ವಿವಾಹವಾಗಿದ್ದು ಅರಿಯದ ಹೆಣ್ಣು ಮಕ್ಕಳಿಗೆ ಮೋಸಮಾಡಿ ಮತ್ತೊಂದು ವಿವಾಹವಾಗುವ ಪುರುಷರಿಗೆ 'ನಮ್ಮ ವಿವಾಹ ಶೂನ್ಯವಾಗಿದೆ. ಆದ್ದರಿಂದ ನಾನು ನಿನ್ನನ್ನು ನೋಡಿಕೊಳ್ಳಬೇಕಿಲ್ಲ' ಎಂದು ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವುದು ಸುಲಭವಾಗಿ ಬಿಡುತ್ತದೆ. ಆದರೆ ಕಾನೂನಿನ ಆಶಯ ಖಂಡಿತವಾಗಿಯೂ ಇದಲ್ಲ. ಆದ್ದರಿಂದ ವಿವಾಹ ಶೂನ್ಯವೆಂದಾದರೂ ಶೂನ್ಯವಿವಾಹದಿಂದಾಗಿ ಪತ್ನಿಯನಿಸಿದ ಮಹಿಳೆಯನ್ನು ಜೀವನಾಂಶದ ಹಕ್ಕಿನಿಂದ ವಂಚಿತಳನ್ನಾಗಿಸಬಾರದು ಎಂದು ಅಭಿಪ್ರಾಯಪಟ್ಟಿತು.

ಈ ಪ್ರಕರಣಗಳಲ್ಲಿ ನೀಡಲಾಗಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಮತ್ತು ಕಾನೂನಿನ ಹಿಂದಿರುವ ಆಶಯದ ಈಡೇರಿಕೆಯ ದೃಷ್ಟಿಯಿಂದ ನ್ಯಾಯಾಲಯ ಕೇರುವಿನ ಎರಡನೆಯ ಪತ್ನಿ ವೈಜಯಂತಬಾಯಿ ತನ್ನ ಮೃತ ಪತಿಯ ಸ್ಥಿರಾಸ್ತಿಯ ಮೇಲೆ ಜೀವನಾಂಶದ ಹೊರೆ ಹೊರಿಸಲು ಮತ್ತು ಅದರಿಂದ ಜೀವನಾಂಶ ಪಡೆಯಲು ಹಕ್ಕುಳ್ಳವಳಾಗಿದ್ದಾಳೆ ಎಂಬ ತೀರ್ಪು ನೀಡಿತು ಮತ್ತು ವಿಚಾರಣಾ ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಿತು.

ಕೋಕಿಲಾಬೆನ್ ಮತ್ತು ಇತರರು -ವಿ- ಹರ್ಷದ್ ಬಾಯಿ ನಾರಾನ್ ದಾಸ್ ಪಟೇಲ್ [(೧೯೮೬) ೨ ಡಿಎಂಸಿ ೨೧೦] ಈ ಪ್ರಕರಣದಲ್ಲಿ ಹಿಂದೂ ದತ್ತಕ ಮತ್ತು ಜೀವನಾಂಶ ಅಧಿನಿಯಮದ ೨೦ನೇ ಪ್ರಕರಣದ ಮೇರೆಗೆ, ಪ್ರತಿಯೊಬ್ಬ ಹಿಂದೂ ಪುರುಷ ಅಥವಾ ಸ್ತ್ರೀ ತನ್ನ ಜೀವಿತಾವಧಿಯಲ್ಲಿ ತನ್ನ ಔರಸ ಅಥವಾ ಜಾರಜ ಮಕ್ಕಳನ್ನು ಮತ್ತು ಅವನ/ಅವಳ ವೃದ್ಧ ಹಾಗೂ ದುರ್ಬಲ ತಂದೆ

ತಾಯಿಯರನ್ನು ನೋಡಿಕೊಳ್ಳಲು ಬದ್ಧನಾಗಿರುತ್ತಾನೆ. ಅವಳ/ಅವಳ ಔರಸ ಅಥವಾ ಜಾರಜ ಮಕ್ಕಳು, ಅವರು ಅಪ್ರಾಪ್ತ ವಯಸ್ಕರಾಗಿರುವವರೆಗೆ ತಮ್ಮ ತಂದೆ ಅಥವಾ ತಾಯಿಯಿಂದ ಜೀವನಾಂಶವನ್ನು ಕ್ಲೇಮು ಮಾಡಬಹುದು. ಅವನ/ಅವನ ವೃದ್ಧ ಅಥವಾ ದುರ್ಬಲ ತಂದೆ ತಾಯಿಯರು ಅಥವಾ ಅವಿವಾಹಿತ ಮಗಳು ತಮ್ಮನ್ನು/ತನ್ನನ್ನು ತಾವು/ತಾನು ತಮ್ಮ ಸಂಪಾದನೆಯಿಂದ ಅಥವಾ ಇತರ ಆಸ್ತಿಯಿಂದ ನೋಡಿಕೊಳ್ಳಲು ಅಸಮರ್ಥರಾದಲ್ಲಿ ಅವರನ್ನು ನೋಡಿಕೊಳ್ಳಲು ಹಿಂದೂ ಪುರುಷ ಅಥವಾ ಸ್ತ್ರೀ ಬದ್ಧನಾಗಿರುತ್ತಾನೆ/ಳೆ.

ಅಧಿನಿಯಮದ ೩(ಬಿ) ಪ್ರಕರಣದ ಮೇರೆಗೆ ಅವಿವಾಹಿತ ಹೆಣ್ಣು ಮಕ್ಕಳ ವಿವಾಹ ವೆಚ್ಚಗಳು ಜೀವನಾಂಶದ ಒಂದು ಭಾಗ ಪ್ರಸ್ತುತ ಪ್ರಕರಣದಲ್ಲಿ ಪ್ರತಿವಾದಿಯ ಹೆಣ್ಣು ಮಕ್ಕಳು ಇನ್ನೂ ಸಣ್ಣವಯಸ್ಸಿನವರಾದ್ದರಿಂದ, ಎಷ್ಟು ಹಣವನ್ನು ವಿವಾಹದ ವೆಚ್ಚಗಳಿಗಾಗಿ ಒದಗಿಸಬಹುದು ಎಂಬ ಬಗ್ಗೆ ಸೂಕ್ತ ಸಮಯದಲ್ಲಿ ನಿರ್ದೇಶನಗಳನ್ನು ನೀಡುವ ಮೂಲಕ ನಿಗದಿಪಡಿಸಬಹುದು. ಆದರೆ ಇಲ್ಲಿಯ ಪ್ರಶ್ನೆ, ಜೀವನಾಂಶಕ್ಕಾಗಿ(ಅದರಲ್ಲಿ ಅವಿವಾಹಿತ ಹೆಣ್ಣುಮಕ್ಕಳ ವಿವಾಹದ ವೆಚ್ಚವೂ ಸೇರಿದೆ) ಆಸ್ತಿಯ ಮೇಲೆ ಹೊರೆಯನ್ನು(charge) ಸೃಜಿಸಬಹುದೇ ಎಂಬುದು. ವಿಚಾರಣಾ ನ್ಯಾಯಾಧೀಶರು ಆಸ್ತಿಯ ಮೇಲೆ ಅಂಥ ಹೊರೆಯನ್ನು ಸೃಜಿಸಲು ನಿರಾಕರಿಸಿದ್ದಾರೆ. ಆದರೆ ಅಪೀಲುದಾರರು ಮಾಡಿರುವ ಈ ಕೋರಿಕೆಯನ್ನು ನಿರಾಕರಿಸಲು ಯಾವುದೇ ಕಾರಣವಿಲ್ಲ ಎಂದು ಈ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅಧಿನಿಯಮ ೨೭ನೇ ಪ್ರಕರಣ ನ್ಯಾಯಾಲಯ ಡಿಕ್ರಿ ಅಥವಾ ಪೋಷಿತರು ಮತ್ತು ಸ್ಥಿರಾಸ್ತಿಯ ಮಾಲೀಕರ ನಡುವೆ ಒಪ್ಪಂದದ ಮೂಲಕ ಆಸ್ತಿಯ ಮೇಲೆ ಹೊರೆಯನ್ನು ಸೃಜಿಸಿದ್ದ ಹೊರತು ಜೀವನಾಂಶಕ್ಕಾಗಿ ತನ್ನಿಂದ ತಾನೇ ಆಸ್ತಿಯ ಮೇಲೆ ಹೊರೆ ಇರುವುದಿಲ್ಲ ಎಂಬುದು ಸ್ಪಷ್ಟವಾಗಿದೆ. ಪ್ರಕರಣದಲ್ಲಿ ಪತ್ನಿ ಅಥವಾ ಮಕ್ಕಳ ಜೀವನಾಂಶಕ್ಕಾಗಿ ಆಸ್ತಿಯ ಮೇಲೆ ಹೊರೆಯನ್ನು ಸೃಜಿಸಬಹುದು ಎಂದು ಹೇಳಿರದಿದ್ದರೂ, ಪೋಷಿತರು ಎಂದು ಹೇಳಿರುವುದರಿಂದ ಪತ್ನಿ ಮತ್ತು ಮಕ್ಕಳ ಪರವಾಗಿ ಆಸ್ತಿಯ ಮೇಲೆ ಹೊರೆಯನ್ನು ಸೃಜಿಸಲಾಗದು ಎಂಬುದಕ್ಕೆ ಯಾವುದೇ ಕಾರಣವಿಲ್ಲ ಎಂದು ಅಭಿಪ್ರಾಯಪಟ್ಟು, ಜೀವನಾಂಶ ಪಡೆಯುವ ಅಪೀಲುದಾರರ ಹಕ್ಕುಗಳನ್ನು ರಕ್ಷಿಸಲು ಮತ್ತು ಮಕ್ಕಳ ವಿವಾಹ ವೆಚ್ಚಗಳಿಗೆ ಏರ್ಪಾಟು ಮಾಡಲು ಪ್ರತಿವಾದಿಯ ಆಸ್ತಿಗಳ ಮೇಲೆ ಹೊರೆ ಇರತಕ್ಕದೆಂದು ಆದೇಶ ನೀಡಿತು.

ಪತ್ನಿಗೆ ಮತ್ತು ವಿವಾಹಿತ ಹೆಣ್ಣುಮಕ್ಕಳ ಜೀವನಾಂಶಕ್ಕೆ, ಅವರ ಮದುವೆಯ ವೆಚ್ಚವನ್ನು ಸೇರಿಸಿ ಅವಕಾಶ ಕಲ್ಪಿಸಿರುವುದು ಅವರೆ ಇತರರ ಅನುಕಂಪದಲ್ಲಿ ಬೀಳಬಾರದು ಮತ್ತು ಅವಿವಾಹಿತ ಹೆಣ್ಣು ಮಕ್ಕಳ ವಿವಾಹ ವೆಚ್ಚಗಳಿಗೆ ಏರ್ಪಾಡು ಮಾಡುವುದು ತಂದೆ ತಾಯಿಯರ ಕರ್ತವ್ಯವಾಗಿರತಕ್ಕದ್ದು.

ಎಂಬ ಉದ್ದೇಶದಿಂದ. ಆದ್ದರಿಂದ ಕಾನೂನಿನ ಅನ್ವಯವಾಗಲೀ, ವ್ಯಾಖ್ಯಾನವಾಗಲೀ, ಕಾನೂನಿನ ಆಶಯಕ್ಕೆ ಪೂರಕವಾಗಿರಬೇಕೇ ವಿನಃ ವ್ಯತಿರಿಕ್ತ ಪರಿಣಾಮ ಉಂಟು ಮಾಡಬಾರದು. ಆಸ್ತಿಯ ಮೇಲೆ ಅಂಥ ಹೊರೆಯನ್ನು ಸೃಜಿಸಲು ನಿರಾಕರಿಸಿದ ಸಂದರ್ಭಗಳಲ್ಲಿ ಅಂಥ ಆಸ್ತಿಯನ್ನು ಮಾರಾಟದ ಮೂಲಕ ಅಥವಾ ಅನ್ಯಥಾ ಪರಭಾರೆ ಮಾಡುವ ಮೂಲಕ ಜವಾಬ್ದಾರಿಯಿಂದ ಕಳಚಿಕೊಳ್ಳುವ ಮತ್ತು ಜೀವನಾಂಶದ ಡಿಕ್ರಿಯನ್ನು ವಿಫಲಗೊಳಿಸುವ ಸಾಧ್ಯತೆ ಇರುತ್ತದೆ. ನ್ಯಾಯಾಲಯದ ತೀರ್ಪುಗಳು ಇಂಥವನ್ನು ಪ್ರೋತ್ಸಾಹಿಸುವಂತಿರಬಾರದು.

## ಕ್ರಿಮಿನಲ್ ಪ್ರಕರಣಗಳು

ಕೌಟುಂಬಿಕ ಸ್ವರೂಪದ(ಸಿವಿಲ್ ) ವ್ಯಾಜ್ಯಗಳಲ್ಲಿ ಮಹಿಳೆಯರಿಗೆ ಮೂರು ಹಂತಗಳಲ್ಲಿ ಅನ್ಯಾಯವಾಗುವ ಸಾಧ್ಯತೆಗಳಿವೆ.

೧. ಕಾನೂನಿನಲ್ಲಿಯೇ ಅಂತರ್ಗತವಾಗಿರುವ ರಚನೆಯ ಹಂತದಲ್ಲಿನ ಸ್ತ್ರೀಪುರುಷ ತಾರತಮ್ಯದಿಂದಾಗುವ ಅನ್ಯಾಯ.

೨. ಕಾನೂನನ್ನು ಅನ್ವಯಿಸುವಲ್ಲಿನ ದೋಷದಿಂದುಂಟಾಗುವ ಅನ್ಯಾಯ

೩. ಕಾನೂನನ್ನು ತಪ್ಪಾಗಿ ವ್ಯಾಖ್ಯಾನಿಸುವ ಮೂಲಕ ಉಂಟಾಗುವ ಅನ್ಯಾಯ.

ವರದಕ್ಷಿಣೆ ಮತ್ತು ಕೌಟುಂಬಿಕ ಕ್ರೌರ್ಯಕ್ಕೆ ಸಂಬಂಧಿಸಿದವು ಕ್ರಿಮಿನಲ್ ಸ್ವರೂಪದ ವ್ಯಾಜ್ಯಗಳು. ಇದರಲ್ಲಿ ಮಹಿಳೆಯರು ನಾನಾ ಹಂತಗಳಲ್ಲಿ ನಾನಾರೂಪಗಳಲ್ಲಿ ಅನ್ಯಾಯಕ್ಕೆ ಗುರಿಯಾಗುತ್ತಲೇ ಇರುತ್ತಾರೆ. ಮೇಲಿನ ಕೌಟುಂಬಿಕ ಸ್ವರೂಪದ ವ್ಯಾಜ್ಯಗಳಲ್ಲಿ ಉಂಟಾಗುವಂಥ ಅನ್ಯಾಯಗಳ ಜೊತೆಯಲ್ಲಿ ಅನ್ಯಾಯಕ್ಕೆ ಅಥವಾ ಕಿರುಕುಳಕ್ಕೆ ತುತ್ತಾದ ಒಬ್ಬ ಮಹಿಳೆ ಪೋಲೀಸು ಠಾಣೆಯಲ್ಲಿ ದೂರನ್ನು ದಾಖಲು ಮಾಡುವಾಗಿನಿಂದ ಹಿಡಿದು, ಪೋಲೀಸರಿಂದ ಅದರ ವಿಚಾರಣೆ ದೋಷಾರೋಪಣಾ ಪಟ್ಟಿಯ ಸಲ್ಲಿಕೆ, ಕೊನೆಯಲ್ಲಿ ನ್ಯಾಯಾಲಯದ ವಿಚಾರಣೆಯ, ಹಂತದವರೆಗೆ ಎದುರಿಸಬೇಕಾದ ಅನ್ಯಾಯಗಳಿಗೆ ಹಾಗೂ ತೊಂದರೆಗಳಿಗೆ ಲೆಕ್ಕವಿಲ್ಲ.

ವರದಕ್ಷಿಣೆ ಹಾಗೂ ಕೌಟುಂಬಿಕ ಕಿರುಕುಳದ ಪ್ರಕರಣಗಳಲ್ಲಿ ಖಾಸಗಿ ವ್ಯಕ್ತಿಗಳು ಪರ-ವಿರೋಧ ಪಕ್ಷಕಾರರಾದರೆ, ವರದಕ್ಷಿಣೆ ಸಾವು ಮತ್ತು ಅತ್ಯಾಚಾರ ಪ್ರಕರಣಗಳನ್ನು ರಾಜ್ಯದ ವಿರುದ್ಧ ಎಸಗಿದ ಅಪರಾಧಗಳೆಂದು ಪರಿಗಣಿಸುವುದರಿಂದ ರಾಜ್ಯ ಒಂದು ಪಕ್ಷವಾದರೆ ಆರೋಪಿ ಮತ್ತೊಂದು ಪಕ್ಷವಾಗುತ್ತಾನೆ.

ಪ್ರತಿನಿತ್ಯ ವರದಕ್ಷಿಣೆ ಕಿರುಕುಳ ವರದಕ್ಷಿಣೆ ಸಾವುಗಳ ಬಗ್ಗೆ ವರದಿಗಳು ಪ್ರಕಟವಾಗುತ್ತಿದ್ದರೂ ಬೆಳಕಿಗೆ ಬರದ ಪ್ರಕರಣಗಳು ಲೆಕ್ಕವಿಲ್ಲದಷ್ಟು. ವರದಿಯಾದವುಗಳಲ್ಲಿ ಅಪರಾಧಿಗಳಿಗೆ ಶಿಕ್ಷೆಯಾಗುವುದು

ಬೆರಳೆಣಿಕೆಯಷ್ಟು ಪ್ರಕರಣಗಳಲ್ಲಿ ಮಾತ್ರ. ಹಿಂದೆಯೇ ಹೇಳಿದಂತೆ ಇದಕ್ಕೆ ಕಾರಣ ವಿಚಾರಣೆಯ ಅನೇಕ ಹಂತಗಳಲ್ಲಿ ವ್ಯಕ್ತವಾಗುವ ಸಂವೇದನಾರಾಹಿತ್ಯತೆ.

ವರದಕ್ಷಿಣೆಯ ಪ್ರಕರಣಗಳು ಆದಷ್ಟು ಬೇಗೆ ತೀರ್ಮಾನವಾಗಿ ತಪ್ಪಿತಸ್ಥರಿಗೆ ಅದಷ್ಟು ಬೇಗ ಶಿಕ್ಷೆಯಾದಾಗ ಮಾತ್ರವೇ ವರದಕ್ಷಿಣೆ ನಿಷೇಧ ಕಾನೂನಿನ ಜಾರಿ ಸಾರ್ಥಕವಾಗುವುದು. Justice delayed is Justice denied ಎಂಬ ಮಾತಿನಂತೆ ಆಗಬಾರದು. ವರದಕ್ಷಿಣೆ ಪ್ರಕರಣಗಳ ವಿಚಾರಣೆಯ ಗತಿ ನೋಡಿದಾಗ ಈಗ ಆಗುತ್ತಿರುವುದು ಹಾಗೆಯೇ ಎಂಬುದು ಯಾರಿಗೂ ಅರಿವಾಗದಿರದು.

ವರದಕ್ಷಿಣೆ ಪ್ರಕರಣಗಳಲ್ಲಿ ಹೊರಬಿದ್ದ ಅನೇಕ ತೀರ್ಪುಗಳಲ್ಲಿ ನ್ಯಾಯಾಧೀಶರು ವಿಚಾರಣೆಯ ರೀತಿಯನ್ನು, ವಿಚಾರಣಾಧಿಕಾರಿಗಳನ್ನು ಟೀಕಿಸಿದ್ದಾರೆ. ಅವರು ಅನುಸರಿಸಿದ ವಿಧಾನದಲ್ಲಿದ್ದ ದೋಷಗಳನ್ನು ತೋರಿಸಿದ್ದಾರೆ. ಇಂಥ ಅನೇಕ ತೀರ್ಪುಗಳು ಮಹಿಳೆಗೆ ಯಾವ ಯಾವ ಹಂತದಲ್ಲಿ ಅನ್ಯಾಯವಾಗುತ್ತಿದೆ ಎಂಬುದಕ್ಕೆ ಹಿಡಿದ ಕನ್ನಡಿ.

## ವಧೂದಹನ

ಶ್ರೀಮತಿ ಲಿಚ್ಚಮದೇವಿ -ವಿ- ರಾಜಾಸ್ಥಾನ ರಾಜ್ಯ (೧೯೮೮) ೪ ಎಸ್ ಸಿಸಿ ೬೩೧ ಇದು ವಧೂದಹನಕ್ಕೆ ಸಂಬಂಧಿಸಿದ ಪ್ರಕರಣ. ಸರ್ವೋಚ್ಚ ನ್ಯಾಯಾಲಯಕ್ಕೆ ರಾಜಾಸ್ಥಾನ ಉಚ್ಚನ್ಯಾಯಾಲಯದ ತೀರ್ಪಿನ ವಿರುದ್ಧ ಅಪೀಲುದಾರಳಾದ ಲಚ್ಚಮದೇವಿ ಅಪೀಲು ಸಲ್ಲಿಸಿದ್ದಾಳೆ. ಅತ್ತೆ ಲಿಚ್ಚಮದೇವಿಯನ್ನು ಭಾರತ ದಂಡಸಂಹಿತೆಯ ೩೦೨ನೇ ಪ್ರಕರಣದ ಮೇರೆಗೆ ಸೊಸೆಯನ್ನು ಕೊಂದುದಕ್ಕಾಗಿ ವಿಚಾರಣೆ ನಡೆಸಿ ಸತ್ರನ್ಯಾಯಾಲಯ ಅವಳನ್ನು ದೋಷಮುಕ್ತಳನ್ನಾಗಿಸಿತು. ಅದರ ವಿರುದ್ಧ ರಾಜ್ಯ ಸರ್ಕಾರ ರಾಜ್ಯದ ಉಚ್ಚನ್ಯಾಯಾಲಯದಲ್ಲಿ ಹೂಡಿದ ಅಪೀಲಿನಲ್ಲಿ ನ್ಯಾಯಾಲಯ ದೋಷಮುಕ್ತರನ್ನಾಗಿಸಿದ ಸತ್ರ ನ್ಯಾಯಾಲಯದ ತೀರ್ಪನ್ನು ವಿಪರ್ಯಯಗೊಳಿಸಿ ಆದೇಶವನ್ನು ಮರನದಂಡನೆಯ ಆದೇಶವನ್ನಾಗಿ ಪರಿವರ್ತಿಸಿತು. ಈ ಅಪೀಲು ಈ ತೀರ್ಪಿನ ವಿರುದ್ಧ.

**ಪ್ರಕರಣದ ವಿವರಗಳು ಹೀಗಿವೆ :** ಪುಷ್ಪ ಎಂಬಾಕೆ ಸೀತಾರಾಂ ಎಂಬುವವರ ಮಗಳು. ಅವಳ ವಿವಾಹವನ್ನು ಜಗದೀಶ್ ಪ್ರಸಾದ್ ಎಂಬುವವನೊಂದಿಗೆ ಮಾಡಲಾಯಿತು. ೧೯೭೭ರ ಜನವರಿ ೨೯ ರಂದು ಅವಳು ಅಡಿಗೆ ಮನೆಯಲ್ಲಿದ್ದಾಗ ಅವಳಿಗೆ ಬೆಂಕಿ ಹತ್ತಿಕೊಂಡಿತು. ಅವಳ ಆಕ್ರಂದನವನ್ನು ಕೇಳಿದ ನೆರೆಹೊರೆಯವರು ಅವಳ ಸಹಾಯಕ್ಕಾಗಿ ಧಾವಿಸಿದರೂ, ಮನೆಯಲ್ಲಿಯೇ ಇದ್ದ ಅವಳ ಬಂಧುಗಳು ಅವಳಿಗೆ ನೆರವು ನೀಡಲಿಲ್ಲ. ಅಕ್ಕಪಕ್ಕದ ಮನೆಯವರು ಅವಳನ್ನು ಆಸ್ಪತ್ರೆಗೊಯ್ದರೂ ಮರುದಿನ ಆಕೆ ಸಾವನ್ನಪ್ಪಿದಳು. ಪುಷ್ಪ ಮತ್ತು ಅವಳ ಅತ್ತೆಯ ನಡುವೆ ಒಳ್ಳೆಯ ಸಂಬಂಧವಿರಲಿಲ್ಲವೆಂದು, ಇದಕ್ಕೆ ವರದಕ್ಷಿಣೆಯ

ಬಗ್ಗೆ ತೀರದ ಅವಳ ದಾಹವೇ ಕಾರಣ ಎಂದು ಹೇಳಲಾಗಿದೆ. ಅತ್ತೆಯ ಕಾಟ ತಾಳಲಾರದೆ ಅವಳು ಅತ್ತೆಯ ಮನೆಯನ್ನು ಬಿಟ್ಟು ತಾಯಿಯ ಮನೆಯಲ್ಲಿದ್ದಳೆಂದೂ, ಈ ಘಟನೆ ನಡೆಯುವುದಕ್ಕೆ ಕೇವಲ ನಾಲ್ಕೈದು ದಿನಗಳ ಹಿಂದಷ್ಟೇ ಅವಳು ಅತ್ತೆಯ ಮನೆಗೆ ಹಿಂತಿರುಗಿದ್ದಳೆಂದೂ ಹೇಳಲಾಗಿದೆ. ೧೯೭೭ರ ಜನವರಿ ೨೯ರಂದು ಸು ೪-೫ ಗಂಟೆ ಸಮಯದಲ್ಲಿ ಮಹಡಿಯ ಮೇಲೆ ಪಾತ್ರೆಗಳನ್ನು ತೊಳೆಯುತ್ತಿದ್ದಾಗ, ಅಪೀಲುದಾರಳು ಬಾಂಡ್ಲಿಯಿಂದ ಪುಷ್ಪಳ ಹಣೆಯ ಮೇಲೆ ಗಾಯವಾಗುವಂತೆ ಹೊಡೆದಳೆಂದೂ ಮತ್ತು ಅವಳನ್ನು ಜೀವಂತ ಸುಟ್ಟುಬಿಡಬೇಕೆನಿಸುತ್ತದೆ ಎಂದು ತಿಳಿಸಿದಳೆಂದೂ ಪ್ರಾಸಿಕ್ಯೂಷನ್ನವರು ಹೇಳಿದ್ದಾರೆ. ಅದೇ ದಿನ ರಾತ್ರಿ ಅಡಿಗೆ ಮನೆಯಿಂದ ಹೊಗೆ ಬರುತ್ತಿದ್ದುದನ್ನು ನೆರೆಹೊರೆಯವರು ನೋಡಿದ್ದಾರೆ. ಹಾಗೂ 'ಕಾಪಾಡಿ ಕಾಪಾಡಿ' ಎಂದು ಕೂಗುತ್ತಿದ್ದುದನ್ನು ಕೇಳಿಸಿಕೊಂಡಿದ್ದಾರೆ. ಭನವಾರ್ ಲಾಲ್ ಎಂಬ ಪಕ್ಕದ ಮನೆಯಾತ ಬೇರೆಯವರನ್ನೂ ನೆರವಿಗಾಗಿ ಕೂಗಿ ಕರೆದು ಅವಳನ್ನು ರಕ್ಷಿಸುವುದಕ್ಕಾಗಿ ಅಡಿಗೆ ಮನೆಗೆ ಧಾವಿಸಿದಾಗ, ಅಡಿಗೆ ಮನೆಯ ಬಾಗಿಲನ್ನು ಹೊರಗಿನಿಂದ ಕಬ್ಬಿಣದ ಸರಪಣಿಯಿಂದ ಭದ್ರವಾಗಿ ಮುಚ್ಚಿದ್ದುದನ್ನು ಕಂಡಿದ್ದಾರೆ. ಅಡಿಗೆ ಮನೆಯಿಂದ ಹೊಗೆ ಹಾಗೂ ಬೆಂಕಿ ಹೊರಗೆ ಬರುತ್ತಿತ್ತು. ದೀನದಯಾಳ್, ಲಲಿತ ಕಿಶೋರ್ ಮತ್ತು ಸುಶೀಲ್ ಕುಮಾರ್ ಎಂಬ ಮೂವರೂ ಅಡಿಗೆ ಮನೆಗೆ ಪ್ರವೇಶಿಸಲು ಪ್ರಯತ್ನಿಸಿ ಅಡಿಗೆ ಮನೆಯ ಬಾಗಿಲನ್ನು ತೆರೆದಾಗ ಮಹಿಳೆಯೊಬ್ಬಳಿಗೆ ಬೆಂಕಿ ಹೊತ್ತಿರುವುದನ್ನು ಗಮನಿಸಿದ್ದಾರೆ. ಕೂಡಲೇ ಅವಳನ್ನು ಹೊರತಂದು ಅವಳನ್ನು ಪುಷ್ಪ ಎಂದು ಗುರುತಿಸಿ ಅವಳಿಗೆ ಕೂಡಲೇ ವೈದಕೀಯ ನೆರವಿನ ಅಗತ್ಯವಿದೆ ಎಂದು ಮನಗಂಡು ಅಪೀಲುದಾರಳನ್ನು ಮತ್ತು ಜಗದೀಶರನ್ನು ಕರೆದರೆಂದೂ ಆದರೆ ಅವರು ಯಾವುದೇ ನೆರವು ನೀಡಲು ನಿರಾಕರಿಸಿದರೆಂದು ಮತ್ತು ಲಲಿತ್ ಕಿಶೋರ್ ಪುಷ್ಪಳನ್ನು ಸ್ವಾಮಿ ಮಾನಸಿಂಗ್ ಆಸ್ಪತ್ರೆಗೆ ಕರೆದೊಯ್ದನೆಂದೂ ಮತ್ತು ಅವಳನ್ನು ತುರ್ತು ಚಿಕಿತ್ಸಾ ಘಟಕಕ್ಕೆ ಸೇರಿಸಿದನೆಂದೂ ಪ್ರಾಸಿಕ್ಯೂಷನ್ ತಿಳಿಸಿದೆ.

ಪುಷ್ಪಳನ್ನು ಆಸ್ಪತ್ರೆಗೆ ಸೇರಿಸಿಕೊಂಡ ಡಾ.ಗೊಯಲ್ ಅವರು ಪುಷ್ಪಳ ಗಂಭೀರ ಪರಿಸ್ಥಿತಿಯನ್ನು ಗಮನಿಸಿ ಆಕೆಗೆ ರಕ್ತ ನೀಡುವುದು ಅಗತ್ಯವಿದೆಯೆಂದು ತಿಳಿಸಿದಾಗ, ಅದಕ್ಕೆ ವ್ಯವಸ್ಥೆ ಮಾಡುವುದಕ್ಕಾಗಿ ಪುಷ್ಪಳ ಮನೆಗೆ ಬಂದು ವಿಷಯ ತಿಳಿಸಿದಾಗ ಅಪೀಲುದಾರಳು ಯಾವುದೇ ಕಾಳಜಿಯನ್ನು ವ್ಯಕ್ತಪಡಿಸದೆ, ಜಗದೀಶ್‌ಗೂ ಯಾವುದೇ ವ್ಯವಸ್ಥೆ ಮಾಡದಂತೆ ಸೂಚಿಸಿದಳೆಂದೂ ತಿಳಿಸಲಾಗಿದೆ. ಮಾರನೆಯ ದಿನ ಹತ್ತು ಗಂಟೆಗೆ ಪುಷ್ಪ ಸಾವನ್ನಪ್ಪಿದಳು.

ಪುಷ್ಪ ತನ್ನ ಸಾವಿಗೆ ಮುನ್ನ ಬೆಳಿಗ್ಗೆ ಸುಮಾರು ೫.೩೦ರ ವೇಳೆಗೆ ತನ್ನ ಅತ್ತೆಯೇ ತನ್ನ ಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿದುದಾಗಿ ತಿಳಿಸಿದ್ದಳೆಂದು ತಿಳಿಸಲಾಗಿದೆ. ಇದೇ ರೀತಿಯ ಹೇಳಿಕೆಯನ್ನು ತನ್ನ ತಂದೆ ಹಾಗೂ ಡಾ.ಗೋಯಲ್ ಅವರ ಮುಂದೆಯೂ ಮಾಡಿರುವುದಾಗಿ ತಿಳಿಸಲಾಗಿದೆ.

ಡಾ.ಗೋಯಲ್ ಅವರು ಮರಣೋತ್ತರ ಶವಪರೀಕ್ಷೆ ನಡೆಸಿ, ಮೃತಳ ದೇಹ ಮೊದಲನೇ, ಎರಡನೇ ಹಾಗೂ ಮೂರನೇ ದರ್ಜೆಯ ಸುಟ್ಟ ಗಾಯಗಳಿಂದ ಕೂಡಿತ್ತು ಮತ್ತು ದೇಹದ ಮೇಲೆ ಕಂಡುಬಂದ ಇತರ ಎಲ್ಲ ಬಗೆಯ ಲಕ್ಷಣಗಳೂ ಅವೆಲ್ಲವೂ ಅವಳ ಸಾವಿಗೆ ಮುಂಚೆ ಉಂಟಾದದ್ದು ಮತ್ತು ಸಾವಿಗೆ ಕಾರಣ ತೀವ್ರ ಸ್ವರೂಪದ ಸುಟ್ಟಗಾಯಗಳು ಎಂದು ತಿಳಿಸಿದ್ದಾರೆ.

ಈ ಎಲ್ಲ ಅಂಶಗಳನ್ನು ಗಮನಿಸಿ, ಪ್ರಕರಣದ ವಿವರಗಳನ್ನು ಪರಿಶೀಲಿಸುವ ಮುನ್ನ ನ್ಯಾಯಾಧೀಶರು "ತನಿಖೆ ನಡೆಯಬೇಕಾದ ರೀತಿಯಲ್ಲಿ ನಡೆದಿಲ್ಲ. ಇಡೀ ಪ್ರಕರಣದ ಬಗ್ಗೆ ಉದಾರ ನಿಲುವನ್ನು ತಳೆದಂತೆ ಕಾಣುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಪ್ರಕರಣದಲ್ಲಿ ತೀರ್ಪು ನೀಡುತ್ತಾ, ಯಾವ ಯಾವ ಹಂತದಲ್ಲಿ ಅನ್ಯಾಯವಾಗಿದೆ, ಎಲ್ಲೆಲ್ಲಿ ತಪ್ಪು ನಿರ್ಣಯಕ್ಕೆ ಬರಲಾಗಿದೆ ಎಂದು ತಿಳಿಸಿರುವುದನ್ನು ಗಮನಿಸಿದರೆ, ಮಹಿಳೆ ಗುರಿಯಾಗುತ್ತಿರುವ ಶೋಷಣೆಯ ವಿವಿಧ ಹಂತಗಳು ಅನಾವರಣಗೊಳ್ಳುತ್ತದೆ.

ತನಿಖೆಯ ಸಮಯದಲ್ಲಿ, ಅಪೀಲುದಾರಳೇ ಸ್ವತಃ ತನ್ನ ಮಗ ಮದನನೇ ಪುಷ್ಪಳಿಗೆ ಬೆಂಕಿ ಹಚ್ಚಿರಬಹುದು ಎಂಬ ಹೇಳಿಕೆಯನ್ನು ನೀಡಿದ್ದಾಳೆ. ಮದನ ಪುಷ್ಪಳ ಪತಿ ಜಗದೀಶನ ಅಣ್ಣ. ಪುಷ್ಪ ಹೊತ್ತಿ ಉರಿಯುತ್ತಿದ್ದಾಗ ಮದನ ಅಡಿಗೆ ಮನೆಯ ಹತ್ತಿರ ಇದ್ದುದನ್ನು ಮತ್ತು ಮೆಟ್ಟಿಲಿಳಿದು ಕೆಳಗೆ ಬಂದುದನ್ನು ನೆರೆಹೊರೆಯುವರು ನೋಡಿರುವುದಾಗಿ ತಿಳಿಸಿದ್ದಾರೆ. ಆದರೂ ಪೋಲೀಸರು ಅವನನ್ನು ವಿಚಾರಣೆಗೆ ಗುರಿಪಡಿಸಲಿಲ್ಲ. ಪುಷ್ಪಳ ಪತಿ ಜಗದೀಶ ಮಾನವೀಯತೆಯೇ ಇಲ್ಲದ ವ್ಯಕ್ತಿಯಾಗಿ ಕಾಣುತ್ತಾನೆ. ಅವನು ಪತ್ನಿಯ ಮೇಲೆ ನಡೆಯುತ್ತಿದ್ದ ಎಲ್ಲ ಪೈಶಾಚಿಕ ಕೃತ್ಯಗಳಿಗೂ ಮೂಕ ಪ್ರೇಕ್ಷಕನಾಗಿರುತ್ತಿದ್ದ. ಅವನ ಪತ್ನಿಯನ್ನು ಕೂಡಲೇ ಆಸ್ಪತ್ರೆಗೊಯ್ಯುವ ಮಾನವೀಯತೆಯೂ ಅವನಿಗಿರಲಿಲ್ಲ. ಪುಷ್ಪ ಜೀವಕ್ಕಾಗಿ ಹೋರಾಡುತ್ತಿದ್ದಾಗಲೂ ಅವನು ರಕ್ತವನ್ನು ಹೊಂದಿಸಲು ಯಾವುದೇ ಪ್ರಯತ್ನವನ್ನು ಪಡಲಿಲ್ಲ. ತನಗೆ ಈ ಯಾವುದರೊಡನೆಯೂ ಸಂಬಂಧವೇ ಇಲ್ಲವೆನ್ನುವಂತಿದ್ದ ಅವನ ವರ್ತನೆಯಿಂದ, ಅಪರಾಧವೆಸಗಿದವರೊಡನೆ ಅವನಿಗೆ ಸಮ್ಮತಿಯಿರುವುದು ಯಾರಿಗಾದರೂ ಸ್ಪಷ್ಟವಾಗಿ ತಿಳಿಯುವಂತಿದ್ದು, ಅದನ್ನು ಅಲಕ್ಷಿಸುವುದು ಸಾಧ್ಯವೇ ಇರಲಿಲ್ಲ. ಆದರೂ ಅವನ ಬಗ್ಗೆ ದೋಷಾರೋಪಣೆ ಪಟ್ಟಿ ಸಲ್ಲಿಸಿಲ್ಲ. ತನಿಖೆ ನಡೆಸಿದವರ ಈ ಮನೋಭಾವ ಖಂಡಿತವಾಗಿಯೂ ಖಂಡನಾರ್ಹ. ಈ ಪ್ರಕರಣದ ಎಲ್ಲ ಸಾಕ್ಷಿಗಳನ್ನು ಎಲ್ಲ ವಿವರಗಳನ್ನೂ ವಿವರವಾಗಿ ಪರಿಶೀಲಿಸಿ ಸರ್ವೋಚ್ಚ ನ್ಯಾಯಾಲಯ ವಿಶ್ಲೇಷಣೆ ಮಾಡಿದೆ.

ಪುಷ್ಪ ದಿನನಿತ್ಯ ನಿರಂತರವಾಗಿ ತನ್ನ ಅತ್ತೆಯಿಂದ ಹಾಗೂ ಗಂಡನಿಂದ ಹಿಂಸೆಗೆ ಕ್ರೌರ್ಯಕ್ಕೆ ಗುರಿಯಾಗುತ್ತಿದ್ದಳು ಎಂಬ ಬಗ್ಗೆ ಯಾವುದೇ ಅನುಮಾನವಿಲ್ಲ. ಇದಕ್ಕೆ ಕಾರಣ ಅವರ ವರದಕ್ಷಿಣೆಯ

ಬೇಡಿಕೆಗಳನ್ನು ಪೂರೈಸದಿದ್ದುದು. ಇದನ್ನು ಪುಷ್ಪಳ ತಂದೆಯೂ ಸಮರ್ಥಿಸಿದ್ದಾರೆ. ಗಂಡನ ಮನೆಯ ಹಿಂಸೆಯನ್ನು ತಾಳಲಾರದೆ ಅವಳು ತವರಿಗೆ ಬಂದಿದ್ದಳೆಂದೂ, ಈ ಕೃತ್ಯಕ್ಕೆ ನಾಲ್ಕೈದು ದಿನಗಳ ಮುಂಚೆಯಷ್ಟೇ ಅವಳು ತನ್ನ ಗಂಡನಮನೆಗೆ ಹಿಂತಿರುಗಿದ್ದಳೆಂದು ಅವರು ತಿಳಿಸಿದ್ದಾರೆ. ಅವಳ ನೆರೆಯವರಾದ, ದೀನದಯಾಳ್ , ಲಲಿತಾಕಿಶೋರ್ ಮತ್ತು ಸುಶೀಲ್ ಕುಮಾರ್ ಅವರ ಹೇಳಿಕೆಗಳೂ ಸಹ ಈ ಮಾತನ್ನೇ ಸಮರ್ಥಿಸುತ್ತವೆ.

ಪುಷ್ಪಳನ್ನು ಆಸ್ಪತ್ರೆಗೆ ಸೇರಿಸಿದ್ದು ಲಲಿತಾಕಿಶೋರ್. ಅವಳನ್ನು ಆಸ್ಪತ್ರೆಗೆ ಸೇರಿಸಿಕೊಂಡ ಡಾ.ಗೋಯಲ್ ಅವಳನ್ನು ಕರೆತಂದದ್ದು ಅವಳ ನೆರೆಯವರೆಂದೂ, ಅವಳ ಬಂಧುಗಳಾರೂ ಬಂದಿರಲಿಲ್ಲವೆಂದೂ ದೃಢಪಡಿಸಿದ್ದಾರೆ. ಅಲ್ಲದೆ ಅವಳನ್ನು ಕರೆತಂದಾಗ ಅವಳ ಪರಿಸ್ಥಿತಿ ಗಂಭೀರವಾಗಿತ್ತೆಂದೂ ತಿಳಿಸಿದ್ದಾರೆ. ಅವರನ್ನು ಪ್ರಶ್ನಿಸಿದಾಗ, ತನ್ನ ಅತ್ತೆಯೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿಹಚ್ಚಿದುದಾಗಿ ತಿಳಿಸಿದಳೆಂದೂ ತಿಳಿಸಿದ್ದಾರೆ. ಅವರು ಅಧನ್ನು ವೈದ್ಯಕೀಯ ರಿಜಿಸ್ಟರಿನಲ್ಲಿ ನಮೂದಿಸಿಲ್ಲವಾದರೂ ಅವರನ್ನು ನಂಬದಿರಲು ಕಾರಣಗಳಿಲ್ಲ, ಏಕೆಂದರೆ ಡಾ.ಗೋಯಲ್ ಅವರಿಗೆ ಇದರಲ್ಲಿ ಯಾವುದೇ ಹಿತಾಸಕ್ತಿ ಇಲ್ಲ. ಉಚ್ಚ ನ್ಯಾಯಾಲಯ ಇವರ ಹೇಳಿಕೆಯನ್ನು ಒಪ್ಪಿಕೊಂಡಿದೆ ಮತ್ತು ಅದನ್ನು ನಿರಾಕರಿಸಲು ನಮಗೂ ಯಾವುದೇ ಕಾರಣವಿಲ್ಲವೆಂಬುದಾಗಿ ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಡಾ.ಗೋಯಲ್ ಅವರ ಮಾತಿಗೆ ಮತ್ತೂ ಒಬ್ಬರ ಸಮರ್ಥನೆ ದೊರೆಯುತ್ತದೆ. ಅದು, ಸಾಪ್ ಸಿಂಗ್ ಅವರು ಬರೆದುಕೊಂಡ ಸಾಕ್ಷ್ಯದ ಮೂಲಕ. ಸಾಪ್ ಸಿಂಗ್, ಪುಷ್ಪಳ ಪ್ರಕರಣದಲ್ಲಿ ಮೊದಲನೇ ತನಿಖಾಧಿಕಾರಿ. ಅವರ ಹೇಳಿಕೆಯ ಪ್ರಕಾರ ಪುಷ್ಪಳನ್ನು ಮೊದಲ ಬಾರಿಗೆ ಸು ೧೦.೦೦ ಗಂಟೆ ಸಮಯದಲ್ಲಿ ಅವಳನ್ನು ಆಸ್ಪತ್ರೆಗೆ ಕರೆತಂದಾಗ ಅವಳಿಗೆ ಜ್ಞಾನವಿರಲಿಲ್ಲ. ರಾತ್ರಿ ೨.೩೦ ಗಂಟೆಯಲ್ಲಿಯೂ ಅವಳಿಗೆ ಜ್ಞಾನವಿರಲಿಲ್ಲ. ತಾವು ರಾತ್ರಿಯಿಡೀ ಆಸ್ಪತ್ರೆಯ ಬಳಿಯಲ್ಲಿಯೇ ಇದ್ದುದಾಗಿಯೂ ತಿಳಿಸಿದ್ದಾರೆ. ಬೆಳಿಗ್ಗೆ ೫ ಗಂಟೆಯಲ್ಲಿ ಮತ್ತೆ ಆಸ್ಪತ್ರೆಗೆ ಬಂದಾಗ ರಮೇಶಚಂದ್ರ ಹಾಗೂ ಲಲ್ಲೂ ಲಾ ಅವರುಗಳು ಪುಷ್ಪಳ ಪಕ್ಕದಲ್ಲಿ ಕುಳಿತು ಅವಳನ್ನು ಎಚ್ಚರಿಸಲು ಪ್ರಯತ್ನಿಸುತ್ತಿದ್ದರೆಂದೂ ತಿಳಿಸಿದ್ದಾರೆ. ಅವಳ ಬಳಿ ಹೋಗಿ 'ಪುಷ್ಪ ಪುಷ್ಪಾ' ಎಂದು ಕರೆದಾಗ ಅವಳಿಗೆ ಪ್ರಜ್ಞೆ ಬಂದಿತೆಂದೂ, ಆಗ ಅವಳು ತನ್ನ ಅತ್ತೆಯೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದರೆಂದ ತಿಳಿಸಿದಳೆಂದೂ ತಿಳಿಸಿದ್ದಾರೆ. ಅವರು ಈ ಹೇಳಿಕೆಯನ್ನು ಬರೆದುಕೊಂಡು ಈ ದಾಖಲೆಗೆ ಅಲ್ಲಿದ್ದ ರಮೇಶಚಂದ್ರ ಮತ್ತು ಲಲ್ಲು ಲಾ ಅವರು ಸಹಿ ಪಡೆದುದಾಗಿಯೂ ಹೇಳಿದ್ದಾರೆ. ಇವರಿಬ್ಬರ ಹೇಳಿಕೆಯೂ ಪುಷ್ಪ ಆ ರೀತಿ ಹೇಳಿದಾಗ ಅವಳಿಗೆ ಪ್ರಜ್ಞೆ ಇತ್ತು ಎಂಬುದನ್ನು ಸಮರ್ಥಿಸುತ್ತದೆ. ಇದೇ ವೇಳೆಗೆ ಅಲ್ಲಿಗೆ ಬಂದ ತನ್ನ ತಂದೆಯ ಬಳಿಯಲ್ಲಿಯೂ ಪುಷ್ಪ ಇವೇ ಮಾತುಗಳನ್ನು ಹೇಳಿದ್ದಾಳೆ.

ಮರಣ ಕಾಲದ ಅವಳ ಹೇಳಿಕೆಯನ್ನು ಸರಿಯಾದ ರೀತಿಯಲ್ಲಿ ದಾಖಲಿಸಲಾಗಿಲ್ಲ ಎಂಬುದು ನಿಜವಾದರೂ, ತನಿಖಾಧಿಕಾರಿ ಸಾಪ್ ಸಿಂಗ್ ಮತ್ತು ರಮೇಶಚಂದ್ರ ಮತ್ತು ಲಲ್ಲು ಲಾ ಅವರು ಸಾಕ್ಷ್ಯವನ್ನು ಪ್ರಾಸಿಕ್ಯೂಷನ್ ಗೆ ಪೂರಕ ಸಾಕ್ಷ್ಯವನ್ನಾಗಿ ಬಳಸಬಹುದಾಗಿದೆ. ಅಲ್ಲದೆ ಡಾ.ಗೋಯಲ್ ಅವರ ಸಾಕ್ಷ್ಯವನ್ನು ಅನುಮಾನಿಸಲು ಯಾವುದೇ ಕಾರಣವಿಲ್ಲ. ಅದನ್ನು ಸಂಪೂರ್ಣವಾಗಿ ಪರಿಗಣಿಸಬಹುದು. ಅಲ್ಲದೆ ದೀನ್ ದಯಾಳ್, ಲಲಿತಾಕಿಶೋರ್ ಹಾಗೂ ಸುಶೀಲ್ ಕುಮಾರ್ ಅವರುಗಳ ಸಾಕ್ಷ್ಯವನ್ನು ಯಾರ ಪ್ರಶ್ನಿಸಿಯೇ ಇಲ್ಲ. ಹಾಗೆಯೇ ಸೀತಾರಾಮ್ ಅವರ ಸಾಕ್ಷವನ್ನು ಅನುಮಾನಿಸಲೂ ಯಾವುದೇ ಕಾರಣವಿಲ್ಲ.

ಇದೊಂದು ಪೈಶಾಚಿವಾದ ಅಮಾನವೀಯ ಕೃತ್ಯ ಎಂಬುದರಲ್ಲಿ ಅನುಮಾನವೇ ಇಲ್ಲ. ಅಡಿಗೆ ಮನೆಗೆ ಹೊರಗಿನಿಂದ ಚಿಲಕಹಾಕಿ ಸರಪಳಿ ಬಿಗಿಯಲಾಗಿತ್ತು ಎಂಬ ಒಂದು ಅಂಶವೇ, ಅಪೀಲುದಾರಳು ಮತ್ತು ಅವಳ ಕುಟುಂಬದ ವ್ಯಕ್ತಿಗಳು ಸಂಪೂರ್ಣವಾಗಿ ಈ ಅಪರಾಧಕ್ಕೆ ಜವಾಬ್ದಾರರು ಎಂಬುದನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ಸೂಚಿಸುತ್ತದೆ ಎಂದು ಅಭಿಪ್ರಾಯಪಟ್ಟು, ವಿಚಾರಣಾ ನ್ಯಾಯಾಲಯ ಆರೋಪಿಗಳನ್ನು ಖುಲಾಸೆ ಮಾಡಿ ಹೊರಡಿಸಿದ ಆದೇಶವನ್ನು ತಳ್ಳಿಹಾಕಿ ಉಚ್ಚನ್ಯಾಯಾಲಯದ ತೀರ್ಪನ್ನು ಎತ್ತಿಹಿಡಿಯಿತು.

ಈ ಪ್ರಕರಣದ ತೀರ್ಪನ್ನು ಗಮನಿಸಿದಾಗ, ತನಿಖೆಯ ಹಂತದಲ್ಲಿ ದೊರೆಯುವ ಸಾಕ್ಷ್ಯಾಧಾರಗಳನ್ನು ಸೂಕ್ತ ರೀತಿಯಲ್ಲಿ ವಿಶ್ಲೇಷಿಸಿ ಸಂಬಂಧ ಕಲ್ಪಿಸಿ ನಿರ್ಧಾರಕ್ಕೆ ಬರುವಲ್ಲಿ ತಪ್ಪಿದರೆ, ಅಪರಾಧಿ ಶಿಕ್ಷೆಗೊಳಗಾಗದೇ ತಪ್ಪಿಸಿಕೊಂಡು ಬಿಡುವ ಸಾಧ್ಯತೆಗಳಿವೆ ಎಂಬುದು ಸ್ಪಷ್ಟವಾಗುತ್ತದೆ.

ಯಾವುದೇ ಕಾನೂನು ಯಶಸ್ವಿಯಾಗುವುದು ಅವುಗಳ ಅನ್ವಯ, ವ್ಯಾಖ್ಯಾನ ಹಾಗೂ ಅನುಷ್ಠಾನಗಳು ಎಲ್ಲ ಹಂತಗಳಲ್ಲಿಯೂ ನಿಷ್ಪಕ್ಷಪಾತವಾಗಿ ನ್ಯಾಯದೊರಕಿಸಿಕೊಡುವ ಏಕಮಾತ್ರ ಉದ್ದೇಶದಿಂದ ಆದಾಗ ಮಾತ್ರ. ಹಾಗಿಲ್ಲದಿದ್ದರೆ ಕಾನೂನು ನಿಷ್ಪ್ರಯೋಜಕವಾದುದಾಗುತ್ತದೆ. ಇದಕ್ಕೆ ಉತ್ತಮ ಉದಾಹರಣೆ ಸರೋಜಿನಿ-ವಿ-ಮಧ್ಯಪ್ರದೇಶ ರಾಜ್ಯ ಮತ್ತು ಮಧ್ಯಪ್ರದೇಶ ರಾಜ್ಯ -ವಿ-ವಿನೋದ್ ಬಲ್ಲಾ ಪ್ರಕರಣ(೧೯೯೩ ಎಸ್ ಯುಪಿಪಿ(೪) ಎಸ್ ಸಿ ೬೩೨) ಇದು ವಧೂದಹನದ ಪೈಶಾಚಿಕ ಹಾಗೂ ಅಮಾನವೀಯ ಕೃತ್ಯದ ಪ್ರಕರಣ.

೨೨ ವರ್ಷದ ರಜನಿಬಲ್ಲಾ ಎಂಬ ಮಹಿಳೆಯ ಮರಣಕ್ಕೆ ಅಥವಾ ಆತ್ಮಹತ್ಯೆಯ ದುಷ್ಪ್ರೇರಣೆಗೆ ಕಾರಣವಾಗಿದ್ದಾರೆಂದು ಅವಳ ಪತಿ ವಿನೋದ್‌ಬಲ್ಲಾ ಮತ್ತು ಅವನ ತಾಯಿ ಸರೋಜಿನಿಯರನ್ನು ಭಾರತ ದಂಡಸಂಹಿತೆಯ ೩೪ನೇ ಪ್ರಕರಣದೊಂದಿಗೆ ಓದಿಕೊಂಡ ಪ್ರಕರಣ ೩೦೨ ಮತ್ತು ೩೪ನೇ ಪ್ರಕರಣದೊಂದಿಗೆ ಓದಿಕೊಂಡ ೩೦೬ನೇ ಪ್ರಕರಣದ ಮೇರೆಗೆ ಅಪರಾಧ ಎಸಗಿದ್ದಾರೆಂದು ಆರೋಪಿಸಿ ರೇವಾದ ಸತ್ರ ನ್ಯಾಯಧೀಶರು ತೀರ್ಪು ನೀಡಿದ್ದರು.

ರಜನಿ ವಿನೋದ್ ಬಲ್ಲಾನನ್ನು ೧೯೮೨ರ ಫೆಬ್ರವರಿ ೩ ರಂದು ವಿವಾಹವಾಗಿದ್ದಳು. ಮೂರು ತಿಂಗಳ ನಂತರ, ೧೯೮೨ರ ಮೇಲೆ ೨೭ರಂದು ಅವಳ ಗಂಡನ ಮನೆಯ ಮೊದಲನೆ ಮಹಡಿಯಲ್ಲಿ ರಜನಿಯ ದೇಹ ಸುಟ್ಟು ಕರಕಲಾಗಿ ಗುರುತುಹಿಡಿಯಲಾಗದ ಸ್ಥಿತಿಯಲ್ಲಿ ಕಂಡುಬಂದಿತು. ವಿಚಾರಣಾ ನ್ಯಾಯಾಲಯ ಅವಳ ಗಂಡ ಮತ್ತು ಅತ್ತೆ ಇಬ್ಬರನ್ನೂ ದೋಷಿಗಳೆಂದು ತೀರ್ಮಾನಿಸಿ ಅಜೀವ ಕಠಿಣ ಕಾರಾವಾಸದ ಶಿಕ್ಷೆ ವಿಧಿಸಿತು. ಈ ತೀರ್ಪಿನ ವಿರುದ್ಧ ಸಲ್ಲಿಸಿದ ಅಪೀಲಿನಲ್ಲಿ ಉಚ್ಚನ್ಯಾಯಾಲಯ, ೧೯೯೧ರ ನವೆಂಬರ್ ೨೩ರಂದು ತೀರ್ಪುನೀಡಿ ಅವರನ್ನು ೩೪ನೇ ಪ್ರಕರಣದೊಂದಿಗೆ ಓದಿಕೊಂಡ ೩೦೨ನೇ ಪ್ರಕರಣದ ಅಪರಾಧದಿಂದ ದೋಷಮುಕ್ತರನ್ನಾಗಿ ಮಾಡಿತು. ಆದರೆ ಶ್ರೀಮತಿ ಸರೋಜಿನಿಗೆ ಭಾರತ ದಂಡ ಸಂಹಿತೆಯ ೨೦೧ನೇ ಪ್ರಕರಣದ ಮೇರೆಗೆ (ಅಪರಾಧದ ಸಾಕ್ಷ್ಯವನ್ನು ಇಲ್ಲದಂತೆ ಮಾಡುವುದು ಅಥವಾ ಅಪರಾಧಿಯನ್ನು ರಕ್ಷಿಸಲು ಸುಳ್ಳು ಸುದ್ದಿ ಕೊಡುವುದು) ಅಪರಾಧಿಯೆಂದು ನಿರ್ಣಯಿಸಿ ಐದುವರ್ಷಗಳ ಕಠಿಣ ಕಾರಾವಾಸದ ಶಿಕ್ಷೆಗೆ ಗುರಿಪಡಿಸಿತು.

ಸರ್ವೋಚ್ಚ ನ್ಯಾಯಾಲಯದಲ್ಲಿ, ತನಗೆ ವಿಧಿಸಿದ ಶಿಕ್ಷೆಯನ್ನು ಪ್ರಶ್ನಿಸಿ ಸರೋಜಿನಿ ಮತ್ತು ಅಪರಾಧಿಯನ್ನು ಖುಲಾಸೆ ಮಾಡಿದ ಆದೇಶವನ್ನು ಪ್ರಶ್ನಿಸಿ ರಾಜ್ಯಸರ್ಕಾರ ಅಪೀಲು ಸಲ್ಲಿಸಿದೆ.

ಪಶುಪತಿನಾಥ್ ಟ್ಯಾಂಡನ್ ಮತ್ತು ವಿಮಲಾ ರಜನಿಯ ತಂದೆತಾಯಿಯರು ಮತ್ತು ಕೈಲಾಶ್‌ನಾಥ್ ಮತ್ತು ಶಿವಚರಣಲಾಲ್ ರಜನಿಯ ಸಹೋದರರು.

ಪ್ರಾಸಿಕ್ಯೂಷನ್ ಅವರ ಪ್ರಕಾರ - ಸರೋಜಿನಿ ಮದುವೆಗೆ ಮುನ್ನವೆ ಸ್ಕೂಟರ್, ಟೇಪರೆಕಾರ್ಡರ್, ಪಂಪ್ (ಮಹಡಿಯ ಮೇಲ್ಗಡೆಗೆ ನೀರನ್ನು ಪಂಪ್ ಮಾಡಲು ಮೋಟಾರ್)ಗಳನ್ನು ಮದುವೆಯಲ್ಲಿ ಕೊಡಬೇಕೆಂದು ತಿಳಿಸಿದ್ದರು. ಆದರೆ ಅವುಗಳನ್ನು ಮದುವೆಯ ಸಮಯದಲ್ಲಿ ಕೊಡಲಾಗಲಿಲ್ಲ. ಆದ್ದರಿಂದ ಇದು ವರದಕ್ಷಿಣೆ ಸಾವು, ಆರೋಪಿ ಸರೋಜಿನಿಯ ಪ್ರಕಾರ ಇದು ಆತ್ಮಹತ್ಯೆ. ಇಡೀ ಪ್ರಕರಣ ಸಾಂದರ್ಭಿಕ ಸಾಕ್ಷ್ಯಗಳನ್ನಾಧರಿಸಿದೆ.

೧೯೮೨ರ ಮೇ ೨೭ರಂದು ಬೆಳಿಗ್ಗೆ ೮ ಗಂಟೆಯಲ್ಲಿ ಫೇವಾ ಪೋಲೀಸು ಠಾಣೆಯ ಸಬ್ ಇನ್ ಸ್ಪೆಕ್ಟರ್ (ಪ್ರಾಸಿಕ್ಯೂಷನ್ ಪರಸಾಕ್ಷಿ-ಪ್ರಾಸಾ) ಮನೆ ಹೊತ್ತಿ ಉರಿಯುತ್ತಿದೆ ಎಂಬ ಮಾಹಿತಿಯನ್ನು ಸ್ವೀಕರಿಸಿದರು. ಅವರು ಇನ್‌ಸ್ಪೆಕ್ಟರ್ ಮಹಿಪಾಲ್ (ಪ್ರಾಸಾ) ಸಿಂಗ್ ಅವರಿಗೆ ಸುದ್ದಿರವಾನಿಸಿದರು. ಮಹಿಪಾಲ್ ಸಿಂಗ್ ಸ್ಥಳಕ್ಕೆ ಧಾವಿಸುವ ವೇಳೆಗಾಗಲೇ ಫೇವಾ ಪೊಲೀಸು ಠಾಣೆಯ ಸಬ್ ಇನ್ ಸ್ಪೆಕ್ಟರ್ ಅಲ್ಲಿದ್ದರು. ಅಪರಾಧ ನಡೆದ ಮನೆಯ ಮೊದಲನೆ ಮಹಡಿಯ ಸ್ಥಳದ ಪಂಚನಾಮೆ ನಡೆಸಿದರು. ರಜನಿಯ ಸುಟ್ಟು ಕರಕಲಾದ ದೇಹ ಗುರುತಿಸಲಾಗದ ಸ್ಥಿತಿಯಲ್ಲಿತ್ತು. ನಾಲಿಗೆ ಹೊರಚಾಚಿತ್ತು. ಬಾಯಿಂದ ರಕ್ತ ಒಸರುತ್ತಿತ್ತು. ಕೈಕಾಲುಗಳು ದೂರಕ್ಕೆ ಚಾಚಿದ್ದವು. ಚಿತ್ತಳೆ ದೇಹ ಅಂಗಾತವಾಗಿ

ಬಿದ್ದಿತ್ತು. ಮೃತದೇಹವನ್ನು ಮರಣೋತ್ತರ ಶವಪರೀಕ್ಷೆಗಾಗಿ ಕಳುಹಿಸಲಾಯಿತು. ಡಾ ಮೋಗೆ(ಪ್ರಾಸಾ) ಅವರು ಆ ಪರೀಕ್ಷೆಯನ್ನು ನಡೆಸಿದರು. ಅವರಿಗೆ ಮರಣದ ಕಾರಣವನ್ನು ತಿಳಿಸಲಾಗಲಿಲ್ಲ. ಆದರೆ ಶ್ವಾಸಕೋಶಗಳು ಕಂಜೆಸ್ಟ್ ಆಗಿದ್ದವು. ಹೃದಯದ ಎರಡು ಕೋಣೆಗಳು ಖಾಲಿಯಿದ್ದವು ಮತ್ತು ಹೊಟ್ಟೆಯಲ್ಲಿ ಅರೆಪಚನವಾದ ಆಹಾರ ಇದ್ದುದು ಕಂಡಬಂದಿದೆ ಎಂದು ವರದಿ ಮಾಡಿದರು. ಎಲ್ಲ ವಸ್ತುಗಳನ್ನೂ ವೈದ್ಯಶಾಸ್ತ್ರದ ನಿರ್ದೇಶಕರಾದ ಹರೀಶ್ ಚಂದ್ರ ಅವರಿಗೆ ಕಳುಹಿಸಲಾಯಿತು. ಅವರು ವಿವರವಾಗಿ ಮತ್ತು ಕೂಲಂಕುಷವಾಗಿ ಪರೀಕ್ಷಿಸಿ ಮರಣ ಉಸಿರುಗಟ್ಟಿರುವುದರಿಂದ(ಆಸ್ಫಿಕ್ಸಿಯಾ) ಉಂಟಾಗಿದೆ ಮತ್ತು ಮೃತಳು ತನ್ನ ಕೊನೆಯ ಊಟದ ನಂತರ ಎರಡು ಅಥವಾ ಮೂರು ಗಂಟೆಗಳೊಳಗಾಗಿ ಸತ್ತಿದ್ದಾಳೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದ್ದರಿಂದ ಸಾವು ಬೆಳಿಗ್ಗೆ ೮ ರಿಂದ ೮.೩೦ ಗಂಟೆಯೊಳಗೆ ನಡೆದಿರುವುದು ಸಾಧ್ಯವಿಲ್ಲ. ಅಲ್ಲದೆ ಮೃತಳು ಸತ್ತ ನಂತರವೂ ದೇಹ ಹೊತ್ತಿ ಉರಿದಿದೆ. ಆದ್ದರಿಂದಲೇ ಬಿಸಿಯಿಂದಾಗಿ ಉಂಟಾಗುವ ಬಿರುಕುಗಳು ದೇಹದಲ್ಲಿ ಕಂಡುಬಂದಿವೆ. ಅವಳ ಪತಿ ವಿನೋದ್ ರೇವಾದಿಂದ ೯೦ ಕಿ.ಮೀ ದೂರದಲ್ಲಿ ಸಿಧಿಯಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಸಿಧಿಯಲ್ಲಿ ಕ್ಯಾಷಿಯರ್ ಕಮ್ ಕ್ಲರ್ಕ್ ಆಗಿ ಕೆಲಸ ಮಾಡುತ್ತಾನೆ. ರೇವಾದಿಂದ ಸಿಧಿಗೆ ಒಳ್ಳೆಯ ರಸ್ತೆ ಸಂಪರ್ಕವಿದ್ದು, ಅಲ್ಲಿಂದ ಇಲ್ಲಿಗೆ ತಲುಪಲು ಕೇವಲ ಎರಡು ಗಂಟೆಗಳು ಸಾಕು. ಮೃತ ರಜನಿ ಮತ್ತು ಸರೋಜಿನಿ ರೇವಾದಲ್ಲಿರುತ್ತಿದ್ದರು.

ಸತ್ರ ನ್ಯಾಯಾಧೀಶರು ವರದಕ್ಷಿಣೆಯ ತೀರದ ದಾಹವೇ ಇನ್ನೂ ಅರಳ ಬೇಕಾಗಿದ್ದ ಜೀವವನ್ನು ಬಲಿತೆಗೆದುಕೊಳ್ಳಲು ಕಾರಣ ಆದ್ದರಿಂದ ಇದು ಆತ್ಮಹತ್ಯೆಯಲ್ಲ ಮಾನವಹತ್ಯೆ ಎಂದು ಅಭಿಪ್ರಾಯ ಪಟ್ಟಿದ್ದರೆ. ಡಾ.ಹರೀಶ್ ಚಂದ್ರ ಅವರ ಸಾಕ್ಷ್ಯ ನಿರ್ಣಾಯಕವಾಗಿದ್ದು ಕೊಲೆ ಉಸಿರುಗಟ್ಟಿಸುವುದರಿಂದ ಉಂಟಾಗಿದೆ ಮತ್ತು ಇದನ್ನು ಒಬ್ಬ ವ್ಯಕ್ತಿ ಮಾಡಲು ಸಾಧ್ಯವಿಲ್ಲ. ಕೊನೆಯ ಊಟದ ನಂತರ ಸುಮಾರು ಎರಡು ಅಥವಾ ಮೂರು ಗಂಟೆಗಳೊಳಗೆ ಸಾವು ಸಂಭವಿಸಿದೆ.

ವಿನೋದ್ ಕೊಲೆ ಮಾಡಿದ ನಂತರ ಆ ಸ್ಥಳವನ್ನು ಬಿಟ್ಟು ತೆರಳಿರಬೇಕು. ಸಾವಿನ ನಂತರ ಸರೋಜಿನಿಯ ವರ್ತನೆಯೂ ಅಸಹಜವಾಗಿತ್ತು. ಅವರು ಕುರುಕು ತಿನ್ನುತ್ತಾ ಕಾಫಿಯನ್ನು ಸಾವಧಾನವಾಗಿ ಕುಟುಕರಿಸುತ್ತಿದ್ದರು. ಆದ್ದರಿಂದ ಆರೋಪಿ ಮಾತ್ರವೇ ಕೊಲೆ ಮಾಡಿರುವ ಸಂಭವ ಹೆಚ್ಚು. ಅದರಂತೆ, ಸತ್ರ ನ್ಯಾಯಾಲಯ ದೋಷಸಿದ್ಧಿ ಹಾಗೂ ಶಿಕ್ಷೆಯನ್ನು ದಾಖಲುಮಾಡಿತು. ಸತ್ರ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಆರೋಪಿಗಳು ಉಚ್ಚನ್ಯಾಯಾಲಯದಲ್ಲಿ ಅಪೀಲು ಹೂಡಿದರು.

ಉಚ್ಚನ್ಯಾಯಾಲಯ ರಜನಿಯ ಸಾವು ಆತ್ಮಹತ್ಯೆಯಲ್ಲ ಮಾನವಹತ್ಯೆ(homicide) ಮತ್ತು ಸಾವು ಕೊನೆಯ ಊಟದ ನಂತರದ ಎರಡು ಮೂರು ಗಂಟೆಗಳೊಳಗಾಗಿ ಸಂಭವಿಸಿದೆ ಎಂಬುದನ್ನು

ದೃಢಪಡಿಸಿತು. ಸರೋಜಿನಿ ಘಟನೆ ನಡೆದಾಗ ಮನೆಯಲ್ಲಿಯೇ ಇದ್ದರು ಮತ್ತು ಪಂಚನಾಮೆಯ ಸಮಯದಲ್ಲಿ ಸಾವು ಆತ್ಮಹತ್ಯೆಯಿಂದ ಆಗಿದೆಯೆಂದೂ ಮತ್ತು ಬೆಳಿಗ್ಗೆ ಸಾವು ಸಂಭವಿಸಿದೆಯೆಂದೂ ತಿಳಿಸಿದ್ದಾರೆ. ಪ್ರಾಸಿಕ್ಯೂಷನ್ ಅವರು, ಸರೋಜಿನಿಯವರ ವರದಕ್ಷಿಣೆಯ ಬೇಡಿಕೆಗಳನ್ನು ಈಡೇರಿಸದಿರುವುದೇ ಕೊಲೆಗೆ ಕಾರಣ ಎಂದು ತಿಳಿಸಿದ್ದಾರೆ. ವಿನೋದ್ ಸಿಧಿಯಿಂದ ಬಂದು, ಕೊಲೆ ಮಾಡಿ ಅದೇ ರಾತ್ರಿ ಸಿಧಿಗೆ ಹಿಂತಿರುಗಿರುವುದು ಅಸಾಧ್ಯವಾದುದಲ್ಲ ಎಂದೂ ತಿಳಿಸಿದ್ದಾರೆ. ಆದರೂ, ಅಪರಾಧ ನಡೆಯುವ ಸ್ಥಳದಲ್ಲಿ ವಿನೋದ್ ಇದ್ದ ಎಂಬುದನ್ನು ತೋರಿಸಲು ಪ್ರಾಸಿಕ್ಯೂಷನ್ ಅವರು ವಿಫಲಗೊಂಡಿದ್ದಾರೆ. ಆದ್ದರಿಂದ ಅವನಿಗೆ ಸಂದೇಹದ ಲಾಭ ಪಡೆಯಲು ಹಕ್ಕಿದೆ. ಹಾಗೆಯೇ ಸರೋಜಿನ ಒಬ್ಬರೇ ಈ ಕೊಸೆಯನ್ನು ಮಾಡಿರುವುದು ಸಾಧ್ಯವಿಲ್ಲ. ಆದರೆ ಯಾರು ಕೊಲೆ ಮಾಡಿದರು ಎಂಬ ಬಗ್ಗೆ ಸರಿಯಾದ ಯಾವ ಸಾಕ್ಷ್ಯವೂ ಇಲ್ಲ. ಆದ್ದರಿಂದ ಅವರಿಗೂ ಸಂದೇಹದ ಲಾಭ ಪಡೆಯುವ ಹಕ್ಕಿದೆ, ಆದರೆ ಅವರು ರಜನೀಯ ಕೊಲೆಯ ಸಾಕ್ಷ್ಯಗಳನ್ನು ನಾಶಪಡಿಸಲು ಪ್ರಯತ್ನಿಸಿದ್ದಾರೆ ಎಂದು ತಿಳಿದುಬಂದಿರುವುದರಿಂದ ಅವರನ್ನು ಭಾ.ದಂ.ಸಂಹಿತೆಯ ೨೦೧ನೇ ಪ್ರಕರಣದ ಮೇರೆಗೆ ಅಪರಾಧಿಯೆಂದು ನಿರ್ಣಯಿಸಲಾಯಿತು.

ಈ ಹಿನ್ನೆಲೆಯಲ್ಲಿ ಸರ್ವೋಚ್ಚ ನ್ಯಾಯಾಲಯ ಪ್ರಕರಣವನ್ನು ಕೈಗೆತ್ತಿಕೊಂಡಿತು. ಈ ಪ್ರಕರಣದ ವಾಸ್ತವಾಂಶಗಳು ಆಘಾತಕಾರಿಯಾದವು. ಆದರೆ, ಆರೋಪಿ ಹಾಗೂ ಅಪರಾಧ ಘಟಿಸಿರುವುದರೊಡನೆ ಸಂಬಂಧ ಕಲ್ಪಿಸುವ ಕಾನೂನಿನ ಸಾಕ್ಷ್ಯಗಳು ಯಾವುವಾದರೂ ಇವೆಯೇ ಎಂಬುದನ್ನು ತಿಳಿದುಕೊಳ್ಳಲು ನ್ಯಾಯಾಲಯ ಲಭ್ಯ ಸಾಕ್ಷ್ಯಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಈ ಪ್ರಕರಣ ಸಾಂದರ್ಭಿಕ ಸಾಕ್ಷ್ಯಗಳನ್ನು ಆಧರಿಸಿದೆ. ಎಲ್ಲ ಸನ್ನಿವೇಶಗಳೂ, ಆರೋಪಿ ಮಾತ್ರವೇ ಅಪರಾಧವನ್ನು ಎಸಗಿದ್ದಾನೆ ಎಂಬುದನ್ನು ನಿರ್ಣಾಯಕವಾಗಿ, ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತುಪಡಿಸಬೇಕು. ಸನ್ನಿವೇಶಗಳ ಸರಪಳಿಯ ಒಂದುಕೊಂಡಿ ಕಳಚಿದರೂ, ಆರೋಪಿಗೆ ಸಂದೇಹದ ಲಾಭ ಸಿಗುತ್ತದೆ. ಆದ್ದರಿಂದ ಇಲ್ಲಿನ ಮುಖ್ಯವಾದ ಪ್ರಶ್ನೆ ಈ ರೀತಿಯಲ್ಲಿ ವಿನೋದ್ ಮತ್ತು ಸರೋಜಿನಿಯ ವಿರುದ್ಧ ಅಪರಾಧವನ್ನು ರುಜುವಾತು ಪಡಿಸುವಲ್ಲಿ ಪ್ರಾಸಿಕ್ಯೂಷನ್ ಯಶಸ್ವಿಯಾಗಿದ್ದಾರೆಯೇ ಎಂಬುದು.

ಸಾಮಾನ್ಯವಾಗಿ ಸರ್ವೋಚ್ಚ ನ್ಯಾಯಾಲಯ ಸಾಕ್ಷ್ಯಗಳನ್ನು ಮತ್ತೆ ಮೊದಲಿನಿಂದ ಪರೀಕ್ಷಿಸುವುದಿಲ್ಲ. ಆದರೆ ಉಚ್ಚನ್ಯಾಯಾಲಯ ಸಂದೇಹವನ್ನು ವ್ಯಕ್ತಪಡಿಸಿರುವುದರಿಂದ ಮತ್ತು ತಮ್ಮ ಆತ್ಮಸಾಕ್ಷಿಯನ್ನು ತೃಪ್ತಿಪಡಿಸುವುದಕ್ಕಾಗಿ ಲಭ್ಯ ಸಾಕ್ಷ್ಯಗಳನ್ನು ಸ್ವತಂತ್ರವಾಗಿ ಪರೀಶಿಲಿಸಿರುವುದಾಗಿ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯ ವ್ಯಕ್ತಪಡಿಸಿದೆ.

ಈ ಪ್ರಕರಣದಲ್ಲಿ ಸಾಕ್ಷ್ಯಾಧಾರಗಳನ್ನು ಮತ್ತೆ ಮೊದಲಿನಿಂದ ಪರೀಕ್ಷಿಸಿ, ಸನ್ನಿವೇಶಗಳ ಕೊಂಡಿಗಳನ್ನು ಜೋಡಿಸಿ ಸರ್ವೋಚ್ಚ ನ್ಯಾಯಾಲಯ ಈ ಮುಂದಿನಂತೆ ಅಭಿಪ್ರಾಯ ವ್ಯಕ್ತಪಡಿಸಿ ತೀರ್ಪು ನೀಡಿದೆ.

ಈ ಪ್ರಕರಣದಲ್ಲಿ ಮುಖ್ಯ ಪ್ರಶ್ನೆಯೆಂದರೆ ರಜನಿಯ ಸಾವು ಆತ್ಮಹತ್ಯೆಯಿಂದಾದುದೋ ಅಥವಾ ಕೊಲೆಯಿಂದಾದುದೋ ಎಂಬುದು. ಈ ಪ್ರಶ್ನೆಗೆ ವಿಚಾರಣಾ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳೆರಡೂ, ಅದು ಆತ್ಮಹತ್ಯೆಯಲ್ಲ ಕೊಲೆ ಎಂದೇ ಅಭಿಪ್ರಾಯಪಟ್ಟಿದೆ. ಸರ್ವೋಚ್ಚ ನ್ಯಾಯಾಲಯದ ಅಭಿಪ್ರಾಯವೂ ಅದೇ ಆಗಿದೆ.

ಮರಣೋತ್ತರ ಶವ ಪರೀಕ್ಷೆಯ ನಂತರ, ವಿಧಿ ವೈದ್ಯಶಾಸ್ತ್ರ ತಜ್ಞ ಡಾ.ಹರೀಶ್ ಚಂದ್ರ ಅವರ ಅಭಿಪ್ರಾಯದಂತೆ, ಮೃತಳ ಕೊನೆಯ ಊಟದ ನಂತರ ೨ ರಿಂದ ೩ ಗಂಟೆಗಳೊಳಗಾಗಿ ಸಾವು ಘಟಿಸಿದೆ.

ಪಂಚನಾಮೆಯ ಪ್ರಕಾರ, ಮೃತಳ ನಗ್ನ ದೇಹ ಅಂಗಾತವಾಗಿ ಬಿದ್ದಿದ್ದು ಉಗ್ರಾಣ(store room)ದಲ್ಲಿ ಸೀಮೆಎಣ್ಣೆ ವಾಸನೆ ಇರಲಿಲ್ಲ. ಆದರೆ ಸೀಮೆಣ್ಣೆಯಲ್ಲಿ ಅದ್ದಿದ ದಾರ ಸೊಂಟದ ಸುತ್ತ ಇದ್ದುದು ಕಂಡುಬಂದಿದೆ. ಅಲ್ಲಿದ್ದ ಹೊಲಿಗೆ ಯಂತ್ರಕ್ಕೆ ಬೆಂಕಿ ಹೊತ್ತಿಕೊಂಡಿರಲಿಲ್ಲ. ಸಾವಿನ ನಂತರವೂ ಬೆಂಕಿ ದೇಹವನ್ನು ಸುಟ್ಟಿದೆ. ಇದರ ಪರಿಣಾಮವಾಗಿ ಶಾಖದ ಬಿರುಕುಗಳು ಮತ್ತು ಕೈಕಾಲುಗಳಲ್ಲಿ ಬಿರುಕುಗಳು ಉಂಟಾಗಿವೆ. ಈ ಸಾಕ್ಷ್ಯಾಧಾರಗಳಿಂದ, ಎರಡೂ ನ್ಯಾಯಾಲಯಗಳು, ಸಾವು ಕೊನೆಯ ಊಟದ ನಂತರ ೨-೩ ಗಂಟೆಗಳಲ್ಲಿ ಉಂಟಾಗಿದೆ ಬೆಳಿಗ್ಗೆ ಅಲ್ಲ ಎಂಬ ಬಗ್ಗೆ ಒಮ್ಮತದ ಅಭಿಪ್ರಾಯಕ್ಕೆ ಬಂದಿದೆ.

ಮೃತದೇಹದ ನಾಲಿಗೆ ಹೊರಬಂದಿತ್ತು ಮತ್ತು ಬಾಯಿಂದ ರಕ್ತ ಒಸರುತ್ತಿತ್ತು ಎಂಬ ಅಂಶಗಳು ಸಾವು ಉಸಿರುಕಟ್ಟಿದುದರಿಂದ ಉಂಟಾಗಿದೆ. ಇದು ಎದೆಯ ಮೇಲೆ, ಕತ್ತು ಅಥವಾ ಹೊಳ್ಳೆಗಳ ಮೇಲೆ ಉಂಟುಮಾಡಿದ ಒತ್ತಡದಿಂದಿರಬಹುದು. ಇವುಗಳಿಂದ ಕೆಳಗಿನ ಎರಡೂ ನ್ಯಾಯಾಲಯಗಳೂ ಇದು ಆತ್ಮಹತ್ಯೆಯಲ್ಲ ಹಾಗೂ ಸಾವು, ಸಾಕ್ಷಿಗಳ ಹೇಳಿಕೆ ಕೊಟ್ಟಿರುವಂತೆ ಬೆಳಿಗ್ಗೆ ಅಲ್ಲ ರಾತ್ರಿ ಊಟದ ನಂತರ ೨-೩ ಗಂಟೆಗಳೊಳಗಾಗಿ ಸಂಭವಿಸಿದೆ ಎಂಬುದನ್ನು ಒಪ್ಪುತ್ತದೆ.

ಈ ಸಾಕ್ಷ್ಯಗಳನ್ನಾಧರಿಸಿ ಸರ್ವೋಚ್ಚ ನ್ಯಾಯಾಲಯವೂ ಸಾವು ಆಸ್‌ಫಿಕ್ಸಿಯಾದಿಂದ ಉಂಟಾಗಿದೆ. ಆರೋಪಿಗಳ ಪರ ವಕೀಲರು ವಾದಿಸಿರುವಂತೆ ಇದು ಆತ್ಮಹತ್ಯೆಯಲ್ಲ ಎಂಬುದನ್ನು ಒಪ್ಪುತ್ತದೆ.

ಸ್ಥಳದ ಪಂಚನಾಮೆಯಲ್ಲಿ, ಮೃತದೇಹವಿದ್ದ ಕೋಣೆಯ ಛಾವಣಿ ಸುಟ್ಟು ಕಪ್ಪಾಗಿತ್ತು ಮತ್ತು ದೂಲಗಳು ಕೆಳಗೆ ಬಿದ್ದಿದ್ದವು. ಇದರಿಂದ ಸಾಕಷ್ಟು ಕಪ್ಪು ಹೊಗೆ ಕೋಣೆಯ ತುಂಬಾ ಆವರಿಸಿತ್ತು ಎಂಬುದು ಸ್ಪಷ್ಟ. ಆದರೂ ರಜನಿಯ ಶ್ವಾಸಕೋಶಗಳಲ್ಲಿ ಇಂಗಾಲದ ಅಥವಾ ಕಪ್ಪು ಹೊಗೆಯ ಕುರುಹುಗಳೂ ಇರಲಿಲ್ಲ ಎಂಬುದು ಅವಳ ಸಾವು ಮಾನವಹತ್ಯೆ. ಹತ್ಯೆ ನಂತರ ಮೃತದೇಹವನ್ನು ಸುಟ್ಟಿದ್ದಾರೆ ಎಂಬುದು ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತಗುತ್ತದೆ. ವಿಧಿ ವಿಜ್ಞಾನ ತಜ್ಞ ಡಾ.ಹರೀಶಚಂದ್ರ ಅವರು ಸಾವು ಆಸ್‌ಫಿಕ್ಸಿಯಾದಿಂದ ಉಂಟಾಗಿದೆ ಎಂಬ ವರದಿಯನ್ನು ವಿಚಾರಣಾ

ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳೆರಡೂ ಒಪ್ಪಿಕೊಂಡಿದೆ ಮತ್ತು ವೈದ್ಯರ ವರದಿಯ ಬಗ್ಗೆ ಎರಡೂ ನ್ಯಾಯಾಲಯಗಳು ಭಿನ್ನಭಿಪ್ರಾಯ ತಳೆದಿಲ್ಲವಾದ ಕಾರಣ, ಈ ಕುರಿತಂತೆ ಆರೋಪಿಗೆ ಸಂದೇಹದ ಲಾಭ ಕೊಡಲು ಯಾವುದೇ ಕಾರಣವಿಲ್ಲ.

ಮುಂದಿನ ಪ್ರಶ್ನೆ ರಜನಿಯ ಕೊಲೆಯ ಅಪರಾಧವನ್ನು ಅವಳ ಪತಿ ಮತ್ತು ಅತ್ತೆ ಇವರಿಬ್ಬರೇ ಮಾಡಿದ್ದಾರೆಯೇ ಎಂಬುದು. ಅಪರಾಧದ ಸ್ಥಳದ ಮತ್ತು ಮನೆಯ ಚಿತ್ರದಿಂದ ಮನೆಗೆ ನೆಲಮಹಡಿ ಮತ್ತು ಮೊದಲನೆಯ ಮಹಡಿಗಳಿಂದ ಕೂಡಿತ್ತು ಎಂಬುದು ತಿಳಿದುಬರುತ್ತದೆ. ಪಂಚನಾಮೆಯಿಂದ, ಮೊದಲ ಮಹಡಿಯಲ್ಲಿ ಒಂದು ಮಲಗುವ ಕೋಣೆ ಹಾಗೂ ಒಂದು ಉಗ್ರಾಣ ಇರುವುದಾಗಿ ತಿಳಿದುಬರುತ್ತದೆ. ಈ ಉಗ್ರಾಣದಲ್ಲಿ ಮೃತದೇಹ ಬಿದ್ದಿತ್ತು. ಕೆಳಗೆ ಮನೆಯ ಒಳಗಿನ ಮೆಟ್ಟಿಲನಿಂದಲ್ಲದೆ ಮೊದಲ ಮಹಡಿಗೆ ಬರಲು ಅಥವಾ ಅಲ್ಲಿಂದ ಹೋಗಲು ಬೇರೆ ಯಾವುದೇ ದಾರಿಯಿಲ್ಲ. ಆದ್ದರಿಂದ ಮನೆಯಲ್ಲಿ ಇರುವವರನ್ನು ಬಿಟ್ಟು ಬೇರೆ ಯಾರೋ ಬಂದಿರುವುದು ಸಾಧ್ಯವೇ ಇಲ್ಲ. ಅವರೇ ಒಪ್ಪಿಕೊಂಡಿರುವಂತೆ ಸರೋಜಿನಿ ಮತ್ತು ಮೃತ ರಜನಿ ಇಬ್ಬರೇ ಆ ಮನೆಯಲ್ಲಿ ಇರುತ್ತಿದ್ದುದು. ಅವಳ ಪತಿ ವಿನೋದ್ ಸಿಧಿಯಲ್ಲಿ ಕೆಲಸ ಮಾಡುತ್ತಿದ್ದು ಮನೆಗೆ ಬಂದು ಹೋಗಿ ಮಾಡುತ್ತಿದ್ದ. ರೇವಾ ಮತ್ತು ಸಿಧಿಯ ನಡುವಿನ ದೂರ ೮೦ ಕಿ.ಮೀಗಳು. ಸಿಧಿಯನ್ನು ತಲುಪಲು ಎರಡುಗಂಟೆಗಳಿಗಿಂತ ಹೆಚ್ಚಿಗೆ ಬೇಕಿಲ್ಲದಿರುವುದರಿಂದ ವಿನೋದ್ ರೇವಾಗೆ ಬಂದು ಅಪರಾಧವೆಸಗಿ ಮತ್ತೆ ಹಿಂತಿರುಗಿ ಸಿಧಿಗೆ ಹೋಗಿರುವ ಸಂಭವ ಇಲ್ಲದಿಲ್ಲ ಎಂಬ ಅನುಮಾನವನ್ನು ಉಚ್ಚನ್ಯಾಯಾಲಯ ವ್ಯಕ್ತಪಡಿಸಿದೆ. ವಿವಾಹವಾದ ಮೂರು ತಿಂಗಳಲ್ಲಿ ಮತ್ತು ಅವಳ ಕೊನೆಯ ಊಟವಾದ ನಂತರದ ೨-೩ ಗಂಟೆಗಳಲ್ಲಿ ಅವಳ ಕೊಲೆ ನಡೆದಿದೆ. ಪತಿಯ ಅತ್ತೆ(ಸರೋಜಿನಿಯ ಸಹೋದರನ ಪತ್ನಿ), ರಜನಿ ತನ್ನ ಗಂಡನ ಮನೆಯಲ್ಲಿ ಸಂತೋಷವಾಗಿದ್ದಳೆಂದು ಸಾಕ್ಷ್ಯ ನುಡಿದಿದ್ದಾರೆ. ಆದ್ದರಿಂದ ಸರೋಜಿನಿಯ ಸಾಕ್ಷ್ಯದಂತೆ ರಜನಿಯ ಸಾವು ಆತ್ಮಹತ್ಯೆ ಎಂಬುದಾಗಲೀ ಮತ್ತು ಸಾವು ೮ ರಿಂದ ೮.೩೦ರೊಳಗೆ ನಡೆದಿದೆ ಎಂಬುದು ಸುಳ್ಳಾಗುತ್ತದೆ. ಮತ್ತು ವಿವಾಹವಾದ ಮೂರು ತಿಂಗಳೊಳಗೆ ಕೊಲೆ ಮಾಡುವಷ್ಟು ಬೇರೆ ಯಾರೂ ದ್ವೇಷವನ್ನು ಬೆಳೆಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ರಜನಿಯ ಕೊಲೆಯನ್ನು ಮನೆಯಲ್ಲಿ ಇರುವವರೇ ಮಾಡಿರಬೇಕಲ್ಲದೆ ಬೇರೆಯವರು ಮಾಡಿರುವ ಸಾಧ್ಯತೆಗಳು ಇಲ್ಲವೇ ಇಲ್ಲ.

ಮದುವೆಗೆ ಮುನ್ನವೇ ವರದಕ್ಷಿಣೆಯನ್ನು ಬೇಡಿ ಬರೆದ ಪತ್ರಗಳು ಮತ್ತು ಆ ಬೇಡಿಕೆಯನ್ನು ಪೂರೈಸಲಾಗದಿದ್ದ ಅಂಶ, ಕೊಲೆಗೆ ಕಾರಣವನ್ನು ಸೂಚಿಸುತ್ತದೆ. ಇದನ್ನು ಕೆಳಗಿನ ಎರಡೂ ನ್ಯಾಯಾಲಯಗಳು ಒಪ್ಪಿದೆ. ವಿವಾಹವಾದ ಮೂರು ತಿಂಗಳೊಳಗೆ ಹತ್ಯೆಗೆ ಒಳಗಾಗಿರುವುದೂ ಸಹ ವರದಕ್ಷಿಣೆಯ ಬೇಡಿಕೆಯನ್ನು ಪೂರೈಸಲಾಗದಿರುವ ಕಾರಣದಿಂದ ಎಂಬ ತೀರ್ಮಾನಕ್ಕೆ ಬರಲು ನಿರ್ಣಾಯಕ ಅಂಶವಾಗು

ತ್ತದೆ. ರಜನಿ ಬೆಳಿಗ್ಗೆ ೮ ರಿಂದ ೮.೩೦ ಗಂಟೆಯ ಒಳಗೆ ಆತ್ಮಹತ್ಯೆ ಮಾಡಿಕೊಂಡು ಸತ್ತಳು ಎಂಬ ಸರೋಜಿನಿ ಅವರ ಹೇಳಿಕೆ ಸುಳ್ಳಾಗುತ್ತದೆ ಎಂಬ ಅಂಶವು ಸನ್ನಿವೇಶಗಳನ್ನು ಜೋಡಿಸಲು ಒಂದು ಕೊಂಡಿಯಾಗುತ್ತದೆ.

ಮೃತಳನ್ನು ಉಸಿರುಕಟ್ಟಿಸಿ ಕೊಲೆ ಮಾಡಿ ನಂತರ ಬೆತ್ತಲೆ ಮೃತ ದೇಹದ ಮೇಲೆ ಸೀಮೆಎಣ್ಣೆ ಸುರಿದು ಸುಡಲಾಗಿದೆ. ಹೀಗೆ ಮಾಡಲು ಕೊಲೆಮಾಡುವುದರಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಕೈಗೂಡಿಸಿರಲೇಬೇಕು. ಹಾಗಿಗದ್ದರೆ ಆ ಇನ್ನೊಬ್ಬರು ಯಾರಾಗಿರಬಹುದು ಎಂಬ ಪ್ರಶ್ನೆ ಮೂಡಿದಾಗ ಸಹಜವಾಗಿಯೇ ಬರುವ ಹೆಸರು ಪತಿ ವಿನೋದನ ಹೆಸರು. ಆದರೆ ಈ ಪ್ರಕರಣದ ತನಿಖಾಧಿಕಾರಿ ಮಹಿಪಾಲ್ ಸಿಂಗ್ ವಿಚಾರಣೆ ತೀರ ಕಾಟಾಚಾರಕ್ಕೆ ನಡೆಸಿರುವುದು ಮತ್ತು ತೀರ ಅತೃಪ್ತಿಕರವಾದ ರೀತಿಯಲ್ಲಿ ಸಾಕ್ಷ್ಯವನ್ನು ನೀಡಿರುವುದರ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಲಾಗಿದೆ. ಅಪರಾಧ ನಡೆದಿದೆ ಎನ್ನಲಾದ ರಾತ್ರಿ ಅಥವಾ ಆ ನಂತರ ವಿನೋದ್ ರೇವಾದಲ್ಲಿದ್ದನೇ ಇಲ್ಲವೇ ಎಂಬ ಬಗ್ಗೆ ಸಾಕ್ಷ್ಯವನ್ನು ಸಂಗ್ರಹಿಸಲು ಯಾವುದೇ ಪ್ರಯತ್ನವನ್ನೂ ತನಿಖಾಧಿಕಾರಿ ಮಾಡಿಲ್ಲ.

ಅಪರಾಧ ಎಸಗುವಲ್ಲಿ ಒಬ್ಬರಿಗಿಂತ ಹೆಚ್ಚುಮಂದಿ ಸೇರಿದ್ದಾರೆ ಮತ್ತು ಅಪರಾಧವನ್ನೆಸಗಲು ರಜನಿಯನ್ನು ದ್ವೇಷಿಸುವ ವಿನೋದನನ್ನು ಬೇರೆ ಯಾರೂ ಇಲ್ಲ ಮತ್ತು ಅಪರಾಧವನ್ನು ಎಸಗಿದ ಕೂಡಲೇ ರೇವಾವನ್ನು ಬಿಟ್ಟು ಸಿಧಿಗೆ ಹೋಗುವುದು ಅಸಾಧ್ಯದ ಕೆಲಸವೇನಲ್ಲ ಎಂಬ ಅಂಶಗಳು ವಿನೋದನನ್ನು ನೇರವಾಗಿ ಅಪರಾಧದೊಡನೆ ಜೋಡಿಸುತ್ತದೆ. ಮತ್ತು ಅವನ ಸಹಾಯವಿಲ್ಲದೆ ಸರೋಜಿನಿ ಏಕಾಂಗಿಯಾಗಿ ಅಪರಾಧವೆಸಗಿರುವುದು ಸಾಧ್ಯವೇ ಇಲ್ಲ. ಆತ್ಮಹತ್ಯೆ ಎಂದು ಹೇಳಿ ಸುಳ್ಳು ಸಿದ್ಧಾಂತವನ್ನು ಸೃಷ್ಟಿಸಿದ ಸನ್ನಿವೇಶವನ್ನೂ ಗಮನಕ್ಕೆ ತೆಗೆದುಕೊಳ್ಳಬೇಕಾದ್ದು ಮತ್ತು ಸರೋಜಿನಿಯ ಮರುಕವೇ ಇಲ್ಲದ ವರ್ತನೆಯೂ ಸಹ ಅಪರಾಧ ನಿರ್ಣಯಕ್ಕೆ ಪೂರಕ ಅಂಶ.

ಪತ್ನಿ ಸಾವಿಗೀಡಾಗಿದ್ದಾಳೆ ಎಂದ ಕೂಡಲೇ ಮನೆಗೆ ಧಾವಿಸುವ ಹಾಗೂ ಸಾವಿಗೆ ಕಾರಣಗಳನ್ನು ತಿಳಿದುಕೊಳ್ಳುವ ಆತಂಕ ತೋರುವ ಸಾಮಾನ್ಯ ವರ್ತನತೆಯನ್ನು ಪತಿ ವಿನೋದ ತೋರಿಸದಿರುವುದೂ ಗಮನಿಸಬೇಕಾದ ಅಂಶ.

ಮೇಲೆ ಹೇಳಿದ ಎಲ್ಲ ಸನ್ನಿವೇಶಗಳೂ ಒಂದಕ್ಕೊಂದು ನಿರ್ಣಾಯಕ ಕೊಂಡಿಗಳಾಗುವುದೇ ಅಲ್ಲದೆ ಅವರಿಬ್ಬರೇ ಅಪರಾಧವನ್ನೆಸಗಿರುವುದು ಎಂಬ ಪ್ರಾಸಿಕ್ಯೂಷನ್ ಅವರ ವಾದವನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತುಪಡಿಸುತ್ತದೆ ಎಂಬ ಅಭಿಪ್ರಾಯವನ್ನು ಮಂಡಿಸಿ ಸತ್ರ ನ್ಯಾಯಾಲಯದ ತೀರ್ಪನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದು, ಉಚ್ಚನ್ಯಾಯಾಲಯದ ತೀರ್ಪನ್ನು ವಿಪರ್ಯಾಸ

ಗೊಳಿಸಿತು. ಅಲ್ಲದೆ, ಉಚ್ಚನ್ಯಾಯಾಲಯ ಪ್ರಮುಖ ಅಂಶಗಳಿಗೆ ಗಮನಕೊಡದೆ, ನ್ಯಾಯದೊರೆಯುದಂತೆ ಮಾಡಿದೆ ಎಂದೂ ಅಭಿಪ್ರಾಯಪಟ್ಟಿದೆ. ಸರ್ವೋಚ್ಚ ನ್ಯಾಯಾಲಯ ವಿಧಿವಿಜ್ಞಾನ ತಜ್ಞ ಡಾ.ಹರೀಶಚಂದ್ರ ಅವರ ಕರ್ತವ್ಯ ಪ್ರಜ್ಞೆಯನ್ನು ಕೊಂಡಾಡಿದೆ ಮತ್ತು ವಿಚಾರಣೆಯನ್ನು ಹಾಗೂ ಮಹಜರನ್ನು ಸರಿಯಾಗಿ ನಡೆಸದ ತನಿಖಾಧಿಕಾರಗೆ ಚೆನ್ನಾಗಿ ಛೀಮಾರಿ ಹಾಕಿದೆ.

ಸರ್ವೋಚ್ಚ ನ್ಯಾಯಾಲಯದಿಂದ ಸಾಕ್ಷ್ಯಗಳ ಕೂಲಂಕುಷ ಪರೀಕ್ಷೆ ಹಾಗೂ ನ್ಯಾಯಾಧೀಶರ ಕರ್ತವ್ಯ ಪ್ರಜ್ಞೆ ಅಪರಾಧಿಗಳಿಗೆ ಶಿಕ್ಷೆ ನೀಡುವಲ್ಲಿ, ಹತ್ಯೆಗೊಳಗಾದ ಮಹಿಳೆಯ ಮನೆಯವರ ಒಡಲುರಿಯನ್ನು ತಣಿಸುವಲ್ಲಿ ಸ್ವಲ್ಪಮಟ್ಟಿಗೆ ಸಹಾಯಕವಾಗಿದೆಯಲ್ಲದೆ, ಅಪರಾಧವನ್ನೆಸಗಿ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಅತ್ಯಂತ ಮೌಲಿಕವಾದ ಸಂದೇಶವನ್ನು ತಲುಪಿಸುವುದರಲ್ಲಿಯೂ ಯಶಸ್ವಿಯಾಗಿದೆ.

೧. ರಜನಿಯ ಸಾವು ಆತ್ಮಹತ್ಯೆ ಅಲ್ಲ, ಅದು ಕೊಲೆ.

೨. ರಜನಿಯ ಸಾವು ಅವಳ ಅತ್ತೆಯ ಹೇಳಿಕೆಯಂತೆ ಬೆಳಿಗ್ಗೆ ೮ ರಿಂದ ೮.೩೦ರ ಒಳಗೆ ನಡೆದಿಲ್ಲ. ಅವಳ ಕೊನೆಯ ಊಟವಾದ ನಂತರ ೨-೩ ಗಂಟೆಗಳೊಳಗೆ ನಡೆದಿದೆ.

೩. ರಜನಿಯ ಸಾವು ವಿಧಿವೈದ್ಯ ತಜ್ಞ ಡಾ.ಹರೀಶ್ ಚಂದ್ರ ಅವರ ಹೇಳಿಕೆಯಂತೆ ಆಸ್ ಫಿಕ್ಸಿಯಾದಿಂದ ಸಂಭವಿಸಿದೆ.

೪. ರಜನಿಯ ಪತಿ ಕೆಲಸ ಮಾಡುವ ಸ್ಥಳದಿಂದ ರೇವಾಗ ಬಂದು ಕೊಲೆ ಮಾಡಿ ಸಿಧಿಗೆ ಹೋಗುವ ಸಾಧ್ಯತೆ ಇಲ್ಲದಿಲ್ಲ. ಏಕೆಂದರೆ ಇವೆರಡೂ ಸ್ಥಳಗಳ ಅಂತರ ಕೇವಲ ೯೦ ಕಿ.ಮೀ ಮತ್ತು ಪ್ರಯಾಣದ ಅವಧಿ ಕೇವಲ ಎರಡುಗಂಟೆ.

೫. ವಿಧಿವೈದ್ಯ ತಜ್ಞ ಡಾ.ಹರೀಶ್ ಚಂದ್ರ ಅವರ ವರದಿಯನ್ನು ಒಪ್ಪಿರುವುದರಿಂದ, ಒಬ್ಬ ವ್ಯಕ್ತಿ ಕೊಲೆಯನ್ನು ಮಾಡಲು ಸಾಧ್ಯವಿಲ್ಲ, ಅದಕ್ಕೆ ಇನ್ನೊಬ್ಬರ ಸಹಾಯದ ಅಗತ್ಯವಿದೆ.

ಮೇಲಿನ ಎಲ್ಲ ಅಂಶಗಳಿಗೆ ಸಂಬಂಧಿಸಿದಂತೆ ವಿಚಾರಣಾ ನ್ಯಾಯಾಲಯ ಹಾಗೂ ಉಚ್ಚನ್ಯಾಯಾಲಯಗಳಲ್ಲಿ ಒಮ್ಮತವಿದೆ. ಆದರೆ ವಿಚಾರಣಾ ನ್ಯಾಯಾಲಯ ಆರೋಪಿಗಳನ್ನು ಅಪರಾಧಿಗಳೆಂದು ತೀರ್ಮಾನಿಸಿ ಶಿಕ್ಷೆವಿಧಿಸಿದರೆ, ಉಚ್ಚನ್ಯಾಯಾಲಯ ಆರೋಪಿಗಳನ್ನು ನಿರ್ದೋಷಿಗಳೆಂದು ತೀರ್ಮಾನಿಸಿ ಖುಲಾಸೆ ಮಾಡಿದೆ. ಇದಕ್ಕೆ ಉಚ್ಚನ್ಯಾಯಾಲಯ ಕೊಡುವ ಕಾರಣ ಅವರ ಮೇಲೆ ಹೊರಿಸಲಾಗಿರುವ ಅಪರಾಧ ಸಂದೇಹಕ್ಕೆ ಆಸ್ಪದವಿಲ್ಲದಂತೆ ರುಜುವಾತಾಗಿಲ್ಲ ಎಂಬುದು. ಆದ್ದರಿಂದ ಸಂದೇಹದ ಲಾಭ ಆರೋಪಿಗಳಿಗೆ ದೊರೆಯಬೇಕು ಎಂಬುದು.

೧. ವಿನೋದ ಸಿಧಿಯಿಂದ ರೇವಾಕ್ಕೆ ಬಂದು ಹೋಗಿದ್ದಾನೆ ಎಂಬುದನ್ನು ಅಥವಾ ವಿನೋದ ಅಪರಾಧದ ಸ್ಥಳದಲ್ಲಿ ಇದ್ದ ಎಂಬುದನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ಪ್ರಾಸಿಕ್ಯೂಷನ್ ನವರು ರುಜುವಾತುಪಡಿಸಿಲ್ಲ. ಆದ್ದರಿಂದ ಅವನಿಗೆ ಸಂದೇಹದ ಲಾಭಪಡೆಯಬೇಕು.

೨. ಸರೋಜಿನ ಒಬ್ಬಾಕೆಯೇ ಅಪರಾಧವನ್ನು ಎಸಗಿರಲು ಸಾಧ್ಯವಿಲ್ಲ ಎಂಬುದನ್ನು ನ್ಯಾಯಾಲಯ ಒಪ್ಪುತ್ತದೆ. ಆದರೆ ಯಾರು ಕೊಲೆ ಮಾಡಿದರು ಎಂಬುದಕ್ಕೆ ನಿರ್ಧಾರಕ ಸಾಕ್ಷ್ಯವನ್ನು ಒದಗಿಸಲು ಪ್ರಾಸಿಕ್ಯೂಷನ್ ವಿಫಲವಾಗಿದೆ. ಆದ್ದರಿಂದ ಆಕೆಗೂ ಸಂದೇಹದ ಲಾಭ ದೊರೆಯಬೇಕು.

ಎಂಬುದು ಉಚ್ಚನ್ಯಾಯಾಲಯದ ಅಭಿಪ್ರಾಯ. ಆದರೆ ಸಂದೇಹದ ಲಾಭ ನೀಡಿದಾಗ ನ್ಯಾಯ ದೊರೆಯದೇ ಹೋಗುವ ಸಾಧ್ಯತೆ ಇದೆ ಎಂದು ನ್ಯಾಯಾಧೀಶರಿಗೆ ಮನದಟ್ಟಾದರೆ, ಅದಕ್ಕೆ ಕಾರಣಗಳನ್ನು ಅಭಿಲೇಖಿಸಿ ಅಂಥ ಸಾಕ್ಷ್ಯವನ್ನು ಅಪೀಲು ನ್ಯಾಯಾಲಯ ತಾನೆ ತೆಗೆದುಕೊಳ್ಳಬಹುದು. ಅಥವಾ ಮ್ಯಾಜಿಸ್ಟ್ರೇಟನು ತೆಗೆದುಕೊಳ್ಳುವಂತೆ ನಿರ್ದೇಶಿಸಬಹುದು. ಈ ಸಂದರ್ಭದಲ್ಲಿ ಉಚ್ಚನ್ಯಾಯಾಲಯ ಅಪೀಲು ನ್ಯಾಯಾಲಯವಾಗಿರುವುದರಿಂದ ಸೆಷನ್ಸ್ ನ್ಯಾಯಾಲಯಕ್ಕೆ ಹೆಚ್ಚಿನ ಸಾಕ್ಷ್ಯ ತೆಗೆದುಕೊಳ್ಳುವಂತೆ ನಿರ್ದೇಶಿಸಬಹುದಿತ್ತು. ಆದರೆ ಹೀಗೆ ಮಾಡದೆ ಉಚ್ಚನ್ಯಾಯಾಲಯ ಆರೋಪಿಗಳಿಗೆ ಸಂದೇಹದ ಲಾಭ ನೀಡಿ ದೋಷಮುಕ್ತರೆಂದು ತೀರ್ಪು ನೀಡಿಬಿಟ್ಟಿದೆ.

ಉಚ್ಚನ್ಯಾಯಾಲಯದ ಈ ತೀರ್ಪಿನ ವಿರುದ್ಧ ಹಾಕಿದ ಅಪೀಲಿನಲ್ಲಿ ಸರ್ವೋಚ್ಚ ನ್ಯಾಯಾಲಯ ಈ ಇಬ್ಬರು ಆರೋಪಿಗಳನ್ನು ಅಪರಾಧಿಗಳೆಂದು ತೀರ್ಮಾನಿಸಿ ಶಿಕ್ಷೆಗೆ ಗುರಿಪಡಿಸು ತೀರ್ಪುನೀಡಿದೆ. ಸನ್ನಿವೇಶಗಳ ತಾರ್ಕಿಕ ಜೋಡಣೆ ಹಾಗೂ ಲಭ್ಯಸಾಕ್ಷ್ಯಗಳ ವಿವರವಾದ ವಿಶ್ಲೇಷಣೆಗಳಿಂದ ಉಚ್ಚನ್ಯಾಯಾಲಯ ಎತ್ತಿದ ಸಂದೇಹಗಳನ್ನು ಸರ್ವೋಚ್ಚ ನ್ಯಾಯಾಲಯ ಪರಿಹರಿಸಿದೆ.

## ಮರಣಕಾಲದ ಹೇಳಿಕೆ

ವರದಕ್ಷಿಣೆಗೆ ಸಂಬಂಧಿಸಿದ ಸಾವುಗಳ ಪ್ರಕರಣಗಳಲ್ಲಿ 'ಮರಣ ಕಾಲದ ಹೇಳಿಕೆ'ಗಳು(Dying declaration) ಅಪರಾಧಿಗಳು ಯಾರು ಎಂದು ತೀರ್ಮಾನಕ್ಕೆ ಬರಲು ಅತಿಮುಖ್ಯವಾದ ಸಾಕ್ಷ್ಯವನ್ನೊದಗಿಸುತ್ತವೆ. ಮರಣ ಕಾಲದ ಹೇಳಿಕೆಗಳ ನೈಜತೆಯ ನಿರ್ಧಾರ ಒಬ್ಬ ವ್ಯಕ್ತಿಯನ್ನು ನಿರಪರಾಧಿಯನ್ನಾಗಿಸಬಹುದು ಇಲ್ಲವೆ, ಅಪರಾಧಿಯನ್ನಾಗಿಸಬಹುದು. 'ಮರಣಕಾಲದ ಹೇಳಿಕೆ'ಯ ಸಾಕ್ಷ್ಯಕ್ಕೆ ಅತಿ ಹೆಚ್ಚಿನ ಪ್ರಾಮುಖ್ಯತೆ ಬರುವುದು 'ಸಾವಿನ ಹೊಸ್ತಿಲಲ್ಲಿ ನಿಂತ ವ್ಯಕ್ತಿ ಸುಳ್ಳಾಡುವುದಿಲ್ಲ' ಎಂಬ ನಂಬಿಕೆ. ಭಾರತ ಸಾಕ್ಷ್ಯ ಅಧಿನಿಯಮದ ಮೇರೆಗೆ ಯಾವುದೇ ಕೇಳಿಕೆಯ ಸಾಕ್ಷ್ಯವನ್ನು ಪಾಟಿ ಸವಾಲಿನ ಮೂಲಕ ಪರೀಕ್ಷೆಗೆ ಒಳಪಡಿಸದಿದ್ದರೆ ಅದು ನಂಬಲರ್ಹವಾದ ಸಾಕ್ಷ್ಯವಾಗುವುದಿಲ್ಲ ಮತ್ತು ಆ ಕಾರಣಕ್ಕೆ ಅದು

ಅಂಗೀಕಾರಾರ್ಹವಲ್ಲ. ಇದು ಸಾಮಾನ್ಯ ನಿಯಮ. ಆದರೆ 'ಮರಣ ಕಾಲದ ಹೇಳಿಕೆಯ ಸಾಕ್ಷ್ಯ'ಕ್ಕೆ ಈ ನಿಯಮದಿಂದ ವಿನಾಯಿತಿ. ಮೃತ ವ್ಯಕ್ತಿಯು ಒಬ್ಬ ಸಾಕ್ಷಿಯ ಬಳಿ ಹೇಳಿದ ಮರಣ ಕಾಲದ ಹೇಳಿಕೆ, ಮೌಖಿಕವಿರಲಿ ಅಥವಾ ಲಿಖಿತದಲ್ಲಿರಲಿ. ಅದು ಸಾಕ್ಷ್ಯವಾಗಿ ಅಂಗೀಕಾರಾರ್ಹ. ಸಾಯಲಿರುವ ವ್ಯಕ್ತಿಯ ಹೇಳಿಕೆ ಹಾಗೂ ಅದನ್ನು ದೃಢಪಡಿಸುವ ಇತರ ಸಾಕ್ಷಿಗಳ ಹೇಳಿಕೆಗಳು ನ್ಯಾಯಾಲಯದ ಪರಿಶೀಲನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಬಿಟ್ಟರೆ, ಮರಣಕಾಲದ ಹೇಳಿಕೆ ಅತ್ಯಂತ ಮುಖ್ಯವಾದ ಸಾಕ್ಷ್ಯವಾಗುತ್ತದೆ. 'ಮರಣ ಕಾಲದ ಹೇಳಿಕೆ'ಯಲ್ಲಿ ಸತ್ಯವಿದೆಯೆಂದು ನ್ಯಾಯಾಲಯ ಮನಗಂಡರೆ, ಬೇರೆ ಯಾವುದೇ ಸಾಕ್ಷ್ಯಗಳ ಬೆಂಬಲವಿಲ್ಲದೆಯೂ, ಅದೊಂದೇ ಸಾಕ್ಷ್ಯವನ್ನು ಅವಲಂಬಿಸಬಹುದು. ನ್ಯಾಯಾಲಯಗಳು ಅನೇಕ ಪ್ರಕರಣಗಳಲ್ಲಿ 'ಮರಣ ಕಾಲದ ಹೇಳಿಕೆಯ' ಸಾಕ್ಷ್ಯಕ್ಕೆ ಅನ್ವಯಿಸುವ ಅನೇಕ ತತ್ತ್ವಗಳನ್ನು ನಿರೂಪಿಸಿವೆ. ಬೇರೆ ಬೇರೆ ಪ್ರಕರಣಗಳಲ್ಲಿ ಬೇರೆ ಬೇರೆ ನ್ಯಾಯಾಧೀಶರು ವಿಷದ ಪಡಿಸಿರುವ ತತ್ತ್ವಗಳ ಸಾರಾಂಶವನ್ನು ಈ ಮುಂದಿನಂತೆ ಮಂಡಿಸಬಹುದು.

೧. ಪೂರಕ ಸಾಕ್ಷ್ಯ ಅಥವಾ ಬೆಂಬಲಿಸುವ ಸಾಕ್ಷ್ಯವಿಲ್ಲದ ಹೊರತು ಮರಣ ಕಾಲದ ಹೇಳಿಕೆಯ ಸಾಕ್ಷ್ಯವನ್ನಾಧರಿಸಿ ನಿರ್ಧಾರ ಕೈಗೊಳ್ಳಬಾರದೆಂದು ಯಾವುದೇ ಕಾನೂನಾಗಲೀ ಅಥವಾ ವಿವೇಚನೆಯಾಗಲೀ ವಿಧಿಸುವುದಿಲ್ಲ.

೨. 'ಮರಣ ಕಾಲದ ಹೇಳಿಕೆ' ಪ್ರಾಮಾಣಿಕವಾದದ್ದು ಮತ್ತು ಸ್ವಯಿಚ್ಛೆಯಿಂದ ಮಾಡಲಾದದ್ದು ಎಂದು ನ್ಯಾಯಾಲಯಕ್ಕೆ ಮನದಟ್ಟಾದರೆ, ಯಾವುದೇ ಪೂರಕ ಸಾಕ್ಷ್ಯದ ಬೆಂಬಲವಿಲ್ಲದೆಯೇ ಅಪರಾಧ ನಿರ್ಣಯವನ್ನು ನ್ಯಾಯಾಲಯ ಮಾಡಬಹುದು.

೩. 'ಮರಣ ಕಾಲದ ಹೇಳಿಕೆ'ಯನ್ನು ನ್ಯಾಯಾಲಯ ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಬೇಕು ಮತ್ತು ಅಂಥ ಹೇಳಿಕೆಯನ್ನು ಬೇರೆಯವರು ಹೇಳಿಕೊಟ್ಟಿದುದರ, ಪ್ರಚೋದಿಸಿದುದರ ಅಥವಾ ಕಲ್ಪಿಸಿಕೊಂಡು ದುದರ ಪರಿಣಾಮವಾಗಿ ಮಾಡಿಲ್ಲ ಎಂಬುದನ್ನು ನ್ಯಾಯಾಲಯ ಖಚಿತ ಪಡಿಸಿಕೊಳ್ಳಬೇಕು. ಹಾಗೂ ಅಂಥ ಹೇಳಿಕೆಯನ್ನು ಮಾಡುವಂಥ ಮನಃಸ್ಥಿತಿಯನ್ನು ಹೊಂದಿದ್ದುದರ ಬಗ್ಗೆಯೂ ಖಚಿತಪಡಿಸಿ ಕೊಳ್ಳಬೇಕು.

೪. 'ಮರಣ ಕಾಲದ ಹೇಳಿಕೆ'ಯ ಬಗ್ಗೆ ಯಾವುದೇ ಅನುಮಾನವಿದ್ದರೂ, ಅದನ್ನು ಬೆಂಬಲಿಸುವ ಪೂರಕ ಸಾಕ್ಷ್ಯವಿಲ್ಲದೆ ನಿರ್ಧಾರ ಕೈಗೊಳ್ಳಬಾರದು.

೫. ಮೃತವ್ಯಕ್ತಿಗೆ ಪ್ರಜ್ಞೆ ಇಲ್ಲದಿದ್ದು, ಹೇಳಿಕೆ ನೀಡುವ ಸಾಧ್ಯತೆ ಇಲ್ಲದಿದ್ದಾಗ, ಆ ಬಗೆಗಿನ ಸಾಕ್ಷ್ಯವನ್ನು ತಿರಸ್ಕರಿಸಬೇಕು.

೬. ಮರಣಕಾಲದ ಹೇಳಿಕೆ ಖಚಿತವಾಗಿಲ್ಲದಿದ್ದರೆ, ಅಂಥ ಹೇಳಿಕೆಯೊಂದನ್ನೇ ಆಧರಿಸಿ ಅಪರಾಧ ನಿರ್ಣಯ ಮಾಡಬಾರದು.

೭. ಮರಣ ಕಾಲದ ಹೇಳಿಕೆ ಘಟನೆ ನಡೆದುದರ ಬಗೆಗಿನ ವಿವರಗಳನ್ನು ಒಳಗೊಂಡಿಲ್ಲ ಎಂಬ ಕಾರಣಕ್ಕೆ ಮಾತ್ರ ಅದನ್ನು ತಿರಸ್ಕರಿಸತಕ್ಕದ್ದಲ್ಲ.

೮. ಮರಣ ಕಾಲದ ಹೇಳಿಕೆ ತೀರ ಸಂಕ್ಷಿಪ್ತವಾಗಿದೆ ಎಂಬ ಕಾರಣಕ್ಕೆ ತಿರಸ್ಕರಿಸತಕ್ಕದಲ್ಲ. ಅದು ಸಂಕ್ಷಿಪ್ತವಾಗಿದೆ ಎಂಬುದೇ ಅದು ನಿಜವಾದದ್ದು ಎಂಬುದರ ಸೂಚಿಯಾಗಬಹುದು.

೯. ಮೃತ ವ್ಯಕ್ತಿ ಸಾಯುವ ಕಾಲದಲ್ಲಿ ಹೇಳಿಕೆ ನೀಡುವಾಗ, ಹೇಳಿಕೆ ನೀಡಲು ಯೋಗ್ಯವಾದ ಮನಃಸ್ಥಿತಿಯಲ್ಲಿದ್ದಳೆ ಎಂಬುದನ್ನು ಕಂಡುಕೊಳ್ಳಲು, ನ್ಯಾಯಾಲಯ ಸಾಮಾನ್ಯವಾಗಿ ವೈದ್ಯರ ವರದಿಯನ್ನು ಅವಲಂಬಿಸುತ್ತದೆ. ಆದರೆ ಮೃತವ್ಯಕ್ತಿ ಹೇಳಿಕೆ ನೀಡುವಂಥ ಮಾನಸಿಕ ಸ್ಥಿತಿಯಲ್ಲಿದ್ದಳು ಎಂದು ಪ್ರತ್ಯಕ್ಷ ಸಾಕ್ಷಿ ಸಾಕ್ಷ್ಯ ನೀಡಿದಲ್ಲಿ, ಅಂಥ ಸಾಕ್ಷ್ಯವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು.

೧೦. ಮರಣ ಕಾಲದ ಹೇಳಿಕೆ ಮತ್ತು ಪ್ರಾಸಿಕ್ಯೂಷನ್‌ನವರ ಹೇಳಿಕೆಗಳ ನಡುವೆ ವ್ಯತ್ಯಾಸವಿದ್ದರೆ ಅಂಥ ಹೇಳಿಕೆಯನ್ನು ಅವಲಂಬಿಸಿ ಅಪರಾಧ ನಿರ್ಣಯವನ್ನು ಮಾಡಬಾರದು.

ಮೃತ ವ್ಯಕ್ತಿಗಳ ಮರಣಕಾಲದ ಹೇಳಿಕೆಯನ್ನು ಒಂದಲ್ಲ ಒಂದು ಕಾರಣ ತೋರಿಸಿ ಸಾಕ್ಷ್ಯವನ್ನಾಗಿ ಪರಿಗಣಿಸದಿದ್ದರೆ ನ್ಯಾಯದೊರೆಯದೇ ಹೋಗುವ ಸಾಧ್ಯತೆಗಳಿರುತ್ತದೆ. ಏಕೆಂದರೆ, ಸಾಮಾನ್ಯವಾಗಿ ಅಪರಾಧಕ್ಕೆ ಬಲಿಯಾದವಳು ಮಾತ್ರವೇ ಏಕಮೇವ ಪ್ರತ್ಯಕ್ಷ ಸಾಕ್ಷಿಯಾಗಿರುತ್ತಾಳೆ.

ಸರ್ವೋಚ್ಚ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ಮರಣಕಾಲದ ಹೇಳಿಕೆಗಳನ್ನು ಮುಖ್ಯ ಸಾಕ್ಷ್ಯವನ್ನಾಗಿ ಪರಿಗಣಿಸುವಾಗ ಕೈಗೊಳ್ಳಬೇಕಾದ ಎಚ್ಚರಿಕೆಯನ್ನು ಹಾಗೆ ಪರಿಗಣಿಸದಿದ್ದಾಗ ನ್ಯಾಯ ದೊರೆಯದೇ ಹೋಗುವುದರ ಅಪಾಯವನ್ನೂ ಎತ್ತಿತೋರಿಸಿದೆ.

ಪಾಣಿಬೆನ್ -ವಿ-ಗುಜರಾತ್ ಸರ್ಕಾರ ((೧೯೯೨) ೨ ಎಸ್ ಸಿಸಿ ೪೭೪) ಪ್ರಕರಣದ ಮತ್ತೊಂದು ವಧು ದಹನದ ಈ ಪ್ರಕರಣದಲ್ಲಿ ಆರೋಪಿಗಳನ್ನು ವಿಚಾರಣಾ ನ್ಯಾಯಾಲಯ ಖುಲಾಸೆ ಮಾಡಿ ನೀಡಿದ ತೀರ್ಪನ್ನು ಉಚ್ಚನ್ಯಾಯಾಲಯ ವಿಪರ್ಯಯಗೊಳಿಸಿ ಆರೋಪಿಗಳು ಭಾರತ ದಂಡಸಂಹಿತೆಯ ೩೦೨ನೇ ಪ್ರಕರಣದ ಮೇರೆಗ ಕೊಲೆ ಅಪರಾಧಿಗಳೆಂದು ತೀರ್ಪು ನೀಡಿ ಅವರನ್ನು ಜೀವಾವಧಿ ಕಾರಾವಾಸ ಶಿಕ್ಷೆಗೆ ಗುರಿಪಡಿಸಿದೆ. ಉಚ್ಚನ್ಯಾಯಾಲಯದ ಈ ತೀರ್ಪನ್ನು ಪ್ರಶ್ನಿಸಿ ಸರ್ವೋಚ್ಚನ್ಯಾಯಾಲಯದಲ್ಲಿ ನಿರ್ಣೀತ ಅಪರಾಧಿಯಿಂದ ಅಪೀಲು ಸಲ್ಲಿಸಲಾಗಿದೆ.

ಈ ಪ್ರಕರಣದ ವಿವರಗಳನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು. ಬಾಯಿಕಾಂತಾ ಎಂಬಾಕೆ ೧೯೭೨ರಲ್ಲಿ ವಾಲ್ಜಿ ಸಾವ್ಜಿ ಎಂಬಾತನನ್ನು ವಿವಾಹವಾದಳು. ಈ ಪ್ರಕರಣದ ಆರೋಪಿ ಈತನ ತಾಯಿ, ಬಾಯಿಕಾಂತಾಳ ಅತ್ತೆ. ಮೊದಲಿನಿಂದಲೂ ಅತ್ತೆ ಸೊಸೆಯ ನಡುವೆ ಸೌಹಾರ್ದಯುತ ಸಂಬಂಧವಿರಲಿಲ್ಲ. ಅತ್ತೆಯ ಜೊತೆಯ ಜಗಳದಿಂದಾಗಿ ಬಾಯಿಕಾಂತಾ ತವರು ಮನೆಗೆ ಹೋದರೂ, ಅತ್ತೆ ಮಾವ ಇಬ್ಬರೂ ಅವಳ ತವರು ಮನೆಗೆ ಹೋಗಿ ಇನ್ನು ಮುಂದೆ ಜಗಳವಾಡುವುದಿಲ್ಲವೆಂದು ತಿಳಿಸಿ ಹೇಳಿ ಸೊಸೆಯನ್ನು ಕರೆತಂದರು. ೧೯೭೭ರ ಮೇ ೭ರಂದು ಮಧ್ಯರಾತ್ರಿ ಸು.೧೨ ಗಂಟೆಯಲ್ಲಿ ಒಬ್ಬಳೇ ಮಲಗಿದ್ದ ಬಾಯಿಕಾಂತಾಳ ಮೇಲೆ ಅವಳ ಅತ್ತೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದಳು. ಬಾಯಿಕಾಂತ ನೆರವಿಗಾಗಿ ಕೂಗಿಕೊಂಡಾಗ ಅದನ್ನು ಕೇಳಿ ಅವಳ ಗಂಡ ಹಾಗೂ ಇತರರು ಧಾವಿಸಿ ಬೆಂಕಿಯನ್ನು ಆರಿಸಿ ಅವಳನ್ನು ಆಸ್ಪತ್ರೆಗೆ ಗಾಡಿಯಲ್ಲಿ ಒಯ್ದರು. ಹಾಗೆ ಅವಳನ್ನು ಆಸ್ಪತ್ರೆಗೆ ಕರೆದೊಯ್ಯುವಾಗ ತನ್ನ ಅತ್ತೆಯೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದುದಾಗಿ ತಿಳಿಸಿದಳು. ಅವಳನ್ನು ರಾಜಕೋಟ್ ಸರ್ಕಾರೀ ಆಸ್ಪತ್ರೆಗೆ ಸೇರಿಸಲಾಯಿತು. ಆಸ್ಪತ್ರೆಯಲ್ಲಿ ಕರ್ತವ್ಯದ ಮೇಲಿದ್ದ ಪೋಲೀಸು ಪೇದೆ ಬಾಯಿಕಾಂತಾಳನ್ನು ಸುಟ್ಟಗಾಯಗಳಿಗಾಗಿ ಆಸ್ಪತ್ರೆಗೆ ಕರೆತರಲಾಗಿದೆ ಎಂಬ ಮಾಹಿತಿಯನ್ನು ತಾಲೂಕು ಪೋಲೀಸು ಠಾಣೆಗೆ ತಿಳಿಸಿದ. ಪೋಲೀಸುಠಾಣೆಯ ಪ್ರಭಾರದಲ್ಲಿದ್ದ ಮುಖ್ಯಪೇದೆ ಖಾಜಿ ಉಕಾಬಾಯಿ ಪೋಲೀಸು ಠಾಣೆಯ ಡೈರಿಯಲ್ಲಿ ಈ ಬಗ್ಗೆ ನಮೂದಿಸಿ ಮುಖ್ಯ ಪೇದೆ ಅಭಲ್ ಮಮೈಯಾ ನಿಗೆ ಸ್ಥಳಕ್ಕೆ ಹೋಗಿ ವಿಚಾರಣೆ ನಡೆಸುವಂತೆ ತಿಳಿಸಿದ. ಅವನ ಬಳಿಯೂ ತನ್ನ ಅತ್ತೆಯೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿಹಚ್ಚಿದಳು ಎಂದು ತಿಳಿಸಿದಳು. ಇದನ್ನು ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟರಿಗೆ ತಿಳಿಸಿ, ಮೃತಳ ಹೇಳಿಕೆಯ ಮೇರೆಗೆ ದೂರನ್ನು ದಾಖಲ್ಮಾಡಿಕೊಂಡು ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಮ್ಯಾಜಿಸ್ಟ್ರೇಟರು ೧೯೭೭ರ ಮೇ ೧೮ರಂದು ಬೆಳಿಗ್ಗೆ ಸು. ೭-೧೦ಕ್ಕೆ ಆಸ್ಪತ್ರೆಗೆ ಬಂದು ಬಾಯಿಕಾಂತಾಳಾ ಹೇಳಿಕೆಯನ್ನು ದಾಖಲಿಸಿಕೊಂಡರು. ಅವರ ಬಳಿಯೂ, ತನ್ನ ಅತ್ತೆಯೇ ತನಗೆ ಬೆಂಕಿ ಹಚ್ಚಿದುದಾಗಿ ಅವಳು ತಿಳಿಸಿದಳು. ರಾಜಕೋಟ್ ಪೊಲೀಸ್ ಠಾಣೆಯ ಪೋಲೀಸ್ ಸಬ್ ಇನ್ ಸ್ಪೆಕ್ಟರ್ ತನಿಖೆ ಕೈಗೊಂಡರು. ಬಾಯಿಕಾಂತಾಳ ಹೇಳಿಕೆಯನ್ನು ೧೯೭೭ರ ಮೇ ೧೯ರಂದು ಪಡೆದರು. ಆಗಲೂ ಅವಳು ತನ್ನ ಅತ್ತೆ ತನ್ನ ಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿದುದಾಗಿ ತಿಳಿಸಿದಳು. ಸಬ್ ಇನ್‌ಸ್ಪೆಕ್ಟರ್ ಆರೋಪಿ ಯನ್ನು ದಸ್ತಗಿರಿ ಮಾಡಿದರು. ಬಾಯಿಕಾಂತ ೧೯೭೭ರ ಮೇ ೨೦ರಂದು ಕೊನೆಯುಸಿರೆಳೆದಳು.

ಅಗತ್ಯ ತನಿಖೆಯನ್ನು ನಡೆಸಿ, ಆರೋಪಪಟ್ಟಿಯನ್ನು ತಯಾರಿಸಿ ನ್ಯಾಯಾಲಯಕ್ಕೆ ಸಲ್ಲಿಸಿದ ನಂತರ, ರಾಜಕೋಟದ ಸತ್ರ ನ್ಯಾಯಾಧೀಶರು ಈ ಪ್ರಕರಣದ ವಿಚಾರಣೆ ನಡೆಸಿದರು. ಸಾಕ್ಷ್ಯಗಳನ್ನು ಪರಿಶೀಲಿಸಿ, ಸತ್ರ ನ್ಯಾಯಾಧೀಶರು ಈ ಸಾವು ಆತ್ಮಹತ್ಯೆಯಿಂದಾಗಿ ಸಂಭವಿಸಿದುದಿರಬೇಕು ಅಥವಾ ಬೇರೆ ಯಾರೋ

ಅವಳಿಗೆ ಬೆಂಕಿಹಚ್ಚಿರಬೇಕು ಎಂಬ ನಿರ್ಧಾರಕ್ಕೆ ಬಂದರು. ತನ್ನ ಅತ್ತೆಯ ಬಗ್ಗೆ ಅವಳಿಗೆ ಅಸಮಾಧಾನವಿದ್ದುದರಿಂದ ಮರಣ ಕಾಲದ ಹೇಳಿಕೆಯಲ್ಲಿ ಅವಳ ಬಗ್ಗೆ ಆರೋಪ ಹೊರಿಸಿರಬೇಕು ಮತ್ತು ಮರಣ ಕಾಲದ ಹೇಳಿಕೆಗಳು ಅಂತರ್ಗತ ದೌರ್ಬಲ್ಯದಿಂದ ಕೂಡಿರುವುದರಿಂದ ಅದನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ ಎಂದು ಅಭಿಪ್ರಾಯಪಟ್ಟು, ಆರೋಪಿಯೇ ಮೃತಳಿಗೆ ಬೆಂಕಿ ಹಚ್ಚಿ ಕೊಂದಿದ್ದಾಳೆಂಬುದನ್ನು ರುಜುವಾತುಪಡಿಸುವಲ್ಲಿ ಪ್ರಾಸಿಕ್ಯೂಷನ್ ವಿಫಲಗೊಂಡಿದೆ. ಆದ್ದರಿಂದ ಆರೋಪಿ ನಿರಪರಾಧಿ ಎಂದು ತೀರ್ಮಾನಿಸಿ ಆರೋಪಿಯನ್ನು ಖುಲಾಸೆ ಮಾಡಿತು.

ಈ ಖುಲಾಸೆಯ ಆದೇಶವನ್ನು ಪ್ರಶ್ನಿಸಿ ರಾಜ್ಯ ಸರ್ಕಾರ ಗುಜರಾತ್ ರಾಜ್ಯದ ಉಚ್ಚನ್ಯಾಯಾಲಯದಲ್ಲಿ ಅಪೀಲು ಹೂಡಿತು. ಉಚ್ಚನ್ಯಾಯಾಲಯದ ವಿಭಾಗೀಯ ಪೀಠ ಪ್ರಕರಣದ ವಿಚಾರಣೆಯನ್ನು ಕೈಗೆತ್ತಿಕೊಂಡು ಮರಣ ಕಾಲದ ಹೇಳಿಕೆಗಳನ್ನು ದಾಖಲುಮಾಡಿಕೊಂಡಿರುವ ಸನ್ನಿವೇಶಗಳನ್ನು ಪರಿಶೀಲಿಸಿತು.

ಬಾಯಿಕಾಂತಾಳನ್ನು ಸುಟ್ಟ ಪರಿಸ್ಥಿತಿಯಲ್ಲಿ ಗಾಡಿಯಲ್ಲಿ ಆಸ್ಪತ್ರೆಗೆ ಒಯ್ಯುವಾಗ ಅವಳು ನೀಡಿದ ಮರಣ ಕಾಲದ ಹೇಳಿಕೆ ಘಟನೆ ಹೇಗೆ ನಡೆಯಿತೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಎಕ್ಸಿಕ್ಯೂಟೀವ್ ಮ್ಯಾಜಿಸ್ಟ್ರೇಟರು ದಾಖಲುಮಾಡಿಕೊಂಡ ಮರಣಕಾಲದ ಹೇಳಿಕೆ ಪ್ರಶ್ನೋತ್ತರ ರೂಪದಲ್ಲಿದ್ದು, ಅವಳಿಗೆ ಹಾಗೆ ಹೇಳುವಂತೆ ಹೇಳಿಕೊಟ್ಟ ಅಥವಾ ಪ್ರೇರೇಪಿಸಿದ ಸಾಧ್ಯತೆಗಳು ಇಲ್ಲ ಮತ್ತು ಅವಳು ಅಂಥ ಹೇಳಿಕೆ ನೀಡುವ ಸ್ಥಿತಿಯಲ್ಲಿದ್ದಳು. ಅಲ್ಲದೆ ಮೃತಳ ತಂದೆತಾಯಿಯರು, ಅವಳು ಎರಡು ಬಾರಿ ಹೇಳಿಕೆ ನೀಡಿದ ನಂತರ ಆಸ್ಪತ್ರೆಯನ್ನು ತಲುಪಿದುದರಿಂದ ಅವರು ಅವಳಿಗೆ ಹೇಳಿಕೊಡುವ ಸಾಧ್ಯತೆಯೂ ಇಲ್ಲ ಮತ್ತು ಅವಳು ತನ್ನ ತಂದೆ ಜಾದವ್ ಬಳಿಯಲ್ಲಿಯೂ ತನ್ನ ಅತ್ತೆಯೇ ತನಗೆ ಬೆಂಕಿಹಚ್ಚಿದುದಾಗಿ ಹೇಳಿಕೆ ನೀಡಿದ್ದಾಳೆ.

ಈ ಪ್ರಕರಣದಲ್ಲಿ ಮೃತಳು ನೀಡಿರುವ ಮರಣ ಕಾಲದ ಹೇಳಿಕೆಗಳು, ಮರಣ ಕಾಲದ ಹೇಳಿಕೆಯನ್ನು ನಂಬಲರ್ಹ ಸಾಕ್ಷ್ಯವೆಂದು ಪರಿಗಣಿಸಲು ಅವು ಹೊಂದಿರಬೇಕೆಂದು ಸರ್ವೋಚ್ಚ ನ್ಯಾಯಾಲಯ ವಿವಿಧ ಪ್ರಕರಣಗಳಲ್ಲಿ ತೀರ್ಪುನೀಡುವ ಸಂದರ್ಭಗಳಲ್ಲಿ ವಿಧಿಸಿರುವ ಲಕ್ಷಣಗಳಿಗೆ ಅನುಗುಣವಾಗಿಯೇ ಇದೆ. ಆದ್ದರಿಂದ ಈ ಪ್ರಕರಣದಲ್ಲಿ ಬಾಯಿಕಾಂತಳ ಮರಣಕಾಲದ ಹೇಳಿಕೆಗಳು ಆರೋಪಿಯನ್ನು ಅಪರಾಧಿಯನ್ನಾಗಿಸಲು ಬಲವಾದ ಸಾಕ್ಷ್ಯಗಳಾಗಿವೆ ಎಂಬ ಉಚ್ಚನ್ಯಾಯಲಯದ ಅಭಿಪ್ರಾಯವನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದು ವಿಚಾರಣಾ ನ್ಯಾಯಾಲಯ ತೀರ್ಮಾನಕ್ಕೆ ಬರುವಲ್ಲಿ ತಪ್ಪಿದೆ ಎಂದು ಅಭಿಪ್ರಾಯಪಟ್ಟಿದೆ.

ವಿಚಾರಣಾ ನ್ಯಾಯಾಲಯ ಬಾಯಿಕಾಂತಾಳ ಸಾವನ್ನು ಆತ್ಮಹತ್ಯೆಯಿರಬಹುದೆಂದು ಪರಿಗಣಿಸಲು ಯಾವುದೇ ಕಾರಣವಿರಲಿಲ್ಲ ಎಂಬುದನ್ನು ವಿಶ್ಲೇಷಿಸಿದೆ. ಈ ಅಧ್ಯಯನಕ್ಕೆ ಈ ಅಂಶ ಮುಖ್ಯವಾಗುತ್ತದೆ.

ಸರಿಯಾದ ಸಾಕ್ಷ್ಯಾಧಾರಗಳಿದ್ದೂ, ತಪ್ಪು ವಿಶ್ಲೇಷಣೆ ಅಥವಾ ಉದಾರ ನಿಲುವಿನಿಂದಾಗಿ ಮಹಿಳೆಯರ ವಿರುದ್ಧ ಅತ್ಯಂತ ಘೋರವಾದ ಮತ್ತು ಹೇಯವಾದ ಅಪರಾಧವನ್ನೆಸಗಿಯೂ ಕಾನೂನಿನ ಬಿಗಿಮುಷ್ಟಿಯಿಂದ ತಪ್ಪಿಸಿಕೊಂಡು ಎಲ್ಲರಂತೆ ಮತ್ತೊಮ್ಮೆ ಸುಖ ಜೀವನ ನಡೆಸಲು ಅವಕಾಶವಾದರೆ, ಅದು ಕಾನೂನಿನ ಅತ್ಯಂತ ಶೋಚನೀಯ ವೈಫಲ್ಯ. ಅಲ್ಲದೆ, ಜನ ನ್ಯಾಯವ್ಯವಸ್ಥೆಯಲ್ಲಿಯೇ ವಿಶ್ವಾಸವನ್ನು ಕಳೆದುಕೊಂಡು ಬಿಡುತ್ತಾರೆ.

ಈ ಪ್ರಕರಣದಲ್ಲಿ ತನ್ನ ಅತ್ತೆಯ ಜೊತೆ ತನಗೆ ವೈಮನಸ್ಯವಿದೆ ಎಂಬ ಕಾರಣ ಮಾತ್ರದಿಂದಲೇ ತನ್ನನ್ನು ಪ್ರೀತಿಸುವ ಗಂಡ ಮತ್ತು ಎಳೆಯ ಮಗುವನ್ನು ಬಿಟ್ಟು ಯಾವ ಮಹಿಳೆಯೂ ಆತ್ಮಹತ್ಯೆಗೆ ಪ್ರಯತ್ನಿಸುವುದಿಲ್ಲ ಎಂಬ ಉಚ್ಚನ್ಯಾಯಾಲಯದ ತರ್ಕವನ್ನು ಸರ್ವೋಚ್ಚನ್ಯಾಯಾಲಯ ಪೂರ್ಣವಾಗಿ ಒಪ್ಪಿಕೊಂಡಿದೆ.

ಮರಣಕಾಲದ ಹೇಳಿಕೆ ಪ್ರಾಮಾಣಿಕವಾದದ್ದು, ಸ್ವಯಿಚ್ಛೆಯಿಂದ ಮಾಡಿದುದು ಎಂಬುದು ನ್ಯಾಯಾಲಯಕ್ಕೆ ಮನದಟ್ಟಾದರೆ ಬೇರಾವುದೇ ಪೂರಕ ಸಾಕ್ಷ್ಯಗಳಿಲ್ಲದಿದ್ದರೂ ಅದೊಂದನ್ನೇ ಆಧರಿಸಿ ಅಪರಾಧ ನಿರ್ಣಯ ಮಾಡಬಹುದು ಎಂಬ ತತ್ತ್ವವನ್ನು ಆಧರಿಸಿ ಈ ಪ್ರಕರಣದಲ್ಲಿ ಉಚ್ಚನ್ಯಾಯಾಲಯ ನೀಡಿದ ತೀರ್ಪನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿಯಿತು.

**ಪೊಲೀಸ್ ತನಿಖೆ**

ವರದಕ್ಷಿಣೆಯ ಅನೇಕ ಪ್ರಕರಣಗಳಲ್ಲಿ ಅಪರಾಧ ಸಾಬೀತಾಗದೆ ಆರೋಪಿಗಳೂ ತಪ್ಪಿಸಿಕೊಳ್ಳುವುದಕ್ಕೆ ಕಾರಣ ಅಪರಾಧ ನಡೆದ ಕೂಡಲೇ ತೆಗೆದುಕೊಳ್ಳಬೇಕಾದ ಹೇಳಿಕೆಗಳನ್ನು ಪಡೆಯುವಲ್ಲಿನ ವಿಳಂಬ, ತನಿಖೆಯ ನಿಧಾನಗತಿ ಮತ್ತು ಈ ಎಲ್ಲ ಹಂತಗಳಲ್ಲಿಯೂ, ಇಂಥ ಅತಿ ಹೇಯ ಹಾಗೂ ಘೋರ ಅಪರಾಧದ ಬಗ್ಗೆ ಕಂಡುಬರುವ ಸಂವೇದನಾರಾಹಿತ್ಯತೆ

ವರದಕ್ಷಿಣೆಯ ಅನೇಕ ಪ್ರಕರಣಗಳಲ್ಲಿ ಈ ಬಗ್ಗೆ ತೀರ್ಪುನೀಡುತ್ತಾ ಇಂಥ ಮನೋಭಾವದ ಬಗ್ಗೆ ನ್ಯಾಯಾಧೀಶರುಗಳು ಖೇದ ವ್ಯಕ್ತಪಡಿಸಿದ್ದಾರೆ, ಆಕ್ರೋಶ ತೋರಿದ್ದಾರೆ ಮತ್ತು ತನಿಖಾಧಿಕಾರಿಗಳ ಕಾರ್ಯವೈಖರಿಯ ಬಗ್ಗೆ ಛೀಮಾರಿ ಹಾಕಿದ್ದಾರೆ.

ಆದರೆ ಸಂಜ್ಞೇಯ ಅಪರಾಧಗಳನ್ನು[2] ತನಿಖೆ ಮಾಡಲು ಪೊಲೀಸರಿಗಿರುವ ಅಧಿಕಾರಗಳ ಮೇಲೆ ಮ್ಯಾಜಿಸ್ಟ್ರೇಟರಿಗೆ ಯಾವುದೇ ನಿಯಂತ್ರಣವಿಲ್ಲ. ಪೊಲೀಸರು ತನಿಖೆ ನಡೆಸಬಾರದೆಂದು ನಿರ್ಧರಿಸಿದ ಪ್ರಕರಣಗಳಿಗೆ ಸಂಬಂಧಿಸಿದಂತೆ ಮಾತ್ರ ಮ್ಯಾಜಿಸ್ಟ್ರೇಟರು ಮಧ್ಯಪ್ರವೇಶಿಸಬಹುದು ಮತ್ತು ತನಿಖೆ ನಡೆಸುವಂತೆ ಆದೇಶಿಸಬಹುದು. ಅಥವಾ ತನಗೆ ಅಧೀನವಾದ ಮ್ಯಾಜಿಸ್ಟ್ರೇಟನಿಗೆ ಆ ಪ್ರಕರಣದ ಬಗ್ಗೆ

ವಿಚಾರಣೆ ನಡೆಸುವಂತೆ ನಿರ್ದೇಶಿಸಬಹುದು. ಸಂಜ್ಞೇಯ ಅಪರಾಧ ಘಟಿಸಿದೆ ಎಂದು ಅನುಮಾನ ಬಂದ ಎಲ್ಲ ಪ್ರಕರಣಗಳ ಬಗ್ಗೆ ತನಿಖೆ ಕೈಗೊಳ್ಳಲು ಪೊಲೀಸರಿಗೆ ಅಭಾದಿತ ಅಧಿಕಾರವನ್ನು ದಂಡ ಪ್ರಕ್ರಿಯಾ ಸಂಹಿತೆ ನೀಡಿದ್ದರೂ ಸಹ, ಪೊಲೀಸು ತನಿಖೆ ಸರಿಯಾಗಿ ನಡೆಯುತ್ತಿಲ್ಲವೆಂದು ಅಥವಾ ಅನುಚಿತವಾಗಿ ವಿಳಂಬವಾಗುತ್ತಿದೆಯೆಂದು ಫಿರ್ಯಾದುದಾರನು ಭಾವಿಸಿದರೆ ಭಾರತದ ಸಂವಿಧಾನದ ೨೨೬ನೇ ಅನುಚ್ಛೇದದ ಮೇರೆಗೆ ಉಚ್ಚನ್ಯಾಯಾಲಯಕ್ಕೆ ಅಥವಾ ೩೨ನೇ ಅನುಚ್ಛೇದದ ಮೇರೆಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿಸಲ್ಲಿಸಬಹುದು.

ಪಟೇಲ್ ಲೀಲಾಭಾಯಿ ಅಂಬಾಲಾಲ್ ಮತ್ತು ಇತರರು -ವಿ ಪಟೇಲ್ ಕಾನುಭಾಯಿ ಮಫತ್ ಲಾಲ್ ಮತ್ತು ಇತರರು (೧೯೮೪ ಕ್ರಿ.ಲಾ.ಜ ೧೮೯೮) ಪ್ರಕರಣ ಪೊಲೀಸರ ಅದಕ್ಷ ತನಿಖೆಗೆ ಒಂದು ಉದಾಹರಣೆ

ಈ ಪ್ರಕರಣದಲ್ಲಿ ದೂರು ನೀಡಿದ ವ್ಯಕ್ತಿ ಈ ಮುಂದಿನ ಅಂಶಗಳನ್ನು ತಿಳಿಸಿದ್ದ

೧. ತನ್ನ ತಂಗಿ ಅಸಹಜವಾಗಿ ಮರಣಹೊಂದಿದ್ದರೂ ಸಹ ಅವಳು ಕಾಲರಾದಿಂದ ಬಳಲುತ್ತಿದ್ದಾಳೆಂಬ ಸುಳ್ಳು ಮಾಹಿತಿಯನ್ನು ತನಗೆ ಕೊಡಲಾಗಿತ್ತು.

೨. ತನ್ನ ತಂಗಿಗೆ, ಅವಳು ಪ್ರಜ್ಞೆ ತಪ್ಪುವವರೆಗೆ ಯಾವುದೇ ವೈದ್ಯಕೀಯ ಚಿಕಿತ್ಸೆಯನ್ನು ಕೊಡಲಿಲ್ಲ.

೩. ಅವಳಿಗೆ ಚಿಕಿತ್ಸೆ ನೀಡಿದ ವೈದ್ಯರ ಹೇಳಿಕೆಗಳನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ. ಹಾಗೂ ಅವರಿಂದ ಮಾಹಿತಿಯನ್ನು ಪಡೆಯಲು ಸಹಜವಾದ ಪ್ರಶ್ನೆಗಳನ್ನು ಸಹ ಕೇಳಿಲ್ಲ.

೪. ಅವಳನ್ನು ಸರ್ಕಾರೀ ಆಸ್ಪತ್ರೆಗೂ ಒಯ್ದಿಲ್ಲ.

೫. ಶವದ ಮರಣೋತ್ತರ ಪರೀಕ್ಷೆಯನ್ನೂ ಮಾಡಲಾಗಿಲ್ಲ.

ಇಂಥ ಒಂದು ದೂರನ್ನು ಬರಹದಲ್ಲಿ ನೀಡಿದಾಗ ಭಾರತ ದಂಡ ಸಂಹಿತೆಯ ೩೦೨ನೇ ಪ್ರಕರಣದ ಮೇರೆಗೆ ದೂರನ್ನು ದಾಖಲು ಮಾಡಿಕೊಳ್ಳಬೇಕು ಮತ್ತು ಕೊಲೆಮಾಡಿರಬಹುದೆಂದು ಅನುಮಾನಿಸಿ ತನಿಖೆ ಕೈಗೊಳ್ಳಲು ಮೇಲಿನ ಕಾರಣಗಳು ಸಮರ್ಥನೆ ನೀಡುತ್ತದೆ. ಈ ಹಂತದಲ್ಲಿ ಪ್ರತಿಯೊಂದನ್ನು ಮತ್ತು ಪ್ರತಿಯೊಬ್ಬರನ್ನೂ ಅನುಮಾನಿಸಿ, ಅನುಮಾನಗಳನ್ನು ನಿವಾರಿಸಿಕೊಳ್ಳುತ್ತಾ ಮತ್ತು ತನಿಖೆಯ ಪ್ರಕ್ರಿಯೆಯಲ್ಲಿ ಹೊಸ ಸಂದೇಹಗಳನ್ನು ಹುಟ್ಟುಹಾಕಿದ ವಸ್ತುಗಳನ್ನು ಹಾಗೂ ವ್ಯಕ್ತಿಗಳನ್ನು ತನಿಖೆಗೊಳಪಡಿಸುತ್ತಾ ನಿರ್ಣಯಕ್ಕೆ ಬರುವುದು ತನಿಖೆಯ ಕ್ರಮ. ಆದರೆ ಈ ಪ್ರಕರಣದಲ್ಲಿ ಪೊಲೀಸರು ದೂರನ್ನು ದಾಖಲು ಮಾಡಿಕೊಂಡರೂ, ತನಿಖೆಯನ್ನು ಇದು ಆತ್ಮಹತ್ಯೆಯಿರಬಹುದು ಎಂದು ಪೂರ್ವಭಾವನೆಯಿಂದಲೇ

ಪ್ರಾರಂಭಿಸಿರುವುದಲ್ಲದೆ, ದೂರು ನೀಡಿದವನೂ ಸಹ ಅದು ಆತ್ಮಹತ್ಯೆಯಿರಬಹುದೇ ಎಂದು ಶಂಕಿಸುವಂತೆ ಮಾಡಲು ಪ್ರಯತ್ನಿಸಿದ್ದಾರೆ.

ಈ ತನಿಖೆಯಲ್ಲಿ, ಮೃತಳಿಗೆ ಚಿಕಿತ್ಸೆ ನೀಡಿದ ವೈದ್ಯರನ್ನು ಪ್ರಶ್ನಿಸಿಲ್ಲ. ರೋಗ ಚಿಹ್ನೆಗಳೇನಿತ್ತು, ಅವಳನ್ನು ಕರೆತಂದಾಗ ಹೇಳಿದ ಕಾರಣಗಳೇನು, ಅವಳು ವಿಷ ಕುಡಿದು ಪ್ರಜ್ಞೆ ತಪ್ಪಿದ್ದಾಳೆಂದು ತಿಳಿದು ತಾನು ಮೂರು ಚುಚ್ಚುಮದ್ದುಗಳನ್ನು ಕೊಟ್ಟಾದುದಾಗಿ ತಿಳಿಸಿದ ವೈದ್ಯರು ಅದನ್ನು ಪೊಲೀಸರಿಗೆ ತಿಳಿಸಲಿಲ್ಲವೇಕೆ ಎಂಬಂಥ ಸಹಜವಾಗಿ ಮೂಡುವ ಪ್ರಶ್ನೆಗಳನ್ನು ಸಹ ತನಿಖಾಧಿಕಾರಿಗಳು ವೈದ್ಯರನ್ನು ಕೇಳಿಲ್ಲ. ವೈದ್ಯರು ರೋಗಿಯನ್ನು ಸರ್ಕಾರೀ ಆಸ್ಪತ್ರೆಗೆ ಕರೆದೊಯ್ಯುವಂತೆ ತಿಳಿಸಿದ್ದರೂ, ಅವಳ ಬಂಧುಗಳು ಅವಳನ್ನು ಸರ್ಕಾರೀ ಆಸ್ಪತ್ರೆಗೆ ಕರೆದೊಯ್ದಿಲ್ಲ. ಆ ನಂತರ ಇನ್ನೊಬ್ಬರು ಖಾಸಗಿ ವೈದ್ಯರಲ್ಲಿಗೆ ಕರೆದೊಯ್ದಿದ್ದಾರೆ. ಅವರು ಸಿವಿಲ್ ಆಸ್ಪತ್ರೆಗೆ ಹೋಗುವಂತೆ ಶವದ ಮರಣೋತ್ತರ ಪರೀಕ್ಷೆ ಮಾಡಿಸುವಂತೆ ತಿಳಿಸಿದ್ದರೂ ಮರಣೋತ್ತರ ಪರೀಕ್ಷೆಯನ್ನು ಮಾಡಿಸಿಲ್ಲ ಏಕೆ ಎಂಬುದನ್ನು ಪ್ರಶ್ನಿಸಿಲ್ಲ. ಅಲ್ಲದೆ ವಿವರಗಳನ್ನು ತಿಳಿಯಲು ಈ ವೈದ್ಯರನ್ನು ಸಹ ಪ್ರಶ್ನಿಸಿಲ್ಲ. ಹೀಗಾಗಿ ತನಿಖೆಯಲ್ಲಾಗಲೀ, ಪ್ರಶ್ನಿಸುವುದರಲ್ಲಾಗಲೀ ಸತ್ಯವನ್ನು ಹೊರತರುವ ಪ್ರಯತ್ನವನ್ನು ಮಾಡಿಯೇ ಇಲ್ಲ ಎಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗುತ್ತದೆ. ಅಲ್ಲದೆ ಆ ಸಾವು ಆತ್ಮಹತ್ಯೆ ಎಂಬ ಪೂರ್ವಭಾವನೆಯಿಂದ ಮತ್ತು ಹಾಗೆಂದು ರುಜುವಾತುಪಡಿಸುವ ಸಲುವಾಗಿ ಅಗತ್ಯವಾದ ಸಾಕ್ಷ್ಯಗಳ ಶೋಧನೆಯಲ್ಲಿಯೇ ತೊಡಗಿದ್ದರು ಎಂಬುದೂ ಸ್ಪಷ್ಟವಾಗುತ್ತದೆ.

ಯಾವುದೇ ಅಸಹಜ ಸಾವಿನ ತನಿಖೆಯನ್ನು ಅದು ಆತ್ಮಹತ್ಯೆಯಿರಬಹುದು ಎಂಬ ಪೂರ್ವಭಾವನೆಯಿಂದ ಪ್ರಾರಂಭಿಸುವ ಕ್ರಮವನ್ನು ತೊರೆಯಬೇಕು ಎಂದು ಸರ್ವೋಚ್ಚನ್ಯಾಯಾಲಯ ಒಂದು ಪ್ರಕರಣದಲ್ಲಿ ಅಭಿಪ್ರಾಯಪಟ್ಟಿದೆ. ಅಲ್ಲದೆ, ಅತ್ಯಂತ ಗುರುತರವಾದ ಕಾರಣ ಹಾಗೂ ಒತ್ತಡವಿದ್ದ ಹೊರತು ಯಾರೂ ಸಾಮಾನ್ಯವಾಗಿ ಆತ್ಮಹತ್ಯೆಗೆಳಸುವುದಿಲ್ಲ ಮತ್ತು ಪ್ರತಿಯೊಂದು ಆತ್ಮಹತ್ಯೆಯ ಹಿಂದೆಯೂ ಅತ್ಯಂತ ಬಲವಾದ ಒಂದು ಪ್ರೇರಣೆ ಇರುತ್ತದೆ. ತನಿಖೆಯಲ್ಲಿ ಅಂಥ ಪ್ರೇರಣೆ ಇತ್ತು ಎಂಬುದನ್ನು ಮೇಲ್ನೋಟಕ್ಕೆ ಸಾಬೀತುಪಡಿಸುವ ಅಂಶಗಳನ್ನು ದಾಖಲುಮಾಡಬೇಕು ಎಂದು ಅಭಿಪ್ರಾಯಪಟ್ಟಿದೆ.

ಮತ್ತೊಂದು ಪ್ರಕರಣದಲ್ಲಿ(ಖಿಮಿಬೆಹನ್ -ವಿ- ರಾಜ್ಯ ಮತ್ತು ಮತ್ತೊಬ್ಬ (೧೯೯೨)(೨) ಕ್ರೈಮ್ಸ್, ೪೪೯) ಅತ್ತೆಯ ಮನೆಯಲ್ಲಿ ಬೆಂಕಿಹಚ್ಚುವ ಮೂಲಕ ಠಾಸಿಲ್ ಬೆಹನ್‌ಳ ವರದಕ್ಷಿಣೆಗೆ ಸಾವಿಗೆ ಕಾರಣನಾಗಿದ್ದಾನೆಂದು ಪ್ರತಿವಾದಿಯ ಬಗ್ಗೆ ಗಂಭೀರ ಆಪಾದನೆಯನ್ನು ಪ್ರಥಮ ಮಾಹಿತಿ ವರದಿಯಲ್ಲಿ(ಎಫ್ ಐಆರ್) ಮಾಡಿದ್ದರೂ ಸಹ ಮತ್ತು ಅದನ್ನು ಮಗಳು ಸಾಯುವ ಸಮಯದಲ್ಲಿ ಹೇಳಿಕೆ ನೀಡುವ

ಮೂಲಕ ತನಗೆ ತಿಳಿಸಿದ್ದಾಳೆಂದು ಮೃತಳ ತಾಯಿ ಸಾಕ್ಷ್ಯನುಡಿದ ನಂತರವೂ ಆ ಮೂಲಕವಾಗಿ ತನಿಖೆಗೊಳಪಡಿಸಲು ಪ್ರತಿವಾದಿಗಳನ್ನು ಕೂಡಲೇ ದಸ್ತಗಿರಿ ಮಾಡಲು ಯಾವುದೇ ಕ್ರಮಕೈಗೊಳ್ಳದಿರುವುದು ತೀರ ಆಘಾತವನ್ನುಂಟುಮಾಡಿದೆ. ಅಲ್ಲದೆ ಇಂಥ ಘೋರ ಅಪರಾಧಕ್ಕಾಗಿ ಆಪಾದಿತನಾಗಿರುವ ವ್ಯಕ್ತಿಯನ್ನು ತನಿಖೆ ಇನ್ನೂ ನಡೆಯುತ್ತಿರುವಾಗಲೇ ನಿರೀಕ್ಷಣಾ ಜಾಮೀನಿನ ಮೇರೆಗೆ ಬಿಡುಗಡೆ ಮಾಡಿರುವ ಕ್ರಮವೂ ಸಹ ಆಘಾತಕಾರಿ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಮತ್ತೊಂದು ಪ್ರಕರಣದಲ್ಲಿ(ಸಮುಂದರ್ ಸಿಂಗ್ -ವಿ- ರಾಜಾಸ್ಥಾನ ರಾಜ್ಯ ಮತ್ತು ಇತರರು, (೧೯೮೭)೧ ಎಸ್ ಸಿಸಿ ೪೬೬) ಪ್ರಕರಣದಲ್ಲಿ ತೀವ್ರವಾದ ಮತ್ತು ಗುರುತರವಾದ ಅಪರಾಧದಂಥ ವಿಷಯದಲ್ಲಿ ಆರೋಪಿಗೆ ನಿರೀಕ್ಷಣಾ ಜಾಮೀನನ್ನು ಕೊಡುವ ಅಧಿಕಾರವನ್ನು ಉಚ್ಚನ್ಯಾಯಾಲಯ ಚಲಾಯಿಸಬಾರದಿತ್ತು... ಮತ್ತು ನಿರೀಕ್ಷಣಾ ಜಾಮೀನಿನ ಸ್ವರೂಪ ಮತ್ತು ಅದನ್ನು ನೀಡಿದ ಸಮಯ ತನಿಖೆಯ ಮೇಲೆ ಪ್ರತಿಕೂಲ ಪರಿಣಾಮ ಬೀರಬಹುದು. ಆದ್ದರಿಂದ ಇನ್ನು ಮುಂದೆ ಹೀಗೆ ಆಗದಿರಲಿ ಎಂಬ ಎಚ್ಚರಿಕೆಯನ್ನು ಈ ಸಂದರ್ಭದಲ್ಲಿ ಕೊಡುವುದು ಅಗತ್ಯವೆನಿಸುತ್ತದೆ. ತನ್ನ ಅಧಿಕಾರವ್ಯಾಪ್ತಿಯಲ್ಲಿ 'ಈ ಸ್ವರೂಪದ ವಿಷಯದಲ್ಲಿ ನಿರೀಕ್ಷಣಾ ಜಾಮೀನು ನೀಡುವ ಅಧಿಕಾರವನ್ನು ಚಲಾಯಿಸುವ ಅಗತ್ಯವಿಲ್ಲ' ಎಂಬ ಎಚ್ಚರಿಕೆಯನ್ನು ಸರ್ವೋಚ್ಚನ್ಯಾಯಾಲಯ ನೀಡಿದೆ.

"ಪೊಲೀಸು ವ್ಯವಸ್ಥೆ, ನ್ಯಾಯಾಂಗ, ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟರು ಮತ್ತು ವೈದ್ಯರಲ್ಲಿ ತಾಂಡವವಾಗುತ್ತಿರುವ ಭ್ರಷ್ಟಾಚಾರ, ಪೊಲೀಸರ ತನಿಖೆಯಲ್ಲಿ ತಲೆದೋರಿರುವ ಉದಾಸೀನ, ಪೋಲೀಸು ಇಲಾಖೆಯಲ್ಲಿನ ವಿಧಿವೈದ್ಯ ಪರಿಣಿತರ ಕೊರತೆ ಇವುಗಳಿಂದಾಗಿ ದುಃಖಿತ ತಂದೆ ತಾಯಿಯರ ಆಕ್ರಂದನಕ್ಕೆ ಪರಿಹಾರ ದೊರೆಯದಾಗಿದೆ" ಎಂದು ಗುಜರಾತ್ ಉಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ತನಿಖೆ ನಡೆಸುವಾಗ ಪೊಲೀಸರು ತೋರುವ ಅನಾದರ, ಅಸಡ್ಡೆ ಹಾಗೂ ಉದಾಸೀನಗಳು ಮತ್ತು ಅಧಿಕಾರದಲ್ಲಿರುವ ವ್ಯಕ್ತಿಗಳ ಬಗ್ಗೆ ತೋರುವ ಪಕ್ಷಪಾತ ಹಾಗೂ ಅವರ ಅಪರಾಧಗಳನ್ನು ಮುಚ್ಚಿಹಾಕುವ ಪೊಲೀಸರ ಪ್ರಯತ್ನ ಇವೆಲ್ಲವುಗಳಿಗೆ ಉದಾಹರಣೆಯೆಂದರೆ, ಭಗವಂತ್ ಸಿಂಗ್ -ವಿ- ಪೊಲೀಸು ಕಮೀಷನರ್ ದೆಹಲಿ (೧೯೮೩)೩ ಎಸ್ ಸಿಸಿ ೩೪೪) ಪ್ರಕರಣ. ಈ ಪ್ರಕರಣದಲ್ಲಿ ಭಗವಂತ್ ಸಿಂಗ್ ಎಂಬುವರು ತನ್ನ ವಿವಾಹಿತ ಮಗಳು ಗುರಿಂದರ್ ಕೌರಳ ಸಾವಿನ ವಿಷಯದಲ್ಲಿ ಪರಿಹಾರ ಕೊಡಿಸುವಂತೆ ಸರ್ವೋಚ್ಚನ್ಯಾಯಾಲಯವನ್ನು ಕೋರಿದ್ದಾರೆ. ಆದ್ದರಿಂದ ಈ ಪ್ರಕರಣದಲ್ಲಿ ಗುರಿಂದರ್ ಕೌರಳ ಸಾವು ಆತ್ಮಹತ್ಯೆಯೇ, ಆಕಸ್ಮಿಕವೇ ಅಥವಾ ವರದಕ್ಷಿಣೆಗಾಗಿ ಆದ ಕೊಲೆಯೇ ಎಂಬ ಬಗ್ಗೆ ಸರ್ವೋಚ್ಚನ್ಯಾಯಾಲಯ ನಿರ್ಣಯಿಸುವುದಿಲ್ಲ. ಏಕೆಂದರೆ ಅದರ ವಿಚಾರಣೆಯನ್ನು

ನಡೆಸಲು ಅಧಿಕಾರವ್ಯಾಪ್ತಿಯುಳ್ಳ ನ್ಯಾಯಾಲಯ ಅದರ ವಿಚಾರಣೆಯನ್ನು ಕೈಗೆತ್ತಿಕೊಳ್ಳಬೇಕು. ಇಲ್ಲಿಯ ಈಗಿನ ಪ್ರಶ್ನೆ ಗುರಿಂದರ್ ಕೌರಳ ಸಾವಿನ ಮಾಹಿತಿ ದೊರೆತನಂತರ ಪೊಲೀಸು ಅಧಿಕಾರಿಗಳು ಕಾನೂನು ಮತ್ತು ನ್ಯಾಯದ ಪ್ರಕಾರ ನಡೆದುಕೊಳ್ಳಬೇಕಾಗಿದ್ದ ರೀತಿಯಲ್ಲಿ ನಡೆದುಕೊಂಡಿದ್ದಾರೆಯೇ ಎಂಬುದು.

ಗುರಿಂದರ್ ಕೌರ್ ಭಗವಂತ ಸಿಂಗ್‌ನ ಮಗಳು ಸುಶಿಕ್ಷಿತೆ ಹಾಗೂ ಸುಂದರಿ. ಅವಳ ಮದುವೆ ತಂದೆಯ ಮೂವತ್ತು ವರ್ಷಗಳ ಸಹೋದ್ಯೋಗಿ ಕರ್ತಾರ್ ಸಿಂಗನ ಮಗ ಅಮರ್‌ಜಿತ್ ಸಿಂಗನೊಡನೆ ನಡೆಯಿತು. ಭಗವಂತ್ ಸಿಂಗ್ ಮೊದಲಿನಿಂದಲೂ ವರದಕ್ಷಿಣೆಯ ವಿರೋಧಿ. ಇದೇ ಮನೋಭಾವವನ್ನೇ ಗುರಿಂದರ್ ಸಿಂಗಳೂ ಮೈಗೂಡಿಸಿಕೊಂಡಿದ್ದಳು ಅಲ್ಲದೆ ಕಾಲೇಜು ದಿನಗಳಲ್ಲಿ 'ವರದಕ್ಷಿಣೆ ವಿರೋಧಿ ಆಂದೋಲನವನ್ನು ಸಮರ್ಥಿಸಿದ್ದಳು.' ಆದರೆ ವಿಪರ್ಯಾಸವೆಂದರೆ, ಅವಳು ವರದಕ್ಷಿಣೆಯಾಗಿ ಏನನ್ನೂ ತಂದಿಲ್ಲವೆಂಬ ಕಾರಣದಿಂದಲೇ ಅವಳ ಗಂಡನ ಮನೆಯಲ್ಲಿ ಅವಳ ಪರಿಸ್ಥಿತಿ ಉಸಿರು ಕಟ್ಟಿಸುವಂಥದ್ದಾಯಿತು. ವಿವಾಹವಾದ ಕೇವಲ ೧೦ ತಿಂಗಳ ಅಂತರದಲ್ಲಿ ೨೨ ವರ್ಷದ ಗುರಿಂದರ್ ಕೌರ್ ತನ್ನ ಗಂಡನ ಮನೆಯ ಸ್ನಾನದ ಮನೆಯಲ್ಲಿ ಮೂರನೇ ದರ್ಜೆಯ ಸುಟ್ಟಗಾಯಗಳಿಂದ ಸಾವನ್ನಪ್ಪಿದ್ದಳು. ಪೊಲೀಸು ಅಧಿಕಾರಿಗಳು ಇದು ಆತ್ಮಹತ್ಯೆಯ ಪ್ರಕರಣ ಎಂದು ನಂಬಿದರು. ಆದರೆ ಭಗವಂತ್ ಸಿಂಗ್‌ಗೆ ಇದೊಂದು ಕೊಲೆಯಿರಬಹುದು ಎಂಬ ಅನುಮಾನವಿತ್ತು. ಭಗವಂತ್ ಸಿಂಗ್, ಪೊಲೀಸಿನವರು ತನಿಖೆ ಮಾಡುತ್ತಿದ್ದ ರೀತಿಯ ಬಗ್ಗೆ ದೂರು ನೀಡಿದ್ದರು ಮತ್ತು ಅವಳು ಮರಣ ಹೊಂದಿದ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ಅನುಮಾನ ವ್ಯಕ್ತಪಡಿಸಿದರು. ಇದಕ್ಕೆ ಪ್ರತಿಕ್ರಿಯೆಯಾಗಿ ವರದಕ್ಷಿಣೆ ನಿಷೇಧ ಅಧಿನಿಯಮದ ೪ನೇ ಪ್ರಕರಣವನ್ನು[೮] ಆ ನಂತರ ಭಾರತದ ದಂಡಸಂಹಿತೆಯ ೩೦೬ನೇ ಪ್ರಕರಣ[೯]ವನ್ನು ಆರೋಪಗಳಲ್ಲಿ ಸೇರಿಸಲಾಯಿತು. ಈ ಪ್ರಕರಣದಲ್ಲಿ ಭಗವಂತ್ ಸಿಂಗ್ ಅವರ ವಾದವೆಂದರೆ, ತನಿಖಾಧಿಕಾರಿಗಳು ಪ್ರಾಮಾಣಿಕವಾದ ರೀತಿಯಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸಿಲ್ಲ ಮತ್ತು ಆರೋಪಿಯ ವಿರುದ್ಧ ಕ್ರಮಕೈಗೊಳ್ಳುವುದನ್ನು ತಪ್ಪಿಸುವುದಕ್ಕಾಗಿ ಬೇಕೆಂದೇ ಪೊಲೀಸು ವರದಿಯನ್ನು ಸಲ್ಲಿಸದೆ ವಿಳಂಬ ಮಾಡುತ್ತಿದ್ದಾರೆ ಎಂಬುದಾಗಿತ್ತು. ಸಾಕ್ಷಿಗಳು ನೀಡಿದ ಹೇಳಿಕೆಗಳು ಹಾಗೂ ಪೊಲೀಸರಲ್ಲಿ ದಾಖಲಾದ ಹೇಳಿಕೆಗಳಲ್ಲಿ ಹೊಂದಾಣಿಕೆಯೇ ಇಲ್ಲದಿರುವುದು ಮತ್ತಷ್ಟು ಅನುಮಾನಕ್ಕೆಡೆ ಮಾಡಿಕೊಟ್ಟಿದೆ. ಗುರಿಂದರ್ ಕೌರಳನ್ನು ಆಸ್ಪತ್ರೆಗೆ ಕರೆತಂದಾಗ ಅವಳು ಹೇಳಿಕೆಯನ್ನು ಕೊಡುವ ಸ್ಥಿತಿಯಲ್ಲಿರಲಿಲ್ಲ ಎಂಬುದನ್ನು ಭಗವಂತ್ ಸಿಂಗ್ ಅಲ್ಲಗಳೆಯುತ್ತಾರೆ. ಅಲ್ಲದೆ, ಗುರಿಂದರ್ ಕೌರಳ ಮಾವ ಕರ್ತಾರ್ ಸಿಂಗ್ ಪೊಲೀಸರಿಗೆ ನೀಡಿದ ಹೇಳಿಕೆಯಲ್ಲಿ, ಆ ದಿನ ೨.೩೦ ರಿಂದ ರಾತ್ರಿ ೮.೩೦ರವರೆಗೆ ಭಗವಂತ್ ಸಿಂಗ್, ಆತನ ಪತ್ನಿ, ಆತನ ಸೋದರಿ ಮಗಳು ವೈದ್ಯೆ ಮತ್ತು ಆತನ ಅಣ್ಣ ಬಲವಂತ್ ಸಿಂಗ್ ಇವರುಗಳು ಅವಳೊಡನೆ ಮಾತನಾಡುತ್ತಿದ್ದರು ಎಂದು ತಿಳಿಸಿದ್ದಾರೆ.

ಪೋಲೀಸರು ದಾಖಲಿಸಿಕೊಂಡಿರುವ ಹೇಳಿಕೆಯ ಪ್ರಕಾರ, ಈ ದುರಂತ ಸಂಭವಿಸಿದಾಗ ತಾನು ಮಹಡಿಗೆ ಧಾವಿಸಿದುದಾಗಿಯೂ ಆದರೆ ಕೂಡಲೇ ಪ್ರಜ್ಞೆ ತಪ್ಪಿದುದಾಗಿಯೂ ಶ್ರೀಮತಿ ಸತೀಂದರ್ ಕೌರ್ ಹೇಳಿಕೆ ನೀಡಿದ್ದಾರೆ. ಆದರೆ ಮೃತಳ ಮಾವ ದುರಂತ ನಡೆದಾಗ ಸತೀಂದರ್ ಕೌರ್ ಹಾಗೂ ಮನೆಯ ಆಳು ರಾಮು ಧಾವಿಸಿ ಬಂದು, ಒಳಗಿನಿಂದ ಚಿಲಕ ಹಾಕಿಕೊಂಡಿದ್ದ ಸ್ನಾನದ ಮನೆಯ ಬಾಗಿಲನ್ನು ಒಡೆದು ತೆಗೆದರೆಂದು ಹೇಳಿಕೆ ನೀಡಿದ್ದಾರೆ.

ಪರಸ್ಪರ ವಿರುದ್ಧದ ಈ ಹೇಳಿಕೆಗಳ ಬಗ್ಗೆಯೂ ಪೋಲೀಸರು ಗಮನ ನೀಡಿಲ್ಲ ಮತ್ತು ಸ್ನಾನದ ಮನೆಯ ಕನ್ನಡಿಯ ಮೇಲೆ ''ಯಾರನ್ನೂ ಜವಾಬ್ದಾರರನ್ನಾಗಿಸಬೇಡಿ ಪಿಂಕಿ'' ಎಂದು ಮೃತಳು ಬರೆದಿದ್ದು ಎನ್ನಲಾಗಿದ್ದು ಅದಕ್ಕೆ ಉಪಯೋಗಿಸಲಾದ ಸೋಪನ್ನು ಪೋಲೀಸರು ವಶಕ್ಕೆ ತೆಗೆದುಕೊಂಡಿಲ್ಲ. ಬೆಂಕಿಯನ್ನು ನಂದಿಸಲು ಬಳಸಿದ್ದ ಕಂಬಳಿಯನ್ನೂ ವಶಕ್ಕೆ ತೆಗೆದುಕೊಂಡಿಲ್ಲ ಎಂದೂ ಅಸಮಾಧಾನ ವ್ಯಕ್ತಪಡಿಸದ್ದಾರೆ. ತನ್ನ ಮಗಳ ಸಾವಿನ ಕಾರಣದ ಬಗ್ಗೆ ಸರಿಯಾದ ತನಿಖೆ ನಡೆಸಬೇಕೆಂದು ಆ ಬಗ್ಗೆ ಪ್ರಯತ್ನಗಳನ್ನು ಉನ್ನತ ಪದವಿಗಳಲ್ಲಿರುವ ವ್ಯಕ್ತಿಗಳನ್ನು ಕಂಡು ಮಾಡುತ್ತಲೇ ಬಂದಿದ್ದಾರೆ.

ಈ ಪ್ರಕರಣದಲ್ಲಿ ಸರ್ವೋಚ್ಚನ್ಯಾಯಾಲಯ, ತನಿಖೆಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳ ಪೂರ್ವ ವಿವರಗಳನ್ನು ಕೂಡಲೇ ಒದಗಿಸುವ ಪ್ರಮಾಣಪತ್ರವನ್ನು ಸಲ್ಲಿಸುವಂತೆ ಪೋಲೀಸು ಕಮೀಷನರಿಗೆ ಆದೇಶ ನೀಡಿತು. ಇದಕ್ಕೆ ಪ್ರತಿಕ್ರಿಯೆಯಾಗಿ ಸಲ್ಲಿಸಿದ ವಿವರಗಳು ಮತ್ತಷ್ಟು ಆಘಾತವನ್ನುಂಟು ಮಾಡುವಂಥವು ಮತ್ತು ಧೃತಿಗೆಡಿಸುವಂಥವು.

ಪೋಲೀಸು ಕಮಿಷನರ್ ಅವರು ನ್ಯಾಯಾಲಯಕ್ಕೆ ಸಲ್ಲಿಸಿರುವ ವಿವರಗಳ ಪ್ರಕಾರ ಗುರಿಂದರ್ ಸಿಂಗ್ ಅವಳ ಅಸಹಜ ಸಾವಿನ ತನಿಖೆಯ ಪ್ರಕರಣ ೧೯೮೦ರ ಆಗಸ್ಟ್ ೯ ರಿಂದ ೧೯೮೨ರ ಸೆಪ್ಟೆಂಬರ್ ೧೮ರೊಳಗೆ ಎಂದರೆ ಸುಮಾರು ಒಂದು ವರ್ಷದೊಳಗೆ ನಾಲ್ಕು ಮಂದಿ ಇನ್ಸ್‌ಪೆಕ್ಟರುಗಳ ಕೈದಾಟಿದೆ. ಇದಕ್ಕೆ ಕಾರಣ ಆ ಇನ್ಸ್‌ಪೆಕ್ಟರುಗಳ ಬಳಿ ಆ ವೇಳೆಗಾಗಲೇ ತನಿಖೆ ನಡೆಸಬೇಕಾದ ಅನೇಕ ಪ್ರಕರಣ ಗಳಿದ್ದವು. ಹಾಗಾಗಿ ಅವರಿಗೆ ಕಾರ್ಯದ ಒತ್ತಡ ಅಧಿಕವಾಗಿತ್ತು ಎಂಬುದು.

ಆದರೆ ಇಂಥ ಪ್ರಕರಣಗಳಿಗೆ ಬೇಕಾದ ದಕ್ಷತೆ ಹಾಗೂ ಪ್ರಾಮಾಣಿಕತೆಯನ್ನು ಪೊಲೀಸರು ತೋರಿಲ್ಲ ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅಪರಾಧ ನಡೆದ ಸ್ಥಳದಲ್ಲಿ ದೊರೆಯುವ ಪ್ರತಿಯೊಂದು ವಸ್ತುವೂ ಅಪರಾಧವೆಸಗಿದವರ ಬಗ್ಗೆ ಸುಳಿವು ನೀಡುವಲ್ಲಿ ನೆರವಾಗಬಹುದು. ಆದ್ದರಿಂದ ಆ ಬಗ್ಗೆ ಆಲಸ್ಯ ತೋರದೆ, ವಿಳಂಬ ಮಾಡದೇ ಸಾಕ್ಷ್ಯಗಳನ್ನು ಸಂಗ್ರಹಿಸಬೇಕಾಗುತ್ತದೆ. ಈ ಹಂತದಲ್ಲಾಗುವ ಯಾವುದೇ ಲೋಪ ಅಪರಾಧ ನಿರ್ಣಯದಲ್ಲಿ ಅತ್ಯಂತ ಪ್ರಮುಖ ಸಾಕ್ಷ್ಯವಾಗ

ಬಹುದಾದ್ದನ್ನು ನಾಶಗೊಳಿಸುವ ಸಾಧ್ಯತೆ ಇದೆ. ಈ ಪ್ರಕರಣದ ತನಿಖೆಯಲ್ಲಿ ಪ್ರಾರಂಭ ದಿಂದಲೂ ಇಂಥ ಅನೇಕ ಲೋಪಗಳನ್ನು ಗುರುತಿಸಲಾಗಿದೆ.

ಅಪರಾಧ ನಡೆದ ದಿನ ಘಟನೆಯ ಸ್ಥಳಕ್ಕೆ ಹೋಗಿ ಅನೇಕ ವಸ್ತುಗಳನ್ನು ವಶಕ್ಕೆ ತೆಗೆದುಕೊಂಡ ಬಗ್ಗೆ ಪೋಲೀಸು ಡೈರಿಯಲ್ಲಿ ದಾಖಲೆಯಿದೆ. ಆದರೆ ಬೆಂಕಿಯನ್ನು ಆರಿಸಲು ಉಪಯೋಗಿಸಿದ ಕಂಬಳಿಯನ್ನು ವಶಕ್ಕೆ ತೆಗೆದುಕೊಂಡಿಲ್ಲ. ಕೇಂದ್ರ ವಿಧಿವೈದ್ಯವಿಜ್ಞಾನ ಪ್ರಯೋಗಾಲಯದ ತಜ್ಞರು ಸ್ಥಳಕ್ಕೆ ಅಪರಾಧ ನಡೆದ ಮರುದಿನ ಭೇಟಿನೀಡಿ ಬೆರಳು ಗುರುತುಗಳನ್ನು ಮತ್ತು ಇತರ ಸಾಕ್ಷ್ಯಗಳನ್ನು ಸಂಗ್ರಹಿಸುವುದಕ್ಕಾಗಿ ಸ್ಥಳವನ್ನು ಪರೀಕ್ಷಿಸಿದ್ದಾರೆ. ಕನ್ನಡಿಯನ್ನು ಅದರ ಸ್ಥಳದಿಂದ ತೆಗೆದು ಬೆರಳು ಗುರುತುಗಳಿಗಾಗಿ ಪರೀಕ್ಷಿಸಿದ್ದರೂ, ವ್ಯಕ್ತಿಯನ್ನು ಪತ್ತೆಹಚ್ಚುವ ಗುರುತುಗಳು ದೊರೆತಿಲ್ಲ. ಈ ವರದಿಯನ್ನು ಪಡೆಯಲು ಪೊಲೀಸರಿಗೆ ಐದು ವಾರಗಳು ಬೇಕಾಗಿದೆ. ಪೊಲೀಸರು ಅಪರಾಧ ನಡೆದು ಸ್ಥಳಕ್ಕೆ ಭೇಟಿಯಿತ್ತ ಕೂಡಲೇ ಕನ್ನಡಿಯನ್ನು ವಶಕ್ಕೆ ತೆಗೆದುಕೊಳ್ಳಬೇಕಿತ್ತು ಮತ್ತು ಕೂಡಲೇ ಕೇಂದ್ರ ವಿಧಿವೈದ್ಯವಿಜ್ಞಾನ ಪ್ರಯೋಗಾಲಯಕ್ಕೆ ಗುರುತುಗಳ ಪತ್ತೆಗಾಗಿ ಕಳುಹಿಸಬೇಕಿತ್ತು. ಆದರೆ ಅವರು ಹಾಗೆ ಮಾಡಿಲ್ಲ. ಇಂಥ ವಿಷಯಗಳಲ್ಲಿನ ವಿಳಂಬದಿಂದಾಗಿ ಅನೇಕ ಮೌಲಿಕ ಕುರುಹುಗಳು ಅಳಸಿಹೋಗುತ್ತವೆ.

ಗುರಿಂದರ್ ಕೌರ್ ಸಾವಿಗೀಡಾದ ಸ್ನಾನದ ಮನೆಯ ಚಿಲಕವನ್ನು ಒಳಗಿನಿಂತ ಹಾಕಿತ್ತೆ ಅಥವಾ ಹೊರಗಿನಿಂದ ಹಾಕಿತ್ತೆ ಎಂಬ ಪ್ರಶ್ನೆಗೆ ಉತ್ತರ ಅವಳ ಸಾವಿನ ರಹಸ್ಯವನ್ನು ಬಿಡಿಸಲು ಅತಿಮುಖ್ಯವಾದ ಅಂಶ. ಮೃತಳ ಮಾವನ ಹೇಳಿಕೆಯ ಪ್ರಕಾರ ಮೃತಳ ಕೂಗನ್ನು ಕೇಳಿ, ಬಾಗಿಲನ್ನು ಒಡೆದು ತೆರೆಯಬೇಕಾಯಿತು(ಆಳು ರಾಮುವಿನ ಸಹಾಯದಿಂದ) ಎಂದಿದೆ. ಆದರೆ ಸಾವಿನ ದಿನಾಂಕದಂದು ಪೊಲೀಸಿನವರು ದಾಖಲುಮಾಡಿರುವ ಹೇಳಿಕೆಗಳ ಪೈಕಿ ರಾಮುವಿನ ಹೇಳಿಕೆ ಇಲ್ಲ. ಆದರೆ ರಾಮುವಿನ ಹೇಳಿಕೆಯನ್ನು ಅವತ್ತಿನ ದಿನವೇ ದಾಖಲು ಮಾಡಿಕೊಳ್ಳಲಾಯಿತು ಎಂದು ಹೇಳಿದರೂ, ಪ್ರಕರಣ ಡೈರಿಯ ಉದ್ಧೃತ ಭಾಗಗಳಲ್ಲಿ ಅದಿಲ್ಲ. ಡೈರಿಯ ನಮೂದಿನ ಪ್ರಕಾರ ಅವನ ಹೇಳಿಕೆಯನ್ನು ೧೯೮೮ರ ಜನವರಿ ೨೫ರಂದು (ಎಂದರೆ ಘಟನೆ ನಡೆದ ಐದುವರೆ ತಿಂಗಳ ನಂತರ) ಪಡೆದ ಬಗ್ಗೆ ಕೇಸ್ ಡೈರಿಯಲ್ಲಿ ನಮೂದಿಸಲಾಗಿದೆ. ರಾಮು ಈ ಪ್ರಕರಣದಲ್ಲಿ ಮುಖ್ಯಸಾಕ್ಷಿ. ಆದರೂ ಅವನ ಹೇಳಿಕೆಯನ್ನು ಪಡೆಯದೆಯೇ, ಅವನನ್ನು ಪ್ರಶ್ನಿಸದೆಯೇ ನಗರವನ್ನು ಬಿಡಲು ಅವನಿಗೆ ಅನುಮತಿ ನೀಡಲಾಗಿದೆ.

ಎಲ್ಲಕ್ಕಿಂತ ಮುಖ್ಯವಾಗಬಹುದಾಗಿದ್ದ ಸಾಕ್ಷ್ಯವೆಂದರೆ ಮೃತಳ ಮರಣ ಕಾಲದ ಹೇಳಿಕೆ. ಆದರೆ ಅವಳು ಹೇಳಿಕೆ ಕೊಡುವ ಸ್ಥಿತಿಯಲ್ಲಿರಲಿಲ್ಲ ಎಂದು ವೈದ್ಯರು ತಿಳಿಸಿದ್ದರು ಎಂಬುದು ಪೊಲೀಸರ ಹೇಳಿಕೆ. ಆದರೆ ಮೃತಳ ಮಾವನೇ ಆಕೆ ತನ್ನ ತಂದೆ, ತಾಯಿ, ಅವನ ಅಣ್ಣನ ಮಗಳು ಇವರುಗಳ ಜೊತೆಗೆ, ಮಧ್ಯಾಹ್ನ ೨.೩೦ ರಿಂದ ೮.೩೦ರವರೆಗೆ ಮಾತನಾಡುತ್ತಿದ್ದಳು ಎಂದು ಹೇಳಿಕೆ ನೀಡಿದ್ದಾನೆ. ಅಲ್ಲಿ

ಉಪಸ್ಥಿತಳಿದ್ದ ಭಗವಂತ್ ಸಿಂಗ್ ನ ಅಣ್ಣನಮಗಳು ರಾಜಿಂದರ್ ಪಾಲ್ ಕೌರ್ ಅವಳ ಹೇಳಿಕೆಯನ್ನು ಪಡೆಯುವಂತೆ ಅಲ್ಲಿದ್ದ ಪೊಲೀಸು ಅಧಿಕಾರಿಗಳಲ್ಲಿ ಒಬ್ಬರಿಗೆ ಸೂಚಿಸಿದರು, ಅವರು ಅವಳ ಹೇಳಿಕೆಯನ್ನು ಪಡೆಯಲು ನಿರಾಕರಿಸಿದರು ಎಂಬ ಹೇಳಿಕೆಯನ್ನು ನೀಡಿದ್ದಾಳೆ. ಹಾಗಾಗಿ ಅತ್ಯಂತ ಪ್ರಮುಖ ಸಾಕ್ಷ್ಯವಾಗಬಹುದಾಗಿದ್ದ ಸಾಕ್ಷ್ಯದ ಬಗ್ಗೆಯೂ ಪರಸ್ಪರ ವಿರುದ್ಧವಾದ ಹೇಳಿಕೆಗಳಿವೆ.

ಈ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಪೊಲೀಸರು ನಡೆಸಿದ ತನಿಖೆಯನ್ನು ಸರ್ವೋಚ್ಚ ನ್ಯಾಯಾಲಯ ತೀವ್ರವಾಗಿ ಖಂಡಿಸಿದೆ. ಅಲ್ಲದೆ ಪೊಲೀಸರಿಂದ ತನಿಖೆಯನ್ನು ವಹಿಸಿಕೊಂಡ ಸಿಬಿಐ ಸಹ ಈ ಪೊಲೀಸರ ತನಿಖಾ ಕ್ರಮದ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದೆ.

ಪೊಲೀಸರ ತನಿಖೆ ಅವ್ಯವಸ್ಥಿತವಾಗಿದ್ದು, ಉದಾಸೀನತೆಯಿಂದ ಕೂಡಿರುವುದೇ ಅಲ್ಲದೆ, ಪೊಲೀಸರು ಈ ಪ್ರಕರಣದಲ್ಲಿ ನಿಜವನ್ನು ಹೊರತರುವುದರ ಗಂಭೀರತೆಯನ್ನು ಅರ್ಥಮಾಡಿಕೊಂಡಿಲ್ಲ. ಈ ತನಿಖೆಯನ್ನು ಅವರು ತೀರ ಲಘುವಾಗಿ ಪರಿಗಣಿಸಿದ್ದಾರೆ. ತನಿಖೆಯ ಸಮಯದಲ್ಲಿ ತೋರಬೇಕಾದ ತೀಕ್ಷ್ಣಮತಿ ಎಲ್ಲಿಯೂ ವ್ಯಕ್ತವಾಗಿಲ್ಲ ಮತ್ತು ತನಿಖೆಯಲ್ಲಿ ಅನುಚಿತವಾಗಿ ಕಾಲಹರಣವಾಗಿದೆ. ಇದು, ತನಿಖೆಯ ಒಂದು ವರ್ಷದ ಅವಧಿಯಲ್ಲಿ ಈ ಪ್ರಕರಣ ನಾಲ್ಕು ಪೊಲೀಸ್ ಅಧಿಕಾರಿಗಳಿಗೆ ಹಸ್ತಾಂತರವಾಗಿರುವುದನ್ನು ನೋಡಿದರೆ, ಸಾಬೀತಾಗುತ್ತದೆ.

ಇಂಥ ಪ್ರಕರಣಗಳಲ್ಲಿ ಪೊಲೀಸರ ಡೈರಿಯಲ್ಲಿರುವ ನಮೂದುಗಳು ಬಹುಮುಖ್ಯ ಸಾಕ್ಷ್ಯವಾಗುತ್ತದೆ. ಆದರೆ ಇದನ್ನು ಅವರು ಕರಾರುವಕ್ಕಾಗಿ ದಕ್ಷ ರೀತಿಯಲ್ಲಿ ಮತ್ತು ನಿಯಮಾನುಸಾರ ಮಾಡಿಲ್ಲ. ಹೀಗಾದಲ್ಲಿ ಇದನ್ನು ಇಡುವ ಉದ್ದೇಶವೇ ವಿಫಲವಾಗುತ್ತದೆ. ಈ ಸಾಕ್ಷ್ಯ ಅಪರಾಧವನ್ನು ಸಾಬೀತುಪಡಿಸಲು ಬಹುಮುಖ್ಯ ಸಾಕ್ಷ್ಯವಾಗುವುದರಿಂದ, ಇದನ್ನು ಕೂಡಲೇ, ಕಾಲಾನುಕ್ರಮದಲ್ಲಿ, ವಿವರವಾಗಿ ಮುಖ್ಯ ಅಂಶಗಳನ್ನು ನಿರೂಪಿಸಿ ನಿಷ್ಪಕ್ಷಪಾತವಾಗಿ ನಮೂದಿಸಬೇಕು.

ಈ ಸಾವು ಕೊಲೆಯಿಂದ ಸಂಭವಿಸಿರಬೇಕು ಇಲ್ಲವೇ ಉಸಿರುಕಟ್ಟಿರುವ ವಾತಾವರಣವನ್ನುಂಟು ಮಾಡಿ ಮಾನಸಿಕ ಹಿಂಸೆಗೆ ಗುರಿಪಡಿಸಿ ಆತ್ಮಹತ್ಯೆಗೆ ದುಷ್ಪ್ರೇರಣೆ ನೀಡಿರಬೇಕು. ಏಕೆಂದರೆ ಒಳ್ಳೆಯ ಶಿಕ್ಷಣ ಹೊಂದಿರುವ ಪ್ರತಿಭಾವಂತೆಯಾದ ಸುಸ್ವಭಾವದ ಹುಡುಗಿ ಅನಿವಾರ್ಯ ಒತ್ತಡ ಉಂಟಾದ ಹೊರತು ಆತ್ಮಹತ್ಯೆಗೆಳಸಿರುವುದಿಲ್ಲ. ಈ ಕಾರಣಗಳಿಂದಾಗಿ ಸಾವು ಸಂಭವಿಸಿದ್ದರೆ, ಅನೇಕ ಪ್ರಕರಣಗಳಲ್ಲಿ ಅದಕ್ಷ ಪೋಲೀಸು ತನಿಖೆಯಿಂದಾಗಿ ಸರಿಯಾದ ಸಾಕ್ಷ್ಯಾಧಾರಗಳಿಲ್ಲದೆ ಅಪರಾಧಿಗಳು ಕಾನೂನು ನೀಡುವ ಶಿಕ್ಷೆಯಿಂದ ತಪ್ಪಿಸಿಕೊಂಡು ಬಿಡುತ್ತಾರೆ. ಹಾಗಾಗದಂತೆ ಮಾಡಲು ತನಿಖೆಯ ಗತಿಯನ್ನು ತೀವ್ರಗೊಳಿಸಿ ಆದ್ಯತೆಯ ಮೇರೆಗೆ ಈ ಪ್ರಕರಣಗಳನ್ನು ಇತ್ಯರ್ಥಗೊಳಿಸಬೇಕು. ಆಯಾ ಪ್ರಕರಣದ ಲಕ್ಷಣಗಳಿಗನುಸಾರ

ವಾಗಿ ತನಿಖೆಯ ರೀತಿಯನ್ನು ಹೊಂದಿಸುವಂಥ ಕ್ರಮಗಳನ್ನು ಅಳವಡಿಸಿಕೊಳ್ಳಬೇಕು. ಅಲ್ಲದೆ ಇಂಥ ಪ್ರಕರಣಗಳಲ್ಲಿ ಮೃತಳ ಮರಣ ಕಾಲದ ಹೇಳಿಕೆಯನ್ನು ಪಡೆಯಲು ಹೆಚ್ಚಿನ ಗಮನ ನೀಡಬೇಕು ಮತ್ತು ಮರಣ ಹೊಂದುತ್ತಿರುವ ವ್ಯಕ್ತಿಯಲ್ಲಿ ವಿಶ್ವಾಸಮೂಡಿಸಲು ಈ ಕಾರ್ಯಕ್ಕೆ ಮಹಿಳಾ ಪೊಲೀಸು ಅಧಿಕಾರಿಯನ್ನು ನೇಮಿಸುವುದು ಒಳ್ಳೆಯದು' ಎಂದೂ ಸರ್ವೋಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲದ ಮಾತುಗಳು ತನಿಖಾ ಕ್ರಮದಲ್ಲಿರುವ ದೋಷಗಳನ್ನು ಹಾಗೂ ಅವ್ಯವಸ್ಥೆಗಳನ್ನು ಮತ್ತು ತನಿಖೆ ನಡೆಸುವವರಲ್ಲಿರುವ ವಿಳಂಬ ನೀತಿ, ಔದಾಸೀನ್ಯ, ಅಸಡ್ಡೆಗಳನ್ನು ತೋರಿಸುತ್ತದೆ.

ಕಾನೂನು ರಚನೆಯಲ್ಲಿ ಅಂತರ್ಗತವಾಗಿರುವ ಸ್ತ್ರೀಪುರುಷ ತಾರತಮ್ಯದಿಂದ ಮಹಿಳೆ ಶೋಷಿತಳಾಗುವುದರ ಜೊತೆಗೆ ತನಿಖಾ ಹಂತದಲ್ಲಿನ ದೋಷಗಳಿಂದಾಗಿಯೂ ಮಹಿಳೆ ಅನ್ಯಾಯಕ್ಕೆ ಗುರಿಯಾಗುತ್ತಿದ್ದಾಳೆ. ಇಂಥ ಸಾಮಾಜಿಕ ಪಿಡುಗನ್ನು ತೊಡೆದು ಹಾಕಲು ಕಾನೂನು ಒಂದೇ ಸಾಲದು. ಇಂಥ ಪಿಡುಗನ್ನು ನಿವಾರಿಸಲು ಸಾಮಾಜಿಕ ಸಂಕಲ್ಪ ಅಗತ್ಯವಾಗುತ್ತದೆ. ಇಂಥ ಸಂಕಲ್ಪದ ಅನುಷ್ಠಾನಕ್ಕೆ ಕಾನೂನು ನೆರವಾಗಬಲ್ಲದು ಅಷ್ಟೆ.

## ಕೌಟುಂಬಿಕ ಕ್ರೌರ್ಯ

ವರದಕ್ಷಿಣೆಯ ಸಂಬಂಧದಲ್ಲಿ ಹೆಚ್ಚುತ್ತಿರುವ ವಧೂದಹನ ಪ್ರಕರಣಗಳು, ವರದಕ್ಷಿಣೆ ತರುವಂತೆ ಒತ್ತಾಯಿಸಿ ನೀಡುವ ಕಿರುಕುಳವನ್ನು ತಾಳದೆ ಹೆಚ್ಚುತ್ತಿರುವ ಆತ್ಮಹತ್ಯೆಯ ಪ್ರಕರಣಗಳ ಹಿನ್ನೆಲೆಯಲ್ಲಿ ಕೌಟುಂಬಿಕ ಕ್ರೌರ್ಯವನ್ನು ಅಪರಾಧವನ್ನಾಗಿಸುವ ೪೯೮ಎ ಪ್ರಕರಣವನ್ನು ಭಾರತ ದಂಡ ಸಂಹಿತೆಯಲ್ಲಿ ಹೊಸದಾಗಿ(೧೯೮೩ರಲ್ಲಿ) ಸೇರಿಸಲಾಯಿತು. ೪೯೮ಎ ಪ್ರಕರಣವನ್ನು ಸೇರಿಸಿದುದರ ಹಿನ್ನೆಲೆ ಇದಾದರೂ, ಈ ಪ್ರಕರಣ ವರದಕ್ಷಿಣೆ ಕಿರುಕುಳಕ್ಕಷ್ಟೇ ಸೀಮಿತವಾಗದೆ ಎಲ್ಲ ಬಗೆಯ ಕೌಟುಂಬಿಕ ಕ್ರೌರ್ಯದ ಘಟನೆಗಳಿಗೂ ಅನ್ವಯಿಸುತ್ತದೆ. ಇದನ್ನು ಕ್ರಿಮಿನಲ್ ಕಾನೂನಿನ ತಿದ್ದುಪಡಿ ಅಧಿನಿಯಮದ 'ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ'ಯಲ್ಲಿ ಸ್ಪಷ್ಟಪಡಿಸಲಾಗಿದೆ.

ಸಾಮರಸ್ಯವಿಲ್ಲದ ವಿವಾಹ ಸಂಬಂಧದಲ್ಲಿ ಮಹಿಳೆಯ ಶೀಲವನ್ನು ಶಂಕಿಸುವುದು, ಅವಳ ನಡತೆಯ ಬಗ್ಗೆ ಕೀಳು ಮಾತುಗಳನ್ನಾಡುವುದು, ಅವಳನ್ನು 'ಹದ್ದುಬಸ್ತಿನಲ್ಲಿಟ್ಟುಕೊಳ್ಳಲು' ಪುರುಷರು ಸಾಮಾನ್ಯವಾಗಿ ಅನುಸರಿಸುವ ಕ್ರಮ. ಅಂಥ ಆರೋಪಗಳನ್ನು ಸುಳ್ಳು ಎಂದು ರುಜುವಾತುಪಡಿಸಲು ಸಾಮಾನ್ಯವಾಗಿ ಅವಕಾಶಗಳಿಲ್ಲದಿರುವುದರಿಂದ ಮತ್ತು ಅವಕಾಶಗಳಿದ್ದರೂ ಸಾಕ್ಷ್ಯಾಧಾರಗಳು ದೊರೆಯದ ಕಾರಣ ಕಷ್ಟವಾಗುವುದರಿಂದ ಗಂಡನಿಂದ ಬರುವ ಇಂಥ ಆರೋಪಗಳಿಗೆ ಮಹಿಳೆ ಹೆದರುತ್ತಾಳೆ. ಮಾನಸಿಕವಾಗಿ ಹಿಂಸೆಯನ್ನನುಭವಿಸುತ್ತಾಳೆ. ಇದೂ ಒಂದು ಬಗೆಯ ಕೌಟುಂಬಿಕ ಮಾನಸಿಕ ಕ್ರೌರ್ಯ.

ಸರ್ವೋಚ್ಚನ್ಯಾಯಾಲಯದ ಮುಂದೆ ಬಂದ ಮುಕುಂದ್ ಮಾರ್ತಾಡ್ ಚಿಟ್ನಿಸ್ -ವಿ- ಮಾಧುರಿ ಮುಕುಂದ್ ಚಿಟ್ನಿಸ್ ಮತ್ತು ಇತರರು ಪ್ರಕರಣ ಇದಕ್ಕೆ ಉದಾಹರಣೆ.

ಮುಕುಂದ್ ಮತ್ತು ಮಾಧುರಿ ಅವರ ವಿವಾಹ ೧೯೮೩ರ ಜುಲೈ ೧೫ರಂದು ನಡೆಯಿತು. ಮುಕುಂದ್ ತನ್ನ ಹೆಂಡತಿಯ ಶೀಲವನ್ನು ಶಂಕಿಸಿದ್ದುದರಿಂದ ಅವರ ವಿವಾಹ ಸಂಬಂಧ ವಿವಾಹವಾದ ದಿನದಿಂದಲೇ ಬಿರುಕುಬಿಟ್ಟಿತು. ಇದರ ಫಲವಾಗಿ ಅವರಿಬ್ಬರೂ ವಿವಾಹವಾದ ಒಂದು ತಿಂಗಳೊಳಗೇ ಪ್ರತ್ಯೇಕವಾಗಿ ವಾಸಿಸಲಾರಂಭಿಸಿದರು. ಅವಳ ಪತಿ ಅವಳ ಶೀಲವನ್ನು ಶಂಕಿಸುವುದರೊಡನೆ ಅವಳು ಪ್ರತ್ಯೇಕವಾಗಿ ವಾಸಿಸಲಾರಂಭಿಸಿದ ನಂತರ ಅವಳ ಮೇಲೆ ಕಳವಿನ ಆರೋಪ ಹೊರಿಸಿ, ಶೋಧನಾ ವಾರಂಟನ್ನು ಪಡೆದು ಅವಳ ಮನೆಯನ್ನು ಶೋಧನೆಗೊಳಪಡಿಸಿದ. ಇದರಿಂದ ತೀವ್ರವಾಗಿ ಅವಮಾನಿತಳಾದ ಅವಳು ಎರಡು ಪ್ರತ್ಯೇಕ ದೂರುಗಳನ್ನು ನೀಡಿದಳು. ಮೊದಲನೆಯದು - ತನ್ನ ಶೀಲವನ್ನು ಶಂಕಿಸಿ ಮಾತನಾಡುವ ಮೂಲಕ ಮಾನಸಿಕ ಹಿಂಸೆಯನ್ನುಂಟುಮಾಡಿದುದಕ್ಕೆ ಭಾರತ ದಂಡ ಸಂಹಿತೆಯ ೪೯೮ಎ ಪ್ರಕರಣದ ಮೇರೆಗೆ ದೂರು ನೀಡಿದಳು. ಎರಡನೆಯದಾಗಿ - ತನ್ನ ಮೇಲೆ ಕಳ್ಳತನದ ಸುಳ್ಳು ಆಪಾದನೆ ಹೊರಿಸಿದುದಕ್ಕಾಗಿ ೫೦೦ನೇ ಪ್ರಕರಣದ ಮೇರೆಗೆ ಮಾನಹಾನಿಯ ಎರಡು ಪ್ರತ್ಯೇಕ ದೂರುಗಳನ್ನು ನೀಡಿದಳು. ವಿಚಾರಣಾ ನ್ಯಾಯಾಲಯ ೪೯೮ಎ ಪ್ರಕರಣದ ಮೇರೆಗೆ ಸಲ್ಲಿಸಲಾದ ದೂರಿನ ಸಂಬಂಧದಲ್ಲಿ ಅವಳ ಪತಿಯನ್ನು ಅಪರಾಧಿಯೆಂದು ತೀರ್ಮಾನಿಸಿ, ೫೦೦ನೇ ಪ್ರಕರಣದ ಮೇರೆಗೆ ಮಾನಹಾನಿಗಾಗಿ ಸಲ್ಲಿಸಲಾಗಿದ್ದ ದೂರುಗಳ ಸಂಬಂಧದಲ್ಲಿ ಅವನ್ನು ನಿರ್ದೋಷಿಯೆಂದು ತೀರ್ಪುನೀಡಿತು. ಆದರೆ ಈ ತೀರ್ಮಾನದ ವಿರುದ್ಧ ಸಲ್ಲಿಸಲಾದ ಅಪೀಲಿನಲ್ಲಿ ಉಚ್ಚನ್ಯಾಯಾಲಯ ಈ ದೂರುಗಳ ಸಂಬಂಧದಲ್ಲಿ ಪತಿಯನ್ನು ದೋಷಿಯೆಂದು ತೀರ್ಮಾನಿಸಿ ೪೯೮ಎ ಪ್ರಕರಣದ ಸಂಬಂಧದಲ್ಲಿ ೩೦,೦೦೦ರೂಗಳ ಜುಲ್ಮಾನೆಯನ್ನು ಸಂದಾಯ ಮಾಡುವಂತೆ, ಅದಕ್ಕೆ ತಪ್ಪಿದರೆ ಆರು ತಿಂಗಳ ಕಠಿಣ ಕಾರಾವಾಸ ಅನುಭವಿಸುವಂತೆ ಮತ್ತು ೫೦೦ನೇ ಪ್ರಕರಣದ ಮೇರೆಗಿನ ಪ್ರತಿ ದೂರುಗಳ ಸಂಬಂಧದಲ್ಲಿ ಎರಡು ತಿಂಗಳ ಸಾದಾ ಕಾರಾವಾಸ ಮತ್ತು ೩,೦೦೦ ರೂಗಳ ಜುಲ್ಮಾನೆ, ಜುಲ್ಮಾನೆ ಸಂದಾಯ ಮಾಡಲು ತಪ್ಪಿದರೆ, ಮತ್ತೆ ಒಂದು ತಿಂಗಳ ಸಾದಾ ಕಾರಾವಾಸ ಶಿಕ್ಷೆಯನ್ನು ಅನುಭವಿಸುವಂತೆ ಆದೇಶಿಸಿತು. ಸರ್ವೋಚ್ಚ ನ್ಯಾಯಾಲಾಯದಲ್ಲಿ ಸಲ್ಲಿಸಿರುವ ಅಪೀಲು ಉಚ್ಚನ್ಯಾಯಾಲಯದ ಈ ಆದೇಶಗಳ ವಿರುದ್ಧ.

ಇವರಿಬ್ಬರ ವಿವಾಹ ಸಂಬಂಧ ವಿಚ್ಛೇದನೆಯ ಮೂಲಕ ಈಗಾಗಲೇ ಕೊನೆಗೊಂಡಿರುವುದರಿಂದ ಇವರಿಬ್ಬರು ಮತ್ತು ಅವರ ಕುಟುಂಬದವರು ಆರೋಪ ಪ್ರತ್ಯಾರೋಪಗಳನ್ನು ಮಾಡುವುದನ್ನು ನಿಲ್ಲಿಸುವುದು ಒಳ್ಳೆಯದೆಂದೂ ಪತ್ನಿಯ ಮುಂದಿನ ಜೀವನಕ್ಕೆ ಆರ್ಥಿಕ ವ್ಯವಸ್ಥೆಯನ್ನು ಮಾಡುವುದು ಅಗತ್ಯವೆಂದೂ ಭಾವಿಸಿ ಎರಡು ಪಕ್ಷಕಾರರು ಒಂದು ಒಪ್ಪಂದಕ್ಕೆ ಬಂದು ಈ ಪ್ರಕರಣವನ್ನು ಕೊನೆಗೊಳಿಸುವುದು ಒಳ್ಳೆಯದೆಂದು ಸರ್ವೋಚ್ಚ ನ್ಯಾಯಾಲಯ ಸೂಚಿಸಿತು.

೪೯೮ಎ ಪ್ರಕರಣಕ್ಕೆ ಸಂಬಂಧಿಸಿದಂತೆ ಉಚ್ಚನ್ಯಾಯಾಲಯ ಆದೇಶಿಸಿದಂತೆ ೩೦,೦೦೦ಗಳ ಜುಲ್ಮಾನೆಯನ್ನು ನಿಗದಿತ ದಿನಾಂಕದೊಳಗೆ ಸಂದಾಯ ಮಾಡಲು ಹಾಗೂ ಆ ಬಗ್ಗೆ ಅಪೀಲು ಸಲ್ಲಿಸದಿರಲು ಅಪೀಲುದಾರ(ಪತಿ) ಒಪ್ಪಿಕೊಂಡ.

೫೦೦ನೇ ಪ್ರಕರಣದ ಅಡಿಯಲ್ಲಿ ನೀಡಲಾದ ದೂರಿಗೆ ಸಂಬಂಧಿಸಿದಂತೆ ಉಚ್ಚನ್ಯಾಯಾಲಯದಿಂದ ಈಗಾಗಲೇ ಅವನ ಅಪರಾಧ ನಿರ್ಣಯವಾಗಿರುವುದರಿಂದ ಅಪೀಲುದಾರ ವಿಚಾರಣಾ ನ್ಯಾಯಾಲಯ ದಲ್ಲಿ ನಿಗಧಿಪಡಿಸಿದ ಅವಧಿಯೊಳಗೆ ೧ಲಕ್ಷ ರೂಗಳಿಗೆ ಠೇವಣಿಯಿಡಲು ಒಪ್ಪಿಕೊಂಡಿರುವುದರಿಂದ ಉಚ್ಚನ್ಯಾಯಾಲಯ ವಿಧಿಸಿದ ೩೦,೦೦೦ ರೂಗಳ ಜುಲ್ಮಾನೆ ಹಾಗೂ ೫೦೦ ಪ್ರಕರಣದ ಮೇರೆಗಿನ ಎರಡು ದೂರುಗಳ ಸಂಬಂಧದಲ್ಲಿನ ಪ್ರತಿ ಅಪೀಲಿನಲ್ಲಿ ವಿಧಿಸಲಾದ ಒಟ್ಟು ೬೦೦೦ ರೂ.ಗಳನ್ನು ಸಂದಾಯ ಮಾಡಬೇಕೆಂಬ ಷರತ್ತನ್ನು ವಿಧಿಸಿ ರಾಜಿಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿತು ಮತ್ತು ಕ್ಷಮಾಪಣೆ ಪತ್ರವನ್ನು ನ್ಯಾಯಾಲಯಕ್ಕೆ ಬರೆದುಕೊಡುವಂತೆ ತಿಳಿಸಿತು. ಆದರೆ ಯಾವುದೇ ಷರತ್ತುಗಳನ್ನು ಪೂರೈಸಲು ಅಪೀಲುದಾರ ತಪ್ಪಿದರೆ ದೋಷಸಿದ್ಧಿ ಹಾಗೂ ಶಿಕ್ಷೆ ದೃಢಪಡುತ್ತದೆ ಅಲ್ಲದೆ ದಸ್ತಗಿರಿಗೊಳಪಡಲು ಬದ್ಧನಾಗಿರುತ್ತಾನೆ ಎಂಬ ತೀರ್ಪನ್ನು ಸರ್ವೋಚ್ಚನ್ಯಾಯಾಲಯ ನೀಡಿತು.

ಪತ್ನಿಯ ಆರೋಪವನ್ನು ಉಚ್ಚನ್ಯಾಯಾಲಯ ಗಂಭೀರವಾಗಿ ಪರಿಗಣಿಸಿದುದರ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಸಂತೋಷ ವ್ಯಕ್ತಪಡಿಸಿದೆ ಮತ್ತು ಮಹಿಳೆಯ ನಡತೆಯ ಬಗ್ಗೆ ಟೀಕೆ ಮಾಡಿ ಅವಳನ್ನು ಸುಮ್ಮನಾಗಿಸುವ ಮೂಲಕ ತಮ್ಮ ಉದ್ದೇಶವನ್ನು ಸಾಧಿಸುವ ಪುರುಷರಿಗೆ ಈ ಪ್ರಕರಣ ಒಂದು ಪಾಠವಾಗಬೇಕು ಎಂದೂ ಅಭಿಪ್ರಾಯಪಟ್ಟಿದೆ.

ವರದಕ್ಷಿಣೆ ಸಂಬಂಧೀ ಅಪರಾಧಗಳಲ್ಲಿ ಬೆಂಕಿಹಚ್ಚಿ ಸುಡುವುದು, ಜೀವನವೇ ಅಸಹನೀಯವಾಗುವಷ್ಟು ಕಿರುಕುಳ ಕೊಡುವುದು ಒಂದು ಬಗೆಯಾದರೆ, ಜೀವಿಸಲು ಅಸಾಧ್ಯವೆನಿಸುವಂಥ ವಾತಾವರಣವನ್ನು ಸೃಷ್ಟಿಸಿ, ಆತ್ಮಹತ್ಯೆಯೊಂದೇ ಅದಕ್ಕೆ ಪರಿಹಾರ ಎಂಬ ನಿರ್ಣಯಕ್ಕೆ ಬಂದು ಕಡೆಗೆ ಆತ್ಮಹತ್ಯೆ ಮಾಡಿ ಕೊಳ್ಳುವಂತೆ ದುಷ್ಪ್ರೇರಣೆ ನೀಡುವುದು ಇನ್ನೊಂದು ಬಗೆಯದು. ಏರುತ್ತಿರುವ ಈ ಬಗೆಯ ಸಾವುಗಳನ್ನು ನಿಯಂತ್ರಿಸಬೇಕು ಮತ್ತು ಅಪರಾಧ ಮಾಡಲೆಳಸುವವರಲ್ಲಿ ಶಿಕ್ಷೆಯ ಭಯ ಮೂಡಿಸಬೇಕು ಮತ್ತು ಅಂಥ ಅಪರಾಧವನ್ನು ಮಾಡಿದವರು ಕಾನೂನಿನ ಕೈಗಳಿಂದ ತಪ್ಪಿಸಿಕೊಳ್ಳಬಾರದು ಎಂಬ ದೃಷ್ಟಿಯಿಂದ ಕ್ರಿಮಿನಲ್ ಕಾನೂನುಗಳಿಗೆ ಅನೇಕ ತಿದ್ದುಪಡಿಗಳನ್ನು ತರಲಾಯಿತು.

ಆತ್ಮಹತ್ಯೆ ಮಾಡಿಕೊಳ್ಳುವಂತೆ ಪ್ರೇರೇಪಿಸುವುದು ಅಥವಾ ಆತ್ಮಹತ್ಯೆಯಲ್ಲದೆ ಬೇರೆ ಪರಿಹಾರವಿಲ್ಲ ಎಂಬಂಥ ಸನ್ನಿವೇಶವನ್ನು ಸೃಷ್ಟಿಸುವುದೂ ಸಹ ಕೊಲೆಯಷ್ಟೇ ಗುರುತರವಾದ ಅಪರಾಧ. ಆದರೆ ಮಹಿಳೆಗೆ ಸಂಬಂಧಿಸಿದ ಇತರ ಅಪರಾಧಗಳಂತೆ ಈ ಅಪರಾಧ ಕೂಡ ಮನೆಯ ನಾಲ್ಕು ಗೋಡೆಗಳ

ನಡುವೆ ಇತರರ ಗಮನಕ್ಕೆ ಬಾರದಂತೆ ರಹಸ್ಯವಾಗಿ ನಡೆಯುವುದರಿಂದ ಇಂಥ ಅಪರಾಧಗಳನ್ನು ಸಾಬೀತುಪಡಿಸುವುದು ಕಷ್ಟ. ಆದ್ದರಿಂದಲೇ ಅಂಥ ಅಪರಾಧಗಳಿಗೆ ಸಾಕ್ಷಗಳನ್ನು ಅಗತ್ಯಪಡಿಸದೆಯೇ ಕೆಲವು ಸನ್ನಿವೇಶಗಳಲ್ಲಿ ಅಪರಾಧದ ಪೂರ್ವಭಾವನೆ ಮಾಡುವ ಅವಕಾಶವನ್ನು ಸಾಕ್ಷ್ಯ ಅಧಿನಿಯಮಕ್ಕೆ ತಿದ್ದುಪಡಿ ಮಾಡುವ ಮೂಲಕ ಕಲ್ಪಿಸಲಾಗಿದೆ. ಇದರ ಉದ್ದೇಶ ಕಾನೂನನ್ನು ಬಲಪಡಿಸುವುದು. ಇದರ ಪ್ರಕಾರ ಪತ್ನಿಯ ಮರಣ ಅಸಹಜ ಮರಣವಾಗಿದ್ದು, ವಿವಾಹವಾದ ಏಳು ವರ್ಷಗಳೊಳಗೆ ಆಗಿದ್ದರೆ, ಕೆಲವು ಮೂಲಭೂತ ಅಂಶಗಳು ಸಾಬೀತಾದಲ್ಲಿ, ಅದನ್ನು ವರದಕ್ಷಿಣೆ ಸಾವು ಎಂದು ಪೂರ್ವಭಾವನೆ ಮಾಡಬಹುದಾಗಿರುತ್ತದೆ.

ವಿವಾಹಿತ ಮಹಿಳೆಯನ್ನು ಅವಳ ಗಂಡ ಅಥವಾ ಅವನ ಕುಟುಂಬದವರು ಕ್ರೌರ್ಯಕ್ಕೆ ಅಥವಾ ಕಿರುಕುಳಕ್ಕೆ ಗುರಿಪಡಿಸಿದರೆ, ಅವರು ಭಾರತ ದಂಡ ಸಂಹಿತೆಯ ೪೯೮ಎ ಪ್ರಕರಣದ ಮೇರೆಗೆ ಶಿಕ್ಷಾರ್ಹರು. ವಿವಾಹವಾದ ಏಳು ವರ್ಷಗಳೊಳಗೆ ಸುಟ್ಟಗಾಯಗಳಿಂದ ಅಥವಾ ದೈಹಿಕ ಗಾಯಗಳಿಂದಾಗಿ ಅಥವಾ ಅಸಹಜ ಸನ್ನಿವೇಶಗಳಲ್ಲಿ ಮರಣಹೊಂದಿದ್ದರೆ ಅದಕ್ಕೆ ಮುಂಚೆ ವರದಕ್ಷಿಣೆಗಾಗಿ ಅಥವಾ ಅವರ ಸಂಬಂಧದಲ್ಲಿ ಆಕೆಯ ಗಂಡ ಅಥವಾ ಅವನ ಸಂಬಂಧಿಕರು ಹಿಂಸೆ ಅಥವಾ ಕಿರುಕುಳವನ್ನು ಆಕೆಗೆ ಕೊಟ್ಟಿದ್ದರೆ, ಅವಳ, ಸಾವು ಅವಳ ಗಂಡ ಅಥವಾ ಅವನ ಬಂಧುಗಳಿಂದ ಸಂಭವಿಸಿದೆ ಎಂದು ಭಾವಿಸಲಾಗುತ್ತದೆ. ಮತ್ತು ಭಾರತ ದಂಡ ಸಂಹಿತೆಯ ೩೦೪ಬಿ ಪ್ರಕರಣದ ಮೇರೆಗೆ ಶಿಕ್ಷೆಗೆ ಒಳಪಡಲು ಬದ್ಧನಾಗಿರುತ್ತಾರೆ. ಆದರೆ ಆ ಹಿಂಸೆ ಅಥವಾ ಕ್ರೌರ್ಯ ಆತ್ಮಹತ್ಯೆ ಮಾಡಿಕೊಳ್ಳಲು ಅವಳನ್ನು ಪ್ರೇರೇಪಿಸಿದರೆ, ಅವನು ಭಾರತ ದಂಡ ಸಂಹಿತೆಯ ೩೦೬ನೇ ಪ್ರಕರಣದ ಮೇರೆಗೆ ಆತ್ಮಹತ್ಯೆಗೆ ದುಷ್ಪ್ರೇರಣೆ ನೀಡಿದುದಕ್ಕಾಗಿ ದಂಡನಾರ್ಹನಾಗುತ್ತಾನೆ.

ಇಂಥ ಸಂದರ್ಭದಲ್ಲಿ ಮೃತಳು ಬರೆದ ಪತ್ರಗಳು ಸಹ ಮುಖ್ಯ ಸಾಕ್ಷ್ಯವಾಗಿ ಅಪರಾಧವನ್ನು ರುಜುವಾತುಪಡಿಸಲು ಸಹಾಯಕವಾಗುತ್ತದೆ. ಮಹಿಳೆಯ ವಿರುದ್ಧ ಎಸಗುವ ಇಂಥ ಅಪರಾಧಗಳು ನಾಗರಿಕ ಸಮಾಜ ಅಪಮಾನದಿಂದ ತಲೆತಗ್ಗಿಸುವಂತೆ ಮಾಡುವಂಥ ಕೃತ್ಯಗಳು ಎಂಬುದರಲ್ಲಿ ಅನುಮಾನವಿಲ್ಲ.

ಪುರುಷ ಮಹಿಳೆಯ ವಿರುದ್ಧ ಹಿಂಸಾತ್ಮಕ ಕೃತ್ಯವನ್ನೆಸಗಲು ಅವಳ ಅಧೀನ ಸ್ಥಾನಮಾನವೇ ಕಾರಣ ಎಂಬುದರಲ್ಲಿ ಸಂಶಯವಿಲ್ಲ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಆರ್ಥಿಕವಾಗಿ ಪತಿ ಪತ್ನಿ ಸಮಾನರಾಗಿದ್ದಾಗ ಇಂಥ ವರ್ತನೆ ಪುರುಷರಿಂದ ಸಾಧ್ಯವಿಲ್ಲ. ಮಹಿಳೆಯು ಮನೆಯಲ್ಲಿ ಮಾಡುವ ಎಲ್ಲ ಕೆಲಸಗಳಿಗೆ 'ಕರ್ತವ್ಯ'ವೆಂಬ ಹಣೆಪಟ್ಟಿ ಹಚ್ಚಿ ಅದನ್ನು ಅನುತ್ಪಾದಕ ಕೆಲಸವೆಂದು ಪರಿಗಣಿಸಿಬಿಡುವುದರಿಂದ ಅವಳು

ಆರ್ಥಿಕವಾಗಿ ಅವಲಂಬಿತಳಾಗಿಯೇ ಉಳಿದುಬಿಡುತ್ತಾಳೆ. ಈ ಆರ್ಥಿಕ ಅವಲಂಬನೆ ಅನ್ಯಾಯದ ಹಾಗೂ ಹಿಂಸೆಯ ವಿರುದ್ಧ ದನಿಯೆತ್ತದಂತೆ ಮಾಡುತ್ತದೆ.

## ಅತ್ಯಾಚಾರ

ಅತ್ಯಾಚಾರದ ಅಪರಾಧ ಮಹಿಳೆಯರ ಮೇಲೆ ನಡೆಸುವ ಅತ್ಯಂತ ಹೇಯವಾದಂಥ ಮತ್ತು ಅತಿ ಘೋರವಾದ ಅಪರಾಧ. ಮಹಿಳೆಯ ಶೀಲಕ್ಕೆ ಅತಿ ಹೆಚ್ಚಿನ ಮೌಲ್ಯವಿರುವ ನಮ್ಮ ಭಾರತೀಯ ಸಮಾಜದ ಸಂದರ್ಭದಲ್ಲಿ ಅತ್ಯಾಚಾರ ಒಬ್ಬ ಮಹಿಳೆಯ ಬಾಳನ್ನು ಶಾಶ್ವತವಾಗಿ ನಾಶ ಮಾಡಿಬಿಡುತ್ತದೆ. ಅಪರಾಧಕ್ಕೊಳಗಾದ ವ್ಯಕ್ತಿಯೇ ಸಮಾಜದಿಂದಲೂ ತಿರಸ್ಕೃತವಾಗಬೇಕಾದ ಅತಿ ಘೋರ ಶಿಕ್ಷೆಗೆ ಒಳಪಡುವ ಸಂದರ್ಭ ಬಹುಶಃ ಇದೊಂದೇ ಅಪರಾಧದಲ್ಲಿ. ಅಪರಾಧ ಮಾಡಿದ ವ್ಯಕ್ತಿಯನ್ನು ಉದಾರವಾಗಿ ಕ್ಷಮಿಸಿಬಿಡುವ ಸಮಾಜ ಅತ್ಯಾಚಾರಕ್ಕೊಳಗಾದ ಮಹಿಳೆಯ ಬಗ್ಗೆ ಅತಿ ಕ್ರೂರವಾಗಿ ನಡೆದುಕೊಳ್ಳುತ್ತದೆ. ಹಿಂದಿನಿಂದಲೂ ಸಮಾಜ ಮಹಿಳೆಯ ವ್ಯಕ್ತಿತ್ವದ ಬಗ್ಗೆ, ಅವಳ ನಡತೆ, ಶೀಲಗಳ ಬಗ್ಗೆ ಹಾಕಿಕೊಟ್ಟಿರುವ ಚೌಕಟ್ಟು, ಹೀಗೆಯೇ ಇರಬೇಕೆಂಬ ಮಾನದಂಡಗಳು, ರೂಪಿಸಿರುವ ಸಾಮಾಜಿಕ ಮನೋಭಾವ, ಆರ್ಥಿಕ ಅವಲಂಬನೆಗಳೂ ಅತ್ಯಾಚರಕ್ಕೊಳಗಾದ ಮಹಿಳೆಯನ್ನು ಅಧೀರಳನ್ನಾಗಿಸುವಲ್ಲಿ, ಅತ್ಯಾಚಾರಿಯನ್ನು ಶಿಕ್ಷಿಸುವ ಧೈರ್ಯ ತೋರದಿರುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತದೆ.

ಅತ್ಯಾಚಾರದ ಪ್ರಕರಣಗಳನ್ನು ವಿಶ್ಲೇಷಿಸಿದಾಗ, ಆ ಬಗ್ಗೆ ಇರುವ ಕಾನೂನು ಎಷ್ಟೊಂದು ಪಕ್ಷಪಾತ ದಿಂದ ಕೂಡಿದೆಯಲ್ಲದೆ, ಎಷ್ಟೊಂದು ಕ್ರೂರವಾಗಿದೆ ಎಂಬುದು ಅರಿವಾಗುತ್ತದೆ. ಕ್ರಿಮಿನಲ್ ಕಾನೂನಿನಲ್ಲಿ ತಿದ್ದುಪಡಿಗಳನ್ನು ತರಲು ಕಾರಣವಾದ ಮಥುರಾ ಪ್ರಕರಣದೊಂದಿಗಲ್ಲದೆ, ಅತ್ಯಾಚಾರ ಪ್ರಕರಣಗಳ ವಿಶ್ಲೇಷಣೆ ಸಾಧ್ಯವಿಲ್ಲ ಎನ್ನುವ ಮಟ್ಟಿಗೆ ಈ ಪ್ರಕರಣದಲ್ಲಿ ಹೊರಬಿದ್ದ ತೀರ್ಪು ಪ್ರಸ್ತುತವಾಗುತ್ತದೆ.

ಮಥುರಾ ಪ್ರಕರಣದಲ್ಲಿ ಮಥುರಾ ಅತ್ಯಾಚಾರಕ್ಕೊಳಗಾದ ೧೬ ವರ್ಷದ ಬಾಲೆ. ಅವಳ ಮೇಲೆ ಅತ್ಯಾಚಾರವೆಸಗಿದವರು ಕಾನೂನು ರಕ್ಷಕರೆನಿಸುವ ಪೊಲೀಸರು. ಸ್ಥಳ-ಕಾನೂನಿನ ರಕ್ಷಕರ ಕಾರ್ಯ ನಿರ್ವಹಣೆಯ ಕಚೇರಿ. ಎಂಥ ವಿಪರ್ಯಾಸ!

ವಿಚಾರಣಾ ನ್ಯಾಯಾಲಯ ಈ ಪ್ರಕರಣದಲ್ಲಿ ಆರೋಪಿಗಳಾದ ದೇಸಾಯಿ ಗಂಜ್ ಪೊಲೀಸು ಠಾಣೆಯ ಮುಖ್ಯಪೇದೆ ಗಣಪತ್ ಹಾಗೂ ಪೇದೆ ತುಕಾರಾಂ ಅವರುಗಳನ್ನು ನಿರ್ದೋಷಿಗಳೆಂದು ಖುಲಾಸೆ ಮಾಡಿತು. ಈ ತೀರ್ಪಿನ ವಿರುದ್ಧ ಉಚ್ಚನ್ಯಾಯಾಲಯಕ್ಕೆ ಸಲ್ಲಿಸಿದ ಅಪೀಲಿನಲ್ಲಿ ನ್ಯಾಯಾಲಯ ಈ ಇಬ್ಬರನ್ನು ಅಪರಾಧಿಗಳೆಂದು ನಿರ್ಣಯಿಸಿ ತೀರ್ಪು ನೀಡಿತು. ಈ ತೀರ್ಪಿನ ವಿರುದ್ಧ ಅಪರಾಧಿಗಳು ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ಅಪೀಲಿನಲ್ಲಿ ಆರೋಪಿಗಳಿಬ್ಬರೂ ನಿರಪರಾಧಿಗಳೆಂದು ಖುಲಾಸೆಯಾದರು.

ಅತ್ಯಾಚಾರದಂಥ ಅಪರಾಧದಲ್ಲಿ ಪ್ರತ್ಯಕ್ಷ ಸಾಕ್ಷಿಯ ಸಾಕ್ಷ್ಯವಾಗಲೀ ಪೂರಕ ಸಾಕ್ಷ್ಯವಾಗಲೀ ದೊರೆಯುವುದು ಸಾಧ್ಯವಿಲ್ಲ. ಅಪರಾಧದ ಗೋಪ್ಯತೆಯೇ ಇದಕ್ಕೆ ಕಾರಣ. ಈ ಪ್ರಕರಣದಲ್ಲಿ ಆರೋಪಿಗಳನ್ನು ಖುಲಾಸೆ ಮಾಡಲು ನ್ಯಾಯಾಲಯ ನೀಡಿದ ಕಾರಣ ಅತ್ಯಾಚಾರಕ್ಕೊಳಗಾದ ಮಥುರಾ ಕೂಗಿಕೊಳ್ಳುವ ಮೂಲಕವಾಗಲೀ ಅಥವಾ ಇತರ ರೀತಿಯ ಪ್ರತಿಭಟನೆ ತೋರುವ ಮೂಲಕವಾಗಲೀ ಆ ಕೃತ್ಯಕ್ಕೆ ಪ್ರತಿರೋಧ ವ್ಯಕ್ತಪಡಿಸಿಲ್ಲ ಎಂಬುದು. ಸಾಕ್ಷ್ಯಗಳು ದೊರೆಯದಿರುವ ಸಂದರ್ಭಗಳಲ್ಲಿ ಸನ್ನಿವೇಶಗಳು ನೀಡುವ ಸಾಕ್ಷ್ಯವನ್ನು ಅವಲಂಬಿಸಬೇಕಾಗುತ್ತದೆ ಮತ್ತು ಆ ಸನ್ನಿವೇಶಗಳು ಆರೋಪಿಯನ್ನಲ್ಲದೆ ಬೇರಾರೂ ಅಪರಾಧಿಯಾಗಿರಲು ಸಾಧ್ಯವಿಲ್ಲ ಎನ್ನುವಮಟ್ಟಿಗೆ ಸೂಚಿಸುವಂತಿರಬೇಕು. ಆಗ ಸನ್ನಿವೇಶಗಳ ಸಾಕ್ಷ್ಯವನ್ನಾಧರಿಸಿ ಅಪರಾಧನಿರ್ಣಯ ಸಾಧ್ಯವಾಗುತ್ತದೆ. ಈ ತತ್ತ್ವ ಕ್ರಿಮಿನಲ್ ಕಾನೂನಿನ ಒಪ್ಪಿತ ತತ್ತ್ವ. ಜೊತೆಗೆ ಅತ್ಯಾಚಾರ ಪ್ರಕರಣಗಳಲ್ಲಿ ಅಪರಾಧ ಸಾಬೀತಾಗಲು ವೈದ್ಯಕೀಯ ಸಾಕ್ಷ್ಯಗಳು ನೆರವಿಗೆ ಒದಗುತ್ತವೆ. ಆದರೆ ಎಲ್ಲ ರೀತಿಯ ಸಾಕ್ಷ್ಯಗಳಿದ್ದೂ ಕೆಲವೊಮ್ಮೆ ಆರೋಪಿಗಳ ಪರವಾಗಿಯೇ ತೀರ್ಪುನೀಡಿದ ಪ್ರಕರಣಗಳೂ ಉಂಟು. ಬನ್ವಾರೀ ದೇವಿಯ ಪ್ರಕರಣ ಇದಕ್ಕೆ ಒಂದು ಉದಾಹರಣೆ. ಬನ್ವಾರೀ ದೇವಿ ಭಟೇರಿ ಗ್ರಾಮದ ನಿವಾಸಿ ಮತ್ತು ಗ್ರಾಮ ಸತಿಯಾಗಿ ಉದ್ಯೋಗಿ. ೨೨-೯-೯೨ರಂದು ಸಂಜೆ ೬ ಗಂಟೆಯಲ್ಲಿ ಬನ್ವಾರೀ ದೇವಿ ಮತ್ತು ಅವಳ ಪತಿ ಮೋಹನ ಊರಹೊರಗಿನ ಬಾವಿಯ ಬಳಿ ಇದ್ದಾಗ ಅದೇ ಗ್ರಾಮದ ಐದು ಮಂದಿ ಗ್ರಾಮಸ್ಥರು ಜಗಳ ತೆಗೆದು ಅವನನ್ನು ಥಳಿಸಿ ಅವನನ್ನು ಬಿಡಿಸಲು ಹೋದ ಬನ್ವಾರೀ ದೇವಿಯ ಮೇಲೆ ಅವಳ ಪತಿಯ ಎದುರಿನಲ್ಲೇ ಐವರ ಪೈಕಿ ಇಬ್ಬರು ಅತ್ಯಾಚಾರ ನಡೆಸಿದರು. ಮಿಕ್ಕ ಇಬ್ಬರು ಈ ಕೃತ್ಯದಲ್ಲಿ ಸಹಾಯಕರಾದರೆ, ಎಪ್ಪತ್ತು ವರ್ಷದ ಗ್ರಾಮದ ಗೌರವಾನ್ವಿತ(ಬನ್ವಾರಿದೇವಿಯ ಹೇಳಿಕೆಯ ಪ್ರಕಾರ) ವ್ಯಕ್ತಿ ಇದಕ್ಕೆ ಸಾಕ್ಷಿಯಾಗಿದ್ದ.

ಬನ್ವಾರಾದೇವಿ ಗ್ರಾಮಸತಿಯಾಗಿ ಕೆಲಸ ಮಾಡುತ್ತಿದ್ದು ಅತ್ಯಾಚಾರಿಗಳಲ್ಲೊಬ್ಬನ ಒಂದು ವರ್ಷದ ಹೆಣ್ಣುಮಗುವಿಗೆ ಮದುವೆ ಮಾಡುವುದನ್ನು ವಿರೋಧಿಸಿದ್ದಳು. ಇದಕ್ಕೆ ಪ್ರತೀಕಾರವಾಗಿ ತನ್ನ ಗಂಡನನ್ನು ಥಳಿಸಿ ತನ್ನ ಮೇಲೆ ಅತ್ಯಾಚಾರವೆಸಗಲಾಗಿದೆ ಎಂದು ಅವಳ ಹೇಳಿಕೆ.

ಈ ಪ್ರಕರಣದಲ್ಲಿ ತೀರ್ಪು ನೀಡುತ್ತಾ ನ್ಯಾಯಾಧೀಶರು ವೈದ್ಯಕೀಯ ವರದಿ ಆರೋಪಿಗಳನ್ನು ಅಪರಾಧಿಗಳನ್ನಾಗಿಸಲು ಸಮರ್ಥನೆ ನೀಡುವುದಿಲ್ಲ ಎನ್ನುತ್ತಾರೆ. ಆರೋಪಿಗಳ ವಯಸ್ಸು ಹಾಗೂ ಹಳ್ಳಿಯಲ್ಲಿ ಅವರಿಗಿರುವ ಗೌರವವನ್ನು ಉಲ್ಲೇಖಿಸಿ, ಅವರ ಮೇಲಿರುವ ಆರೋಪವನ್ನು ತಳ್ಳಿಹಾಕಿದ್ದಾರೆ. ಆದರೆ ಅವರೇ ಹೇಳುವಂತೆ ಶೀಲಕ್ಕೆ ಅತ್ಯಂತ ಹೆಚ್ಚಿನ ಮೌಲ್ಯವನ್ನು ಕೊಡುವ ಭಾರತೀಯ ಸಮಾಜದ ಸಂದರ್ಭದಲ್ಲಿ ತನ್ನ ಶೀಲ ಹರಣವಾಯಿತೆಂದು, ಅದೂ ಪತಿಯ ಎದುರಿನಲ್ಲಿ, ಯಾವ ಹೆಣ್ಣು ತಾನೇ

ಸುಳ್ಳು ಸುದ್ದಿ ಹಬ್ಬಿಸಲು ಸಾಧ್ಯ ಎಂಬ ದಿಕ್ಕಿನಲ್ಲಿ ಏಕೆ ಯೋಚನೆ ಮಾಡಲಿಲ್ಲ ಎಂಬುದು ಆಶ್ಚರ್ಯ ಉಂಟುಮಾಡುವ ಸಂಗತಿ.

ಘಟನೆ ನಡೆದ ಸ್ಥಳದಿಂದ ಐದು ಹತ್ತು ಕಿ.ಮೀ ದೂರದಲ್ಲಿರುವ ಪೊಲೀಸು ಠಾಣೆಗೆ ಹೋಗಿ ದೂರು ನೀಡುವ ಬದಲು ಇತರರಿಗೆ ಹೇಳುತ್ತ ಬಂದುದೇಕೆಂದು ವಾದಿಸಲಾಗಿದೆ. ಯಾವುದೇ ಸಣ್ಣ ಅಪರಾಧದ ಬಗ್ಗೆ ಪೊಲೀಸು ಠಾಣೆಗೆ ಹೋಗಿ ದೂರುಕೊಡುವುದಕ್ಕೂ ಹಿಂಜರಿಯಬೇಕಾದಂಥ ಪರಿಸ್ಥಿತಿ ಇರಬೇಕಾದರೆ, ಇಂಥ ಗುರುತರ ಅಪರಾಧದ ಬಗ್ಗೆ, ಅದೂ ಹಳ್ಳಿಯ ಗೌರವಾನ್ವಿತ ವ್ಯಕ್ತಿಯೇ ಷಾಮೀಲಾಗಿರುವ ಒಂದು ಅಪರಾಧದ ಬಗ್ಗೆ ದೂರುಕೊಡಬೇಕಾಗಿರುವ ಸಂದರ್ಭದಲ್ಲಿ ಇತರರ ಬೆಂಬಲವಿದೆಯೆಂಬ ಧೈರ್ಯವಿಲ್ಲದೆ ನೇರವಾಗಿ ಪೊಲೀಸುಠಾಣೆಗೆ ಹೋಗಿ ದೂರುಕೊಡಬೇಕಿತ್ತು ಎಂದು ನಿರೀಕ್ಷಿಸುವುದಾದರೂ ಹೇಗೆ.

ಅತ್ಯಾಚಾರಕ್ಕೊಳಗಾದ ಮಹಿಳೆಯ ಮನಸ್ಸಿಗೆ ಆಗುವ ಆಘಾತ, ಪರಪುರುಷರೆದುರಿನಲ್ಲಿ ತನ್ನ ದೇಹ ಪ್ರದರ್ಶಿತವಾದುದರಿಂದಾಗಿ ಉಂಟಾದ ಅಪಮಾನ, ನಾಚಿಕೆ, ಅತ್ಯಾಚಾರಕ್ಕೊಳಗಾದುದರ ಬಗ್ಗೆ ಉಂಟಾದ ಆಕ್ರೋಶ ಅಸಹಾಯಕತೆ ಇವಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೆ ತಾರ್ಕಿಕವಾಗಿ 'ಇದಾದ ನಂತರ ಹೀಗೆ ಮಾಡಬೇಕಿತ್ತು' ಎನ್ನುವುದಾಗಲೀ 'ಹಾಗೇಕೆ ಮಾಡಲಿಲ್ಲ' ಎನ್ನುವುದಾಗಲೀ ತೀರ ಅಮಾನವೀಯವಾದದ್ದು. ಮಹಿಳೆ ಅಂಥ ಸಂದರ್ಭದಲ್ಲಿ ತಾರ್ಕಿಕವಾಗಿ ಯೋಚಿಸುವ ಸಾಮರ್ಥ್ಯವನ್ನೇ ಕಳೆದುಕೊಂಡಿದ್ದರೂ ಆಶ್ಚರ್ಯವಿಲ್ಲ. ಅತ್ಯಾಚಾರದ ಅನೇಕ ಪ್ರಕರಣಗಳಲ್ಲಿ ಪೊಲೀಸರಿಗೆ ದೂರುಕೊಡುವಲ್ಲಿ ಆದ ವಿಳಂಬವನ್ನು ಈ ಕಾರಣಕ್ಕಾಗಿಯೇ ಪ್ರತಿಕೂಲವಾಗಿ ಪರಿಗಣಿಸಿಲ್ಲ. ಇದಕ್ಕೆ ಕಾರಣ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯ ಮಾನಸಿಕ ಸ್ಥಿತಿ ರೂಪುಗೊಂಡಿರುವ ಬಗೆ ಮತ್ತು ತನ್ನ ಶೀಲ ಹರಣವಾಯಿತೆಂದು ಹೇಳಿಕೊಳ್ಳುವ ಬಗ್ಗೆ ಇರುವ ಹಿಂಜರಿಕೆ, ಈ ಹಿಂಜರಿಕೆಗೆ ಕಾರಣವಾಗುವ ಸಾಮಾಜಿಕ ಸಂದರ್ಭಗಳು.

ಅತ್ಯಾಚಾರದ ಅನೇಕ ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳು ಹಾಗೂ ಅವುಗಳ ವಿಶ್ಲೇಷಣೆಯನ್ನು ಗಮನಿಸಿದಾಗ, ಸಮಾಜದ ಸಂರಚನೆ, ಕಾನೂನುಗಳಲ್ಲಿ ಅಡಕವಾಗಿರುವ ಪುರುಷ ಪ್ರಧಾನ ಚಿಂತನೆ ಕಾನೂನುಗಳನ್ನು ವ್ಯಾಖ್ಯಾನಿಸಿ ನ್ಯಾಯದೊರಕಿಸುವ ಸಂದರ್ಭದಲ್ಲಿ ತನ್ನ ಪ್ರಭಾವವನ್ನು ತೋರಿಸಿದೆ ಎಂಬುದು ಸ್ಪಷ್ಟವಾಗುತ್ತದೆ.

ರವೀಂದ್ರ ದಿನಕರ್ -ವಿ-ಮಹಾರಾಷ್ಟ್ರರಾಜ್ಯ (೧೯೮೯ ಕ್ರಿ.ಲಾ.ಜ ೬೯೪) ಪ್ರಕರಣದಲ್ಲಿ ಕೊಲ್ಹಾಪುರದ ಸತ್ರ ನ್ಯಾಯಾಲಯದ ದೋಷಸಿದ್ಧಿಯನ್ನು ಮುಂಬಯಿ ಉಚ್ಚನ್ಯಾಯಾಲಯ ತಳ್ಳಿಹಾಕಿತು. ಈ ಪ್ರಕರಣದಲ್ಲಿ ಆರೋಪಿಯನ್ನು ಪ್ರೀತಿಸುತ್ತಿದ್ದ ಬಾಲಕಿ ಸ್ವಯಿಚ್ಛೆಯಿಂದ ತನ್ನ ಪ್ರಿಯತಮನೊಂದಿಗೆ

ಅವನ ಗೆಳೆಯನ ಮನೆಗೆ ಹೋಗಿದ್ದಳು. ಅಲ್ಲಿ ಮನೆಯವರ ಜೊತೆಯಲ್ಲಿಯೇ ಒಂದೇ ಕೋಣೆಯಲ್ಲಿ ಮಲಗಿದರು. ಆರೋಪಿ ಬಾಲಕಿಯ ವಿರೋಧವನ್ನು ಲೆಕ್ಕಿಸದೆ ರಾತ್ರಿ ಅವಳ ಮೇಲೆ ಎರಡು ಬಾರಿ ಅತ್ಯಾಚಾರವೆಸಗಿದ. ವೈದ್ಯಕೀಯ ವರದಿ ಬಾಲಕಿಯ ಕನ್ಯಾಪೊರೆ ಹರಿದಿದೆಯೆಂದು ವರದಿನೀಡಿತು. ಬಾಲಕಿ ೧೬ ವರ್ಷಗಳಿಗಿಂತ ಕಡಿಮೆ ವಯಸ್ಸಿನವಳಾಗಿದ್ದುದರಿಂದ ಅವಳ ಸಮ್ಮತಿ ಇತ್ತೆ ಅಥವಾ ಇರಲಿಲ್ಲವೇ ಎಂಬುದು ಮುಖ್ಯವಾಗುವುದಿಲ್ಲ ಎಂದು ಅಭಿಪ್ರಾಯಪಟ್ಟು ಆರೋಪಿ ಅಪರಾಧಿಯೆಂದು ನ್ಯಾಯಾಲಯ ತೀರ್ಪುನೀಡಿತು. ಅಪೀಲಿನಲ್ಲಿ ಉಚ್ಚನ್ಯಾಯಾಲಯ ಅವಳ ವಯಸ್ಸಿನ ಬಗ್ಗೆ ಶಾಲೆಯ ಪ್ರಮಾಣಪತ್ರ ಹಾಗೂ ಜನನ ಪ್ರಮಾಣ ಪತ್ರಗಳಲ್ಲಿ ನಮೂದಾಗಿರುವ ವಯಸ್ಸುಗಳಲ್ಲಿ ವ್ಯತ್ಯಾಸವಿರುವುದರಿಂದ ಸಂದೇಹದ ಲಾಭ ಆರೋಪಿಗೆ ದೊರೆಯಬೇಕು ಎಂದು ಅಭಿಪ್ರಾಯಪಟ್ಟು, ಬಾಲಕಿ ಪ್ರಾಪ್ತವಯಸ್ಸಿನವಳಾಗಿದ್ದಳು ಎಂದು ಭಾವಿಸಲಾಯಿತು. ಸಣ್ಣ ಕೋಣೆಯಲ್ಲಿ ಇತರರು ಇರುವಾಗ ಹುಡುಗಿಗೆ ನಾಚಿಕೆಯಾಗುವುದು ಸಹಜ. ಆದ್ದರಿಂದ ಆರೋಪಿ ಎರಡು ಬಾರಿ ಅತ್ಯಚಾರವೆಸಗಿದ್ದಾನೆ ಎಂಬುವುದನ್ನು ನಂಬುವುದು ಕಷ್ಟ ಎಂಬ ತರ್ಕದ ಮೇಲೆ ಆರೋಪಿಯನ್ನು ನಿರ್ದೋಷಿ ಎಂದು ತೀರ್ಮಾನಿಸಿ ಬಿಡುಗಡೆ ಮಾಡಲಾಯಿತು.

ಇಲ್ಲಿ, ಶಾಲೆಯ ಮತ್ತು ಜನನ ಪ್ರಮಾಣಪತ್ರಗಳಲ್ಲಿ ವ್ಯತ್ಯಾಸವಿತ್ತು ಎಂಬ ತಾಂತ್ರಿಕ ಕಾರಣದ ಮೇಲೆ ಹುಡುಗಿ ಪ್ರಾಪ್ತವಯಸ್ಕಳೆಂದು ಭಾವಿಸಿ ಅವಳ ಸಮ್ಮತಿಯನ್ನು ಪೂರ್ವಭಾವಿಸಲಾಗಿದೆ. ಹುಡುಗಿ ಪ್ರಾಪ್ತವಯಸ್ಕಳೆ ಅಲ್ಲವೆ ಎಂಬುದು ತೀರ ತಾಂತ್ರಿಕವಾದ ವಿಷಯ. ಒಂದು ವೇಳೆ ಹುಡುಗಿಗೆ ವಾಸ್ತವವಾಗಿಯೂ ೧೬ ವರ್ಷಗಳಾಗಿದ್ದು, ಅವಳನ್ನು ಪ್ರಾಪ್ತವಯಸ್ಕಳೆಂದು ಪರಿಗಣಿಸಿದರೂ, ಹುಡುಗಿ ಅದಕ್ಕೆ ಸಮ್ಮತಿಸಿದ್ದಳು ಎಂದು ವಾದಿಸಿದರೂ ಅದು ಅನುಮಾನಾಸ್ಪದವಾಗುತ್ತದೆ. ಏಕೆಂದರೆ ಅವಳು ಸಮ್ಮತಿಸಿದ್ದೇ ಆಗಿದ್ದಿದ್ದರೆ, ಸತ್ರ ನ್ಯಾಯಾಲಯದಲ್ಲಿಯೇ ಅವಳ ವಾದ ಸೋಲುತ್ತಿತ್ತು. ಮತ್ತು ಸಣ್ಣವ್ಯತ್ಯಾಸಗಳು ಹಾಗೂ ತಾಂತ್ರಿಕ ಸ್ವರೂಪದ ಆಕ್ಷೇಪಗಳು ಮೂಲ ಆರೋಪವನ್ನು ಸುಳ್ಳಾಗಿಸದಿದ್ದರೆ ಅಪರಾಧ ನಿರ್ಣಯದಲ್ಲಿ ಅದು ಪ್ರಭಾವಬೀರದಂತೆ ಎಚ್ಚರವಹಿಸಬೇಕು ಎಂಬ ಅಭಿಪ್ರಾಯವನ್ನು ಸರ್ವೋಚ್ಚ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ವ್ಯಕ್ತಪಡಿಸಿದೆ.

ಅನೇಕ ಪ್ರಕರಣಗಳಲ್ಲಿ, ಅತ್ಯಾಚಾರಕ್ಕೊಳಗಾದ ಮಹಿಳೆ ಅನುಭವಿಸುವ ಮಾನಸಿಕ ಹಿಂಸೆಗಿಂತ ಹೆಚ್ಚಾಗಿ, ಅವಳಿಗೆ ವಿವಾಹವಾಗುವ ಸಾಧ್ಯತೆಗಳು ಕಡಿಮೆಯಾಗುವ ಬಗ್ಗೆ, ಅಥವಾ ವಿವಾಹವಾದರೂ ಈ ಕಾರಣಕ್ಕಾಗಿ ತಗಲುವ ಹೆಚ್ಚಿನ ಖರ್ಚುಗಳ ಬಗ್ಗೆ ತೀರ್ಪುಗಳಲ್ಲಿ ಹೆಚ್ಚಿನ ಕಾಳಜಿಯನ್ನು ವ್ಯಕ್ತಪಡಿಸಲಾಗಿದೆ ಮತ್ತು ಅವಳಿಗೆ ಅಪರಾಧಿಯಿಂದ ನಷ್ಟಪರಿಹಾರವನ್ನು ಕೊಡಿಸುವ ಕ್ರಮಗಳನ್ನೂ ಕೈಗೊಳ್ಳಲಾಗಿದೆ. ಹೆಣ್ಣುಮಕ್ಕಳ ವಿವಾಹದ ಬಗ್ಗೆ ವಹಿಸುವ ಕಾಳಜಿ, ಅಪರಾಧಿಯ ಮಗಳ ವಿವಾಹದ

ಬಗ್ಗೆ ಕಾಳಜಿವಹಿಸುವ ಮಟ್ಟಕ್ಕೂ ಹೋಗಿದೆ. ಒಂದು ಪ್ರಕರಣದಲ್ಲಿ (ಕ್ರಿ.ಲಾ.ಜ (೧೯೮೧) ೧) ಆರೋಪಿ ೧೦ ಮತ್ತು ೧೨ ವರ್ಷದ ಬಾಲಕಿಯರ ಮೇಲೆ ಅತ್ಯಾಚಾರ ನಡೆಸಿದ್ದ (ಜಯಂತಿರಾಣಿ ಪಾಂಡ-ವಿ-ವೆಸ್ಟ್ ಬೆಂಗಾಲ್). ರಾಜ್ಯ ಉಚ್ಚನ್ಯಾಯಾಲಯದ ದೋಷಸಿದ್ಧಿಯನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದರೂ, ಅತ್ಯಾಚಾರ ಪ್ರಕರಣದಲ್ಲಿ ಅಪರಾಧಿಯೆಂದು ನಿರ್ಣೀತನಾಗಿರುವುದರಿಂದ ಅವನಿಗೆ ಅಂಟುವ ಸಾಮಾಜಿಕ ಕಳಂಕದಿಂದಾಗಿ ಅವನ ಮಗಳಿಗೆ ಒಳ್ಳೆಯ ವಿವಾಹ ಸಂಬಂಧ ದೊರೆಯುವ ಸಾಧ್ಯತೆ ಇಲ್ಲವಾಗುತ್ತದೆ ಎಂಬ ಕಾರಣ ನೀಡಿ, ಉಚ್ಚನ್ಯಾಯಾಲಯ ಅವನಿಗೆ ವಿಧಿಸಿದ್ದ ಶಿಕ್ಷೆಯನ್ನು ಸರ್ವೋಚ್ಚ ನ್ಯಾಯಾಲಯ ಕಡಿಮೆ ಮಾಡಿತು. ಅಲ್ಲದೆ ಅತ್ಯಾಚಾರ ಪ್ರಕರಣ ಇತ್ಯರ್ಥಗೊಳ್ಳುವುದಕ್ಕೆ ಮುಂಚೆ ಅತ್ಯಾಚಾರಕ್ಕೊಳಗಾದ ಮಹಿಳೆಯ ವಿವಾಹವಾದರೆ, ಅತ್ಯಾಚಾರದಿಂದಾಗಿ ಅವಳಿಗೆ ಉಂಟಾದ ನಷ್ಟ ಕಡಿಮೆಯಾಯಿತೆಂದು ಭಾವಿಸಿ, ಅಪರಾಧಿಗೆ ಶಿಕ್ಷೆ ವಿಧಿಸುವಾಗ ಔದಾರ್ಯ ತೋರಿದ ಪ್ರಕರಣಗಳೂ ಇವೆ. ದಯಾರಾಮ್ ಮತ್ತು ಮತ್ತೊಬ್ಬ-ವಿ-ಮಧ್ಯಪ್ರದೇಶ ರಾಜ್ಯ ಪ್ರಕರಣದಲ್ಲಿ, ಗುಡ್ಡಗಾಡು ಜನಾಂಗಕ್ಕೆ ಸೇರಿದ ಹುಡುಗಿಯನ್ನು ಅವಳ ತಂದೆ ಇಲ್ಲದ ಸಮಯದಲ್ಲಿ ಇಬ್ಬರು ಅವಳ ಮನೆಗೆ ನುಗ್ಗಿ ಅವಳನ್ನು ಹತ್ತಿರದ ಕಾಡಿಗೆ ಎಳೆದೊಯ್ದು ಅವಳ ಮೇಲೆ ಅತ್ಯಾಚಾರ ನಡೆಸಿದರು. ಸತ್ರನ್ಯಾಯಾಲಯ ಇಬ್ಬರು ಆರೋಪಿಗಳಿಗೂ ಶಿಕ್ಷೆವಿಧಿಸಿತು. ಉಚ್ಚನ್ಯಾಯಾಲಯ ಸತ್ರನ್ಯಾಯಾಲಯದ ತೀರ್ಪನ್ನು ಎತ್ತಿಹಿಡಿದರೂ, ಅತ್ಯಾಚಾರ ಹುಡುಗಿಯ ಜೀವನದಲ್ಲಿ ಅಂಥ ಗಂಭೀರವಾದ ಕಳಂಕ ಉಂಟುಮಾಡಲಾರದು ಎಂಬ ಕಾರಣದ ಮೇಲೆ ಅಪರಾಧಿಗಳಿಗೆ ವಿಧಿಸಿದ್ದ ಶಿಕ್ಷೆಯನ್ನು ಕಡಿಮೆಮಾಡಿತು. ಅಪರಾಧದ ತೀವ್ರತೆಯನ್ನು ನಿರ್ಧರಿಸುವಾಗ ಹುಡುಗಿ ಯಾವ ಗುಡ್ಡಗಾಡು ಜನಾಂಗಕ್ಕೆ ಸೇರಿದ್ದಾಳೋ ಆ ಗುಡ್ಡಗಾಡು ಜನಾಂಗದ ಲೈಂಗಿಕ ನೈತಿಕತೆಯನ್ನು ಪರಿಗಣಿಸಬೇಕು ಎಂದು ತೀರ್ಪುನೀಡಿತು.

ಮೇಲಿನ ಕೆಲವು ತೀರ್ಪುಗಳನ್ನು ನೋಡಿದರೆ, ಪಿತೃಪ್ರಧಾನ ಸಂರಚನೆಯ ಮಾನದಂಡದಿಂದಲ್ಲದೆ ಬೇರೆ ರೀತಿಯಿಂದ ಅತ್ಯಾಚಾರ ಪ್ರಕರಣಗಳನ್ನು ವಿಶ್ಲೇಷಿಸಿಯೇ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮಹಿಳೆಯನ್ನು ಸ್ವತಂತ್ರ ವ್ಯಕ್ತಿತ್ವವುಳ್ಳ, ಆತ್ಮಗೌರವವುಳ್ಳ ವ್ಯಕ್ತಿಯೆಂದು ಪರಿಗಣಿಸಿದ್ದಿದ್ದರೆ, ಅತ್ಯಾಚಾರ ಪ್ರಕರಣಗಳಲ್ಲಿ ನ್ಯಾಯಾಲಯಗಳು ಇಂಥ ನಿಲುವು ತಳೆಯುವುದು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಶೀಲ, ಕನ್ಯತ್ವ, ವಿವಾಹ ಸಾಧ್ಯತೆ, ಮಹಿಳೆಯರ ಮೇಲಿರುವ ಸಂದೇಹ ಮುಂತಾದ ಅಂಶಗಳೇ ಅತ್ಯಾಚಾರ ಪ್ರಕರಣಗಳ ಅಪರಾಧ ನಿರ್ಣಯ ಹಾಗೂ ವಿಧಿಸುವ ಶಿಕ್ಷೆಗಳಲ್ಲಿ ಪ್ರತಿಬಿಂಬವಾಗಿರುವುದನ್ನು ಕಾಣಬಹುದು. ಇದೇ ಮನೋಭಾವ, ತಿದ್ದುಪಡಿಗೆ ಮುನ್ನ ಹಾಗೂ ತಿದ್ದುಪಡಿಯ ನಂತರದ ಅವಧಿಗಳಲ್ಲಿ ವ್ಯಕ್ತವಾಗಿವೆ.

ಅತ್ಯಾಚಾರ ಪ್ರಕರಣಗಳಲ್ಲಿ, ಒಂದಲ್ಲ ಒಂದು ಕಾರಣಕ್ಕಾಗಿ ಉದಾರ ಮನೋಭಾವವನ್ನು ಪ್ರದರ್ಶಿಸಿ ಅಪರಾಧಿಗಳಿಗೆ ವಿಧಿಸಿದ ಶಿಕ್ಷೆಯನ್ನು ಕಡಿಮೆ ಮಾಡುವುದು ಇಲ್ಲವೇ ಸಾಕ್ಷ್ಯಗಳು ಸಾಲದೆಂದು ಖುಲಾಸೆ

ಮಾಡುವುದು ಅತ್ಯಾಚಾರಕ್ಕೊಳಗಾದ ಮಹಿಳೆಗೆ 'ಗಾಯದ ಮೇಲೆ ಉಪ್ಪು ಸವರಿದಂತೆ' ಅವಹೇಳನಕಾರಿ ಎಂದು ಹಲವಾರು ಪ್ರಕರಣಗಳಲ್ಲಿ ಅಧೀನ ನ್ಯಾಯಾಲಯಗಳ ನ್ಯಾಯಾಧೀಶರ ನಿಲುವು ಸರ್ವೋಚ್ಚ ನ್ಯಾಯಾಲಯಗಳ ನ್ಯಾಯಾಧೀಶರಿಂದ ಟೀಕೆಗೆ ಒಳಗಾಗಿದೆ. ಆದರೆ ಅತ್ಯಾಚಾರ ಪ್ರಕರಣಗಳಲ್ಲಿಯೂ ಯಾವುದೇ ಇತರ ಅಪರಾಧದಲ್ಲಿಯಂತೆ ಮಹಿಳೆಗೆ ಅನೇಕ ಹಂತಗಳಲ್ಲಿ ಅನ್ಯಾಯವಾಗುತ್ತದೆ. ಯಾವುದೇ ಅಪರಾಧದಲ್ಲಿ ಅಪರಾಧ ನಿರ್ಣಯವಾಗುವುದು ಅದಕ್ಕೆ ಸಂಬಂಧಪಟ್ಟ ಸಾಕ್ಷ್ಯಗಳನ್ನು ವಿಳಂಬವಿಲ್ಲದಂತೆ ಹಾಗೂ ದೋಷವಿಲ್ಲದಂತೆ ಸಂಗ್ರಹಿಸುವುದು ಮತ್ತು ಸಂಬಂಧಪಟ್ಟ ಎಲ್ಲ ಸಾಕ್ಷಿಗಳ ಹೇಳಿಕೆಗಳನ್ನು ಪಡೆಯುವುದು ಮುಂತಾದುವುಗಳನ್ನು ಆಧರಿಸಿ. ಈ ಯಾವುದೇ ಹಂತದಲ್ಲಿಯೂ ಆರೋಪಿಗಳು ತನಿಖಾಧಿಕಾರಿಗಳ ಮೇಲೆ ಒತ್ತಡ ತಂದು ಮುಖ್ಯ ಸಾಕ್ಷ್ಯಗಳು ನಾಶವಾಗುವಂತೆ ಅಥವಾ ಅವನ್ನು ಪ್ರಸ್ತಾಪಿಸದಿರುವಂತೆ ಮಾಡುವ ಸಾಧ್ಯತೆಗಳಿಂದಲೂ ಮಹಿಳೆ ನ್ಯಾಯವಂಚಿತಳಾಗುವ ಸಂಭವವಿರುತ್ತದೆ. ಕರ್ನಲ್ ಸಿಂಗ್ -ವಿ-ಮಧ್ಯಪ್ರದೇಶ [(೧೯೯೫)೫ ಎಸ್ ಸಿಸಿ ೫೧೮] ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ತನಿಖೆಯಲ್ಲಿ ಅನೇಕ ದೋಷಗಳನ್ನು ಮತ್ತು ಲೋಪಗಳನ್ನು ಎತ್ತಿತೋರಿಸಿದ್ದಾರೆ.

ಪಂಚ್ ಬಾಯಿ ಎಂಬಾಕೆ ಒಂದು ಕಾರ್ಖಾನೆಯ ಕೂಲಿ ಕಾರ್ಮಿಕಳು. ಅವಳ ಮೇಲೆ ಅದೇ ಕಾರ್ಖಾನೆಯ ಮತ್ತೊಬ್ಬ ಕಾರ್ಮಿಕ ಕರ್ನಲ್ ಸಿಂಗ್ ಎಂಬಾತ ಅತ್ಯಾಚಾರವೆಸಗಿದನೆಂದೂ ನಂತರ ಅವನ ಜೊತೆಗಾರನೂ ಅತ್ಯಾಚಾರವೆಸಗಲೆಂದು ಬರುವ ಮುನ್ನ ತಪ್ಪಿಸಿಕೊಂಡು ಓಡಿ ಎದುರಿಗೆ ಸಿಕ್ಕ ಮತ್ತೊಬ್ಬ ಕಾರ್ಮಿಕಳಾದ ರೇಜಾ ಮುಲ್ತಾನಾಬಾಯಿ ಎಂಬುವಳೊಂದಿಗೆ ಘಟನೆಯ ವರದಿಯೊಪ್ಪಿಸಿದುದಾಗಿ ಅವಳು ತಿಳಿಸಿದ್ದಾಳೆ. ಕರ್ನಲ್ ಸಿಂಗ್ ತನ್ನ ಮೇಲೆ ಅತ್ಯಾಚಾರವೆಸಗುವ ಮುನ್ನ ಅಲ್ಲಿಯೇ ಇದ್ದ ಚರಣ್ ಎಂಬಾತನನ್ನು ಚಹಾ ತರುವಂತೆ ಅಲ್ಲಿಂದ ಕಳುಹಿಸಿದನೆಂದು ತಿಳಿಸಿದ್ದಾಳೆ. ಆದರೆ ಈ ಇಬ್ಬರನ್ನೂ ತನಿಖಾಧಿಕಾರಿ ಪರೀಕ್ಷಿಸಿಲ್ಲ ಹಾಗೂ ಸಾಕ್ಷಿಗಳನ್ನಾಗಿ ಹಾಜರುಪಡಿಸಿಲ್ಲ. ಇವರಿಬ್ಬರೂ ಅತ್ಯಾಚಾರಕ್ಕೊಳಗಾದವಳ ಹೇಳಿಕೆಯನ್ನು ಸಮರ್ಥಿಸುವ ಸಾಕ್ಷಿಗಾಳಾಗುತ್ತಿದ್ದರು. ಘಟನೆಯ ಸ್ಥಳದಿಂದ ಸಂಗ್ರಹಿಸಿದ ವಸ್ತುಗಳ ವಿವರವನ್ನು ಸರಿಯಾದ ರೀತಿಯಲ್ಲಿ ಹಾಜರುಪಡಿಸಿಲ್ಲ. ಘಟನೆಯ ಸ್ಥಳದಿಂದ ವಶಕ್ಕೆ ತೆಗೆದುಕೊಳ್ಳಲಾದ ವೀರ್ಯದ ಕಲೆಗಳಿರುವ ಆರೋಪಿಯ ಒಳ ಉಡುಪನ್ನು ಪರೀಕ್ಷೆಗೊಳಪಡಿಸಿಲ್ಲ. ಇದು ಬಹುಮುಖ್ಯವಾದ ಸಾಕ್ಷ್ಯವಾಗುತ್ತಿತ್ತು. ತನಿಖೆಯನ್ನು ಗಂಭೀರ ರೀತಿಯಲ್ಲಿ ಕೈಗೊಂಡಿಲ್ಲ ಎಂಬುದಷ್ಟೇ ಅಲ್ಲದೆ ಅನೇಕ ದೋಷಗಳಿಂದ ಕೂಡಿತ್ತು ಎಂದು ಅಭಿಪ್ರಾಯಪಟ್ಟಿದೆ. ಇದೇ ಅಭಿಪ್ರಾಯವನ್ನು ಬಲವಂತ್ ಸಿಂಗ್ ಮತ್ತು ಇತರರು -ವಿ- ಪಂಜಾಬ್ ರಾಜ್ಯ ಮತ್ತು ಸೌದಾಘರ್

ಸಿಂಗ್ -ವಿ-ಪಂಜಾಬ್ ಸರ್ಕಾರ((೧೯೮೭)೨ ಎಸ್ ಸಿಸಿ ೨೭) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ವ್ಯಕ್ತಪಡಿಸಿದೆ.

೧೯-೨೦ ವರ್ಷದ ರಾಜವಂತಿಕಾರ್ ಎಂಬಾಕೆ ತನ್ನ ಪ್ರಿಯೂನಿವರ್ಸಿಟಿಯಲ್ಲಿ ತೇರ್ಗಡೆಯಾಗಿರುವುದರ ಪ್ರಮಾಣ ಪತ್ರವನ್ನು ತರಲೆಂದು ಗೋವಿಂದ್ ನ್ಯಾಷನಲ್ ಕಾಲೇಜಿಗೆ ಹೋಗುತ್ತಿದ್ದಾಗ, ಬಲವಂತ್ ಸಿಂಗ್, ಗುರುದೀಪ್ ಸಿಂಗ್, ನಿರ್ಮಲ್ ಸಿಂಗ್ ಮತ್ತು ಸೌದಾಗರ್ ಸಿಂಗ್ ಎಂಬ ಆಕೆಗೆ ಪರಿಚಯ ವಿದ್ದವರೇ ಬಲಾತ್ಕಾರದಿಂದ ಕಾರಿನಲ್ಲಿ ಒಯ್ದು ಕಾಲುವೆಯ ಬದಿಯ ಪೊದೆಯಲ್ಲಿ ಒಬ್ಬರಾದ ಮೇಲೊಬ್ಬರಂತೆ ಅವಳ ಮೇಲೆ ಅತ್ಯಾಚಾರ ನಡೆಸಿದರು. ಕೊನೆಯಲ್ಲಿ ಅವಳು ಪ್ರಜ್ಞೆ ತಪ್ಪಿದಳು. ಸಂಜೆಯಾದರೂ ಮಗಳು ಮನೆಗೆ ಬರದುದನ್ನು ಕಂಡು ಅವಳನ್ನು ಹುಡುಕುತ್ತಾ ಹೊರಟ ಅವಳ ತಂದೆ, ಅವಳು ನಾಲೆಯ ಸೇತುವೆಯ ಬಳಿ ಆಲದಮರದ ಬಳಿಯಲ್ಲಿ ಪ್ರಜ್ಞೆತಪ್ಪಿ ಬಿದ್ದಿರುವುದನ್ನು ಕಂಡರು. ಕೂಡಲೇ ಅವಳಿಗೆ ವೈದ್ಯಕೀಯ ಚಿಕಿತ್ಸೆ ಕೊಡಿಸಿದರೂ ಅವಳಿಗೆ ಪ್ರಜ್ಞೆ ಬಂದುದು ಮರುದಿನ ಬೆಳಗಿನ ಜಾವದಲ್ಲಿ. ಪ್ರಜ್ಞೆ ಬಂದನಂತರ ನಡೆದುದೆಲ್ಲವನ್ನು ಅವಳು ತನ್ನ ತಂದೆಗೆ ತಿಳಿಸಿದಳು. ಅವರು ಆ ದಿನ ೧೧ ಗಂಟೆಗೆ ಪೊಲೀಸುಠಾಣೆಯಲ್ಲಿ ಮೊದಲ ಮಾಹಿತಿ ವರದಿಯನ್ನು ಸಲ್ಲಿಸಿದರು. ಅದೇ ದಿನ ಸಂಜೆ ೪.೩೦ರಲ್ಲಿ ಲೂಧಿಯಾನಾದ ಸಿವಿಲ್ ಆಸ್ಪತ್ರೆಯಲ್ಲಿ ಅವಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಲಾಯಿತು.

ಪ್ರಕರಣದ ವಿವಿಧ ಹಂತಗಳಲ್ಲಿ ಪೊಲೀಸು ಅಧಿಕಾರಿಗಳು ಪ್ರಕರಣದ ತನಿಖೆಯನ್ನು ನಡೆಸಿದರು. ಇಷ್ಟಾದರೂ ಘಟನೆ ನಡೆದುದು ನಿಜವೆಂದು ಒಪ್ಪಿಕೊಳ್ಳಲು ಯಾರೂ ತಯಾರಿರಲಿಲ್ಲ ಮತ್ತು ಪೊಲೀಸು ಸೂಪರಿಂಟೆಂಡೆಂಟರ ಸೂಚನೆಯ ಮೇರೆಗೆ ಪ್ರಕರಣದ ತನಿಖೆಯನ್ನು ಕೈಬಿಡಲಾಯಿತು. ಪೊಲೀಸರ ಈ ತನಿಖಾಕ್ರಮದಿಂದ ನೊಂದ ರಾಜವಂತಿಕೌರ್ ತಾನೇ ನೇರವಾಗಿ ಲೂಧಿಯಾನಾದ ನ್ಯಾಯಿಕ ಮ್ಯಾಜಿಸ್ಟ್ರೇಟರ ನ್ಯಾಯಾಲಯದಲ್ಲಿ ದೂರು ಸಲ್ಲಿಸಿದಳು. ಮ್ಯಾಜಿಸ್ಟ್ರೇಟರು ಆರೋಪಿಗಳನ್ನು ವಿಚಾರಣೆಗಾಗಿ ಸತ್ರ ನ್ಯಾಯಾಲಯಕ್ಕೆ ಕಳುಹಿಸಿದರು. ರಾಜವಂತಿಕೌರ್ ತಾನೇ ತನ್ನನ್ನು, ತನ್ನ ತಂದೆ ದಲೀಪ್ ಸಿಂಗ್ ಹಾಗೂ ತನ್ನನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದ ಡಾ.ಗುರುಬಚನ್ ಸಿಂಗ್ ಅವರನ್ನು ವಿಚಾರಣೆಗೆ ಒಳಪಡಿಸಿದಳು. ಆದರೆ, ಆರೋಪಿಗಳು ದಲೀಪ್ ಸಿಂಗ್ ತಮಗೆ ನೀಡಿದ ಕೆಲವು ಸಾಲಗಳ ಮರುಪಾವತಿಗೆ ಸಂಬಂಧಪಟ್ಟಂತೆ ಕೆಲವು ಮೊಕದ್ದಮೆಗಳು ನ್ಯಾಯಾಲಯದಲ್ಲಿರುವುದರಿಂದ, ಆ ಹಗೆತನಕ್ಕೆ ತಮ್ಮ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಲಾಗಿದೆ ಎಂದು ವಾದಿಸಿದರು. ಆದರೆ ವಾದ ಪ್ರತಿವಾದಗಳನ್ನು ಕೇಳಿದ ಸತ್ರನ್ಯಾಯಾಧೀಶರು ಆರೋಪಿಗಳ ವಾದವನ್ನು ತಳ್ಳಿಹಾಕಿ ಆರೋಪಿಗಳಿಗೆ ಶಿಕ್ಷೆ ವಿಧಿಸಿದರು. ಉಚ್ಚನ್ಯಾಯಾಲಯವೂ ಅಪೀಲಿನಲ್ಲಿ ಸತ್ರನ್ಯಾಯಾಲಯದ ತೀರ್ಪನ್ನು ಎತ್ತಿಹಿಡಿಯಿತು. ಉಚ್ಚನ್ಯಾಯಾಲ

ಯದ ತೀರ್ಪಿನ ವಿರುದ್ಧ ಅಪರಾಧಿಗಳು ಸರ್ವೋಚ್ಚ ನ್ಯಾಯಾಲಯಕ್ಕೆ ಮನವಿಸಲ್ಲಿಸಿದರು. ಸರ್ಕಾರೀ ವಕೀಲರು ನಿರೂಪಿಸಿದ ಘಟನೆಯ ಸತ್ಯತೆಯನ್ನು ತನಿಖೆ ನಡೆಸುವ ಪೊಲೀಸರು ಒಪ್ಪಲಿಲ್ಲ ಎಂಬುದನ್ನು ಸತ್ರನ್ಯಾಯಾಲಯ ತೀರ್ಪನ್ನು ಸರ್ವೋಚ್ಚ ನ್ಯಾಯಾಲಯ ದೃಢೀಕರಿಸುವ ಮುನ್ನ ಗಮನಿಸಬೇಕಿತ್ತು. ಘಟನೆಗೆ ಪೂರಕ ಸಾಕ್ಷ್ಯಗಳಿಲ್ಲದಿದ್ದರೂ, ಕೇವಲ ಅತ್ಯಾಚಾರಕ್ಕೊಳಗಾದವಳ ಏಕಮಾತ್ರ ಸಾಕ್ಷ್ಯದಿಂದ ಸತ್ರನ್ಯಾಯಾಲಯದ ತೀರ್ಪನ್ನು ಉಚ್ಚನ್ಯಾಯಾಲಯ ದೃಢೀಕರಿಸಿರುವುದು ಸಮರ್ಥನೀಯವಲ್ಲ ಎಂದು ಅಪೀಲುದಾರರ(ಅಪರಾಧಿಗಳ) ಪರ ವಾದಿಸಲಾಯಿತು.

ಈ ಪ್ರಕರಣದಲ್ಲಿ ಸರ್ವೋಚ್ಚನ್ಯಾಯಾಲಯ ತೀರ್ಪು ನೀಡುತ್ತಾ ತನಿಖೆ ನಡೆಸುವ ಸರ್ಕಾರದ ಕಾರ್ಯಾಂಗವಾದ ಪೊಲೀಸರ ಬಗ್ಗೆ ತೀವ್ರವಾದ ಅಸಮಾಧಾನವನ್ನು ವ್ಯಕ್ತಪಡಿಸಿತು. ಅತ್ಯಾಚಾರಕ್ಕೊಳಗಾದವಳು ಹಾಗೂ ಅವಳ ತಂದೆ ನೀಡಿದ ಹೇಳಿಕೆಗಳು ಹಾಗೂ ವೈದ್ಯಕೀಯ ವರದಿಗಳಿಂದ ಆರೋಪಿಗಳ ವಿರುದ್ಧ ಮೇಲ್ನೋಟಕ್ಕೆ ಆರೋಪಗಳಿವೆಯೆಂಬುದರ ಸತ್ಯತೆಯ ಬಗ್ಗೆ ಮನದಟ್ಟಾಗದಿರುವುದು ಆಶ್ಚರ್ಯಕರವಾಗಿದೆ. ಪೊಲೀಸು ಸೂಪರಿಂಟೆಂಡೆಂಟರನ್ನೂ ಒಳಗೊಂಡಂತೆ ತನಿಖೆ ನಡೆಸುತ್ತಿದ್ದ ಪೊಲೀಸರು, ರಾಸಾಯನಿಕ ತಜ್ಞರ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸುವುದು ತಮ್ಮ ಕರ್ತವ್ಯ ಎಂದು ಸಹ ಭಾವಿಸಲಿಲ್ಲ. ಅಂಥ ಮುಖ್ಯವಾದ ಸಾಕ್ಷ್ಯವನ್ನು ನ್ಯಾಯಾಲಯಕ್ಕೆ ಏಕೆ ಹಾಜರುಪಡಿಸಲಿಲ್ಲ ಎಂಬುದಕ್ಕೆ ಅವರಿಂದ ಯಾವುದೂ ವಿವರಣೆಯಿಲ್ಲ. ಈ ಹಿನ್ನೆಲೆಯಲ್ಲಿ, ಪೊಲೀಸರು ಘಟನೆಯನ್ನು ಸತ್ಯವೆಂದು ನಂಬಿರಲಿಲ್ಲ ಎಂಬವಾದಕ್ಕೆ ಹೆಚ್ಚಿನ ಬೆಲೆಯನ್ನೇನೂ ಕೊಡಬೇಕಿಲ್ಲವೆಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿತು. ಅತ್ಯಾಚಾರ ಕ್ಕೊಳಗಾದವಳ ಸಾಕ್ಷ್ಯವೊಂದನ್ನು ಬಿಟ್ಟು ಅವಳ ಹೇಳಿಕೆಯನ್ನು ಬೆಂಬಲಿಸುವ ಪೂರಕ ಸಾಕ್ಷ್ಯಗಳಿರಲಿಲ್ಲವೆಂಬ ವಾದವನ್ನು ಸರ್ವೋಚ್ಚ ನ್ಯಾಯಾಲಯ ತಳ್ಳಿಹಾಕಿತು. ಸಲ್ಲಿಸಲಾಗಿರುವ ವೈದ್ಯಕೀಯ ವರದಿ ಮೊದಲ ಬಾರಿಗೆ ಮಹಿಳೆ ಬಲಾತ್ಕಾರದ ಲೈಂಗಿಕ ಸಂಭೋಗಕ್ಕೆ ಒಳಗಾದರೆ ಕಂಡುಬರುವ ಎಲ್ಲ ಲಕ್ಷಣಗಳನ್ನು ವರದಿಮಾಡಿತ್ತು. ದಲೀಪ್ ಸಿಂಗ್ ಅವಳ ತಂದೆ ಎಂಬ ಕಾರಣಕ್ಕಾಗಿ ಅವರ ಸಾಕ್ಷ್ಯವನ್ನು ತಳ್ಳಿಹಾಕಲು ಯಾವುದೇ ಕಾರಣವಿಲ್ಲ ಹಾಗಾಗಿ ಈ ಎರಡು ಸಾಕ್ಷ್ಯಗಳೂ ಪೂರಕ ಸಾಕ್ಷ್ಯಗಳೇ ಆಗುತ್ತವೆ ಎಂದು ಅಭಿಪ್ರಾಯಪಟ್ಟಿತು.

ವೈದ್ಯಕೀಯ ವರದಿಯಲ್ಲಿ ಎಷ್ಟು ಮಂದಿ ಅವಳ ಮೇಲೆ ಅತ್ಯಾಚಾರವೆಸಗಿದ್ದಾರೆ ಎಂಬುದನ್ನು ಹೇಳಿಲ್ಲದಿರುವುದರಿಂದ ಅಪೀಲುದಾರರ ವಿರುದ್ಧ ಮಾಡಿರುವ ಅಪರಾಧ ನಿರ್ಣಯ ಕಾನೂನುಬಾಹಿರ. ಆದ್ದರಿಂದ ಅದನ್ನು ತಳ್ಳಿಹಾಕಬೇಕೆಂಬ ಅಪೀಲುದಾರರ ವಾದವನ್ನೂ ಸರ್ವೋಚ್ಚನ್ಯಾಯಾಲಯ ತಳ್ಳಿಹಾಕಿತು. ವೈದ್ಯಕೀಯ ವರದಿಯಲ್ಲಿ ಅವಳ ಮೇಲೆ ಎಷ್ಟು ಮಂದಿ ಅತ್ಯಾಚಾರವೆಸಗಿದರು ಎಂಬುದನ್ನು ಹೇಳುವುದು ಸಾಧ್ಯವಿಲ್ಲವಾದ್ದರಿಂದ ಡಾ.ಗುರುಬಚನ್ ಸಿಂಗ್ ಆ ಬಗ್ಗೆ ವರದಿಯಲ್ಲಿ

ಅಭಿಪ್ರಾಯ ವ್ಯಕ್ತಪಡಿಸಿಲ್ಲ. ಆದರೆ ಅತ್ಯಾಚಾರಕ್ಕೊಳಗಾದವಳ ಎಲ್ಲ ಅಪೀಲುದಾರರೂ ತನ್ನ ಮೇಲೆ ಅತ್ಯಾಚಾರವೆಸಗಿದರು ಎಂಬ ಹೇಳಿಕೆ ವೈದ್ಯಕೀಯ ವರದಿಗೆ ವಿರೋಧವಾಗಿಲ್ಲ ಎಂಬ ಅಭಿಪ್ರಾಯವನ್ನು ನ್ಯಾಯಾಲಯ ವ್ಯಕ್ತಪಡಿಸಿತು.

ದಲೀಪ್ ಸಿಂಗ್ ಆರೋಪಿಗಳಿಗೆ ನೀಡಿದ ಸಾಲದ ಮರುಪಾವತಿಯ ಬಗ್ಗೆ ಮೊಕದ್ದಮೆಗಳು ಇದ್ದವು. ಅಥವಾ ಆ ವಿಚಾರಕ್ಕೆ ಅವರಲ್ಲಿ ಹಗೆತನವಿತ್ತು ಎಂಬ ಕಾರಣಕ್ಕಾಗಿ ತನ್ನ ಮಗಳು ಅತ್ಯಾಚಾರಕ್ಕೊಳಗಾಗಿದ್ದಾಳೆ ಎಂದು ಹೇಳಲು ಯಾವ ತಂದೆಯೂ ಬಯಸುವುದಿಲ್ಲ. ಆದರೆ ಸಾಲಗಾರರಾದ ಆರೋಪಿಗಳೇ ತಮಗೆ ಸಾಲ ನೀಡಿದ್ದ ದಲೀಪ್ ಸಿಂಗ್‌ನಿಗೆ ಪಾಠ ಕಲಿಸಬೇಕೆಂದು ಅವನ ಮಗಳ ಮೇಲೆ ಅತ್ಯಾಚಾರವೆಸಗಿರುವ ಸಾಧ್ಯತೆಗಳಿವೆ ಎಂಬ ಉಚ್ಚನ್ಯಾಯಾಲಯದ ತರ್ಕವನ್ನು ಸರ್ವೋಚ್ಚನ್ಯಾಯಾಲಯ ಒಪ್ಪಿಕೊಂಡಿತು.

'ರಾಜವಂತಿಕೌರಳ ಪ್ರಯತ್ನವಿಲ್ಲದಿದ್ದರೆ ಪೊಲೀಸರ ಅದಕ್ಷತೆ ಅಥವಾ ಅವರ ಮೇಲೆ ತಂದ ಒತ್ತಡದ ಕಾರಣದಿಂದ' ಅರಳುವ ಮುನ್ನವೇ ಬಾಲೆಯ ಜೀವನವನ್ನು ಹೊಸಕಿಹಾಕಿದ ಈ ಬರ್ಬರ ಕೃತ್ಯ ಪೊಲೀಸು ಕಡತಗಳಲ್ಲಿ ನ್ಯಾಯದೊರೆಯದೆ ಮುಚ್ಚಿಹೋಗುತ್ತಿತ್ತು.

ಅತ್ಯಾಚಾರ ಮಹಿಳೆಯರ ಮೇಲೆ ಎಸಗಬಹುದಾದ ಅತ್ಯಂತ ಹೇಯಕೃತ್ಯ. ಇದು ಸಂಜ್ಞೇಯ ಅಪರಾಧ ಮತ್ತು ಜಾಮೀನೀಯವಲ್ಲದ ಅಪರಾಧ. ಗಂಭೀರವಾದ ಹಾಗೂ ತೀವ್ರಸ್ವರೂಪದ ಅಪರಾಧಗಳನ್ನು ಜಾಮೀನೀಯವಲ್ಲದ ಅಪರಾಧಗಳೆಂದು ವರ್ಗೀಕರಿಸಲು ಕಾರಣ, ಆರೋಪಿಗಳನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದಲ್ಲಿ ಸಾಕ್ಷ್ಯಗಳನ್ನು ಹಾಳುಮಾಡುವ, ಸಾಕ್ಷಿಗಳನ್ನು ಬೆದರಿಸುವ ಇಲ್ಲವೆ ಸುಳ್ಳು ಸಾಕ್ಷ್ಯಗಳನ್ನು ಸೃಷ್ಟಿಸುವ ಸಾಧ್ಯತೆ ಇರುತ್ತದೆ ಎಂಬುದು.

ಒಂದು ಅತ್ಯಾಚಾರ ಪ್ರಕರಣದಲ್ಲಿ ಹೆಚ್ಚುವರಿ ಸತ್ರ ನ್ಯಾಯಾಧೀಶರು ಆರೋಪಿಗಳಿಬ್ಬರನ್ನೂ ಜಾಮೀನಿನ ಮೇಲೆ ಬಿಡುಗಡೆ ಮಾಡಿದುದರ ಬಗ್ಗೆ ದೆಹಲಿ ಉಚ್ಚನ್ಯಾಯಾಲಯ ಸ್ವತಃ ತಾನೇ ಸ್ವಯಿಚ್ಛೆಯಿಂದ ಕ್ರಮಕೈಗೊಂಡು ಜಾಮೀನನ್ನು ರದ್ದುಪಡಿಸಿ ಆರೋಪಿಗಳನ್ನು ವಶಕ್ಕೆ ತೆಗೆದುಕೊಳ್ಳಬೇಕೆಂದು ಆದೇಶಿಸಿತು. ಇದೊಂದು ಅಪರೂಪದ ಪ್ರಕರಣ. ದೆಹಲಿಯ ನ್ಯಾಯಾಲಯದ ಇಂಥ ಕ್ರಮ ನ್ಯಾಯಾಂಗ ವ್ಯವಸ್ಥೆಯಲ್ಲಿನ ವಿಶ್ವಾಸವನ್ನು ನವೀಕರಿಸಲು ನೆರವಾದರೂ, ಸತ್ರ ನ್ಯಾಯಾಧೀಶರ ಕ್ರಮ ಅಷ್ಟೇ ಧೃತಿಗೆಡುವಂತೆ ಮಾಡುತ್ತದೆ.

ರಾಷ್ಟ್ರೀಯ ವೃತ್ತಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯನ್ನು ಆಧರಿಸಿ ದೆಹಲಿ ಉಚ್ಚನ್ಯಾಯಾಲಯ ಈ ಕ್ರಮಕೈಗೊಂಡಿತು. ವಿಷ್ಣುಪಂಡಿತ್ ಎಂಬಾತ ೩೫ ವರ್ಷದ ಮಹಿಳೆಯ ಮೇಲೆ ಅತ್ಯಾಚಾರವೆಸಗಿದನೆಂಬ ಆರೋಪದ ಮೇಲೆ ಅವನನ್ನು ದಸ್ತಗಿರಿ ಮಾಡಲಾಗಿದೆ. ಮತ್ತು ಅವನ ಚಾಲಕ ಬಲಜೀತ್

ಎಂಬುವನನ್ನೂ ಸಹ ಪೊಲೀಶರು ವಶಕ್ಕೆ ತೆಗೆದುಕೊಂಡಿದ್ದಾರೆ ಎಂದು ಪ್ರಕಟವಾಗಿತ್ತು. ವಿಷ್ಣುಪಂಡಿತ್ ಬಗ್ಗೆ ಇದ್ದ ಆರೋಪಗಳೆಂದರೆ ಕಮಲೇಶ್ ಆರ್ಯ ಎಂಬಾಕೆ ಆಸ್ಪತ್ರೆಯಲ್ಲಿದ್ದ ತನ್ನ ಅತ್ತೆಯ ಶುಶ್ರೂಷೆಗಾಗಿ ಆಸ್ಪತ್ರೆಗೆ ಹೋಗುತ್ತಿದ್ದಳು. ಅಲ್ಲಿ ವಿಷ್ಣುಪಂಡಿತ್ ಎಂಬಾತ ಅವಳೊಡನೆ ಪರಿಚಯ ಬೆಳೆಸಿಕೊಂಡು ಅವಳಿಗೆ ತನ್ನ ವಾಹನದಲ್ಲಿ ಮನೆಗೆ ಬಿಡುವೆನೆಂದು ಹೇಳಿ, ಬಲತ್ಕಾರದಿಂದ ತನ್ನ ಮನೆಗೆ ಒಯ್ದು ಅವಳ ಮೇಲೆ, ಅವಳ ೧೪/೧೫ ವರ್ಷದ ಮಗನ ಎದುರಿನಲ್ಲೇ ಅತ್ಯಾಚಾರವೆಸಗಿದ್ದಾನೆ, ಆ ಸಮಯದಲ್ಲಿ ಅವಳ ಮಗನ ತಲೆಗೆ ಅವನ ಚಾಲಕ ಪಿಸ್ತೂಲು ಗುರಿಯಿಟ್ಟು ಹೆದರಿಸಿ ಸುಮ್ಮನಾಗಿಸಿದ್ದ. ಇದನ್ನು ಪೊಲೀಸರಿಗೆ ಅಥವಾ ಇತರರಿಗೆ ತಿಳಿಸಬಾರದೆಂದು ಹೆದರಿಸಿದ್ದ. ಇದೇ ವ್ಯಕ್ತಿ ಅವಳ ಗಂಡನ ಜೊತೆಯಲ್ಲಿಯೂ ಪರಿಚಯ ಬೆಳೆಸಿಕೊಂಡು ಎರಡು ದಿನದ ನಂತರ ಮತ್ತೆ ವಾಹನದಲ್ಲಿ ಮನೆತನಕ ಬಿಡುವುದಾಗಿ ಅವರಿಬ್ಬರನ್ನೂ ವಾಹನದಲ್ಲಿ ಬಲಾತ್ಕಾರದಿಂದ ತನ್ನ ಮನೆಗೆ ಕರೆದೊಯ್ದು ಆಕೆಯ ಗಂಡನ ಎದುರಿನಲ್ಲೇ ಅವಳ ಮೇಲೆ ಅತ್ಯಾಚಾರವೆಸಗಿದ್ದಾನೆ ಎಂಬುದು.

ಅವರ ಜಾಮೀನು ಅರ್ಜಿಯನ್ನು ವಿರೋಧಿಸಿ ಪ್ರಾಸಿಕ್ಯೂಷನ್ ನವರು ಸಲ್ಲಿಸಿದ ಅರ್ಜಿಯಲ್ಲಿ ಇದು ಅವನ ಬಗ್ಗೆ ಇರುವ ಮೊದಲ ದೂರಲ್ಲ. ಅವನ ಬಗ್ಗೆ ಅನೇಕ ಅಪರಾಧಗಳ ದೂರುಗಳಿವೆ. ಅವನ ಮೇಲೆ ಕ್ರೌರ್ಯ, ಹಣಸುಲಿಗೆ, ಆಪರಾಧಿಕ ಭಯೋತ್ಪಾದನೆ, ಅತಿಕ್ರಮ ಪ್ರವೇಶ ಮುಂತಾದ ಆರೋಪಗಳಿವೆ. ಈ ಎಲ್ಲ ಪ್ರಕರಣಗಳಲ್ಲಿಯೂ ಸಾಕ್ಷಿಗಳಾರೂ ಅವನ ವಿರುದ್ಧ ಸಾಕ್ಷ್ಯ ನೀಡುವ ಧೈರ್ಯ ಮಾಡುವುದಿಲ್ಲ. ವಿಷಯ ಹೀಗಿರುವುದರಿಂದ ಅವನಿಗೆ ಜಾಮೀನು ನೀಡಬಾರದು. ಅವನು ಜೈಲಿನಿಂದ ಹೊರಗಿದ್ದರೆ ಸಾಕ್ಷಿಗಳನ್ನ ಹೆದರಿಸುವ ಮೂಲಕ ತನಿಖೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಸಂಭವವುಂಟು ಎಂದು ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ಉಚ್ಚನ್ಯಾಯಾಲಯದ ನ್ಯಾಯಾಧೀಶರು ಅಪರಾಧದ ಗಂಭೀರ ಸ್ವರೂಪವನ್ನು ಮತ್ತು ಅದನ್ನು ಎಸಗಿದ ಪೈಶಾಚಿಕ ರೀತಿಯನ್ನು ಗಮನಿಸಿದಾಗ ಜಾಮೀನು ನೀಡುವಾಗ ಹೆಚ್ಚುವರಿ ಸತ್ರನ್ಯಾಯಾಧೀಶರು ಆರೋಪಿ ಹೊರಗಿದ್ದರೆ ಸಾಕ್ಷಿಗಳನ್ನು ಹೆದರಿಸುವ ಸಂಭವವಿದೆಯೆಂದು ಗಮನಿಸಿದಂತಿಲ್ಲ. ಮಹಿಳೆಯ ಆತ್ಮಗೌರವಕ್ಕೆ ಕುಂದು ತರುವಂಥ ಇದಕ್ಕಿಂತ ಹೇಯವಾದ ಕೃತ್ಯ ಮತ್ತೊಂದಿಲ್ಲ. ಇಂಥ ಪ್ರಕರಣದಲ್ಲಿ ಆರೋಪಿಗೆ ಜಾಮೀನು ನೀಡಿರುವುದು ಉಚಿತವೆಂದು ಕಾಣುವುದಿಲ್ಲ. ಅಷ್ಟೇ ಅಲ್ಲ, ಅದನ್ನು ತೀರ ಲಘುವಾಗಿ ನಿರ್ಲಕ್ಷ್ಯತನದಿಂದ ಪರಿಗಣಿಸಿರುವಂತೆ ಕಾಣುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ನ್ಯಾಯಿಕ ವಿವೇಚನೆಯನ್ನು ಜಾಮೀನು ನೀಡಿದ ನ್ಯಾಯಾಧೀಶರು ಬಳಸಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಜಾಮೀನು ನೀಡಿದ ಆದೇಶ ಕಾನೂನು ಬಾಹಿರವಾದದ್ದು ಎಂದು ತಿಳಿಸಿ, ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೪೩೯ನೇ ಪ್ರಕರಣದಿಂದ ಉಚ್ಚನ್ಯಾಯಾಲಯಕ್ಕೆ ಪ್ರದತ್ತವಾದ

ಅಧಿಕಾರಗಳನ್ನು ಚಲಾಯಿಸಿ ಜಾಮೀನು ನೀಡಿ ಸತ್ರ ನ್ಯಾಯಾಲಯ ಹೊರಡಿಸಿದ ಆದೇಶದ ಪ್ರವರ್ತನೆಯನ್ನು ತಡೆಹಿಡಿಯಿತು ಮತ್ತು ಆರೋಪಿಗಳನ್ನು ವಶಕ್ಕೆ ತೆಗೆದುಕೊಳ್ಳಲು ಆದೇಶಿಸಿತು.

ಈ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯ ತಾನಾಗಿಯೇ ಅಧೀನ ನ್ಯಾಯಾಲಯದಿಂಥ ಸಂಬಂಧಪಟ್ಟ ದಾಖಲೆಗಳನ್ನು ತರಿಸಿಕೊಂಡು, ಅತ್ಯಂತ ಘೋರ ಅಪರಾಧವೆಸಗಿದ್ದಾನೆನ್ನಲಾದ ಆರೋಪಿಯನ್ನು ಮತ್ತೆ ದಸ್ತಗಿರಿ ಮಾಡುವಂತೆ ಆದೇಶಿಸಿದ್ದು ಅತ್ಯಂತ ಸಮಾಧಾನದ ವಿಷಯವಾದರೂ, ನ್ಯಾಯಿಕ ವಿವೇಚನೆಯನ್ನು ನ್ಯಾಯಯುತವಾಗಿ ಪ್ರದರ್ಶಿಸದೆ ಜಾಮೀನು ನೀಡುವ ಎಷ್ಟು ಪ್ರಕರಣಗಳಲ್ಲಿ ಹೀಗಾಗಬಹುದು ಎಂಬುದು ಆತಂಕದ ವಿಷಯವಾಗುತ್ತದೆ. ಅತ್ಯಾಚಾರಕ್ಕೊಳಗಾದ ಎಷ್ಟು ಮಂದಿ ಮಹಿಳೆಯರು ಅಥವಾ ಅವಳ ಮನೆಯವರು ನ್ಯಾಯಾಲಯದ ಮೆಟ್ಟಿಲು ಹತ್ತಬಹುದು ಅಥವಾ ನ್ಯಾಯಕ್ಕಾಗಿ ಹೋರಾಡಬಹುದು ಎಂಬುದು ಯೋಚಿಸಬೇಕಾದದ್ದು.

ಅಧೀನ ನ್ಯಾಯಾಲಯಗಳು ಅತ್ಯಾಚಾರ ಪ್ರಕರಣಗಳ ವಿಚಾರಣೆ ನಡೆಸುವಾಗ ಹೆಚ್ಚಿನ ಕಾಳಜಿವಹಿಸಿ ನಡೆಸಬೇಕೆಂದು ಸರ್ವೋಚ್ಚ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ತೀರ್ಪು ನೀಡುವಾಗ ವ್ಯಕ್ತಪಡಿಸಿದೆ. ಅತ್ಯಾಚಾರ ಪ್ರಕರಣಗಳ ವಿಚಾರಣೆಯಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆ 'ನಡತೆಗೆಟ್ಟವಳು' ಅಥವಾ ಅವಳು 'ಸುಲಭ ಲಭ್ಯಳು' ಎಂಬ ಅಂಶ ಮುಖ್ಯವಾದ ಅಂಶವಾಗಬಾರದು ಅಥವಾ ಆರೋಪಿ ಎಸಗಿದ ಅಪರಾಧದ ತೀವ್ರತೆಯನ್ನು ಅವಳ ಈ ಸ್ವಭಾವ ಕಡಿಮೆ ಮಾಡುತ್ತದೆಂದು ಭಾವಿಸಬಾರದು ಮತ್ತು ಅವಳ ಈ ಸ್ವಭಾವ ಅವಳ ದೇಹವನ್ನು ಬಳಸಿಕೊಳ್ಳಲು ಅವನಿಗೆ ಅನುಮತಿ ನೀಡುತ್ತದೆಂದೂ ಭಾವಿಸಬಾರದು ಎಂದು ಸರ್ವೋಚ್ಚ ನ್ಯಾಯಾಲಯ ಅನೇಕ ಪ್ರಕರಣಗಳಲ್ಲಿ ತೀರ್ಪು ನೀಡುವಾಗ ಅಭಿಪ್ರಾಯಪಟ್ಟಿದೆ.

ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯ ಶೀಲಕ್ಕೆ ಅತಿಹೆಚ್ಚಿನ ಮೌಲ್ಯವನ್ನು ನೀಡುವುದರಿಂದ, ಅವಳ ನಡತೆಯ ಬಗ್ಗೆ ಮಾಡುವ ಟೀಕೆಯನ್ನು ಅವಳನ್ನು ಮಾನಸಿಕವಾಗಿ ದುರ್ಬಲಳನ್ನಾಗಿಸುವ ಒಂದು ಅಸ್ತ್ರವಾಗಿ ಪುರುಷರು ಬಳಸುತ್ತಾರೆ. ಇದೂ ಪುರುಷ ಪ್ರಧಾನ ಸಮಾಜದ ಮನೋಭಾವ ವ್ಯಕ್ತವಾಗುವ ಒಂದು ಬಗೆ.

ಅತ್ಯಾಚಾರದಿಂದ ದೈಹಿಕವಾಗಿ ಹಾಗೂ ಮಾನಸಿಕವಾಗಿ ಆಘಾತಕ್ಕೊಳಗಾಗಿರುವ ಮಹಿಳೆಗೆ ಘಟನೆಯ ವಿವರಗಳ ನಿಷ್ಪಕ್ಷಪಾತ ವಿಶ್ಲೇಷಣೆ ಮತ್ತು ಅಪರಾಧಿಗಳಿಗೆ ಶಿಕ್ಷೆ ಇವೆರಡೇ ಅವಳ ರೋಷವನ್ನು ಮತ್ತು ಅಸಹಾಯಕತೆಯ ತೀವ್ರತೆಯನ್ನು ಸ್ವಲ್ಪಮಟ್ಟಿಗಾದರೂ ಕಡಿಮೆ ಮಾಡುವ ಅಂಶವಾಗುತ್ತದೆ. ಪಂಜಾಬ್ ರಾಜ್ಯ-ವಿ-ಗುರುಮಿತ್ ಸಿಂಗ್ ಮತ್ತು ಇತರರು ಪ್ರಕರಣದಲ್ಲಿ ವಿಚಾರಣಾ ನ್ಯಾಯಾಲಯ ಪ್ರಕರಣವನ್ನು ನಿರ್ವಹಿಸಿದ ರೀತಿಯ ಬಗ್ಗೆ ಸರ್ವೋಚ್ಚನ್ಯಾಯಾಲಯ ಕಟುವಾಗಿ ಟೀಕೆ ಮಾಡಿದೆ.

ಈ ಪ್ರಕರಣದಲ್ಲಿ ಅತ್ಯಾಚಾರಕ್ಕೊಳಗಾದವಳು ೧೬ ವರ್ಷದ ಹುಡುಗಿ. ತನ್ನ ೧೦ನೇ ತರಗತಿಯ ಪರೀಕ್ಷೆ ಬರೆದು ಶಾಲೆಗೆ ಹತ್ತಿರವಿದ್ದ ತನ್ನ ಮಾವನ ಮನೆಗೆ ಹಿಂತಿರುಗುತ್ತಿದ್ದಾಗ ಮೂವರು ಕಾರಿನಲ್ಲಿ ಹಿಂದಿನಿಂದ ಬಂದು, ಅವಳ ಬಾಯಿಮುಚ್ಚಿ ಕಿರುಚದಂತೆ ಬೆದರಿಕೆಯೊಡ್ಡಿ ಎಳೆದೊಯ್ದು ಅತ್ಯಾಚಾರ ವೆಸಗಿದರು. ಅಲ್ಲದೆ ಅವಳನ್ನು ಕೋಣೆಯಲ್ಲಿ ಕೂಡಿಹಾಕಿ ರಾತ್ರಿ ಮತ್ತೊಮ್ಮೆ ಅವಳ ಮೇಲೆ ಅತ್ಯಾಚಾರ ವೆಸಗಿ ಅವಳನ್ನು ಎಲ್ಲಿಂದ ಅಪಹರಿಸಿ ತಂದಿದ್ದರೋ ಅಲ್ಲಿಯೇ ಬಿಟ್ಟು ತೆರಳಿದರು. ಹುಡುಗಿ ವಿಷಯವನ್ನು ಯಾರಿಗೂ ತಿಳಿಸದೆ, ಆವತ್ತು ಬರೆಯಬೇಕಾಗಿದ್ದ ಪರೀಕ್ಷೆಯನ್ನು ಬರೆದು ಮಾವನ ಮನೆಗೆ ಹೋಗದೆ ನೇರವಾಗಿ ತನ್ನ ತಾಯಿಯ ಮನೆಗೆ ಹೋಗಿ ನಡೆದದ್ದೆಲ್ಲವನ್ನೂ ತಾಯಿಗೆ ತಿಳಿಸಿದಳು. ತಾಯಿ ಅವಳ ತಂದೆ ಬರುವವರೆಗೂ ಕಾದು ವಿಷಯವನ್ನು ಅವಳ ತಂದೆಗೆ ತಿಳಿಸಿದರು. ಅವಳ ತಂದೆ ಕೂಡಲೇ ಸರಪಂಚನನ್ನು ಸಂಪರ್ಕಿಸಿ, ಪಂಚಾಯಿತಿ ಸೇರಿಸಿದ. ಆದರೆ ಪಂಚಾಯಿತಿಗೆ ನ್ಯಾಯಾವನ್ನಾಗಲೀ ಪರಿಹಾರ ವನ್ನಾಗಲೀ ಕೊಡಲು ಸಾಧ್ಯವಾಗದುದರಿಂದ ಅವರು ರಾಯ್ ಕೋಟದ ಪೊಲೀಸು ಠಾಣೆಯಲ್ಲಿ ದೂರು ನೀಡಿದರು.

ವಿಚಾರಣಾ ನ್ಯಾಯಾಲಯದ ನ್ಯಾಯಾಧೀಶರು ಪ್ರಕರಣದ ವಿಚಾರಣೆ ನಡೆಸಿ. ಅವಳನ್ನು ಯಾವ ಕಾರಿನಲ್ಲಿ-ಅಂಬಾಸಿಡರ್, ಫಿಯಟ್ ಅಥವಾ ಮಾಸ್ಟರ್-ಎಳೆದೊಯ್ದರು ಎಂಬುದರ ಬಗ್ಗೆ ಅವಳು ಸರಿಯಾದ ಉತ್ತರ ಕೊಡಲಿಲ್ಲವಾದ್ದರಿಂದ ಅವಳನ್ನು ಅಪಹರಿಸಿದುದೇ ಸುಳ್ಳು, ಅದೇನಿದ್ದರೂ ಕಟ್ಟುಕಥೆ ಎಂದು ಅಭಿಪ್ರಾಯಪಟ್ಟರು. ಪೊಲೀಸರ ವಶದಲ್ಲಿದ್ದ ಆರೋಪಿಗಳಿಂದ ಕಾರು ಯಾವುದೆಂದು ಮತ್ತು ಅದರ ಚಾಲಕನನ್ನು ಪತ್ತೆಹಚ್ಚುವುದು ಕಷ್ಟವಿರಲಿಲ್ಲ. ಈ ಬಗ್ಗೆ ತನಿಖಾಧಿಕಾರಿಗಳು ಅತೀವ ನಿರ್ಲಕ್ಷವನ್ನು ತೋರಿದ್ದಾರೆ. ಕಾರನ್ನು ಮತ್ತು ಕಾರಿನ ಚಾಲಕನನ್ನು ಪತ್ತೆಹಚ್ಚಲು ತಾನು ಪ್ರಯತ್ನಪಟ್ಟರೂ ವಿಫಲನಾದೆನೆಂದು ಅವನು ಒಪ್ಪಿಕೊಂಡಿದ್ದಾನೆ.

ಆರೋಪಿಗಳು ಮರುದಿನ ಅವಳನ್ನು ಅಪಹರಿಸಿದ ಸ್ಥಳದಲ್ಲಿಯೇ ಬಿಟ್ಟು ಹೋದರೆಂಬ ಫಿರ್ಯಾ ದುದಾರಳ ಹೇಳಿಕೆಯನ್ನು ಒಪ್ಪಿಕೊಳ್ಳಲು ನ್ಯಾಯಾಲಯ ಸಿದ್ಧವಿರಲಿಲ್ಲ ಮತ್ತು ಅತ್ಯಾಚಾರಿಗಳು ಅವಳನ್ನು ಎಳೆದೊಯ್ಯುವಾಗ ಮತ್ತು ಜನನಿಬಿಡ ಬಸ್ಸು ನಿಲ್ದಾಣದ ಮೂಲಕ ಹಾದು ಹೋಗುವಾಗ ಅವಳು ಕಿರುಚಿಕೊಳ್ಳಲಿಲ್ಲ ಎಂಬುದು ಸಹ ಅವಳ ಹೇಳಿಕೆಯನ್ನು ನಂಬದಿರಲು ಕಾರಣವನ್ನಾಗಿ ನ್ಯಾಯಾಧೀಶರು ತೋರಿಸುತ್ತಾರೆ. ಅತ್ಯಾಚಾರಿಗಳು ಮರುದಿನ ಅವಳನ್ನಲ್ಲಿ ಬಿಟ್ಟು ಹೋದ ನಂತರ ಹಿಂದಿನ ರಾತ್ರಿಯ ಘಟನೆಯನ್ನು ಉಪಾಧ್ಯಾಯರ ಬಳಿಯಾಗಲೀ ಗೆಳತಿಯರ ಬಳಿಯಲ್ಲಾಗಲೀ ಹೇಳಲಿಲ್ಲ, ಎಂದಿನಂತೆ ಪರೀಕ್ಷೆ ಬರೆದು ಮುಗಿಸಿದ ನಂತರ ತನ್ನ ತಾಯಿಯ ಬಳಿಯಲ್ಲಿ ಎಲ್ಲವನ್ನೂ ಹೇಳಿದ್ದಾಳೆ. ಇದನ್ನು ನಂಬುವುದು ಸಾಧ್ಯವಿಲ್ಲ ಎಂಬ ಈ ಎಲ್ಲ ಕಾರಣಗಳಿಗಾಗಿ ವಿಚಾರಣಾ ನ್ಯಾಯಾಲಯ ಆರೋಪಿಗಳನ್ನು ಬಿಡುಗಡೆ ಮಾಡಿತು.

ಆದರೆ ಅತ್ಯಾಚಾರಕ್ಕೊಳಗಾದ ಹುಡುಗಿಯ ಹೇಳಿಕೆಯನ್ನು ನಂಬದಿರುವುದಕ್ಕೆ ವಿಚಾರಣಾ ನ್ಯಾಯಾಲಯ ನೀಡಿರುವ ಕಾರಣಗಳಿಗೆ ಯಾವುದೇ ಸಮರ್ಥನೆ ಇಲ್ಲ ಮತ್ತು ಅದು ನೀಡಿರುವ ಅಭಿಪ್ರಾಯ ವಾಸ್ತವಕ್ಕೆ ದೂರವಾದುದು, ವಿಶ್ವಾಸಾರ್ಹವಲ್ಲದ್ದು ಎಂದು ಸರ್ವೋಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಅತ್ಯಾಚಾರಕ್ಕೆ ಒಳಗಾದವಳು ೧೬ ವರ್ಷದ ಹಳ್ಳಿ ಹುಡುಗಿ. ಅವಳಿಗೆ ಅಂಬಾಸಿಡರ್, ಫಿಯಟ್ ಮತ್ತು ಮಾಸ್ಟರ್ ಕಾರುಗಳ ನಡುವೆ ವ್ಯತ್ಯಾಸ ಗೊತ್ತಿರಬೇಕಿಲ್ಲ ಮತ್ತು ಅದು ಪ್ರಕರಣಕ್ಕೆ ಪ್ರಸ್ತುತವೂ ಅಲ್ಲ ಮತ್ತು ಅವಳು ತನ್ನ ಹೇಳಿಕೆಯಲ್ಲಿ ಕಿರುಚದಂತೆ ಬೆದರಿಕೆಯೊಡ್ಡಿದರೆಂದು ಸ್ಪಷ್ಟವಾಗಿ ತಿಳಿಸಿದ್ದಾಳೆ. ಆದ್ದರಿಂದ ಅವಳು ತನ್ನನ್ನು ಎಳೆದೊಯ್ಯುವಾಗ ಕಿರುಚಲಿಲ್ಲವೆಂಬ ಕಾರಣಕ್ಕೆ ಅವಳ ಹೇಳಿಕೆ ನಂಬಲರ್ಹವಲ್ಲವೆಂದು ಅಭಿಪ್ರಾಯಪಡುವುದು ನ್ಯಾಯಕ್ಕೆ ಅಪಚಾರವೆಸಗಿದಂತೆ. ಅವಳು ಕೇವಲ ೧೬ ವರ್ಷದ ಹಳ್ಳಿ ಹುಡುಗಿ ಮೂವರು ಯುವಕರ ನಡುವಿನಲ್ಲಿ ಬೆದರಿದ ಹುಲ್ಲೆಯಾಗಿದ್ದಳು ಎಂಬುದನ್ನು ವಿಚಾರಣಾ ನ್ಯಾಯಾಲಯ ಗಮನಕ್ಕೆ ತೆಗೆದುಕೊಂಡಂತಿಲ್ಲ ಮತ್ತು ತನಿಖಾಧಿಕಾರಿ ಅವಳನ್ನು ಹೊತ್ತೊಯ್ದ ಕಾರನ್ನು ಮತ್ತು ಅದರ ಚಾಲಕನನ್ನು ಪತ್ತೆಹಚ್ಚಲು ವಿಫಲನಾದರೆ, ಇವಳ ಹೇಳಿಕೆಯನ್ನೇಕೆ ಅನುಮಾನದಿಂದ ನೋಡಬೇಕು? ಈ ಕಾರಣದಿಂದಾಗಿ ಹುಡುಗಿಯ ಹೇಳಿಕೆ ವಿಶ್ವಾಸಾರ್ಹವಲ್ಲವೆಂದು ವಿಚಾರಣಾ ನ್ಯಾಯಾಲಯ ನಿರ್ಧಾರಕ್ಕೆ ಬರುವ ಮೂಲಕ ತಪ್ಪು ಮಾಡಿದೆ. ವಿಚಾರಣಾ ನ್ಯಾಯಾಲಯ, ಪ್ರಥಮ ಮಾಹಿತಿ ವರದಿಯನ್ನು ದಾಖಲು ಮಾಡುವಲ್ಲಿ ವಿಳಂಬವಾಗಿದೆ ಎಂದಿದೆ. ಆದರೆ ಹಾಗೆ ವಿಳಂಬವಾಗಿದ್ದರೆ ಅದಕ್ಕೆ ಪ್ರಾಸಿಕ್ಯೂಷನ್‌ನವರು ಸರಿಯಾದ ವಿವರಣೆ ನೀಡಿಲ್ಲವೆಂದು ಅರ್ಥ. ಪ್ರಕರಣದಲ್ಲಿ ಹೊರಬೀಳುವ ತೀರ್ಪಿನ ಮೇಲೆ ಅದು ಪರಿಣಾಮ ಬೀರಬಾರದು. ಅಲ್ಲದೆ ಎಫ್‌ಐಆರ್ ಸಲ್ಲಿಸುವಲ್ಲಿ ವಿಳಂಬವಾಗಲು ಅನೇಕ ಕಾರಣಗಳಿರುತ್ತವೆ. ದೂರು ನೀಡಿದರೆ ತಮ್ಮ ಮನೆತನದ ಹಾಗೂ ಹುಡುಗಿಯ ಮರ್ಯಾದೆಗೆ ಕುಂದು ಬರುತ್ತದೆ ಎಂಬ ಸಂದರ್ಭದಲ್ಲಿ ಎಫ್‌ಐಆರ್ ದಾಖಲುಮಾಡಲು ವಿಳಂಬವಾದಲ್ಲಿ ಅದು ಸಮರ್ಥನೀಯವೇ ಆಗಿರುತ್ತದೆ. ಅಲ್ಲದೆ ಅದಕ್ಕೆ ಮುಂಚೆ ಆ ಹುಡುಗಿಯ ತಂದೆ ತನ್ನ ಗ್ರಾಮದ ಸರಪಂಚನಿಗೆ ತಿಳಿಸಿ, ಅತ್ಯಾಚಾರ ನಡೆದ ಗ್ರಾಮದ ಸರಪಂಚನಿಗೆ ತಿಳಿಸಿದನಂತರ ಇಬ್ಬರೂ ಸೇರಿ ಪಂಚಾಯಿತಿ ನಡೆಸಿ ನ್ಯಾಯ ಮತ್ತು ಪರಿಹಾರ ದೊರೆಯಲಿಲ್ಲ ಎಂದಾಗ ನಂತರವೇ ಅವರು ಈ ಬಗ್ಗೆ ಪೊಲೀಸರಿಗೆ ದೂರುಕೊಡುವುದೋ ಬೇಡವೋ, ಹಾಗೆ ದೂರುಕೊಟ್ಟರೆ ಹುಡುಗಿಯ ಭವಿಷ್ಯದ ಮೇಲೆ ಅದು ಎಂಥ ಪರಿಣಾಮ ಬೀರಬಹುದು ಎಂದೆಲ್ಲ ಚರ್ಚೆ ನಡೆಸಿದ್ದಾರೆ. ಈ ಎಲ್ಲ ಅಂಶಗಳನ್ನು ವಿಚಾರಣಾ ನ್ಯಾಯಾಲಯ ಗಮನಿಸಿಲ್ಲ.

ವಿಚಾರಣಾ ನ್ಯಾಯಾಲಯ ಅತ್ಯಾಚಾರಕ್ಕೊಳಗಾದ ಹುಡುಗಿಯ ಹೇಳಿಕೆಗಳನ್ನು ನಂಬದಿರಲೆಂದೇ ಅವಳ ಹೇಳಿಕೆಗಳಲ್ಲಿ ನುಸುಳಿರುವ ಸಣ್ಣಪುಟ್ಟ ವೈರುಧ್ಯಗಳನ್ನು ಹಾಗೂ ವ್ಯತ್ಯಾಸಗಳನ್ನು ಹುಡುಕಿದೆ.

ಅತ್ಯಾಚಾರವೆಸಗಿದ ಮರುದಿನ ಅಪಹರಿಸಿದ ಸ್ಥಳಕ್ಕೆ ತಂದು ಬಿಟ್ಟುದುದರ ಬಗ್ಗೆ ಟೀಕೆ ಮಾಡುತ್ತಾ ಆರೋಪಿಗಳು ಹುಡುಗಿಯ ಬಗ್ಗೆ ಸಹಾನುಭೂತಿ ತೋರಿದರು ಎಂಬುದನ್ನು ನಂಬಲು ಸಾಧ್ಯವಿಲ್ಲ ಎಂದಿದೆ. ಆದರೆ ಅದು ಸಹಾನುಭೂತಿಯಲ್ಲ. ಅಪರಾಧ ನಡೆದ ಸ್ಥಳದಿಂದ ಅವಳನ್ನು ಸಾಗಿಸುವ ಕ್ರಮ ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಅತ್ಯಾಚಾರಕ್ಕೊಳಗಾದ ಹುಡುಗಿ ಆ ಘಟನೆಯ ಬಗ್ಗೆ ಬೇರೆ ಯಾರಲ್ಲೂ ಹೇಳದೆ ಸುಮ್ಮನಿದ್ದು ಮನೆಗೆ ಬಂದು ತಾಯಿಯ ಬಳಿ ಹೇಳಿದ್ದು ವಿಚಾರಣಾ ನ್ಯಾಯಾಲಯಕ್ಕೆ ಅಸಹಜವಾಗಿ ಕಂಡಿದೆ. ಆದರೆ ಹಳ್ಳಿಯಲ್ಲಿ ಸಾಂಪ್ರದಾಯಿಕ ಕುಟುಂಬದಲ್ಲಿ ಬೆಳೆದ ಹುಡುಗಿ ಆ ಬಗ್ಗೆ ಬೇರೆ ಯಾರಲ್ಲೂ ಏನನ್ನೂ ಹೇಳದಿರುವುದು ಅತ್ಯಂತ ಸಹಜವಾಗಿಯೇ ಇದೆ. ಇದನ್ನು ಆದಷ್ಟು ಗೋಪ್ಯವಾಗಿಡಲು ಪ್ರಯತ್ನಿಸುವುದು ಮತ್ತು ಹೊರಗಿನವರಿಗೆ ಗೊತ್ತಾಗದಂತೆ ನೋಡಿಕೊಳ್ಳಲು ಪ್ರಯತ್ನಿಸುವುದು ನಮ್ಮ ಸಮಾಜ ಒಪ್ಪಿಕೊಂಡಿರುವ ಮೌಲ್ಯಗಳಿಗೆ ಅನುಗುಣವಾಗಿದೆ ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ವಿಚಾರಣಾ ನ್ಯಾಯಾಲಯ ಈ ಪ್ರಕರಣದಲ್ಲಿ ವೈದ್ಯಕೀಯ ವರದಿಯನ್ನು ಸಂಪೂರ್ಣವಾಗಿ ಅಲಕ್ಷಿಸಿದೆ. ಆರೋಪಿಗಳ ಬಗ್ಗೆ ಇದ್ದ ಹಗೆತನದಿಂದಾಗಿ ಹುಡುಗಿಯ ತಂದೆ ಈ ಪ್ರಕರಣದಲ್ಲಿ ಅವರನ್ನು ಸಿಲುಕಿಸಿದ್ದಾರೆ ಎಂದು ಅಭಿಪ್ರಾಯಪಟ್ಟಿದೆ. ವಿಚಾರಣಾ ನ್ಯಾಯಾಲಯ ಅತ್ಯಾಚಾರಕ್ಕೊಳಗಾದ ಹುಡುಗಿಯ ಎಲ್ಲ ಹೇಳಿಕೆಗಳನ್ನೂ ಅನುಮಾನಿಸಿ ಅವುಗಳನ್ನು ನಂಬದಿರಲು ಕಾರಣಗಳನ್ನು ಹುಡುಕುತ್ತಾ ಹೊರಟಿರುವುದು ಸ್ಪಷ್ಟವಾಗುತ್ತದೆ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಯಾವುದೇ ಸಾಕ್ಷ್ಯವೂ ಇಲ್ಲದೆ ''ಬಹುಶಃ ಆ ಹುಡುಗಿಯ ನಡತೆ ಸರಿಯಿಲ್ಲದಿರಬೇಕು, ಒಂದು ರಾತ್ರಿ ತನ್ನ ಮಾವನ ಮನೆಯಲ್ಲಿಯೇ ಉಳಿದಿದ್ದೆ ಎಂದು ಹೇಳಿ ತನ್ನ ತಂದೆ ತಾಯಿಯರಿಗೆ ಮೋಸಮಾಡಬೇಕೆಂದಿದ್ದಳು ಎಂದು ಕಾಣುತ್ತದೆ. ಆದರೆ, ಅವಳಿಗೆ ಮಾತ್ರ ಗೊತ್ತಿರುವ ಕಾರಣಗಳಿಗಾಗಿ ಅವಳು ಹಾಗೆ ಮಾಡದೆ, ಬೇರೆ ವ್ಯಕ್ತಿಗಳಿಗೆ ಜೊತೆ ಕೂಡಲು ಬಯಸಿದ್ದಾಳೆ'' ಎಂಬ ವಿಚಾರಣಾ ನ್ಯಾಯಾಲಯದ ಮಾತುಗಳು ಎಂಥವರಿಗೂ ಆಘಾತವನ್ನುಂಟುಮಾಡುತ್ತದೆ ಎಂದು ಸರ್ವೋಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅಲ್ಲದೆ ಈ ಸಂದರ್ಭದಲ್ಲಿ ಸರ್ವೋಚ್ಚ ನ್ಯಾಯಾಲಯ ಹೇಳಿದ ಮಾತುಗಳು ಅತ್ಯಂತ ಮೌಲಿಕವಾದುದು.

''ವಿಚಾರಣಾ ನ್ಯಾಯಾಲಯ ತೆಗೆದುಕೊಂಡ ನಿಲುವನ್ನು ಮತ್ತು ಅತ್ಯಾಚಾರಕ್ಕೊಳಗಾದವಳ ನಡತೆಯ ಬಗ್ಗೆ ಕಳಂಕ ಹೊರಿಸಿದುದನ್ನು ನಾವು ಅತ್ಯಂತ ಕಟುವಾಗಿ ಟೀಕಿಸಬೇಕಾಗುತ್ತದೆ. ನ್ಯಾಯಾಧೀಶರಿಗಿರ ಬೇಕಾದ ಸಮಚಿತ್ತತೆ ಇಲ್ಲಿ ಕಾಣುವುದಿಲ್ಲ. ಲೈಂಗಿಕ ಅಪರಾಧಗಳಿಗೊಳಗಾದವರು ದೂರು ನೀಡಲು ಮೊದಲೇ ಹಿಂಜರಿಯುತ್ತಾರೆ. ನ್ಯಾಯಾಲಯಗಳ ಇಂಥ ನಿಲುವಿನಿಂದಾಗಿ ಅಪರಾಧಿಗಳ ಬಗ್ಗೆ ದೂರು ಕೊಡಲು ಮುಂದೆ ಬರುವುದೇ ಇಲ್ಲ. ಇದರಿಂದಾಗಿ ಅಪರಾಧಿಗಳು ವಿಚಾರಣೆಗೆ ಒಳಪಡದೆ ಸಮಾಜಕ್ಕೆ

ಮತ್ತಷ್ಟು ಹಾನಿಯುಂಟಾಗುತ್ತದೆ. ನ್ಯಾಯಾಲಯ ಇಂಥ ಪ್ರಕರಣಗಳಲ್ಲಿ ನೀಡುವ ಅಭಿಪ್ರಾಯ ಅಪರಾಧಕ್ಕೊಳಗಾದವಳಿಗೆ ವೈಯಕ್ತಿಕವಾಗಿ ಮತ್ತು ಸಮಾಜದ ಮೇಲೆ ಒಟ್ಟಾರೆಯಾಗಿ ಪ್ರತಿಕೂಲ ಪರಿಣಾಮ ಬೀರುತ್ತದೆ. ಅತ್ಯಾಚಾರಕ್ಕೊಳಗಾದವಳ ನಡತೆ ಸರಿಯಿರಲಿಲ್ಲವೆಂಬುದಕ್ಕೆ ದಾಖಲೆಗಳಿದ್ದರೂ ಸಹ ಅಂಥ ಅಭಿಪ್ರಾಯಗಳನ್ನು ನ್ಯಾಯಾಲಯ ವ್ಯಕ್ತಪಡಿಸಬಾರದು. ಒಂದು ವೇಳೆ ನಡತೆಗೆಟ್ಟವಳೇ ಆದರೂ ಅವಳು ಎಲ್ಲರಿಗೂ ಲಭ್ಯಳು ಎಂದೂ ಅಲ್ಲ. ಈ ಪ್ರಕರಣದಲ್ಲಿ ಮಾಡಿರುವಂತೆ ನಡತೆಯ ಬಗ್ಗೆ ಸಾಕ್ಷ್ಯಗಳೇ ಇಲ್ಲದಿದ್ದಾಗ್ಯೂ ಆ ಬಗ್ಗೆ ಟೀಕೆ ಮಾಡುವುದು ಅನುಚಿತ."

ನ್ಯಾಯಾಲಯಗಳು ಸಮಾಜದ ಆರೋಗ್ಯವನ್ನು ಸುಸ್ಥಿತಿಯಲ್ಲಿಡಲು ಕಾರಣವಾಗುವ ನ್ಯಾಯಪ್ರದಾನ ಮಾಡುವ ಗುರುತರವಾದ ಜವಾಬ್ದಾರಿಯನ್ನು ಹೊಂದಿರುತ್ತದೆ. ನ್ಯಾಯಾಲಯದಿಂದ ಹೊರಬೀಳುವ ಒಂದೊಂದು ತೀರ್ಪು ಸಹ ನ್ಯಾಯಾಂಗ ವ್ಯವಸ್ಥೆಯಲ್ಲಿರುವ ವಿಶ್ವಾಸವನ್ನು ಗಟ್ಟಿಗೊಳಿಸಬೇಕೇ ವಿನಃ ಅದನ್ನು ಛಿದ್ರಗೊಳಿಸಬಾರದು. ಅತ್ಯಾಚಾರ ಕಾನೂನಿಗೆ ೧೯೮೩ರಲ್ಲಿ ತಂದ ತಿದ್ದುಪಡಿಗಳಲ್ಲಿ ಅತಿಮುಖ್ಯ ವಾದುದು ಎಂದರೆ ಅತ್ಯಾಚಾರಕ್ಕೆ ವಿಧಿಸುವ ಕನಿಷ್ಠ ಶಿಕ್ಷೆಯನ್ನು ಹೆಚ್ಚಿಸಿದುದು.

ಅಭಿರಕ್ಷೆಯಲ್ಲಿದ್ದಾಗ ನಡೆಸಿದ ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ಗರ್ಭಿಣಿಯ ಮೇಲೆ ನಡೆಸಿದ ಅತ್ಯಾಚಾರ ಹಾಗೂ ಹನ್ನೆರಡು ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯರ ಮೇಲೆ ನಡೆಸಿದ ಅತ್ಯಾಚಾರ ಪ್ರಕರಣಗಳಲ್ಲಿ ಹತ್ತು ವರ್ಷಗಳು ಮತ್ತು ಇತರ ಸಂದರ್ಭಗಳಲ್ಲಿ ಏಳು ವರ್ಷಗಳ ಕಠಿಣ ಕಾರಾವಾಸದ ಶಿಕ್ಷೆಯನ್ನು ನಿಗದಿಪಡಿಸಲಾಯಿತು. ಆದರೆ ನಿಗದಿಪಡಿಸಿದುದಕ್ಕಿಂತ ಕಡಿಮೆ ಶಿಕ್ಷೆ ವಿಧಿಸಲು ಸಾಕಷ್ಟು ಹಾಗೂ ವಿಶಿಷ್ಟ ಕಾರಣಗಳಿದ್ದರೆ ಅವನ್ನು ತೀರ್ಪಿನಲ್ಲಿ ದಾಖಲಿಸಿ ಶಿಕ್ಷೆಯನ್ನು ಕಡಿಮೆಮಾಡಬಹುದು ಎಂದು ಒಂದು ಅಪವಾದ ಖಂಡವನ್ನೂ ಇದರಲ್ಲಿ ಸೇರಿಸಲಾಗಿದೆ.

ಶಿಕ್ಷೆಯನ್ನು ಹೆಚ್ಚಿಸಿದುದರ ಉದ್ದೇಶ ಶಿಕ್ಷೆಯ ಭಯದಿಂದ ಅಪರಾಧ ಮಾಡುವವರ ಸಂಖ್ಯೆಯನ್ನು ಕಡಿಮೆಮಾಡುವುದು. ಆದರೆ ಶಿಕ್ಷೆಯನ್ನು ಕಡಿಮೆ ಮಾಡಲು ಕೊಡುವ ವಿಶಿಷ್ಟವಾದ ಹಾಗೂ ಸಾಕಷ್ಟು ಕಾರಣಗಳು ಆಯಾ ಪ್ರಕರಣಗಳನ್ನು ಮತ್ತು ನ್ಯಾಯಪ್ರದಾನ ಮಾಡುವ ನ್ಯಾಯಾಧೀಶರ ಮನೋಭಾವವನ್ನು ಅವಲಂಬಿಸಿರುತ್ತದೆ.

ಆಂಧ್ರಪ್ರದೇಶ ರಾಜ್ಯ -ವಿ- ಬೊಡೆಮ್ ಸುಂದರರಾವ್ (೧೯೭೫(೪) ಕ್ರೈಮ್ಸ್ ೧೫೩) ಪ್ರಕರಣದಲ್ಲಿ ವಿಚಾರಣಾ ನ್ಯಾಯಾಲಯ ಅಪರಾಧಿಗೆ ವಿಧಿಸಿದ ಶಿಕ್ಷೆಯನ್ನು ಅಪೀಲಿನಲ್ಲಿ ಉಚ್ಚನ್ಯಾಯಾಲಯ ಕಡಿಮೆ ಮಾಡಿತು. ಈ ಪ್ರಕರಣದಲ್ಲಿ ೧೩-೧೪ ವರ್ಷವಯಸ್ಸಿನ ಹುಡುಗಿ ಜಾನುವಾರುಗಳನ್ನು ಮೇಯಿಸುತ್ತಿದ್ದ ತನ್ನ ತಂದೆಗೆ ಊಟವನ್ನು ಒಯ್ಯುತ್ತಿದ್ದಳು. ಆಗ ಇದಕ್ಕಿದ್ದಂತೆ ಬಂದ ಆರೋಪಿ ಅವಳನ್ನು ಹಿಡಿದು ಕೊಂಡು ಅವಳ ಮೇಲೆ ಅತ್ಯಾಚಾರವೆಸಗಿದ. ಈ ವಿಷಯವನ್ನು ಅವಳು ತನ್ನ ತಂದೆಗೆ ಮತ್ತು ತಾಯಿಗೆ

ತಿಳಿಸಿದಳು. ಈ ಬಗ್ಗೆ ಅವರು ಪೊಲೀಸರಲ್ಲಿ ಪ್ರಥಮ ಮಾಹಿತಿ ವರದಿಯನ್ನು ದಾಖಲುಮಾಡಿದರು. ಹುಡುಗಿಯನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದ ವೈದ್ಯರೂ ಅವಳ ಮೇಲೆ ಅತ್ಯಾಚಾರವೆಸಗಲಾಗಿರುವುದನ್ನು ದೃಢಪಡಿಸಿದರು. ವಿಚಾರಣಾ ನ್ಯಾಯಾಲಯ ಆರೋಪಿಯನ್ನು ಭಾರತ ದಂಡ ಸಂಹಿತೆಯ ೩೭೬ನೇ ಪ್ರಕರಣದ ಅಡಿಯಲ್ಲಿ ದೋಷಿಯೆಂದು ನಿರ್ಣಯಿಸಿ ಹತ್ತು ವರ್ಷಗಳ ಕಠಿಣ ಕಾರಾವಾಸದ ಶಿಕ್ಷೆಯನ್ನು ವಿಧಿಸಿತು. ಆರೋಪಿ ಉಚ್ಚ ನ್ಯಾಯಾಲಯಕ್ಕೆ ಈ ತೀರ್ಪಿನ ವಿರುದ್ಧ ಅಪೀಲು ಸಲ್ಲಿಸಿದ. ಅಪೀಲಿನಲ್ಲಿಯೂ ನ್ಯಾಯಾಲಯ ಆರೋಪಿಯನ್ನು ದೋಷಿಯೆಂದೇ ತೀರ್ಪುನೀಡಿತು. ಆದರೆ ಅಪೀಲಿನಲ್ಲಿ ಕೋರಿದಂತೆ ಶಿಕ್ಷೆಯನ್ನು ನಾಲ್ಕುವರ್ಷಗಳಿಗೆ ಇಳಿಸಿತು. "೧೦ ವರ್ಷಗಳ ಶಿಕ್ಷೆ ಹೆಚ್ಚು ಎನಿಸಿರುವುದರಿಂದ ಅದನ್ನು ನಾಲ್ಕು ವರ್ಷಗಳ ಕಠಿಣ ಕಾರಾವಾಸಕ್ಕೆ ಇಳಿಸಲಾಗಿದೆ. ಇಷ್ಟು ಮಾರ್ಪಾಡಿನೊಂದಿಗೆ ಅಪೀಲನ್ನು ವಜಾಮಾಡಿದೆ." ಎಂದಷ್ಟೇ ಹೇಳಿತಲ್ಲದೆ ಶಿಕ್ಷೆಯನ್ನು ಕಡಿಮೆ ಮಾಡಿದುದಕ್ಕೆ ಯಾವುದೇ ವಿಶಿಷ್ಟ ಕಾರಣವನ್ನೂ ನೀಡಲಿಲ್ಲ. ಇದನ್ನು ಪ್ರಶ್ನಿಸಿ ರಾಜ್ಯಸರ್ಕಾರ ಸರ್ವೋಚ್ಚನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿತು. ಶಿಕ್ಷೆಯನ್ನು ಕಡಿಮೆಮಾಡಲು ಉಚ್ಚನ್ಯಾಯಾಲಯ ಯಾವುದೇ ಸಮರ್ಥನೆಯನ್ನೂ ನೀಡಿಲ್ಲ ಮತ್ತು ಯಾವುದೇ ಕಾರಣಕ್ಕೂ ನಿಗದಿಪಡಿಸಿರುವುದಕ್ಕಿಂತ ಕಡಿಮೆ ಶಿಕ್ಷೆಯನ್ನು ವಿಧಿಸಬಾರದೆಂದು ಕೋರಿತು.

ತಿದ್ದುಪಡಿಯ ನಂತರ ಭಾರತದ ದಂಡ ಸಂಹಿತೆಯ ೩೭೬(೧)ನೇ ಪ್ರಕರಣ ಏಳುವರ್ಷಗಳ ಕನಿಷ್ಠ ಶಿಕ್ಷೆಯನ್ನು ವಿಧಿಸುತ್ತದೆ ಮತ್ತು ಇದನ್ನು ಜೀವಾವಧಿ ಶಿಕ್ಷೆಗೆ ಅಥವಾ ಹತ್ತು ವರ್ಷಗಳಿಗೆ ವಿಸ್ತರಿಸಬಹುದಾಗಿರುತ್ತದೆ ಮತ್ತು ಜುಲ್ಮಾನೆಯನ್ನೂ ವಿಧಿಸಬಹುದು ಎಂದು ಉಪಬಂಧಿಸುತ್ತದೆ. ಆದರೆ ಇದಕ್ಕೆ ವಿಶಿಷ್ಟವಾದ ಮತ್ತು ಸಾಕಷ್ಟು ಕಾರಣಗಳಿಗಾಗಿ ಏಳು ವರ್ಷಗಳಿಗಿಂತ ಕಡಿಮೆ ಶಿಕ್ಷೆಯನ್ನು ವಿಧಿಸಬಹುದು ಎಂಬ ಒಂದು ಅಪವಾದವನ್ನೂ ಸೇರಿಸಲಾಗಿದೆ.

ಅಪರಾಧದ ಸ್ವರೂಪವನ್ನು ಮತ್ತು ೧೩/೧೪ ವರ್ಷದ ಹುಡುಗಿಯ ಆ ಸಮಯದ ಅಸಹಾಯಕತೆಯನ್ನು ಗಮನಿಸಿದಾಗ, ಅಪರಾಧಿಗೆ ವಿಧಿಸಿದ ಶಿಕ್ಷೆಯನ್ನು ಯಾವುದೇ ವಿಶೇಷವಾದ ಮತ್ತು ಸಾಕಷ್ಟು ಕಾರಣಗಳನ್ನು ನೀಡದೆ ಕಡಿಮೆಮಾಡುವ ಮೂಲಕ ಉಚ್ಚ ನ್ಯಾಯಾಲಯ ತಪ್ಪುಗಳನ್ನು ಮಾಡಿದೆ. ಇದರಿಂದ ಉಚ್ಚ ನ್ಯಾಯಾಲಯ, ಭಾರತ ದಂಡ ಸಂಹಿತೆಯ ೩೭೬(೧)ನೇ ಪ್ರಕರಣದ ಮೂಲಕ ಶಾಸಕಾಂಗವು ವ್ಯಕ್ತಪಡಿಸಿರುವ ಆಜ್ಞೆಯನ್ನು ಉಲ್ಲಂಘಿಸಿದೆಯೆಂದೇ ಹೇಳಬೇಕು ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅಲ್ಲದೆ ಇಂಥ ಅಪರಾಧಗಳು ಸಮಾಜದ ವ್ಯಕ್ತಿಗಳ ಆತ್ಮಗೌರವಕ್ಕೆ ಸವಾಲೆಸೆಯುವಂಥವು. ಇಂಥ ಅಪರಾಧಗಳಿಗೆ ಕಡಿಮೆ ಶಿಕ್ಷೆಯನ್ನು, ಅದರಲ್ಲೂ ಶಾಸಕಾಂಗದ ಆದೇಶಕ್ಕೆ ವಿರುದ್ಧವಾಗಿ, ವಿಧಿಸಿದರೆ ಅದು ಅಪರಾಧಕ್ಕೊಳಗಾದವಳಿಗಷ್ಟೇ ಅಲ್ಲದೆ ಇಡೀ ಸಮಾಜಕ್ಕೆ ಎಸಗಿದ

ಅನ್ಯಾಯವಾಗುತ್ತದೆ. ಈ ಅಪರಾಧದ ಬಗ್ಗೆ ಜನರಿಗಿರುವ ಜಿಗುಪ್ಸೆ ನ್ಯಾಯಾಲಯ ನೀಡುವ ಶಿಕ್ಷೆಯ ಪ್ರಮಾಣದ ಮೂಲಕ ವ್ಯಕ್ತವಾಗಬೇಕು. ನ್ಯಾಯಾಲಯಗಳು ಶಿಕ್ಷೆಯನ್ನು ವಿಧಿಸುವಾಗ ಅಪರಾಧಿಗಳ ಹಕ್ಕುಗಳನ್ನಷ್ಟೇ ಅಲ್ಲದೆ ಅಪರಾಧಕ್ಕೆ ಒಳಗಾದವರ ಹಕ್ಕುಗಳ ಬಗ್ಗೆಯೂ ಗಮನ ನೀಡಬೇಕು ಎಂದು ಅಭಿಪ್ರಾಯಪಟ್ಟು ಅಪರಾಧಿಗೆ ವಿಧಿಸಿದ್ದ ೪ ವರ್ಷಗಳ ಕಠಿಣ ಕಾರಾವಾಸ ಶಿಕ್ಷೆಯನ್ನು ೭ ವರ್ಷಗಳ ಕಠಿಣ ಕಾರಾವಾಸ ಶಿಕ್ಷೆಗೆ ಏರಿಸಿ, ಈಗಾಗಲೇ ೪ ವರ್ಷಗಳ ಶಿಕ್ಷೆಯನ್ನು ಮುಗಿಸಿ ಮುಕ್ತನಾಗಿರುವ ಅಪರಾಧಿಯನ್ನು ಉಳಿದ ಮೂರುವರ್ಷಗಳ ಕಾರಾವಾಸ ಶಿಕ್ಷೆಯನ್ನು ಅನುಭವಿಸುವುದಕ್ಕಾಗಿ ವಶಕ್ಕೆ ತೆಗೆದುಕೊಳ್ಳುವಂತೆ ತೀರ್ಪುನೀಡಿತು.

ವಿಶೇಷ ಸಂದರ್ಭಗಳಲ್ಲಿ, ವಿಶೇಷ ಕಾರಣಗಳಿಗಾಗಿ ಬಳಕೆಯಾಗಬೇಕಾದ ಈ ಅಪವಾದವನ್ನು ಅನೇಕ ಸಂದರ್ಭಗಳಲ್ಲಿ ವಿವೇಚನಾರಹಿತವಾಗಿ ದುರುಪಯೋಗ ಪಡಿಸಿಕೊಳ್ಳಲಾಗಿದೆ ಎಂಬುದು ಮಾರ್ಪಾಡು ಗೊಳಿಸಿರುವ ಇಂಥ ಅನೇಕ ತೀರ್ಪುಗಳಿಂದ ಸ್ಪಷ್ಟವಾಗುತ್ತದೆ. ಮಹಿಳಾ ಚಳವಳಿಗಳಿಂದ ಬಂದ ಒತ್ತಡದಿಂದಾಗಿ ಅತ್ಯಾಚಾರ ಕಾನೂನಿನಲ್ಲಿ ವ್ಯಾಪಕ ತಿದ್ದುಪಡಿಗಳನ್ನು ತರಲಾಯಿತು. ಆದರೂ ಮಹಿಳಾ ಸಂಘಟನೆಗಳು ಒತ್ತಾಯಿಸಿದ ಹಾಗೂ ಕಾನೂನು ಆಯೋಗ ಮಾಡಿದ ಅನೇಕ ಶಿಫಾರಸ್ಸುಗಳನ್ನು ತಿದ್ದುಪಡಿಮಾಡುವಾಗ ಅಳವಡಿಸಿಕೊಳ್ಳಲೇ ಇಲ್ಲ. ಹಾಗೆ ಒತ್ತಾಯ ತಂದೂ ತಿದ್ದುಪಡಿ ಮಾಡದೆ ಉಳಿದ ಒಂದು ಅಂಶವೆಂದರೆ, ಪತಿಯಿಂದ ಪತ್ನಿಯ ಮೇಲಾಗುವ ಅತ್ಯಾಚಾರವನ್ನು ಕಾನೂನುಮಾನ್ಯಗೊಳಿಸಬೇಕು ಎಂಬುದು. ಈಗಿರುವ ಕಾನೂನಿನ ಪ್ರಕಾರ, ೧೫ ವರ್ಷಗಳಿಗಿಂತ ಕಡಿಮೆ ವಯಸ್ಸಿನವಳಲ್ಲದ ಪತ್ನಿಯೊಂದಿಗೆ ಪತಿ ನಡೆಸುವ ಬಲಾತ್ಕಾರದ ಲೈಂಗಿಕ ಸಂಭೋಗ ಕಾನೂನಿನ ಪರಿಭಾಷೆಯಲ್ಲಿ ಅತ್ಯಾಚಾರವೆನಿಸುವುದಿಲ್ಲ. ಆದರೆ ನ್ಯಾಯಿಕ ಬೇರ್ಪಡೆಯ ಡಿಕ್ರಿ ಪಡೆದ ಪತಿಯಿಂದ ಪತ್ನಿಯ ಮೇಲೆ ನಡೆಯುವ ಬಲಾತ್ಕಾರದ ಲೈಂಗಿಕ ಸಂಭೋಗವನ್ನು ಅತ್ಯಾಚಾರವೆಂದು ಪರಿಗಣಿಸಲಾಗಿದ್ದರೂ, ಅಂಥ ಅಪರಾಧಕ್ಕೆ ಎರಡು ವರ್ಷಗಳ ಶಿಕ್ಷೆಯನ್ನು ಮಾತ್ರ ವಿಧಿಸಲಾಗಿದೆ. ಇದಕ್ಕೆ ನೀಡಿರುವ ಕಾರಣ ಅವರಿಬ್ಬರ ನಡುವೆ ಹೊಂದಾಣಿಕೆಯಾಗುವಂತೆ ಮಾಡುವುದು ಎಂಬುದು.

೧೯೮೩ರಲ್ಲಿ ಅತ್ಯಾಚಾರ ಕಾನೂನಿಗೆ ತಂದ ತಿದ್ದುಪಡಿಯಲ್ಲಿ 'ಅಭಿರಕ್ಷೆಯಲ್ಲಿದ್ದಾಗ ನಡೆಯುವ ಅತ್ಯಾಚಾರ'ದ ಪ್ರವರ್ಗದಲ್ಲಿ ರಾಜ್ಯಕ್ಕೆ ಸಂಬಂಧಪಟ್ಟ ಅಭಿರಕ್ಷೆಯನ್ನು ಮಾತ್ರ ಸೇರಿಸಲಾಗಿದೆ. ಕುಟುಂಬದ ವ್ಯಕ್ತಿಗಳಿಂದ ನಡೆಯಬಹುದಾದ ಅತ್ಯಾಚಾರವನ್ನು ಈ ಪರಿಧಿಯಲ್ಲಿ ಸೇರಿಸಿಲ್ಲ. ೧೯೯೧ ಮತ್ತು ೧೯೯೩ರ ನಡುವೆ ವರದಿಯಾದ ಆರು ಪ್ರಕರಣಗಳಲ್ಲಿ ಆರೋಪಿಗಳು ತಂದೆಯರಾಗಿದ್ದರು. ಅಥವಾ ಅವಳ ಮೇಲೆ ಅಧಿಕಾರ ಚಲಾಯಿಸಬಲ್ಲವರಾಗಿದ್ದರು.

ಅಮೆರಿಕಾ, ಸ್ವೀಡನ್, ಡೆನ್ಮಾರ್ಕ್ ಮತ್ತು ಆಸ್ಟ್ರೇಲಿಯಾ ದೇಶಗಳಲ್ಲಿ ಪತಿಯಿಂದಾಗುವ ಬಲಾತ್ಕಾರದ ಲೈಂಗಿಕ ಸಂಭೋಗವನ್ನು ಅತ್ಯಾಚಾರದ ಪರಿಧಿಗೆ ತಂದು ಅದನ್ನು ಅಪರಾಧವೆಂದು ಪರಿಗಣಿಸಲಾಗಿದೆ.

ಈ ಬಗ್ಗೆ ಇಂಗ್ಲೆಂಡಿನ ಒಂದು ಪ್ರಕರಣದಲ್ಲಿ ನೀಡಲಾಗಿರುವ ಒಂದು ತೀರ್ಪನ್ನು ಅಧ್ಯಯನದ ಆಸಕ್ತಿಗಾಗಿ ಪರಿಶೀಲಿಸಬಹುದು. ಈ ಪ್ರಕರಣದಲ್ಲಿ ಹೌಸ್ ಆಫ್ ಲಾರ್ಡ್ಸ್ ನ್ಯಾಯಾಲಯದ ಮುಂದೆ ಅಪೀಲಿನಲ್ಲಿ ಎತ್ತಲಾಗಿದ್ದ ಪ್ರಶ್ನೆ ಎಂದರೆ, ಪತಿ ತನ್ನ ಪತ್ನಿಯೊಡನೆ ಬಲಾತ್ಕಾರದಿಂದ ಲೈಂಗಿಕ ಸಂಭೋಗ ನಡೆಸಿದುದಕ್ಕಾಗಿ ಅತ್ಯಾಚಾರದ ಅಪರಾಧಿಯೆನಿಸಿಕೊಳ್ಳುತ್ತಾನೆಯೇ? ಎಂಬುದು. ಈ ಪ್ರಕರಣದಲ್ಲಿ ಅಧೀನ ನ್ಯಾಯಾಲಯ ಅವನನ್ನು ಅಪರಾಧಿಯೆಂದು ತೀರ್ಪುನೀಡಿತು. ಅಪೀಲುದಾರ ತನ್ನ ಪತ್ನಿಯನ್ನು ೧೯೮೪ರಲ್ಲಿ ವಿವಾಹವಾಗಿದ್ದ. ೧೯೮೯ ಅಕ್ಟೋಬರ್ ನಲ್ಲಿ ಅವಳು ತಾನು ಅವನಿಂದ ವಿಚ್ಛೇದನೆ ಪಡೆಯಲಿಚ್ಛಿಸುವುದಾಗಿ ತಿಳಿಸಿ, ತನ್ನ ಪತಿಯ ಮನೆಯನ್ನು ತೊರೆದು ತಾಯಿಯ ಮನೆಗೆ ಬಂದುಬಿಟ್ಟಳು. ಅವನು ದೂರವಾಣಿಯ ಮೂಲಕ ತಾನೂ ಅವಳಿಂದ ವಿಚ್ಛೇದನೆ ಪಡೆಯಲಿಚ್ಛಿಸುವುದಾಗಿ ತಿಳಿಸಿದ. ಆದರೆ ಇಬ್ಬರೂ ವಿಚ್ಛೇದನೆಯ ಪ್ರಕ್ರಿಯೆಯನ್ನು ಪ್ರಾರಂಭಿಸಿರಲಿಲ್ಲ. ಅಪೀಲುದಾರ ೧೯೮೯ರ ನವೆಂಬರ್ ನಲ್ಲಿ ತನ್ನ ಪತ್ನಿಯ ತಾಯಿಯ ಮನೆಗೆ, ಅವಳ ತಂದೆ ತಾಯಿಯರಿರದ ಸಮಯದಲ್ಲಿ, ಬಲವಂತವಾಗಿ ಒಳಹೊಕ್ಕು ಅವಳೊಡನೆ ಬಲಾತ್ಕಾರದ ಲೈಂಗಿಕ ಸಂಭೋಗ ನಡೆಸಿದ ಅವಳ ದೂರಿನ ಮೇಲೆ ಪೊಲೀಸರು ಅವನನ್ನು ದಸ್ತಗಿರಿ ಮಾಡಿದರು. ಪತಿ ತನ್ನ ಪತ್ನಿಯ ಮೇಲೆ ಅತ್ಯಾಚಾರವೆಸಗಿದನೆಂಬ ಆರೋಪದ ಮೇಲೆ ಕಾನೂನಿನ ಪ್ರಕಾರ ಅವನನ್ನು ದೋಷಿಯಾಗಿಸುವುದು ಸಾಧ್ಯವಿಲ್ಲ ಎಂಬುದು ಅವನ ವಾದ. ಆದರೆ, ಆ ವಾದವನ್ನು ನ್ಯಾಯಾಧೀಶರು ತಳ್ಳಿಹಾಕಿದರು. ಹಾಗೆ ಪರಿಗಣಿಸಿದರೆ, ಪ್ರಸ್ತುತ ಸಂದರ್ಭದಲ್ಲಿ ಅವನನ್ನು ದೋಷಮುಕ್ತನನ್ನಾಗಿಸಿಬಿಟ್ಟಂತಾಗುತ್ತದೆ. ವಿವಾಹವಾದೊಡನೆಯೇ ಪತ್ನಿಯೊಂದಿಗೆ ಲೈಂಗಿಕ ಸಂಭೋಗ ನಡೆಸಲು ಪತಿಗೆ ಇಂಗಿತ ಸಾಮಾನ್ಯ ಒಪ್ಪಿಗೆ ಇದೆ ಎಂದು ಭಾವಿಸಿದರೂ, ಈ ಒಪ್ಪಿಗೆಯನ್ನು ಇಬ್ಬರೂ ಪರಸ್ಪರ ಒಪ್ಪಿಗೆಯಿಂದ ಅಥವಾ ಪತ್ನಿ ಏಕಪಕ್ಷೀಯವಾಗಿ, ಅವನ ಸಹವಾಸದಿಂದ ದೂರವಿರುವ ಮೂಲಕ, ಈ ಇಂಗಿತ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳಬಹುದು ಅಥವಾ ಕೊನೆಗೊಳಿಸಬಹುದು ಎಂದು ಅಭಿಪ್ರಾಯಪಟ್ಟರು. ಆದರೆ ಪತಿ ಈ ತೀರ್ಪನ್ನು ಪ್ರಶ್ನಿಸಿ ಅಪೀಲು ಹೂಡಿದನು. ಅಪೀಲಿನಲ್ಲಿ, ''ವಿವಾಹದ ಕರಾರನ್ನು ಮಾಡಿಕೊಳ್ಳುವ ಮೂಲಕ ತನ್ನ ಪತ್ನಿ ಲೈಂಗಿಕ ಸಂಭೋಗಕ್ಕೆ ಕೊಟ್ಟಿರುವ ಒಪ್ಪಿಗೆಯನ್ನು ನ್ಯಾಯಾಲಯದ ಆದೇಶದಿಂದಾಗಲೀ ಅಥವಾ ಪಕ್ಷಕಾರರ ಪರಸ್ಪರ ಒಪ್ಪಿಗೆಯಿಂದಾಗಲೀ ರದ್ದುಗೊಳಿಸದಿರುವುದರಿಂದ, ಪತಿ ತನ್ನ ಪತ್ನಿಯ ಮೇಲೆ ಅತ್ಯಾಚಾರವೆಸಗ ಬಹುದು ಎಂಬ ತೀರ್ಪು ನೀಡುವ ಮೂಲಕ ನ್ಯಾಯಾಧೀಶರು ಕಾನೂನಿನ ಪ್ರಕಾರ ತಪ್ಪಾಗಿ ತೀರ್ಮಾನ ಕೈಗೊಂಡಿದ್ದಾರೆ'' ಎಂಬ ವಾದವನ್ನು ಮಂಡಿಸಿದ. ಈ ವಾದವನ್ನು ತಳ್ಳಿಹಾದ ಅಪೀಲು ನ್ಯಾಯಾಧೀಶರು,

ಇದು ಆ ಕಾನೂನನ್ನು ರಚಿಸಿದ ಕಾಲದಲ್ಲಿ ಪ್ರಸ್ತುತವಿರಬಹುದು. ಆದರೆ, ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಳಿಗನುಸಾರವಾಗಿ ಬದಲಾಗುವ ಸಾಮರ್ಥ್ಯವನ್ನು ಕಾಮನ್ ಲಾ ಹೊಂದಿದೆ. ಅಲ್ಲಿಂದಿಲ್ಲಿಗೆ, ಮಹಿಳೆಯರ, ಅದರಲ್ಲೂ ವಿವಾಹಿತ ಮಹಿಳೆಯರ ಸ್ಥಾನಮಾನ ಅನೇಕ ವಿಧಗಳಲ್ಲಿ ಬದಲಾಗಿದೆ. ಆಸ್ತಿಹಕ್ಕುಗಳಷ್ಟೇ ಅಲ್ಲದೆ ಅನೇಕ ಬಗೆಯ ವೈವಾಹಿಕ ಪರಿಹಾರಗಳು ಇಂದು ಅವಳಿಗೆ ಲಭ್ಯವಿದೆ. ಎಲ್ಲಕ್ಕಿಂತ ಪ್ರಮುಖ ಬದಲಾವಣೆಯೆಂದರೆ, ಈಗ ವಿವಾಹವೆಂದರೆ, ಸಮಾನರಿಬ್ಬರ ವಿವಾಹ ಎಂಬ ಪರಿಕಲ್ಪನೆಯುಂಟಾಗಿರುವುದು. ಪತ್ನಿ ಪತಿಯ ದಾಸಿ ಎಂಬ ಕಲ್ಪನೆ ಈಗ ಅಳಿಸಿಹೋಗಿದೆ. ಆದ್ದರಿಂದ, ಪತ್ನಿ ಎಲ್ಲ ಸಂದರ್ಭಗಳಲ್ಲೂ ತನ್ನೊಂದಿಗೆ ಲೈಂಗಿಕ ಸಂಭೋಗ ನಡೆಸಲು ಪತಿಗೆ ಅನುಮತಿ ನೀಡಿದ್ದಾಳೆ ಅಥವಾ ನೀಡಿರುತ್ತಾಳೆ ಎಂಬ ಪರಿಕಲ್ಪನೆ ಈಗ ಹಳೆಯದಾಯಿತು. ಆಧುನಿಕ ಯುಗದಲ್ಲಿ ವಿವೇಚನೆಯುಳ್ಳ ಯಾರೇ ವ್ಯಕ್ತಿಯೂ ಇದನ್ನು ಒಪ್ಪುವುದಿಲ್ಲ ಮತ್ತು ಇದಕ್ಕೆ ಮಾನ್ಯತೆ ನೀಡುವುದಿಲ್ಲ ಎಂದು ಅಭಿಪ್ರಾಯಪಟ್ಟರು.

ನಮ್ಮ ಸಮಾಜಕ್ಕೆ ಸಂಬಂಧಪಟ್ಟಂತೆಯೂ ಪರಿಸ್ಥಿತಿ ಭಿನ್ನವಾಗಿಲ್ಲ. ಇಂಥ ಸಂದರ್ಭಗಳಲ್ಲಿ ತೀರ್ಮಾನವನ್ನು ನ್ಯಾಯಿಕ ವಿವೇಚನೆಗೆ ಬಿಡದೆ ಕಾನೂನಿನಲ್ಲಿಯೇ ತಿದ್ದುಪಡಿ ತರುವುದು ಉಚಿತ. ಈ ದಿಕ್ಕಿನಲ್ಲಿಯೂ ಮಹಿಳಾ ಚಳವಳಿಗಳ ಮೂಲಕ ಪ್ರಯತ್ನಗಳು ನಡೆಯಬೇಕಾದ ಅಗತ್ಯವಿದೆ.

## ಆಸ್ತಿಹಕ್ಕಿನ ಪ್ರಕರಣಗಳು

ಸಂವಿಧಾನ ಜಾರಿಗೆ ಬಂದ ನಂತರ, ಸಂವಿಧಾನದ ಪ್ರಸ್ತಾವನೆಯಲ್ಲಿ ಕೊಡಮಾಡಿರುವ ಸಮಾನತೆಯ ಹಕ್ಕು ಹಾಗೂ ವ್ಯಕ್ತಿಗೌರವ, ಮೂಲಭೂತ ಹಕ್ಕುಗಳು ಮತ್ತು ನಿರ್ದೇಶನ ತತ್ತ್ವಗಳು. ಇವು ಮೂರೂ ಸಾಮಾಜಿಕ ಸ್ಥಾನಮಾನ ಅಥವಾ ಸ್ತ್ರೀಪುರುಷ ಬೇಧದಿಂದ ಉಂಟಾಗಿರುವ ತಾರತಮ್ಯ ಅಥವಾ ಅ ಅಸಾಮರ್ಥ್ಯಗಳನ್ನು ಹೋಗಲಾಡಿಸಲು ಉದ್ದೇಶಿಸಿದ ಮತ್ತು ಸಮಾಜದಲ್ಲಿರುವ ಸ್ತ್ರೀಯರ ಅಥವಾ ದುರ್ಬಲ ವರ್ಗದವರಿಗೆ ಅಡ್ಡಿಯಾಗಿದ್ದ ತೊಂದರೆಗಳನ್ನು ನಿವಾರಿಸಿದ ಮೂರು ಸೂತ್ರಗಳು. ಪ್ರಸ್ತಾವನೆ ಸಂವಿಧಾನದ ಒಂದು ಭಾಗ. ಸಂವಿಧಾನ, ಸಮಾನ ಸ್ಥಾನಮಾನ ಮತ್ತು ಸಮಾನ ಅವಕಾಶಗಳನ್ನು ಕೊಡುತ್ತದೆ. ವ್ಯಕ್ತಿಗೌರವದೊಂದಿಗೆ ನ್ಯಾಯ, ಸಮಾನತೆ ಮತ್ತು ಸ್ವಾತಂತ್ರ್ಯಗಳು ಉಳಿಯುವುದು ಸಂವಿಧಾನದ ಅಡಿಯಲ್ಲಿ ಮಾಡುವ ಕಾನೂನುಗಳು ಮೂಲಕ. ಆದರೆ ಮಹಿಳೆಗೆ ಕಡಿಮೆ ಸ್ಥಾನಮಾನವನ್ನು ಕೊಟ್ಟಿರುವ ವೈಯಕ್ತಿಕ ಕಾನೂನುಗಳ ಸಮಾನತೆಯ ತತ್ತ್ವಕ್ಕೆ ವಿರುದ್ಧವಾದವುಗಳಾಗಿವೆ. ವೈಯಕ್ತಿಕ ಕಾನೂನುಗಳಿಗೆ ಮೂಲ ಸಂವಿಧಾನವಲ್ಲ ಧರ್ಮಗ್ರಂಥಗಳು. ಈ ಕಾನೂನುಗಳು ಸಂವಿಧಾನಕ್ಕೆ ಸಂಗತವಾಗಿಲ್ಲದೆ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದರೆ ಸಂವಿಧಾನದ ೧೩ನೇ ಅನುಚ್ಛೇದದ

ಅಡಿಯಲ್ಲಿ ಅವು ಶೂನ್ಯವಾಗುತ್ತದೆ. ಸಮಾನತೆಯ ಹಕ್ಕು ಒಂದು ಮೂಲಭೂತ ಹಕ್ಕು. ಆಸ್ತಿವಿಷಯದಲ್ಲಿ ಮಹಿಳೆಗೆ ಪುರುಷರೊಂದಿಗೆ ಸಮಾನ ಹಕ್ಕುಗಳನ್ನು ಕೊಡುವ ದೃಷ್ಟಿಯಿಂದ ಎಂದರೆ ಆಸ್ತಿಗೆ ಮಹಿಳೆ ಸಂಪೂರ್ಣವಾಗಿ ಒಡೆಯಳಾಗುವಂತೆ ಹಿಂದೂ ಉತ್ತರಾಧಿಕಾರ ಅಧಿನಿಯಮ ೧೪ನೇ ಪ್ರಕರಣ ಅವಕಾಶ ಕಲ್ಪಿಸುತ್ತದೆ. ಇದು, ಹಿಂದೂ ಮಹಿಳೆ ಅವಳ ಜೀವಿತಾವಧಿಗೆ ಮಾತ್ರ ಒಡತಿಯಾಗಬಹುದು ಎಂಬ ಸೀಮಿತ ಹಕ್ಕನ್ನು ವಿಸ್ತರಿಸಿ, ಅವಳಿಗೆ ಪೂರ್ಣ ಒಡೆತನದ ಹಕ್ಕು ನೀಡುತ್ತದೆ.

ಪುರುಷರೊಂದಿಗೆ ಸರಿಸಮಾನರಾಗಿ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಹಕ್ಕುಗಳನ್ನು ಅನುಭವಿಸುವ ಹಕ್ಕು ಮಹಿಳೆಯರಿಗಿದೆ. ಇದು ಸಾಧ್ಯವಾಗುವುದಕ್ಕೆ ಅವಳಿಗೆ ಅವಕಾಶಗಳನ್ನು ಹಾಗೂ ಸೌಲಭ್ಯಗಳನ್ನು ಕಲ್ಪಿಸಿದರೆ ಮಾತ್ರ ಸಾಲದು, ಎಲ್ಲ ರೀತಿಯ ಸ್ತ್ರೀ/ಪುರುಷ ಅಸಮಾನತೆಯನ್ನು ತೊಡೆದು ಹಾಕಬೇಕು. ಇದು ರಾಷ್ಟ್ರ ಮಾಡಲೇಬೇಕಾದ ಕರ್ತವ್ಯ. ವ್ಯಕ್ತಿತ್ವ ಬೆಳವಣಿಗೆಗೆ, ಸ್ವಾವಲಂಬಿಯಾಗಿರುವುದಕ್ಕೆ, ಸಮಾನ ಸ್ಥಾನಮಾನವನ್ನು ಪಡೆಯುವುದಕ್ಕೆ ಹಾಗೂ ವ್ಯಕ್ತಿ ಗೌರವವನ್ನು ಕಾಪಾಡಿಕೊಳ್ಳುವುದಕ್ಕೆ ಅವಳಿಗೆ ಆಸ್ತಿ ಹಕ್ಕು ಇರಬೇಕಾದುದು ಅತ್ಯಂತ ಅಗತ್ಯವಾಗುತ್ತದೆ. ಆದ್ದರಿಂದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳೊಡನೆ ಆರ್ಥಿಕ ಅಭಿವೃದ್ಧಿಗೆ ಹಕ್ಕು ಹೊಂದಲು ಅನುಕೂಲವಾಗುವಂತಹ ವಾತಾವರಣವನ್ನು ಕಲ್ಪಿಸುವುದು ರಾಷ್ಟ್ರದ ಜವಾಬ್ದಾರಿಗಳಲ್ಲಿ ಒಂದಾಗುತ್ತದೆ.

ಸಂವಿಧಾನದ ಹಾಗೂ ರಾಷ್ಟ್ರದ ಆಶಯ ನೆರವೇರುವುದು, ಆ ಗುರಿಗಳನ್ನು ಸಾಧಿಸುವುದಕ್ಕಾಗಿ ಜಾರಿಮಾಡಿದ ಕಾನೂನುಗಳ ಆಶಯ ನೆರವೇರಿದಾಗ ಮಾತ್ರ. ಆದರೆ ಕಾನೂನಿನ ದೋಷಯುತ ರಚನೆ, ತಪ್ಪು ಅನ್ವಯ ಹಾಗೂ ತಪ್ಪು ವ್ಯಾಖ್ಯಾನಗಳು ಕಾನೂನುಗಳ ಆಶಯಗಳನ್ನು ವಿಫಲಗೊಳಿಸುತ್ತವೆ.

೧೯೫೬ರಲ್ಲಿ ಜಾರಿಯಾದ ಹಿಂದೂ ಉತ್ತರಾಧಿಕಾರ ಅಧಿನಿಯಮ ಮಹಿಳೆಯರ ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಎರಡು ಮುಖ್ಯ ಬದಲಾವಣೆಗಳನ್ನು ತಂದಿತು. ಮೊದಲನೆಯದಾಗಿ ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೂ ಗಂಡುಮಕ್ಕಳಿಗಿರುವಂತೆಯೇ ಸಮಾನಹಕ್ಕುಗಳನ್ನು ನೀಡಿತು. ಎರಡನೆಯದಾಗಿ ಮಹಿಳೆಗೆ ಆಸ್ತಿ ಹೊಂದುವ ನಿರುಪಾಧಿಕ ಹಕ್ಕನ್ನು ನೀಡುವುದರ ಜೊತೆಗೆ ಈ ಅಧಿನಿಯಮದ ಪ್ರಾರಂಭದಲ್ಲಿ ಅವಳು ಹೊಂದಿದ ಆಸ್ತಿಯ ಸೀಮಿತ ಅಧಿಕಾರ ಈ ಅಧಿನಿಯಮ ಜಾರಿಗೆ ಬಂದ ನಂತರ ನಿರುಪಾಧಿಕ ಹಕ್ಕಾಗಿ ಪರಿವರ್ತನೆಗೊಳ್ಳುವಂತೆ ಮಾಡಿತು. ಆದರೆ ಕೆಲವು ಪ್ರವರ್ಗದ ಆಸ್ತಿಗಳನ್ನು ಮಾತ್ರ ಇದರಿಂದ ಹೊರತುಪಡಿಸಲಾಗಿದೆ.

ವಿ.ತುಳಸಮ್ಮ -ವಿ- ಶೇಷರೆಡ್ಡಿ [(೧೯೭೭)೩ ಎಸ್‌ಸಿಸಿ ೯೯]. ಈ ಪ್ರಕರಣ ಹಿಂದೂ ಉತ್ತರಾಧಿಕಾರ ಅಧಿನಿಯಮ ಜಾರಿಗೆ ಬರುವುದಕ್ಕೆ ಮುನ್ನ ಮಹಿಳೆಗೆ ಇದ್ದ ಆಸ್ತಿಯ ಸೀಮಿತ ಹಕ್ಕಿನ ಮೇಲೆ ಈ ಕಾನೂನಿನ ಪ್ರಭಾವವನ್ನು ತಿಳಿಯುವುದಕ್ಕೆ ಬಹುಮುಖ್ಯವಾದ ಪ್ರಕರಣ.

ಈ ಪ್ರಕರಣದಲ್ಲಿ ನಿರ್ಧರಿತವಾಗಬೇಕಾದ ಎರಡು ಬಹುಮುಖ್ಯ ಪ್ರಶ್ನೆಗಳೆಂದರೆ

೧. ೧೯೫೬ರ ಅಧಿನಿಯಮಕ್ಕೆ ಮುನ್ನ ಅಪೀಲುದಾರಳಾದ ತುಳಸಮ್ಮಳಿಗೆ ಜೀವನಾಂಶಕ್ಕೆ ಬದಲಾಗಿ ಕೊಡಲಾಗಿದ್ದ ಆಸ್ತಿ, ಅಧಿನಿಯಮದ ೧೪(೧)ನೇ ಪ್ರಕರಣದ ವ್ಯಾಪ್ತಿಗೆ ಬರುತ್ತದೆಯೇ ಅಥವಾ ಅದಕ್ಕೆ ೧೪(೨)ನೇ ಪ್ರಕರಣ ಅನ್ವಯವಾಗುತ್ತದೆಯೇ?

೨. ಹಿಂದೂ ವಿಧವೆಗೆ ಜೀವನಾಂಶಕ್ಕೆ ಬದಲಾಗಿ ಆಸ್ತಿಯನ್ನು ಹೊಂದಲು ಹಕ್ಕಿದೆಯೇ? ಮತ್ತು ಅಂಥ ಹಕ್ಕು ಜೀವನಾಂಶದ ರೂಪದಲ್ಲಿ ನಂತರ ಪ್ರಾಪ್ತವಾದರೆ ಅದನ್ನು ಮುಂಚೆಯೇ ಇದ್ದ ಹಕ್ಕೆಂದು ಗುರುತಿಸಬೇಕೇ ಅಥವಾ ಅದನ್ನು ಪ್ರಾಪ್ತವಾದ ಹೊಸ ಹಕ್ಕೆಂದು ಪರಿಗಣಿಸಿ ಅದಕ್ಕೆ ೧೪(೨) ಪ್ರಕರಣವನ್ನು ಅನ್ವಯಿಸಬೇಕೇ? ಇವೆರಡರಲ್ಲಿ ಯಾವುದು ಸರಿ.

ಈ ಪ್ರಕರಣದಲ್ಲಿ ತೀರ್ಪು ನೀಡಿದವರು ನ್ಯಾಯಮೂರ್ತಿಗಳಾದ ಪಿ.ಎನ್ .ಭಗವತಿ, ಎಸ್ .ಗುಪ್ತ ಮತ್ತು ಎಸ್.ಮುತಾನಿಜ ಅಲಿ ಅವರುಗಳು.

ಈ ಬಗ್ಗೆ ತೀರ್ಪು ನೀಡುವ ಮುನ್ನ ೧೯೫೬ರ ಕಾನೂನು ಜಾರಿಗೆ ಬರುವ ಮುನ್ನ ಜಾರಿಯಲ್ಲಿದ್ದ ಧರ್ಮಶಾಸ್ತ್ರಗ್ರಂಥಗಳಲ್ಲಿ ನಿರೂಪಿಸಿದ್ದು, ಸಮಾಜ ಅನುಸರಿಸುತ್ತಿದ್ದ ಕಟ್ಟುಕಟ್ಟಳೆಗಳು ಹಾಗೂ ವಿವಾಹ ಪರಿಕಲ್ಪನೆ, ಪತ್ನಿಯಾಗಿ ಹಿಂದೂ ಮಹಿಳೆಗಿದ್ದ ಸ್ಥಾನಮಾನ ಗೌರವಾದರಗಳನ್ನು ಕೂಲಂಕಷವಾಗಿ ಪುನರಾವಲೋಕಿಸುತ್ತಾರೆ. ಈ ಪ್ರಕರಣಕ್ಕೆ ಹಿನ್ನೆಲೆಯಾಗಿ ಅದನ್ನು ಸಾಕ್ಷಿಯಾಗಿ ಸಂಕ್ಷಿಪ್ತವಾಗಿ ಇಲ್ಲಿ ತಿಳಿಸುವುದು ಸೂಕ್ತವಾಗುತ್ತದೆ.

ಹಿಂದೂಗಳಿಗೆ 'ವಿವಾಹ' ಎಂಬುದು ಒಂದು ಪವಿತ್ರವಾದ ಧಾರ್ಮಿಕ ಕಾರ್ಯ. ಮುಸ್ಲಿಂರಲ್ಲಿರುವಂತೆ ಅವರಿಗೆ ಇದು ಕೇವಲ ಕರಾರು ಅಲ್ಲ. ಪತಿ ಪತ್ನಿಯರೆಂಬ ಪವಿತ್ರ ಬಂಧನ ಅವರ ಜೀವನವನ್ನು ಪರಸ್ಪರ ಹೆಣೆಯುತ್ತದೆ. ಪತ್ನಿ ವಿವಾಹದ ನಂತರ ಗಂಡನ ಮನೆ ಸೇರಿ ಆ ಮನೆಯ ಹಾಗೂ ಪತಿಯ ಒಂದು ಭಾಗವಾಗುತ್ತಾಳೆ. ಹಿಂದೂ ಮಹಿಳೆಗೆ ಪತಿಯೇ ಅವಳ ದೇವರು. ಅವಳು ಪತಿಯನ್ನು ಅತ್ಯಂತ ಭಕ್ತಿಯಿಂದ ಸಮರ್ಪಣಾ ಭಾವದಿಂದ ಸೇವಿಸುತ್ತಾಳೆ. ಅವಳ ಬದುಕು ನಿಸ್ವಾರ್ಥ ಸೇವೆಯಿಂದ ಕೂಡಿರುತ್ತದೆ. ಪತಿಯ ಸುಖ ಸಂತೋಷಗಳನ್ನು ದುಃಖ ದುಮ್ಮಾನಗಳನ್ನು ಕಷ್ಟನಷ್ಟಗಳನ್ನು ಹಂಚಿಕೊಂಡು ಅವನ 'ಅರ್ಧಾಂಗಿ' ಎನಿಸಿಸಿಕೊಳ್ಳುತ್ತಾಳೆ.

ವಿವಾಹಾನಂತರ ಹಿಂದೂ ಮಹಿಳೆಯ ಸ್ಥಾನಮಾನ ಈ ಬಗೆಯದಾಗಿತ್ತಾದ್ದರಿಂದ ಕಾನೂನು ಸಹ ಅದಕ್ಕೆ ಸರಿಯಾದ ಕರ್ತವ್ಯವನ್ನು ಗಂಡನಿಗೆ ವಿಧಿಸುತ್ತದೆ. ಅದೆಂದರೆ ಅವಳನ್ನು ಕಾಪಾಡುವುದು, ಸುಖವಾಗಿರುವಂತೆ ನೋಡಿಕೊಳ್ಳುವುದು, ಗಂಡನಿಗೆ ಆಸ್ತಿಯಿದ್ದರೆ, ಅಂಥ ಆಸ್ತಿಯಿಂದ ಹೆಂಡತಿಯನ್ನು

ನೋಡಿಕೊಳ್ಳುವುದು ಅವನ ಕರ್ತವ್ಯ ಮತ್ತು ಹಾಗೆ ನೋಡಿಕೊಳ್ಳುವಂತೆ ನಿರೀಕ್ಷಿಸುವುದು ಹೆಂಡತಿಯ ಹಕ್ಕು. ಹಾಗಾಗಿ ಗಂಡ ಹೆಂಡತಿಯನ್ನು ನೋಡಿಕೊಳ್ಳುವುದನ್ನು ಅಥವಾ ಹಿಂದೂ ವಿಧವೆಗೆ ಗಂಡನ ಆಸ್ತಿಯಿಂದ ಜೀವನಾಂಶ ನೀಡುವುದನ್ನು ಗಂಡನ ಉದಾರತೆಯೆಂದೋ ಉಪಕಾರವೆಂದೋ ಸಹಾನುಭೂತಿ ಯೆಂದೋ ಪರಿಗಣಿಸಬೇಕಾದ ಅಗತ್ಯವಿಲ್ಲ. ಇದು ಪತಿ ಪತ್ನಿ ಎಂಬ ಸಂಬಂಧದಿಂದ ಉಂಟಾಗುವ ಆಧ್ಯಾತ್ಮಿಕ ಮತ್ತು ನೈತಿಕ ಹೊಣೆ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಎತ್ತಿರುವ ಪ್ರಶ್ನೆಯನ್ನು ನ್ಯಾಯಮೂರ್ತಿಗಳು ವಿಶ್ಲೇಷಿಸಿದ್ದಾರೆ.

ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾಗಿರುವ ಕಾನೂನು ಮತ್ತು ಮೇಲೆ ಹೇಳಿದ ಪತಿಪತ್ನಿಯರ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಜೀವನಾಂಶಕ್ಕೆ ಹಿಂದೂ ಮಹಿಳೆಗೆ ಇರುವ ಹಕ್ಕಿನ ಗುಣಲಕ್ಷಣಗಳನ್ನು ಈ ಮುಂದಿನಂತೆ ನಿರೂಪಿಸಬಹುದು.

೧. ಪತಿಯ ಮಟ್ಟಿಗೆ ಇದು ಅವನ ವೈಯಕ್ತಿಕ ಜವಾಬ್ದಾರಿ. ಅವನಿಗೆ ಆಸ್ತಿ ಇಲ್ಲದಿದ್ದರೂ ಅವಳನ್ನು ನೋಡಿಕೊಳ್ಳುವುದು ಅವನ ಜವಾಬ್ದಾರಿ. ಅವನಿಗೆ ಆಸ್ತಿಯಿದ್ದರೆ, ಅವನ ವಿಧವೆ ಜೀವನಾಂಶವನ್ನು ಅವನ ಆಸ್ತಿಯಿಂದ ಪಡೆಯಲು ಹಕ್ಕಿರುತ್ತದೆ. ಇದು ಅವನ ಆಸ್ತಿಯ ಮೇಲೆ ವಿಧಿಸಿದ ಹೊರೆಯಾಗಿರುತ್ತದೆ. ಮತ್ತು ಈ ಆಸ್ತಿಯನ್ನು ಯಾರೇ ಪಡೆದರೂ, ವಿಧವೆಯನ್ನು ನೋಡಿಕೊಳ್ಳುವ ಹೊರೆಯನ್ನು ಅವನು ಹೊರುವುದು ಕಡ್ಡಾಯವಾಗಿರುತ್ತದೆ.

೨. ಜೀವನಾಂಶಕ್ಕಾಗಿ ಮಹಿಳೆಗೆ ಇರುವ ಹಕ್ಕು ಆಸ್ತಿಹಕ್ಕಲ್ಲ. ಆಸ್ತಿಯಲ್ಲಿ ಅವಳಿಗಿರುವ ಹಕ್ಕು ಎಂದರೆ ಅವಳು ಒಪ್ಪಂದದ ಮೂಲಕ ಅಥವಾ ಸಿವಿಲ್ ನ್ಯಾಯಾಲಯದಿಂದ ಡಿಕ್ರಿಪಡೆಯುವ ಮೂಲಕ ಜೀವನಾಂಶಕ್ಕಾಗಿ ಆಸ್ತಿಯಲ್ಲಿ ಹಕ್ಕನ್ನು ತನಗಾಗಿ ಸೃಜಿಸುವಂತೆ ಮಾಡಬಹುದು.

೩. ಅವಿಭಕ್ತ ಆಸ್ತಿಯನ್ನು ಮಾರಾಟಮಾಡಿದ್ದರೂ ಸಹ ಖರೀದಿದಾರನಿಗೆ ಆ ಆಸ್ತಿಯಲ್ಲಿ ವಿಧವೆಯ ಜೀವನಾಂಶ ಸಂದಾಯ ಮಾಡಬೇಕೆಂಬ ಅರಿವಿದ್ದರೆ, ಹಾಗೆ ಕೊಡಲು ಕಾನೂನು ರೀತ್ಯಾ ಅವನು ಬದ್ಧನಾಗಿರುತ್ತಾನೆ.

೪. ಮಹಿಳೆಗಿರುವ ಜೀವನಾಂಶದ ಹಕ್ಕು ಒಂದು ಪೂರ್ವನಿಶ್ಚಿತ ಹಕ್ಕು.

೫. ಜೀವನಾಂಶದ ಹಕ್ಕು ಪತಿ ಪತ್ನಿಯರ ಸಾಮಾಜಿಕ ಹಾಗೂ ಪ್ರಾಪಂಚಿಕ ಸಂಬಂಧದಿಂದಾಗಿ ಉಂಟಾದ ಹಕ್ಕು. ಇದರ ಆಧಾರದಿಂದ ಪತ್ನಿ ಪತಿಯ ಆಸ್ತಿಗೂ ಒಂದು ರೀತಿಯಲ್ಲಿ ಸಹ-ಮಾಲೀಕಳಾಗುತ್ತಾಳೆ. ಆದರೆ ಈ ಮಾಲಿಕತ್ವ ಅಧೀನ ಸ್ವರೂಪದ್ದು.

೬. ಹಿಂದೂ ಮಹಿಳೆ ಆಸ್ತಿಯ ಸ್ವಾಧೀನವನ್ನು ಹೊಂದಿದ್ದರೆ, ಜೀವನಾಂಶಕ್ಕೆ ಬದಲಾಗಿ ಅವಳು ಅದರ ಸ್ವಾಧೀನವನ್ನು ಉಳಿಸಿಕೊಳ್ಳಬಹುದು. ಆಸ್ತಿಗೆ ವಾರಸುದಾರ ಅಥವಾ ಅದನ್ನು ಖರೀದಿಸಿದವನು ಅವಳ ಜೀವನಾಂಶಕ್ಕೆ ಸರಿಯಾದ ವ್ಯವಸ್ಥೆ ಮಾಡಿದರೆ ಮಾತ್ರ ಅವಳು ಅದರ ಸ್ವಾಧೀನವನ್ನು ಬಿಟ್ಟುಕೊಡಬಹುದು.

ಈ ಹಿನ್ನೆಲೆಯಲ್ಲಿ ೧೯೫೬ರ ಅಧಿನಿಯಮದ ೧೪(೧) ಮತ್ತು(೨) ನೇ ಪ್ರಕರಣಗಳನ್ನು ನಾವು ವ್ಯಾಖ್ಯಾನಿಸಬೇಕಾಗುತ್ತದೆ. ಅಧಿನಿಯಮದ ೧೪ನೇ ಪ್ರಕರಣ ಹೀಗಿದೆ.

೧೪(೧)- ಹಿಂದೂ ಸ್ತ್ರೀ ಹೊಂದಿರುವ ಆಸ್ತಿಯನ್ನು, ಅದು ಅಧಿನಿಯಮಕ್ಕೆ ಮುಂಚೆ ಅಥವಾ ನಂತರ ಅರ್ಜಿಸಿದುದಾಗಿರಲಿ, ಅವಳು ಪೂರ್ಣ ಮಾಲೀಕಳಾಗಿ ಹೊಂದಿರತಕ್ಕದ್ದು, ಸೀಮಿತ ಮಾಲೀಕಳಾಗಿ ಅಲ್ಲ.

ಈ ಉಪಪ್ರಕರಣದಲ್ಲಿ 'ಆಸ್ತಿ' ಎಂಬುದು ಚರ ಮತ್ತು ಸ್ಥಿರ ಆಸ್ತಿಗಳೆರಡನ್ನೂ ಒಳಗೊಳ್ಳುತ್ತದೆ. ಈ ಆಸ್ತಿ ಹಿಂದೂ ಸ್ತ್ರೀ ವಾರಸುದಾರಿಕೆಯಿಂದ ಅಥವಾ ಲಿಖಿತ ಪತ್ರದಿಂದ ಅಥವಾ ಪಾಲುದಾರಿಕೆಯಿಂದ ಅಥವಾ ಜೀವನಾಂಶ ಅಥವಾ ಜೀವನಾಂಶದ ಬಾಕಿಗೆ ಬದಲಾಗಿ ಅಥವಾ ಅವಳ ಮದುವೆಗೆ ಮುನ್ನ ಮದುವೆಯ ಸಮಯದಲ್ಲಿ ಅಥವಾ ನಂತರ ಬಂಧುನಿಂದ ಅಥವಾ ಇತರ ಯಾರೇ ವ್ಯಕ್ತಿಯಿಂದ ಉಡುಗೊರೆಯ ರೂಪದಲ್ಲಿ ಅಥವಾ ಅವಳ ನೈಪುಣ್ಯ ಅಥವಾ ಶ್ರಮದಿಂದ ಅಥವಾ ಖರೀದಿ ಅಥವಾ ದೀರ್ಘಾನುಭಾವಾಧಿಕಾರದಿಂದ ಹೊಂದಿರುವ ಆಸ್ತಿಯನ್ನು ಮತ್ತು ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟ ಪೂರ್ವದಲ್ಲಿ ಸ್ತ್ರೀಧನವಾಗಿ ಅವಳು ಹೊಂದಿರುವ ಯಾವುದೇ ಅಂಥ ಆಸ್ತಿಯನ್ನು ಒಳಗೊಳ್ಳುತ್ತದೆ.

(೨) (೧)ನೇ ಉಪಪ್ರಕರಣದಲ್ಲಿರುವುದಾವೂದೂ, ಯಾವುದೇ ಆಸ್ತಿಯನ್ನು ದಾನ ಅಥವಾ ಉಯಿಲು ಅಥವಾ ಯಾವುದೇ ಲಿಖಿತ ಪತ್ರ ಅಥವಾ ಸಿವಿಲ್ ನ್ಯಾಯಾಲಯದ ಡಿಕ್ರಿ ಅಥವಾ ಆದೇಶ ಅಥವಾ ಯಾವುದೇ ತೀರ್ಪಿನ ಮೂಲಕ ಪಡೆದಿದ್ದು ದಾನ, ಉಯಿಲು ಅಥವಾ ಲಿಖಿತ ಪತ್ರ ಅಥವಾ ಡಿಕ್ರಿ, ಆದೇಶ ಅಥವಾ ತೀರ್ಪು ಅಂಥ ಆಸ್ತಿಯಲ್ಲಿ ನಿರ್ಬಂಧಿತ ಮಾಲೀಕತ್ವವನ್ನು ನಿಗದಿಪಡಿಸಿದ್ದರೆ ಅಂಥ ಆಸ್ತಿಗೆ ಅನ್ವಯವಾಗತಕ್ಕದಲ್ಲ."

ಈ ಹಿನ್ನೆಲೆಯಲ್ಲಿ ಈ ಮುಂದಿನ ತತ್ತ್ವಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

೧. ಬದಲಾಗುತ್ತಿರುವ ಕಾಲಕ್ಕೆ ಸರಿಯಾಗಿ ಹೊಂದಿಕೆಯಾಗುವಂತೆ ಹಿಂದೂ ವಿಧವೆಯು ಹೊಂದಿರುವ ಸೀಮಿತ ಹಕ್ಕನ್ನು ವಿಸ್ತರಿಸುವ ಅಧಿನಿಯಮದ ಉದ್ದೇಶವನ್ನು ಈಡೇರಿಸಬೇಕಾದರೆ ೧೯೫೬ರ ಅಧಿನಿಯಮದ ೧೪ನೇ ಪ್ರಕರಣದ ಉಪಬಂಧಗಳನ್ನು ಉದಾರವಾಗಿ ಅರ್ಥೈಸಬೇಕು.

೨. ವಿಧವೆಗೆ ಹೊಸ ಹಕ್ಕನ್ನು ಸೃಜಿಸದೆ ಅಥವಾ ಪ್ರದಾನಮಾಡದೆ ಇರುವ ಈಗಲೇ ಇದ್ದ ಹಕ್ಕನ್ನು

ಕೇವಲ ಮಾನ್ಯಮಾಡುವ ಯಾವುದೇ ಹಸ್ತಾಂತರಕ್ಕೆ ೧೪(೨)ನೇ ಪ್ರಕರಣ ಅನ್ವಯಿಸುವುದಿಲ್ಲ ಎಂಬುದು ೧೪(೨)ನೇ ಪ್ರಕರಣದಲ್ಲಿ ಅತ್ಯಂತ ಸ್ಪಷ್ಟವಾಗಿದೆ.

೩. ೧೯೫೬ರ ಅಧಿನಿಯಮ ಹಿಂದೂ ಸಮಾಜದಲ್ಲಿ ಕ್ರಾಂತಿಕಾರಿ ಹಾಗೂ ದೂರಗಾಮೀ ಬದಲಾವಣೆಗಳನ್ನು ಮಾಡಿದೆ. ಹಾಗಾಗಿ ಅಧಿನಿಯಮದ ಆಶಯ ನೆರವೇರುವಂತೆ ನೋಡಿಕೊಳ್ಳಲು ಎಲ್ಲ ಪ್ರಯತ್ನಗಳನ್ನೂ ಮಾಡಬೇಕು. ಇದು, ಮರಣಶಾಸನ ರಹಿತ ಆಸ್ತಿ ವಾರಸುದಾರಿಕೆಯಲ್ಲಿ ಸ್ತ್ರೀಪುರುಷರ ನಡುವೆ ಇರುವ ತಾರತಮ್ಯವನ್ನು ಹೋಗಲಾಡಿಸಲು ಅಗತ್ಯವಿದ್ದ ದೀರ್ಘಕಾಲದ ಅಗತ್ಯವನ್ನು ಪೂರೈಸುತ್ತದೆ.

೪. ೧೪ ನೇ ಪ್ರಕರಣದ (೨)ನೇ ಉಪಪ್ರಕರಣ ೧೪ನೇ ಪ್ರಕರಣದ (೧)ನೇ ಉಪಪ್ರಕರಣಕ್ಕಿರುವ ಪರಂತುಕವಷ್ಟೆ ಮತ್ತು ಅದನ್ನು ಪರಂತುಕದಂತೆ ವ್ಯಾಖ್ಯಾನಿಸಬೇಕೇ ಹೊರತು ಮೂಲ ಉಪಬಂಧದ ಪ್ರಭಾವವನ್ನೇ ಹಾಳುಮಾಡುವ ರೀತಿಯಲ್ಲಿ ಅಲ್ಲ.''

ಈ ಪ್ರಕರಣದಲ್ಲಿ ನ್ಯಾಯಮೂರ್ತಿಗಳ ನಿಲುವು, ಕಾನೂನಿನ ನಿಜವಾದ ಆಶಯವನ್ನು ಎತ್ತಿಹಿಡಿಯುವಂಥದ್ದು. ನ್ಯಾಯಮೂರ್ತಿ ಶ್ರೀ.ಪಿ.ಎನ್ .ಭಗವತಿ ಅವರು ಕೊನೆಯಲ್ಲಿ ಹೇಳಿರುವ ಮಾತುಗಳು ಕಾನೂನು ರಚನೆಯಲ್ಲಿ ಇರುವ ಅಸ್ಪಷ್ಟತೆ ಹಾಗೂ ಅದನ್ನು ಸರಿಪಡಿಸುವಲ್ಲಿ ಕಾನೂನು ರಚನಕಾರರಿಂದಾಗುವ ವಿಳಂಬ ಅಥವಾ ಅವರು ತೋರುವ ನಿರ್ಲಕ್ಷ್ಯ ಹೇಗೆ ಮಹಿಳೆಯರ ಸಮಾನತೆಯ ಹಕ್ಕುಗಳಿಗೆ ಮಾರಕವಾಗಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

''...ಪ್ರಾರೂಪಣೆಯಲ್ಲಿನ ದೋಷದಿಂದ ಪಕ್ಷಕಾರರಿಗೆ ಕೊನೆಯಿಲ್ಲದ ಗೊಂದಲವನ್ನು ಮತ್ತು ವಕೀಲರಿಗೆ ಸ್ವರ್ಗವನ್ನು ಸೃಷ್ಟಿಸಿರುವ ಒಂದು ಶಾಸನಾತ್ಮಕ ಉಪಬಂಧಕ್ಕೆ ಇದು ಅತ್ಯಂತ ಒಳ್ಳೆಯ ಉದಾಹರಣೆ. ಯಾವುದೇ ಕಾನೂನಿನ ಒಂದು ಉಪಬಂಧ ಅದರ ಸರಿಯಲ್ಲದ ಪ್ರಾರೂಪಣೆಯಿಂದಾಗಿ ಅಥವಾ ಭಾಷೆಯ ಅಸ್ಪಷ್ಟತೆಯಿಂದಾಗಿ ವ್ಯಾಖ್ಯಾನಮಾಡುವಾಗ ತೊಂದರೆಯುಂಟು ಮಾಡುತ್ತಿದ್ದರೆ ಅಥವಾ ದೋಷಪೂರ್ಣವಾಗಿದ್ದರೆ ಮತ್ತು ಅದರ ಪರಿಣಾಮವಾಗಿ ಅದರ ಉದ್ದೇಶವೇ ವಿಫಲವಾಗುವಂತಿದ್ದರೆ, ಅಂಥ ಸಂದರ್ಭಗಳಲ್ಲಿ ರಾಷ್ಟ್ರದ ತೀರ್ಪುನೀಡುವ ಪ್ರಾಧಿಕಾರಗಳೊಡನೆ ಹಾಗೂ ಕಾನೂನುವೇತ್ತರೊಡನೆ ನಿರಂತರ ಸಂಪರ್ಕವನ್ನು ಹೊಂದಿರುವ ಮತ್ತು ಅಗತ್ಯವಿರುವ ಸಂದರ್ಭಗಳಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡುವಂತೆ ಶಿಫಾರಸ್ಸು ಮಾಡುವ ಒಂದು ಪ್ರಾಧಿಕಾರವಿರಬೇಕೆಂಬ ಅಗತ್ಯವನ್ನು ಈ ಸಂದರ್ಭ ಎತ್ತಿತೋರಿಸುತ್ತದೆ. ರಾಷ್ಟ್ರದ ತೀರ್ಪುನೀಡುವ ಪ್ರಾಧಿಕಾರ ಮತ್ತು ಜಾರಿಯಲ್ಲಿರುವ ಕಾನೂನುಗಳಲ್ಲಿರುವ ನ್ಯೂನತೆಗಳು ಮತ್ತು ದೋಷಗಳಿಗೆ ಕೂಡಲೇ ಪ್ರತಿಕ್ರಿಯಿಸುವಂಥ ಸದಾ ಜಾಗೃತವಾಗಿರುವಂಥ ಒಂದು ಪ್ರಾಧಿಕಾರ ಇವೆರಡರ ನಿಕಟ ಪರಸ್ಪರ ಕ್ರಿಯೆಗಳಿಂದ ಅನಗತ್ಯ ವ್ಯಾಜ್ಯಗಳಲ್ಲಿ ತೊಡಗುವ ಮೂಲಕ ವ್ಯಯವಾಗುತ್ತಿರುವ ವೇಳೆ ಹಾಗೂ ಹಣವನ್ನು ಉಳಿಸಬಹುದು

ಮತ್ತು ಸ್ಪಷ್ಟತೆ, ಖಚಿತತೆ ಮತ್ತು ಸರಳತೆಗಳಿಂದ ಮಾತ್ರವೇ ಒಂದು ಕಾನೂನು ಜನತೆಯನ್ನು ಮುಟ್ಟುವುದು ಸಾಧ್ಯವಾಗುವುದು''

ಈ ಮಾತುಗಳು ಕಾನೂನಿನ ಕ್ಲಿಷ್ಟ ರಚನೆ ಹಾಗೂ ಅಸ್ಪಷ್ಟತೆಯಿಂದಾಗಿ ವ್ಯಾಖ್ಯಾನಕಾರರಿಗೆ ಹೆಚ್ಚಿನ ಅವಕಾಶ ನೀಡುವಂತಿರುವ ಇಂದಿನ ಕಾನೂನುಗಳು, ಪುರುಷ ಪ್ರಧಾನ ಚಿಂತನೆಯ ಮೂಸೆಯಲ್ಲಿ ರೂಪುಗೊಂಡ ಮನಸ್ಸುಗಳ ಪುರುಷಪರ ತೀರ್ಪುಗಳಿಂದಾಗಿ ಕಾನೂನು ರಚನೆಯ ಹಿಂದಿರುವ ಆಶಯವನ್ನು ವಿಫಲಗೊಳಿಸುವ ಸಾಧ್ಯತೆಗಳಿವೆ ಎಂಬುದನ್ನು ಸೂಚಿಸುತ್ತದೆ. ಈ ನಿರ್ದಿಷ್ಟ ಪ್ರಕರಣದ ಬಗ್ಗೆಯೇ ವಿಭಿನ್ನ ನ್ಯಾಯಿಕ ಅಭಿಪ್ರಾಯಗಳಿವೆ. ಬೇರೆ ಬೇರೆ ಉಚ್ಚನ್ಯಾಯಾಲಯಗಳು ಬೇರೆ ಬೇರೆ ಅಭಿಪ್ರಾಯ ನೀಡಿರುವುದರ ಜೊತೆಗೆ, ಒಂದೇ ಉಚ್ಚನ್ಯಾಯಾಲಯದ ತೀರ್ಪುಗಳಲ್ಲಿಯೂ ಭಿನ್ನತೆಯಿದೆ' ಎಂದು ನ್ಯಾಯಮೂರ್ತಿಗಳೇ ಹೇಳಿರುವುದೂ ಇದಕ್ಕೆ ಸಾಕ್ಷಿ. ಕಾನೂನಿನ ದೋಷಯುತ ರಚನೆ, ತಪ್ಪು ಅನ್ವಯ ಹಾಗೂ ತಪ್ಪು ವ್ಯಾಖ್ಯಾನಗಳು ಕಾನೂನುಗಳ ಆಶಯವನ್ನೇ ಕಡೆಗಣಿಸಿ ಬಿಡುತ್ತವೆ ಎಂಬುದಕ್ಕೆ ಮುಂದಿನ ಪ್ರಕರಣ ಇದಕ್ಕೆ ಉದಾಹರಣೆ.

ಸೋಮಸುಂದರಂ ಪಿಳ್ಳೆ ಎಂಬಾತ ೧೬-೭-೧೯೫೦ರಂದು ದಾವೆಯಲ್ಲಿನ ತನ್ನ ಆಸ್ತಿಗಳನ್ನು ಉಯಿಲಿನ ಮೂಲಕ ತನ್ನ ಪತ್ನಿ ಹಾಗೂ ಅವನ ಸೋದರ ಸಂಬಂಧಿಯ ವಿಧವೆ ಜಾನಕಿತಾಚಿ ಇವರ ಹೆಸರಿಗೆ ಬರೆದ. ತನಗೆ ಇವರಿಬ್ಬರ ಹೊರತಾಗಿ ಬೇರಾರೂ ಇಲ್ಲವೆಂದೂ, ಹಾಗಾಗಿ ಇವರ ಜೀವನಾಂಶಕ್ಕಾಗಿ ವ್ಯವಸ್ಥೆ ಮಾಡುವುದು ತನ್ನ ಕರ್ತವ್ಯಗಳಲ್ಲಿ ಒಂದೆಂದೂ, ಇದಲ್ಲದೆ ತನಗೆ ಬೇರಾವುದೇ ಕರ್ತವ್ಯವಿಲ್ಲವೆಂದೂ ಉಯಿಲಿನಲ್ಲಿ ಸ್ಪಷ್ಟಪಡಿಸಿದ್ದ. ಅವರು ಜೀವಂತವಿರುವವರೆಗೆ ಅವರು ಆಸ್ತಿಯನ್ನು ಅನುಭವಿಸಬೇಕೆಂದು, ಅದರಲ್ಲಿ ಒಬ್ಬರು ಮರಣಹೊಂದಿ ಒಬ್ಬರು ಉಳಿದಾಗ, ಉಳಿದವರು ಇಡೀ ಆಸ್ತಿಯನ್ನು ಅವರ ಜೀವಿತ ಕಾಲದಲ್ಲಿ ಅನುಭವಿಸುತ್ತಾರೆಂದ ಇಬ್ಬರ ಮರಣದ ನಂತರ ಪೆರಿಯಪಿಳ್ಳೆ ಅವರ ಮಗನಾದ ಮೇಲೆ ಹೇಳಿದ ಎಡವಾಂಕುಡಿ ಗ್ರಾಮದ ಗೋವಿಂದಸ್ರಸನ ಪಿಳ್ಳೆ ಅವರು ಆಸ್ತಿಯನ್ನು ನ್ಯಾಸವಾಗಿ ಹೊಂದಿದ್ದು, ಪೂಜೆ ಮತ್ತು ದೀಪಾರತಿಗಳಿಗಾಗಿ ಹಾಗೂ ಬಡವರಿಗೆ ಅನ್ನದಾನ ಮಾಡುವುದಕ್ಕಾಗಿ ಬಳಸಬೇಕೆಂದೂ ತಿಳಿಸಿದ್ದ.

೧೯೫೦ರ ಸೆಪ್ಟೆಂಬರ್ ನಲ್ಲಿ ಸೋಮಸುಂದರಂ ಪಿಳ್ಳೆ ಮರಣಹೊಂದಿದ. ಮರಣ ಶಾಸನದ ಮೂಲಕ ಆಸ್ತಿ ಪಡೆದ ಲೆಗಟೀ (ಮರಣ ಶಾಸನದ ಮೂಲಕ ಆಸ್ತಿ ಪಡೆದವಳು) ಸೆಲ್ಲತಾಚಿ ಮತ್ತು ಇನ್ನೊಬ್ಬಾಕೆ ಆಸ್ತಿಯ ಸ್ವಾಧೀನತೆ ಪಡೆದರು. ಅವರಲ್ಲಿ ಒಬ್ಬರಾದ ಜಾನಕಿತಾಚಿ ೧೯೬೦ರಲ್ಲಿ ಮರಣಹೊಂದಿದರು. ಉಳಿದಂತೆ ೧೯೭೦ರಲ್ಲಿ ಮುಖ್ತ್ಯಾರನಾಮೆ ಹೊಂದಿರುವವನನ್ನು ನೇಮಕಮಾಡಿದ್ದಳು. ಅವನು ದಾವೆಯ ಆಸ್ತಿಗಳನ್ನು ಪರಭಾರೆ ಮಾಡಿದ. ಅಪೀಲುದಾರರು ಅವನ್ನು ನೋಂದಣಿಯಾದ ಮಾರಾಟ ಪತ್ರದ ಮೂಲಕ

ಖರೀದಿಮಾಡಿದರು. ಮರಣ ಶಾಸನದ ಮೂಲಕ ಆಸ್ತಿ ಪಡೆದವರು ಉಯಿಲಿನ ಪ್ರಕಾರ ಜೀವಿತಾವಧಿಗೆ ಮಾತ್ರ ಆಸ್ತಿಯ ಒಡೆಯರಾಗುವುದರಿಂದ ಸೆಲ್ಲತಾಚಿ ಮಾಡಿದ ಪರಭಾರೆ ಕಾನೂನು ಬಾಹಿರ ಎಂದು ಘೋಷಿಸಬೇಕೆಂಬುದಾಗಿ ದಾವೆ ಹೂಡಲಾಗಿತ್ತು. ವಿಚಾರಣಾ ನ್ಯಾಯಾಲಯ ದಾವೆಯನ್ನು ಡಿಕ್ರಿ ಮಾಡಿತ್ತು. ಆದರೆ ನ್ಯಾಯಾಧೀಶರು ಮೇಲ್ಮನವಿಯನ್ನು ಪುರಸ್ಕರಿಸಿ ದಾವೆಯನ್ನು ವಜಾಮಾಡಿದರು. ಆದರೆ ೧೯೮೮ರ ಎಲ್‌ಪಿಎ ನಂ.೧೬೧ರಲ್ಲಿ ೨-೭-೯೨ರಂದು, ಉಚ್ಚನ್ಯಾಯಾಲಯದ ವಿಭಾಗೀಯ ಪೀಠ ಏಕನ್ಯಾಯಾಧೀಶ ಪೀಠದ ತೀರ್ಪನ್ನು ತಳ್ಳಿಹಾಕಿತು ಮತ್ತು ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ರ ೧೪ನೇ ಪ್ರಕರಣದ (೨)ನೇ ಉಪಪ್ರಕರಣದ ಮೇರೆಗೆ ಇಲ್ಲಿ ಮರಣ ಶಾಸನದ ಮೂಲಕ ಆಸ್ತಿ ಪಡೆದವರು ಆಸ್ತಿಗೆ ಸೀಮಿತ ಹಕ್ಕನ್ನು ಪಡೆಯುವುದರಿಂದ ಅವರ ಹಕ್ಕುಗಳು ನಿರುಪಾಧಿಕ ಹಕ್ಕುಗಳಲ್ಲದೆಂದು ತೀರ್ಪು ನೀಡಿತು. ಈ ತೀರ್ಪಿನ ವಿರುದ್ಧ ಈ ಮೇಲ್ಮನವಿಯನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದೆ.

ಇಲ್ಲಿಯ ಪ್ರಶ್ನೆ, ಸೋಮಸುಂದರಂ ಪಿಳ್ಳೆಯ ವಿಧವಾ ಪತ್ನಿ, ಅಧಿನಿಯಮದ ೧೪(೧)ನೇ ಪ್ರಕರಣದ ಮೇರೆಗೆ ಆಸ್ತಿಗೆ ಪೂರ್ಣ ಒಡೆಯಳಾಗಿದ್ದಾಳೆಯೇ ಎಂಬುದು. ಮರಣಶಾಸನ ಕರ್ತನಿಗೆ ಕಾನೂನು ಚೆನ್ನಾಗಿ ತಿಳಿದಿತ್ತೆಂದು ಉಯಿಲಿನಿಂದ ಸ್ಪಷ್ಟವಾಗುತ್ತದೆ. ತನ್ನ ಮರಣ ನಂತರ ಲೆಗೆಟೀಗಳು ತಮ್ಮ ಜೀವತಾವಧಿಯಲ್ಲಿ ಆಸ್ತಿಯನ್ನು ಅನುಭವಿಸಬೇಕೆಂದೂ, ಅದನ್ನು ವಿಲೇಮಾಡಲು ಅವರಿಗೆ ಹಕ್ಕಿರುವುದಿಲ್ಲವೆಂತಲೂ ಅವರ ಮರಣಾನಂತರ ಅದು ಪೂಜೆ ಹಾಗೂ ದಾನಗಳಿಗೆ ವಿನಿಯೋಗ ಬೇಕೆಂತಲೂ ತಿಳಿಸಿದ್ದ. ಸೆಲ್ಲತಾಚಿಗೆ ಇದ್ದ ಜೀವನಾಂಶದ ಹಕ್ಕು ಮತ್ತು ತನ್ನ ಪತಿಯ ಆಸ್ತಿಯ ಮೇಲಿದ್ದ ಅವಳ ಪರವಾಗಿ ಇದ್ದ ಹೊರೆ ಇವೆರಡೂ ಅವಳಿಗೆ ಮುಂಚಿತವಾಗಿಯೇ ಇದ್ದ ಕಾನೂನುಬದ್ಧ ಹಕ್ಕುಗಳಾಗಿದ್ದವು.

ಅಧಿನಿಯಮದ ೩೦ನೇ ಪ್ರಕರಣ ಹಾಗೂ ಉಯಿಲು ಬರೆಯುವುದಕ್ಕೆ ಸಂಬಂಧಿಸಿದ ಅಧಿನಿಯಮದ ಇತರ ಉಪಬಂಧಗಳು ಹಿಂದೂ ಪುರುಷನಿಗೆ ತನ್ನ ಸ್ವಯಾರ್ಜಿತ ಆಸ್ತಿಯನ್ನು ತನ್ನಿಷ್ಟ ಬಂದವರಿಗೆ ವಿಲೇ ಮಾಡುವ ಹಕ್ಕನ್ನು ನೀಡುತ್ತದೆ.

ಹಿಂದೂ ಮಹಿಳೆಯರಿಗಿರುವ ಸೀಮಿತ ಹಕ್ಕು ಮತ್ತು ಇತರ ತಾರತಮ್ಯಗಳನ್ನು ಹೋಗಲಾಡಿಸುವುದಕ್ಕಾಗಿ ಈ ಅಧಿನಿಯಮದ ಮೂಲಕ ಕೊಟ್ಟಿರುವ ಸಮಾನತೆಯ ಹಕ್ಕುಗಳು ಸಂವಿಧಾನದ ಮೂಲಕ ಕೊಡಮಾಡಿರುವ ಸಮಾನತೆಯ ಹಕ್ಕುಗಳಿಗೆ ಅನುಗುಣವಾಗಿರಬೇಕು ಅಲ್ಲದೆ ವೈಯಕ್ತಿಕ ಕಾನೂನುಗಳು ಸಹ ಸಂವಿಧಾನದಲ್ಲಿ ನೀಡಿರುವ ಹಕ್ಕುಗಳಿಗೆ ಅನುಗುಣವಾಗಿರಬೇಕು. ಹಿಂದೂ ವಿವಾಹ ಅಧಿನಿಯಮ, ಹಿಂದೂದತ್ತಕ ಮತ್ತು ಜೀವನಾಂಶ ಅಧಿನಿಯಮ, ಹಿಂದೂ ಉತ್ತರಾಧಿಕಾರ ಅಧಿನಿಯಮ ಇವು ಸಮಾನತೆಯನ್ನು ಸಾಧಿಸುವಲ್ಲಿ ಅಡ್ಡಿಯಾಗಿದ್ದಂಥ, ಹಿಂದೆ ಹಿಂದೂಗಳಲ್ಲಿ ಜಾರಿಯಲ್ಲಿದ್ದಂಥ ಅನೇಕ

ಆಚರಣೆಗಳನ್ನೂ ನಿವಾರಿಸುವುದಕ್ಕಾಗಿ ರಚನೆಯಾದವುಗಳು. ಆದ್ದರಿಂದ ಈ ಯಾವುದೇ ಕಾನೂನಿನ ಅನ್ವಯ ಹಾಗೂ ವ್ಯಾಖ್ಯಾನ ಈ ಉದ್ದೇಶಗಳನ್ನು ಸಾಧಿಸುವುದಕ್ಕೆ ಪೂರಕವಾಗಿರಬೇಕು. ಹಿಂದೂ ಉತ್ತರಾಧಿಕಾರ ಅಧಿನಿಯಮದ ೧೪(೧)ನೇ ಪ್ರಕರಣಕ್ಕಿರುವ ವಿಚಾರಣೆಯಲ್ಲಿ ಆಸ್ತಿಯ ಆರ್ಜನೆಯ ವಿವಿಧ ರೀತಿಗಳನ್ನು ವಿಸ್ತೃತ ಪದಾವಳಿಗಳಲ್ಲಿ ಹೇಳಲಾಗಿದೆ. ಇಷ್ಟಾಗಿಯೂ ಇದು ನಿದರ್ಶನಾತ್ಮಕವೇ ಹೊರತು ನಿರ್ಣಾಯಕವಲ್ಲ. ಹಿಂದೂ ಮಹಿಳೆಯ ಆಸ್ತಿ ಹಕ್ಕು ಸೀಮಿತವೇ ಅಥವಾ ನಿರುಪಾಧಿಕವೇ ಎಂಬುದನ್ನು ನಿರ್ಣಯಿಸುವುದು ಅವಳಿಗೆ ಅಧಿನಿಯಮ ಪ್ರಾರಂಭವಾಗುವುದಕ್ಕೆ ಮುಂಚೆ ಅಥವಾ ನಂತರ ಯಾವುದೇ ಆಸ್ತಿಯನ್ನು ಹೊಂದಲು ಅಥವಾ ಆಸ್ತಿಯ ಹಕ್ಕನ್ನು ಪಡೆಯಲು ವೈಯಕ್ತಿಕ ಕಾನೂನಿನ ಅಡಿಯಲ್ಲಾಗಲೀ ಇತರ ಯಾವುದೇ ಕಾನೂನಿನ ಅಡಿಯಲ್ಲಾಗಲೀ ಈ ಮೊದಲೇ ಅವಕಾಶ ಹೊಂದಿದ್ದಳೇ ಎಂಬ ಅಂಶ. ಅವಳು ಯಾವುದೇ ಆಸ್ತಿಯನ್ನು, ಚರ ಅಥವಾ ಸ್ಥಿರ ಆಸ್ತಿಯನ್ನು ಯಾವುದೇ ಲಿಖಿತ ಪತ್ರ, ದಸ್ತಾವೇಜು ಮುಂತಾದುವುಗಳ ಮೂಲಕ ಅವಳಿಗಿರುವ ಹಕ್ಕಿನಿಂದಾಗಿ ಪಡೆದಿದ್ದರೆ ಮತ್ತು ಅಂಥ ಯಾವುದೇ ಪತ್ರದಲ್ಲಿ ಅಂಥ ಒಡೆತನ ನಿರ್ಬಂಧಕ್ಕೊಳಪಟ್ಟಿದ್ದರೆ(ಸೀಮಿತ ಹಕ್ಕು) ಆಗಲೂ ಸಹ ಅವಳ ಸೀಮಿತ ಹಕ್ಕು ೧೪(೧)ನೇ ಪ್ರಕರಣದ ವಿವರಣೆಯ ಪ್ರಕಾರ ನಿರುಪಾಧಿಕ ಹಕ್ಕಾಗಿ ಪರಿವರ್ತನೆಯಾಗುತ್ತದೆ. ಆದ್ದರಿಂದ ಸೆಲ್ಲತಾಚಿ, ಉಯಿಲಿನ ಮೂಲಕ ಆಸ್ತಿಗೆ ಕೇವಲ ಸೀಮಿತ ಹಕ್ಕನ್ನು ಪಡೆದಿದ್ದಳು ಮತ್ತು ಈ ರೀತಿಯ ಆಸ್ತಿಯ ಆರ್ಜನೆ ಅಧಿನಿಯಮದ ೧೪(೧)ನೇ ಪ್ರಕರಣದ ಅಡಿಯಲ್ಲಿ ಬರುವುದಿಲ್ಲವಾದ್ದರಿಂದ ಉಯಿಲಿನಲ್ಲಿ ನೀಡಲಾದ ಸೀಮಿತಹಕ್ಕು ನಿರುಪಾಧಿಕ ಹಕ್ಕಾಗಿ ಪರಿವರ್ತನೆಯಾಗುವುದಿಲ್ಲ. ಅವಳ ಮರಣಾನಂತರ, ಉಯಿಲಿನಲ್ಲಿ ಹೇಳಿದ್ದಂತೆ, ಆಸ್ತಿಯ ಉತ್ಪನ್ನವೆಲ್ಲವೂ ದೇವಸ್ಥಾನಕ್ಕೆ ಸೇರಬೇಕು ಎಂಬ ಉಚ್ಚನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಸರಿಯಾದುದಲ್ಲ ಎಂದು ಅದನ್ನು ಸರ್ವೋಚ್ಚ ನ್ಯಾಯಾಲಯ ತಳ್ಳಿಹಾಕಿತು.

ಈ ಸಂದರ್ಭದಲ್ಲಿ ಇನ್ನೊಂದು ಪ್ರಕರಣವನ್ನು ಉಲ್ಲೇಖಿಸುವುದು ಉಚಿತವಾಗುತ್ತದೆ. ಅದೆಂದರೆ ಗುಂಪು ಜೈಬಾಯಿ ಪ್ರಕರಣ ((೧೯೯೪)೨ SCC ೫೧೧) ಈ ಪ್ರಕರಣದಲ್ಲಿ ಉಯಿಲನ್ನು ಬರೆದದ್ದು ೧೯೪೧ರಲ್ಲಿ ಮತ್ತು ಉಯಿಲನ್ನು ಬರೆದಾತ ೧೯೫೮ರಲ್ಲಿ. ಈ ಅಧಿನಿಯಮ ಜಾರಿಗೆ ಬಂದನಂತರ ಮರಣ ಹೊಂದಿದ ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ಇಬ್ಬರು ನ್ಯಾಯಾಧೀಶರ ನ್ಯಾಯಪೀಠ ಈ ಉಯಿಲು ಮಹಿಳೆಗೆ ಸೀಮಿತಹಕ್ಕನ್ನು ನೀಡುತ್ತದೆ ಎಂದು ತೀರ್ಪುನೀಡಿತ್ತು. "ಇದಕ್ಕೆ ಕಾರಣ ಉಯಿಲಿನಲ್ಲಿ ನೀಡಿದ ಸೀಮಿತ ಹಕ್ಕು. ೧೯೪೧ರಲ್ಲಿದ್ದ ಕಾನೂನಿನ ಪ್ರಕಾರ ಮಹಿಳೆ ಜೀವನಾಂಶ ಪಡೆಯಲು ಮಾತ್ರ ಹಕ್ಕುಳ್ಳವಳಾಗಿದ್ದಳು ಮತ್ತು ಇಲ್ಲಿ ನ್ಯಾಯಾಧೀಶರು, ಆಸ್ತಿಯನ್ನು ವಿಲೇಮಾಡಲು ಹಿಂದೂ ಪುರುಷ ನಿರುಪಾಧಿಕವಾದ ಹಕ್ಕನ್ನು ಹೊಂದಿದ್ದಾನೆ ಮತ್ತು ಈ ನಿರುಪಾಧಿಕ ಹಕ್ಕಿನಲ್ಲಿ ಮಹಿಳೆಗೆ

ಆಸ್ತಿಯಲ್ಲಿ ಸೀಮಿತಹಕ್ಕನ್ನು ಮಾತ್ರವೇ ನೀಡುವ ಹಕ್ಕು ಸಹ ಸೇರಿದೆ ಎಂಬ ಪೂರ್ವಭಾವನೆಯೊಡನೆ ಇಡೀ ಪ್ರಕರಣವನ್ನು ವಿಶ್ಲೇಷಿಸಿ ಅಧಿನಿಯಮದ ೩೦ನೇ ಪ್ರಕರಣವನ್ನು ಜಾರಿಗೊಳಿಸಿದಾಗ ಉಯಿಲಿನಲ್ಲಿ ನೀಡಿಲಾಗಿರುವ ಸೀಮಿತ ಹಕ್ಕು ೧೪ನೇ ಪ್ರಕರಣದ (೨)ನೇ ಉಪಪ್ರಕರಣದ ವ್ಯಾಪ್ತಿಯೊಳಗೆ ಬರುತ್ತದೆ. ಏಕೆಂದರೆ ಉಯಿಲಿನ ಮೂಲಕ ಪಡೆಯುವ ಆಸ್ತಿ ೧೪(೧)ನೇ ಪ್ರಕರಣದಲ್ಲಿ ಹೇಳಿರುವಂತೆ ಆರ್ಜಿಸಲಾದ ಆಸ್ತಿಯಾಗುವುದಿಲ್ಲ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ಆದರೆ ನ್ಯಾಯಾಧೀಶರು 'ಜೀವನಾಂಶಕ್ಕೆ ಬದಲಾಗಿ' ಅಥವಾ 'ಜೀವನಾಂಶದ ಬಾಕಿ' ಎಂಬ ಪದಗಳನ್ನು ಮುಖ್ಯವಾಗಿ ಪರಿಗಣಿಸಿದ್ದಾರೆ. ಹಾಗಾಗಿ ಅವರು ಮೇಲ್ಕಂಡ ಅಭಿಪ್ರಾಯಕ್ಕೆ ಬಂದಿದ್ದಾರೆ ಎಂದು ಸಿ.ಮಸಿಲಮಣಿ ಮೊದಲಿಯಾರ್ ಮತ್ತು ಇತರರು -ವಿ- ಶ್ರೀಸ್ವಾಮಿನಾಥಸ್ವಾಮಿ ದೇವರು, ಸ್ವಾಮಿನಾಥಸ್ವಾಮಿ ತಿರುಕೊಯಿಲ್ ಮತ್ತು ಇತರರು ಈ ಪ್ರಕರಣದಲ್ಲಿ(ಸಿವಿಲ್ ಅಪೀಲು ಸಂ.೪೧೨೫, ೧೯೯೬, ೩೦-೧-೧೯೯೬) ಅಭಿಪ್ರಾಯಪಟ್ಟಿದ್ದಾರೆ. "ಅಲ್ಲದೆ ಈ ಪ್ರಕರಣದಲ್ಲಿ ಉಯಿಲನ್ನು ೧೯೪೧ರಲ್ಲಿ ಬರೆದಿದ್ದ ಮತ್ತು ಬರೆದಾತ ಅಧಿನಿಯಮ ಜಾರಿಗೆ ಬಂದ ನಂತರ, ೧೯೫೮ರಲ್ಲಿ ಮರಣ ಹೊಂದಿದ. ೧೯೪೧ರಲ್ಲಿ ಉಯಿಲನ್ನು ಬರೆದಾಗ, ಹಾಗೆ ಬರೆದಾತನ ಮನಸ್ಸಿನಲ್ಲಿ ಜೀವನಾಂಶಕ್ಕೆ ಬದಲಾಗಿ ಸೀಮಿತ ಹಕ್ಕನ್ನು ಕೊಡುವ ಇಚ್ಛೆ ಇರುತ್ತದೆ. ಆದರೆ ಉಯಿಲು ಜಾರಿಗೆ ಬಂದದ್ದು ಅಧಿನಿಯಮ ಜಾರಿಗೆ ಬಂದನಂತರ. ಆದ್ದರಿಂದ ಸೀಮಿತಹಕ್ಕು ನಿರುಪಾಧಿಕ ಹಕ್ಕಾಗಿ ಮಾರ್ಪಾಡಾಗಬೇಕಿತ್ತು. ಆದರೆ ನ್ಯಾಯಪೀಠ ಸೀಮಿತ ಹಕ್ಕಿನ ತೀರ್ಪು ನೀಡಿದೆ. ನಮ್ಮ ಅಭಿಪ್ರಾಯದಲ್ಲಿ ಇದು ಕಾನೂನಿನ ದೃಷ್ಟಿಯಲ್ಲಿ ಸರಿಯಾದುದಲ್ಲ" ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಸಂವಿಧಾನದ ಆಶಯ ಹಾಗೂ ಧ್ಯೇಯಸಾಧನೆಯ ದೃಷ್ಟಿಯಿಂದ ಮಹಿಳೆಯ ಆರ್ಥಿಕ ಹಾಗೂ ಸಾಮಾಜಿಕ ಸ್ಥಾನಮಾನದ ಸುಧಾರಣೆಗಾಗಿ ಮಾಡಿದ ಒಂದು ಕಾನೂನು ದೋಷಯುತ ಪ್ರಾರೂಪಣ ತಪ್ಪು ಗ್ರಹಿಕೆ, ತಪ್ಪು ಅನ್ವಯ ಹಾಗೂ ತಪ್ಪು ವ್ಯಾಖ್ಯಾನದಿಂದಾಗಿ ಅಂಥ ಕಾನೂನಿನ ಫಲಾನುಭವಿಯಾದ ಮಹಿಳೆ ಹೇಗೆ ಅನ್ಯಾಯಕ್ಕೆ ಗುರಿಯಾಗಬೇಕಾಗುತ್ತದೆ. ನ್ಯಾಯ ನೀಡಿಕೆಯ ಅತ್ಯುನ್ನತ ಸಂಸ್ಥೆಯಿಂದಲೂ ಹೇಗೆ ನ್ಯಾಯವಂಚಿತಳಾಗುತ್ತಾಳೆ ಎಂಬುದಕ್ಕೆ ಈ ಪ್ರಕರಣ ಸಾಕ್ಷಿಯಾಗಿದೆ.

ಮಂಗತ್ ಮಲ್ -ವಿ-ಪುನ್ನಿದೇವಿ((೧೯೯೫)೬ ಎಸ್ ಸಿ ಸಿ ೮೮) ಪ್ರಕರಣದಲ್ಲಿಯೂ, ಉಚ್ಚನ್ಯಾಯಾಲಯ ನೀಡಿದ ತೀರ್ಪನ್ನು 'ಅದು ತಪ್ಪು ಅಭಿಪ್ರಾಯ ತಳೆದಿದೆ' ಎಂದು ಸರ್ವೋಚ್ಚ ನ್ಯಾಯಾಲಯ ತಳ್ಳಿಹಾಕಿದೆ. ಈ ಪ್ರಕರಣದಲ್ಲಿ ತೀರ್ಪು ನೀಡಿದ ಇಬ್ಬರು ನ್ಯಾಯಾಧೀಶರ ನ್ಯಾಯಪೀಠ ಹೀಗೆ ಅಭಿಪ್ರಾಯಪಟ್ಟಿದೆ.

"ಜೀವನಾಂಶ ಎಂಬುದು ಅಗತ್ಯವಾದ ನಿವಾಸಕ್ಕಾಗಿಯೂ ಏರ್ಪಾಟು ಮಾಡಬೇಕು. ಮಹಿಳೆ, ಸರಿಸುಮಾರು ತಾನು ಬದುಕುತ್ತಿದ್ದ ರೀತಿಯಲ್ಲಿಯೇ ಬದುಕಲಿ ಎಂಬ ಕಾರಣಕ್ಕಾಗಿ ಜೀವನಾಂಶವನ್ನು ನೀಡಲಾಗುತ್ತದೆ. ಆದ್ದರಿಂದ ಜೀವನಾಂಶ ಎಂಬ ಪರಿಕಲ್ಪನೆ ಊಟ ಉಡುಪುಗಳ ಜೊತೆಗೆ ಸೂರನ್ನು

ಒಳಗೊಳ್ಳಬೇಕು. ವಸತಿಯ ಏರ್ಪಾಟನ್ನು, ಹಣವನ್ನು ಇಡಿಗಂಟಾಗಿ ಕೊಡುವ ಮೂಲಕ ಅಥವಾ ಅದಕ್ಕೆ ಬದಲಾಗಿ ಆಸ್ತಿಯನ್ನು ಕೊಡುವ ಮೂಲಕ ಮಾಡಬಹುದು ಅಥವಾ ವಸತಿಯ ಜೊತೆಗೆ ವೆಚ್ಚಕ್ಕೆ ಹಣವನ್ನು ಕೊಡುವ ಮೂಲಕವೂ ಮಹಿಳೆಯ ಜೀವನೋಪಾಯಕ್ಕೆ ಮಾರ್ಗ ಕಲ್ಪಿಸಬಹುದು. ಈ ರೀತಿ ವಸತಿಗಾಗಿ ಆಸ್ತಿಯಲ್ಲಿ ಜೀವಿತಾವಧಿಗೆ ಹಿತಾಸಕ್ತಿಯನ್ನು ನೀಡಿದಾಗ, ಅಂಥ ಏರ್ಪಾಟನ್ನು ಪೂರ್ವ ಅಸ್ತಿತ್ವವುಳ್ಳ ಜೀವನಾಂಶದ ಹಕ್ಕಿಗೆ ಬದಲಾಗಿ ಮಾಡಿದ ಏರ್ಪಾಟಾಗುತ್ತದೆ. ಆಗ, ಹಿಂದೂ ಮಹಿಳೆ ಸೀಮಿತ ಹಕ್ಕನ್ನು ಪಡೆಯುವುದಿಲ್ಲ ಬದಲಿಗೆ ೧೪(೧)ನೇ ಪ್ರಕರಣದ ಮೇರಗೆ ನಿರುಪಾಧಿಕ ಹಕ್ಕನ್ನು ಪಡೆಯುತ್ತಾಳೆ. ಆದ್ದರಿಂದ ಈ ಪ್ರಕರಣದಲ್ಲಿ ಸುಖದೇವಿ ಎಂಬಾಕೆ ೧೯೩೪ರಲ್ಲಿ ಆರ್ಜಿಸಿದ ಸೀಮಿತಹಕ್ಕು ಈ ಅಧಿನಿಯಮ ಜಾರಿಗೆ ಬಂದ ನಂತರ ನಿರುಪಾಧಿಕ ಹಕ್ಕಾಗಿ ಪರಿವರ್ತನೆಗೊಂಡಿತು. ಈ ಹಿನ್ನೆಲೆಯಲ್ಲಿ ಮಹಿಳೆಗೆ ಸೀಮಿತ ಹಕ್ಕನ್ನು ನೀಡಿದ ಉಚ್ಚನ್ಯಾಯಾಲಯದ ತೀರ್ಪನ್ನು ಸರ್ವೋಚ್ಚನ್ಯಾಯಾಲಯ ತಳ್ಳಿಹಾಕಿತು. ಅಧೀನ ನ್ಯಾಯಾಲಯದ ತೀರ್ಪಿನ ಮೇರೆಗೆ ಆರ್ಜಿಸಿದ ಹಕ್ಕು ಜೀವನಾಂಶಕ್ಕೆ ಅವಳಿಗೆ ಈಗಾಗಲೇ ಇದ್ದ ಹಕ್ಕು ಆಗಿತ್ತಾದ್ದರಿಂದ ಅದರ ಮೇರೆಗೆ ಪಡೆದ ಸೀಮಿತಹಕ್ಕು ಅಧಿನಿಯಮದ ಪ್ರಾರಂಭದ ನಂತರ ೧೪(೧)ನೇ ಪ್ರಕರಣದ ಮೇರೆಗೆ ನಿರುಪಾಧಿಕ ಹಕ್ಕಾಗಿ ಬದಲಾಗಿದೆ ಎಂದು ನ್ಯಾಯಾಲಯ ಸ್ಪಷ್ಟಮಾತುಗಳಲ್ಲಿ ಅಭಿಪ್ರಾಯ ವ್ಯಕ್ತಪಡಿಸಿತು.

ಹಿಂದೂ ಉತ್ತರಾಧಿಕಾರ ಅಧಿನಿಯಮದ ೧೫ನೇ ಪ್ರಕರಣ ಮರಣಶಾಸನವನ್ನು ಬರೆಯದೆ ಮರಣಹೊಂದುವ ಹಿಂದೂ ಮಹಿಳೆಯ ಆಸ್ತಿಯ ವಾರಸುದಾರಿಕೆಗೆ ಸಂಬಂಧಪಟ್ಟಿದೆ. ಪ್ರಸಕ್ತ ಪ್ರಕರಣ ಹೀಗಿದೆ.

೧೫(೧) ಮರಣಶಾಸನ ಬರೆಯದೆ ಮರಣಹೊಂದುವ ಹಿಂದೂ ಮಹಿಳೆಯ ಆಸ್ತಿ ೧೬ನೇ ಪ್ರಕರಣದಲ್ಲಿ ನಿರೂಪಿಸಿರುವ ನಿಯಮಗಳ ಪ್ರಕಾರ ಪ್ರಾಪ್ತವಾಗತಕ್ಕದು.

ಎ. ಮೊದಲನೆಯದಾಗಿ, ಗಂಡು ಮಕ್ಕಳು ಮತ್ತು ಹೆಣ್ಣುಮಕ್ಕಳು(ಮೊದಲೇ ಮೃತರಾದ ಮಗ ಅಥವಾ ಮಗಳ ಮಕ್ಕಳೂ ಸೇರಿದಂತೆ) ಮತ್ತು ಪತಿ;

ಬಿ. ಎರಡನೆಯದಾಗಿ, ಪತಿಯ ಉತ್ತರಾಧಿಕಾರಿಗಳು.

ಸಿ. ಮೂರನೆಯದಾಗಿ, ತಾಯಿ ಮತ್ತು ತಂದೆ.

ಡಿ. ನಾಲ್ಕನೆಯದಾಗಿ, ತಂದೆಯ ಉತ್ತರಾಧಿಕಾರಿಗಳು.

ಇ. ಕೊನೆಯದಾಗಿ ತಾಯಿಯ ಉತ್ತರಾಧಿಕಾರಿಗಳು.

(೨) (೧)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ,

ಎ. ಹಿಂದೂ ಮಹಿಳೆಗೆ ತನ್ನ ತಂದೆ ಅಥವಾ ತಾಯಿಯಿಂದ ವಾರಸುದಾರಿಕೆಯ ಮೂಲಕ ಬಂದ ಯಾವುದೇ ಆಸ್ತಿ, ಮೃತಳಿಗೆ ಗಂಡುಮಕ್ಕಳು ಅಥವಾ ಹೆಣ್ಣುಮಕ್ಕಳು(ಮೃತ ಮಗ ಅಥವಾ ಮಗಳ ಮಕ್ಕಳೂ ಸೇರಿದಂತೆ) ಇಲ್ಲದಿದ್ದರೆ, (೧)ನೇ ಉಪಪ್ರಕರಣದಲ್ಲಿ ಹೇಳಿದ ಇತರ ವಾರಸುದಾರರಿಗೆ ಅದರಲ್ಲಿ ಹೇಳಿದ ಕ್ರಮದಲ್ಲಿ ವಾರಸುದಾರಿಕೆ ಪ್ರಾಪ್ತವಾಗುವುದಿಲ್ಲ. ಆದರೆ ತಂದೆಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ. ಮತ್ತು

ಬಿ. ಹಿಂದೂ ಮಹಿಳೆಗೆ ಪತಿ ಅಥವಾ ಮಾವನಿಂದ ವಾರಸುದಾರಿಕೆಯಿಂದ ಬಂದ ಯಾವುದೇ ಆಸ್ತಿ, ಮೃತಳಿಗೆ ಮಗ ಅಥವಾ ಮಗಳು(ಮೃತಮಗ ಅಥವಾ ಮಗಳ ಮಕ್ಕಳು ಸೇರಿದಂತೆ) ಇಲ್ಲದಿದ್ದರೆ, (೧)ನೇ ಉಪಪ್ರಕರಣದಲ್ಲಿ ಹೇಳಿದ ಇತರ ವಾರಸುದಾರರಿಗೆ ಅದರಲ್ಲಿ ಹೇಳಿದ ಕ್ರಮದಲ್ಲಿ ವಾರಸುದಾರಿಕೆ ಪ್ರಾಪ್ತವಾಗುವುದಿಲ್ಲ. ಆದರೆ ಪತಿಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

ಲಚಮನ್ ಸಿಂಗ್-ವಿ-ಕಿರ್ಪಾಸಿಂಗ್ ಮತ್ತು ಇತರರು [(೧೯೮೭)೨ ಎಸ್ ಸಿಸಿ ೫೮೭] ಪ್ರಕರಣದಲ್ಲಿ ಇತ್ಯರ್ಥವಾಗಬೇಕಿದ್ದ ವಿಷಯ, ಮರಣಶಾಸನರಹಿತ ಹಿಂದೂ ಮಹಿಳೆಯ ಆಸ್ತಿಯಲ್ಲಿ ಅವಳ ಮಗ ಜೀವಂತವಿದ್ದಾಗ ಮಲಮಗನಿಗೆ ಹಕ್ಕಿದೆಯೇ ಎಂಬುದು.[೧೧]

ಹಿಂದೂ ಉತ್ತರಾಧಿಕಾರ ಅಧಿನಿಯಮ ಜಾರಿಗೆ ಬರುವುದಕ್ಕೆ ಮುನ್ನ ಇದ್ದ ಶಾಸ್ತ್ರೀಯ ಹಿಂದೂ ಕಾನೂನಿನ ಪ್ರಕಾರ ಮಲಮಗ ಎಂದರೆ ಹಿಂದೂ ಮಹಿಳೆಯ ಪತಿಗೆ ಇನ್ನೊಬ್ಬ ಪತ್ನಿಯಿಂದ ಹುಟ್ಟಿದ ಮಗಗೆ, ಆ ಮಹಿಳೆಯು ಮರಣಶಾಸನ ಬರೆಯದೆ ಮೃತಳಾದಲ್ಲಿ, ಅವಳ ಸ್ತ್ರೀಧನಕ್ಕೆ ವಾರಸುದಾರನಾಗುತ್ತಿರಲಿಲ್ಲ. ಎಂದರೆ ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೇ ಆದ್ಯತೆ. ಹಿಂದಿನ ಸಾಂಪ್ರಾದಾಯಿಕ ಕಾನೂನಿನಿಂದ ಭಿನ್ನವಾಗುವ ಉದ್ದೇಶವಿದ್ದಿದ್ದರೆ, 'ಮಗ' ಎಂಬುದರಲ್ಲಿ 'ಮಲಮಗ' ಎಂಬ ಅಭಿವ್ಯಕ್ತಿಯೂ ಸೇರುತ್ತದೆ ಎಂದು ಸ್ಪಷ್ಟ ಉಪಬಂಧವನ್ನು ಮಾಡುತ್ತಿದ್ದರು. ಆದ್ದರಿಂದ, ೧೫(೧)ನೇ ಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಲಾದ 'ಗಂಡು ಮಕ್ಕಳು' ಎಂಬ ಪದ ಮಲಗಂಡುಮಕ್ಕಳನ್ನು ಒಳಗೊಳ್ಳುವುದಿಲ್ಲ ಮತ್ತು ಮಲಗಂಡುಮಕ್ಕಳು ಆ ಪ್ರಕರಣದ(ಬಿ) ಖಂಡದಲ್ಲಿ ಹೇಳಿದ ಪತಿಯ ವಾರಸುದಾರರಲ್ಲಿ ಸೇರುತ್ತಾರೆ ಎಂದು ಅಭಿಪ್ರಾಯಪಟ್ಟು, ಪಂಜಾಬ್ ಮತ್ತು ಹರ್ಯಾಣ ಉಚ್ಚನ್ಯಾಯಾಲಯದ ತೀರ್ಪನ್ನು ಸರ್ವೋಚ್ಚನ್ಯಾಯಾಲಯ ಎತ್ತಿಹಿಡಿಯಿತು.[೧೨]

ಇಂಥ ತೀರ್ಮಾನಕ್ಕೆ ಬರಲು ನ್ಯಾಯಾಧೀಶರಾದ ಸನ್ಮಾನ್ಯ ಇ.ಎಸ್.ವೆಂಕಟರಾಮಯ್ಯ ಅವರು ನೀಡಿದ ಕಾರಣಗಳು ನ್ಯಾಯಾಡಳಿತ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವಂಥ ಪುರುಷ ಪ್ರಧಾನತೆಯನ್ನು ಎತ್ತಿತೋರಿಸುತ್ತವೆ.

ಕಾಲಿನ್ಸ್ ನಿಘಂಟಿನ ಪ್ರಕಾರ 'ಮಗ' ಎಂದರೆ 'ಸಂತಾನ' ಮತ್ತು 'ಮಲಮಗ' ಎಂದರೆ ಪತಿ ಅಥವಾ ಪತ್ನಿಗೆ ಅವಳ ಮೊದಲ ಸಂಬಂಧದಿಂದ ಹುಟ್ಟಿದವನು. ಅಧಿನಿಯಮದ ಮೇರೆಗೆ ಪತ್ನಿಗೆ ಮೊದಲ ಗಂಡನಿಂದ ಹುಟ್ಟಿದ ಮಗ ಅವಳ ಎರಡನೇ ಗಂಡನ ಆಸ್ತಿಗೆ ವಾರಸುದಾರನಾಗುವುದಿಲ್ಲ. ಹಾಗೆಯೇ ಗಂಡನಿಗೆ ಮೊದಲನೇ ಹೆಂಡತಿಯಿಂದ ಹುಟ್ಟಿದ ಮಗ ಎರಡನೇ ಹೆಂಡತಿಗೆ ಮಲಮಗನೆನಿಸುತ್ತಾನೆ. ಆದರೆ ಎರಡನೇ ಹೆಂಡತಿ ಮರಣಶಾಸನ ಬರೆಯದೇ ಮರಣಹೊಂದಿದ ಸಂದರ್ಭದಲ್ಲಿ ಮಲಮಗ ಅವಳ ಆಸ್ತಿಯ ವಾರಸುದಾರನಾಗುತ್ತಾನೆ. ಪುರುಷ ಮನೆಯ ಯಜಮಾನ ಎನಿಸಿಕೊಳ್ಳುವ ಮನೆಯನ್ನು ಒಂದು ಸಾಮಾಜಿಕ ಘಟಕ ಎಂದು ಪರಿಗಣಿಸುವುದು ಇದಕ್ಕೆ. ಕಾರಣ ಮಲಮಗ ೧೫(೧)ನೇ ಪ್ರಕರಣದ (ಎ) ಖಂಡದ ವ್ಯಾಪ್ತಿಯಲ್ಲಿ ಬರದೇ ಇದ್ದರೂ ಅವನು ಪತಿಯ ವಾರಸುದಾರನಾಗಿ (ಬಿ) ಖಂಡದ ವ್ಯಾಪ್ತಿಯಲ್ಲಿ ಹಕ್ಕುಪಡೆಯುತ್ತಾನೆ.

೧೫(೧) ಖಂಡದಲ್ಲಿ ಬಳಸಿರುವ "ಗಂಡು ಮಕ್ಕಳು" ಎಂಬ ಪದಪ್ರಯೋಗ - ಒಬ್ಬನೇ ಗಂಡನಿಂದ ಅಥವಾ ಬೇರೆ ಬೇರೆ ಗಂಡಂದಿರಿಂದ ತಾನು ಪಡೆದ ಗಂಡಮಕ್ಕಳು ಇದರಲ್ಲಿ, ಅಧಿನಿಯಮದ ೩(ಜೆ) ಪ್ರಕರಣದ ದೃಷ್ಟಿಯಿಂದ ಕಾನೂನುಸಮ್ಮತವಲ್ಲದ ಪುತ್ರರೂ ಸೇರುತ್ತಾರೆ.

೨. ಆಸ್ತಿವಾರಸುದಾರಿಕೆಯ ದೃಷ್ಟಿಯಿಂದ ದತ್ತಕ ಪುತ್ರರನ್ನೂ ಪುತ್ರರೆಂದು ಭಾವಿಸಲಾಗುತ್ತದೆ. ಅಲ್ಲದೆ ಮೃತ ಮಗ ಅಥವಾ ಮಗಳ ಅಥವಾ ದತ್ತಕ ಮಗನ ಮಕ್ಕಳೂ ಸಹ ಮಗ ಎಂಬುದರ ಪರಿಭಾಷೆಯಲ್ಲಿ ಸೇರುತ್ತಾರೆ. ಆದರೆ ಮೇಲೆ ಹೇಳಿದಂತೆ 'ಮಗ' ಎಂಬುದರಲ್ಲಿ ಮಲಮಕ್ಕಳೂ ಸೇರಬೇಕೆಂಬುದು ಶಾಸನ ರಚನೆಯ ಸಂದರ್ಭದಲ್ಲಿ ಸಂಸತ್ತಿನ ಉದ್ದೇಶವಿದ್ದಿದ್ದಲ್ಲಿ ಹಾಗೆಂದು ಸ್ಪಷ್ಟ ಮಾತುಗಳಲ್ಲಿ ಅದನ್ನು ವ್ಯಕ್ತಪಡಿಸುತ್ತಿತ್ತು ಮತ್ತು ಹಿಂದಿನ ಸಾಂಪ್ರದಾಯಿಕ ಕಾನೂನಿನಲ್ಲಿ ಇದಕ್ಕೆ ಯಾವುದೇ ರೀತಿಯ ಬೆಂಬಲ ವಿಲ್ಲದಿರುವುದರಿಂದ ಈಗ ಹಿಂದೂ ಮಹಿಳೆಯ ಮರಣಶಾಸನ ರಹಿತ ಆಸ್ತಿಯ ಉತ್ತರಾಧಿಕಾರಿಗಳನ್ನು ನಿರ್ಧರಿಸುವಾಗ ನ್ಯಾಯಾಧೀಶರು, ಅವಳ ಗಂಡನ ಮೊದಲ ಪತ್ನಿಯಿಂದ ಹುಟ್ಟಿದ ಪುರುಷ ಸಂತಾನಕ್ಕೆ ಅವಳ ಆಸ್ತಿ ಪ್ರಾಪ್ತವಾಗುವುದಿಲ್ಲ ಎಂದು ಅಭಿಪ್ರಾಯಪಟ್ಟರು.

ಕಾನೂನಿನ ಅನ್ವಯದಲ್ಲಿ ಕಾನೂನಿನ ಆಶಯಕ್ಕೆ ಮಹತ್ವಕೊಡದೆ ಕೇವಲ ಕಾನೂನಿನಲ್ಲಿರುವ ಪದಶಃ ಅರ್ಥಕ್ಕೆ ಬೆಲೆಕೊಟ್ಟಿದ್ದಿದ್ದರೆ, ಪುರುಷಪರ ನಿರ್ಣಯವಾಗಬಹುದಾಗಿದ್ದ ಸಂದರ್ಭ ತಪ್ಪಿ ಕಾನೂನಿನ ಸರಿಯಾದ ವ್ಯಾಖ್ಯಾನದಿಂದಾಗಿ ಕಾನೂನಿನ ದೃಷ್ಟಿಯಲ್ಲಿ ಸ್ತ್ರೀಪುರುಷರಿಬ್ಬರೂ ಸಮಾನರು ಎಂಬ ತತ್ವಕ್ಕೆ ಜಯದೊರೆತಿದೆ ಎನ್ನಬಹುದು.

ಹಿಂದೂ ಕಾನೂನಿನ ಅಡಿಯಲ್ಲಿ ಒಂದು ವಾಸದ ಮನೆಯ ಮಾಲಿಕತ್ವ ಹೊಂದಿರುವ ಪುರುಷ ಅಥವಾ ಮಹಿಳೆ ಉಯಿಲು ಮಾಡದೆ ಮರಣಹೊಂದಿದರೆ, ಮತ್ತು ಮರಣದ ಸಮಯದಲ್ಲಿ ಅವನ ಅಥವೆ

ಪತ್ನಿ, ತಾಯಿ ಅಥವಾ ಮಗಳು ಆ ಮನೆಯಲ್ಲಿ ವಾಸವಿದ್ದರೆ, ಅವರು ಕಾಯಂ ಆಗಿ ಆ ಮನೆಯಲ್ಲಿ ವಾಸಿಸುವ ಹಕ್ಕನ್ನು ಹೊಂದಿರುತ್ತಾರೆ. ಸ್ತ್ರೀವಾರಸುದಾರಳು ಮಗಳಾಗಿದ್ದರೆ, ಅವಳು ಅವಿವಾಹಿತಳಾಗಿರುವವರೆಗೆ ಅಥವಾ ಗಂಡನಿಂದ ಪರಿತ್ಯಜಿಸಲ್ಪಟ್ಟಿದ್ದರೆ ಅಥವಾ ವಿಚ್ಛೇದನೆ ಪಡೆದಿದ್ದರೆ, ಅಥವಾ ವಿಧವೆಯಾಗಿದ್ದರೆ, ಆಗ ಆ ಮನೆಯಲ್ಲಿ ವಾಸಿಸುವ ಹಕ್ಕನ್ನು ಹೊಂದಿರುತ್ತಾಳೆ. ಮಹಿಳೆ ಗಂಡನಿಂದ ಪರಿತ್ಯಜಿಸಲ್ಪಡದೇ, ತಾನೇ ಗಂಡನನ್ನು ಬಿಟ್ಟಿದ್ದರೆ ಆಗ, ಅವಳು ತನ್ನ ತಂದೆಯ ವಾಸದ ಮನೆಯಲ್ಲಿ ವಾಸಿಸುವ ಹಕ್ಕನ್ನು ಹೊಂದಿರುವುದಿಲ್ಲ ಮತ್ತು ಪುರುಷ ವಾರಸುದಾರರು ಪಾಲುಮಾಡಿಕೊಳ್ಳಲು ನಿರ್ಧಾರ ಮಾಡುವವರೆಗೆ ಸ್ತ್ರೀವಾರಸುದಾರಳು ಮನೆಯನ್ನು ಪಾಲುಮಾಡುವಂತೆ ಕೇಳುವ ಹಕ್ಕನ್ನು ಹೊಂದಿರುವುದಿಲ್ಲ. ಆದರೆ, ಪುರುಷ ವಾರಸುದಾರ ಮನೆಯನ್ನು ಗುತ್ತಿಗೆಗೆ ಕೊಡುವ ಮೂಲಕ ಅಥವಾ ಮೂರನೇ ವ್ಯಕ್ತಿಗೆ ಹಕ್ಕು ಕೊಡುವ ಮೂಲಕ ಸ್ತ್ರೀವಾರಸುದಾರಳನ್ನು ಆ ಮನೆಯಲ್ಲಿ ವಾಸಿಸದಂತೆ ಮಾಡಲಾಗದು. ಹಾಗೆ ಮಾಡಿದಾಗ ಅವಳು ಪಾಲು ಮಾಡುವಂತೆ ಹೇಳುವ ಹಕ್ಕನ್ನು ಪಡೆಯುತ್ತಾಳೆ.

ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ರ ೨೩ನೇ ಪ್ರಕರಣ ವಾಸದ ಮನೆಗೆ ಸಂಬಂಧಿಸಿದಂತೆ ಕಲ್ಪಿಸಿದ ವಿಶೇಷ ಉಪಬಂಧ ಹೀಗಿದೆ.

"೨೩ ವಾಸದ ಮನೆಗೆ ಸಂಬಂಧಿಸಿದಂತೆ ವಿಶೇಷ ಉಪಬಂಧ-ಮರಣ ಶಾಸನ ಬರೆಯದ ಒಬ್ಬ ಹಿಂದೂ ಪುರುಷ ಅಥವಾ ಮಹಿಳೆಯ ನಂತರ, ಅನುಸೂಚಿಯ ವರ್ಗ Iರಲ್ಲಿ ನಿರ್ದಿಷ್ಟಪಡಿಸಿದ ಪುರುಷ ಹಾಗೂ ಸ್ತ್ರೀವಾರಸುದಾರರು ಬದುಕಿ ಉಳಿದಿದ್ದರೆ ಮತ್ತು ಅವನ ಅಥವಾ ಅವಳ ಆಸ್ತಿ ಅವನ ಅಥವಾ ಅವಳ ಕುಟುಂಬದ ಸದಸ್ಯರು ವಾಸಿಸುತ್ತಿರುವ ಒಂದು ವಾಸದ ಮನೆಯನ್ನು ಒಳಗೊಂಡಿದ್ದರೆ, ಆಗ ಈ ಅಧಿನಿಯಮದಲ್ಲಿ ಏನೇ ಇದ್ದರೂ, ಪುರುಷ ವಾರಸುದಾರರು ಅವರವರ ಪಾಲನ್ನು ವಿಭಾಗ ಮಾಡಿಕೊಳ್ಳಲು ನಿರ್ಧರಿಸುವವರೆಗೆ ಸ್ತ್ರೀ ವಾರಸುದಾರಳಿಗೆ ವಾಸದ ಮನೆಯನ್ನು ಭಾಗಮಾಡುವಂತೆ ಕೇಳುವ ಹಕ್ಕು ಬರುವುದಿಲ್ಲ. ಆದರೆ ಅವಳು ಅದರಲ್ಲಿ ವಾಸಿಸುವ ಹಕ್ಕನ್ನು ಹೊಂದಿರುತ್ತಾಳೆ.

ಪರಂತು, ಅಂಥ ಸ್ತ್ರೀ ವಾರಸುದಾರಳು ಮಗಳಾಗಿರುವ ಸಂದರ್ಭದಲ್ಲಿ ಅವಳು ಅವಿವಾಹಿತಳಾಗಿದ್ದರೆ ಅಥವಾ ಗಂಡನಿಂದ ಪರಿತ್ಯಜಿಸಲ್ಪಟ್ಟಿದ್ದರೆ, ಅಥವಾ ಗಂಡನಿಂದ ಪ್ರತ್ಯೇಕಗೊಂಡಿದ್ದರೆ, ಅಥವಾ ವಿಧವೆಯಾಗಿದ್ದರೆ ಮಾತ್ರ ಅವಳು ವಾಸದ ಮನೆಯಲ್ಲಿ ವಾಸಿಸಲು ಹಕ್ಕುಳ್ಳವಳಾಗಿರುತ್ತಾಳೆ."

ಈ ಉಪಬಂಧದ ಉದ್ದೇಶ, ಸ್ತ್ರೀವಾರಸುದಾರಳಿಂದ ಕುಟುಂಬದ ವಾಸದ ಮನೆ ಭಾಗವಾಗುವುದನ್ನು ತಡೆಯುವುದು. ಆದ್ದರಿಂದ ಹಿಂದೂ ಉತ್ತರಾಧಿಕಾರ ಅಧಿನಿಯಮ, ೧೯೫೬ಕ್ಕೆ ಅನುಬಂಧಿಸಲಾದ Iನೇ ವರ್ಗದ ವಾರಸುದಾರರಲ್ಲಿ ಸೇರಿದ ಸ್ತ್ರೀವಾರಸುದಾರಳ ಹಕ್ಕನ್ನು ಇಲ್ಲವಾಗಿಸುವುದು ಈ ಉಪಬಂಧದ ಉದ್ದೇಶವಲ್ಲ. ಹಾಗೆಯೇ, ಕುಟುಂಬದ ಸದಸ್ಯರೆಲ್ಲರೂ ವಾಸಿಸುತ್ತಿಲ್ಲದ ಸಂದರ್ಭದಲ್ಲಿ ಸ್ತ್ರೀವಾರಸುದಾರಳಿಗೆ

ಈ ನಿರ್ಬಂಧ ಅನ್ವಯಿಸುವುದಿಲ್ಲ. ಕಾನೂನಿನ ಈ ಉಪಬಂಧದ ಉದ್ದೇಶ, ನಿರ್ದಿಷ್ಟ ಸಂದರ್ಭದಲ್ಲಿ, ಹಿಂದೂ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ದೃಷ್ಟಿಯಲ್ಲಿರಿಸಿಕೊಂಡು, ಸ್ತ್ರೀವಾರಸುದಾರಳ ಹಕ್ಕನ್ನು ನಿರ್ದಿಷ್ಟ ಅವಧಿಯವರೆಗೆ (ಪುರುಷವಾರಸುದಾರರು ಭಾಗ ಮಾಡಿಕೊಳ್ಳಲು ನಿರ್ಧರಿಸುವವರೆಗೆ) ನಿರ್ಬಂಧಿಸುವುದಾಗಿತ್ತೆ ಹೊರತು ಅವಳನ್ನು ಅವಳ ಹಕ್ಕಿನಿಂದ ವಂಚಿತಳನ್ನಾಗಿಸುವುದಿಲ್ಲ. ಏಕೆಂದರೆ, ಈ ಆಸ್ತಿವಾರಸುದಾರಿಕೆಗೆ ಸಂಬಂಧಿಸಿದಂತೆ, ಹಿಂದಿನಿಂದಲೂ ಇದ್ದಂಥ ಸ್ತ್ರೀಪುರುಷ ಅಸಮಾನತೆಯನ್ನು ಹೋಗಲಾಡಿಸುವುದು ಈ ಅಧಿನಿಯಮದ ಉದ್ದೇಶಗಳಲ್ಲಿ ಒಂದಾಗಿತ್ತು. ಆದ್ದರಿಂದ, ಇದಕ್ಕೆ ಸಂಬಂಧಿಸಿದಂತೆ ಉದ್ಭವಿಸುವ ಯಾವುದೇ ವಿವಾದದಲ್ಲಿ ನೀಡಲಾಗುವ ತೀರ್ಪು ಈ ಅಧಿನಿಯಮದ ಒಟ್ಟಾರೆ ಉದ್ದೇಶಕ್ಕೆ ಪೂರಕವಾಗಿರಬೇಕು. ಯಾವುದೇ ಕಾನೂನಿನ ರಚನೆ, ಅದರಲ್ಲಿ ಬಳಸಲಾದ ಪದಗಳು, ಅದರ ವ್ಯಾಖ್ಯಾನ ಎಲ್ಲವೂ ಅದರ ರಚನೆಯ ಹಿಂದಿರುವ ಉದ್ದೇಶಕ್ಕೆ ಪೂರಕವಾಗಿರಬೇಕು. ಆಗ ಮಾತ್ರ ಕಾನೂನಿನ ಆಶಯ ನೆರವೇರುವುದು ಸಾಧ್ಯವಾಗುತ್ತದೆ. ಕಾನೂನಿನ ರಚನೆ ಹಾಗೂ ಪದಗಳ ಅಕ್ಷರಶಃ ಅರ್ಥವನ್ನು ತೆಗೆದುಕೊಂಡಾಗ ಬೇರೆ ರೀತಿಯ ವ್ಯಾಖ್ಯಾನ ಸಾಧ್ಯತೆಯಿದ್ದರೂ ಸಹ ಅದನ್ನು ಬಿಟ್ಟು ಕಾನೂನು ರಚನೆಯ ಹಿಂದಿರುವ ಆಶಯ ಮುಖ್ಯವಾಗಬೇಕು.

ಮಾಧವರಾವ್ ಕೇಶವರಾವ್ ಸರ್ವಾಸೆ ಮತ್ತು ಇತರರು -ವಿ- ಜಾನಕಿಬಾಯಿ ಆತ್ಮರಾಂ ಅವರ ಪತ್ನಿ - ಮತ್ತು ಇತರರು ಪ್ರಕರಣದಲ್ಲಿ ಕೇಶವರಾವ್ ಎಂಬಾತನಿಗೆ ಸ್ವಲ್ಪ ಆಸ್ತಿಯಿದ್ದು ಆತನ ಮರಣಾನಂತರ ಉಳಿದವರು ಅವನ ಇಬ್ಬರು ಗಂಡುಮಕ್ಕಳು ಮಾಧವರಾವ್ ಮತ್ತು ನಿವೃತ್ತಿ, ಪತ್ನಿ ಹರ್ನಾಬಾಯಿ ಮತ್ತು ಇಬ್ಬರು ಹೆಣ್ಣುಮಕ್ಕಳು ಸೇತುಬಾಯಿ ಮತ್ತು ಜಾನಕೀಬಾಯಿ. ಜಾನಕೀಬಾಯಿ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ತನ್ನ ಪಾಲನ್ನು ಹಾಗೂ ಸ್ವಾಧೀನತೆಯನ್ನು ಕೋರಿ ದಾವೆ ಹೂಡಿದಳು. ಈ ಆಸ್ತಿ ಕೃಷಿ ಭೂಮಿ ಹಾಗೂ ವಾಸದ ಮನೆಯನ್ನು ಒಳಗೊಂಡಿತ್ತು. ಆದರೆ ಪ್ರತಿಪಕ್ಷಕಾರರು ಕೇಶವರಾವ್ ಅವರ ಜೀವಿತಾವಧಿಯಲ್ಲಿಯೇ ಆಸ್ತಿ ಪಾಲಾಗಿದೆಯೆಂದೂ, ಜಾನಕೀಬಾಯಿಗೆ ೨೫೦೦ ರೂ.ಗಳನ್ನು ಮತ್ತು ಎರಡು ಎಮ್ಮೆಗಳನ್ನು ಅವಳ ಭಾಗಕ್ಕೆ ಬಂದ ಪಾಲೆಂದು ಕೊಡಲಾಗಿತ್ತೆಂದೂ ಹಾಗೂ ಅವಳಿಗೆ ಮನೆಯನ್ನು ಕೊಳ್ಳಲು ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಪ್ರೀತಿಯಿಂದ ೧೦,೦೦೦ ರೂ.ಗಳನ್ನು ಹೆಚ್ಚಾಗಿ ಕೊಡಲಾಗಿತ್ತೆಂದೂ ವಾದಿಸಿದರು. ಅಲ್ಲದೆ ಜಾನಕೀಬಾಯಿ ವಿವಾಹವಾಗಿರುವುದರಿಂದ ಮತ್ತು ಈ ಹಣದಿಂದ ಅವಳು ಪ್ರತ್ಯೇಕ ಮನೆಯನ್ನು ಖರೀದಿ ಮಾಡಿರುವುದರಿಂದ ಮತ್ತು ಈಗಾಗಲೇ ಆಸ್ತಿ ವಿಭಾಗವಾಗಿ ಹೋಗಿರುವುದರಿಂದ ದಾವೆಯನ್ನು ವಜಾ ಮಾಡಬೇಕೆಂದು ಕೋರಿದರು. ಆದರೆ ನ್ಯಾಯಾಧೀಶರು ಜಾನಕೀಬಾಯಿಗೆ ಕೃಷಿಭೂಮಿ ಹಾಗೂ ವಾಸದ ಮನೆ ಇವೆರಡರಲ್ಲೂ ಭಾಗಕೊಡಬೇಕೆಂದು ತೀರ್ಪು ನೀಡಿದರು. ಇದರ ವಿರುದ್ಧ ಹೂಡಿದ ಅಪೀಲಿನಲ್ಲಿ ಸಹ

ತೀರ್ಪು ಜಾನಕೀಬಾಯಿಯ ಪರವಾಗಿಯೇ ಆಯಿತು. ಆದರೆ ಜಾನಕೀಬಾಯಿ ಈ ತೀರ್ಪನ್ನು ಜಾರಿಗೊಳಿಸಬೇಕೆಂದು ಕೋರಿ ಹಾಕಿದ ಅರ್ಜಿಗೆ ಈಗ ತೀರ್ಪು ಋಣಿಗಳು(ವಿರೋಧಪಕ್ಷದವರು) ಈ ತೀರ್ಪ ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ರ ೨೩ನೇ ಪ್ರಕರಣವನ್ನು ಉಲ್ಲಂಘಿಸುವುದರಿಂದ ಈ ತೀರ್ಪು ಅನೂರ್ಜಿತವೆಂದು ಆಕ್ಷೇಪಣೆ ಎತ್ತಿದ್ದಾರೆ. ಆದರೆ ಎಕ್ಸಿಕ್ಯೂಷನ್ ನ್ಯಾಯಾಧೀಶರು ಆಕ್ಷೇಪಣೆಯನ್ನು ತಳ್ಳಿಹಾಕಿ ಜಾರಿಗೊಳಿಸಬೇಕೆಂದು ನಿರ್ದೇಶಿಸಿ ಆದೇಶಿಸಿದ್ದಾರೆ. ಈ ಆದೇಶವನ್ನು ಈ ಪುನರವಲೋಕನ ಅರ್ಜಿಯಲ್ಲಿ ಪ್ರಶ್ನಿಸಲಾಗಿದೆ.

ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ರ ೨೩ನೇ ಪ್ರಕರಣದ ಪ್ರಕಾರ, ಪುರುಷ ವಾರಸುದಾರರು ವಾಸದ ಮನೆಯನ್ನು ಭಾಗಮಾಡಿಕೊಳ್ಳಲು ನಿರ್ಧರಿಸುವವರೆಗೆ ಸ್ತ್ರೀವಾರಸುದಾರಳು ಮನೆಯನ್ನು ಭಾಗಮಾಡುವಂತೆ ಕೇಳುವ ಹಕ್ಕನ್ನು ಹೊಂದಿರುವುದಿಲ್ಲ. ಇಲ್ಲಿ ಪ್ರತಿವಾದಿಗಳ ಪರವಾಗಿ ವಾದಿಸಿದ ವಕೀಲರು ಈಗಾಗಲೇ ಆಸ್ತಿ ಭಾಗವಾಗಿದೆಯೆಂದು ಪ್ರತಿವಾದಿಗಳು ವಾದಿಸಿದ್ದರೂ, ನ್ಯಾಯಾಲಯ ಭಾಗವಾಗಿಲ್ಲವೆಂದು ಅಭಿಪ್ರಾಯಪಟ್ಟಿದೆ. ಆದ್ದರಿಂದ, ಜಾನಕೀಬಾಯಿ ಸ್ತ್ರೀ ವಾರಸುದಾರಳಾಗಿರುವುದರಿಂದ ಮತ್ತು ಪುರುಷ ವಾರಸುದಾರರು ವಾಸದ ಮನೆಯನ್ನು ಭಾಗಮಾಡಿಕೊಳ್ಳಲು ನಿರ್ಧರಿಸುವವರೆಗೆ ಜಾನಕೀಬಾಯಿಗೆ ವಾಸದ ಮನೆಯಲ್ಲಿ ಯಾವುದೇ ಭಾಗಪಡೆಯಲು ಹಕ್ಕಿಲ್ಲ ಎಂದು ವಾದಿಸಿದರು.

ಆದರೆ ಜಾನಕೀಬಾಯಿಯ ಪರ ವಾದಿಸಿದ ವಕೀಲರು, ಪ್ರತಿವಾದಿಗಳೇ ಹೇಳಿಕೆ ನೀಡಿರುವಂತೆ ಆಸ್ತಿಯನ್ನು ಈಗಾಗಲೇ ಭಾಗಮಾಡಲಾಗಿದೆ. ಮತ್ತು ಕೆಲವು ಪುರುಷ ವಾರಸುದಾರರು ತಮ್ಮ ಪಾಲಿನ ಆಸ್ತಿಯನ್ನು ಮಾರಾಟ ಮಾಡಿಬಿಟ್ಟಿದ್ದಾರೆ. ಆದ್ದರಿಂದ ೨೩ನೇ ಪ್ರಕರಣ ಇಲ್ಲಿ ಅನ್ವಯವಾಗುವುದಿಲ್ಲ ಎಂದು ವಾದಿಸಿದ್ದಾರೆ.

ಈ ಪ್ರಕರಣದಲ್ಲಿ ನ್ಯಾಯಾಲಯದ ಎಲ್ಲ ಹಂತಗಳಲ್ಲಿಯೂ ಮಹಿಳೆಯ ಪರವಾಗಿ ತೀರ್ಪು ಹೊರಬಿದ್ದಿದೆ. ಆದರೆ ಮಹಿಳೆಗೆ ನ್ಯಾಯದೊರಕಿಸಿ ಕೊಡದ ರೀತಿಯಲ್ಲಿ ಕಾನೂನನ್ನು ಯಾವ ರೀತಿಯಲ್ಲಿ ವ್ಯಾಖ್ಯಾನ ಮಾಡಬಹುದು ಎಂಬುದಕ್ಕೆ ಪ್ರತಿವಾದಿಯ ವಕೀಲರು ಅವಲಂಬಿಸಿದ ಇಂಥದೇ ಇತರ ಪ್ರಕರಣಗಳಲ್ಲಿ ಅಧೀನ ನ್ಯಾಯಾಲಯವು ನೀಡಿದ ತೀರ್ಪುಗಳು ಸಾಕ್ಷಿಯಾಗುತ್ತದೆ. ಈ ದೃಷ್ಟಿಯಿಂದಲೂ ಈ ತೀರ್ಪು ಅಧ್ಯಯನ ಯೋಗ್ಯವಾಗುತ್ತದೆ.

ಪ್ರತಿವಾದಿಗಳು ಈ ಪ್ರಕರಣಕ್ಕೆ ಅವಲಂಬಿಸಿದುದು ಜನಾಬಾಯಿ ಅಮ್ಮಾಳ ಅಲಿಯಾಸ್ ಗುಣಭೂಷಣಿ -ವಿ- ಟಿಎಸ್ ಪಳನಿ ಮೊದಲಿಯಾರ್ ಮತ್ತು ಇತರರು(ಎಐಆರ್ ೧೯೮೧ ಮದ್ರಾಸ್ ೬೨) ಪ್ರಕರಣವನ್ನು. ೨೩ನೇ ಪ್ರಕರಣದ ಹಿನ್ನೆಲೆಯ ತತ್ವಗಳನ್ನು ವಿವರಿಸುತ್ತ, ಮದರಾಸು ಉಚ್ಚನ್ಯಾಯಾಲಯದ ವಿಭಾಗೀಯ ಪೀಠ ಹೀಗೆ ಅಭಿಪ್ರಾಯಪಟ್ಟಿದೆ.

"…. ಪ್ರಾಚೀನ ಹಿಂದೂ ಕುಟುಂಬಗಳು ದೀರ್ಘಕಾಲದಿಂದಲೂ ನಡೆಸಿಕೊಂಡು ಬಂದ ಸಂಪ್ರದಾಯ ಹಾಗೂ ಹೊಂದಿದ್ದ ಭಾವನೆಗಳಿಗೆ ಈ ಮಟ್ಟಿಗೆ ಬೆಲೆಕೊಡಲು ಸಂಸತ್ತು ಇಚ್ಛಿಸಿ ಈ ಉಪಬಂಧವನ್ನು ಸೇರಿಸಿದೆ. ಪುರುಷ ಸದಸ್ಯ ಕುಟುಂಬದ ಮನೆಯನ್ನು ಭಾಗಮಾಡಲು ಇಚ್ಛಿಸಿದರೆ ಅಥವಾ ಪುರುಷ ಸದಸ್ಯರ ಪೈಕಿ ಒಬ್ಬ ಸದಸ್ಯನು ತನ್ನ ಭಾಗವನ್ನು ಪಡೆದು ಅಪರಿಚಿತನಿಗೆ ಅದನ್ನು ಪರಭಾರೆ ಮಾಡಿದರೆ ಆಗ ಪುರುಷ ಸದಸ್ಯರು ವಾಸದ ಮನೆಯನ್ನು ಹಾಗೆಯೇ ರಕ್ಷಿಸಲು ಅಸಮರ್ಥರಾಗಿದ್ದಾರೆಂದು ಭಾವಿಸಬಹುದು… ಮತ್ತು ಸ್ತ್ರೀವಾರಸುದಾರರು ವಾಸದ ಮನೆಯು ಭಾಗವಾಗುವುದಕ್ಕೆ ಕಾರಣರಾಗಬಾರದು.. ಹಾಗೂ ವಾಸದ ಮನೆಯ ರಕ್ಷಣೆಗೆ ಹೆಚ್ಚಿನ ಒತ್ತನ್ನು ಕೊಡಲಾಗಿದೆ."

ಪ್ರತಿವಾದಿಗಳು ಅವಲಂಬಿಸಿರುವ ಮೇಲಿನ ವಾದವನ್ನು ಒಪ್ಪಿಕೊಂಡರೂ ಇಲ್ಲಿ ಅರ್ಜಿದಾರಳಿಗೆ ಅನುಕೂಲಕರವಾಗುವ ನಿರ್ಧಾರಕ್ಕೇ ಬರಬೇಕಾಗುತ್ತದೆ. ಅದನ್ನೇ ಅವರು ತೀರ್ಪಿನಲ್ಲಿ ಸ್ಪಷ್ಟಪಡಿಸಿದ್ದಾರೆ.

ಪುರುಷ ಸದಸ್ಯರು ಆಸ್ತಿ ವಿಭಾಗವಾಗಿದೆಯೆಂದು ವಾದಿಸಿದ್ದಾರೆ ಮತ್ತು ಕೆಲವು ವಾಸದ ಮನೆಗಳನ್ನು ಮಾರುವ ಮೂಲಕ ವಿಭಾಗವಾಗಿರುವುದನ್ನು ಪರಿಭಾವಿಸಿ ಕ್ರಮಕೈಗೊಂಡಿದ್ದಾರೆ. ಇಂಥ ಸಂದರ್ಭದಲ್ಲಿ ನ್ಯಾಯಾಲಯವೂ ಸಹ ಆಸ್ತಿ ವಿಭಾಗ ಮಾಡಲಾಗಿದೆ ಎಂದೇ ತೀರ್ಮಾನಿಸುತ್ತದೆ. ಅಂಥ ಸಂದರ್ಭದಲ್ಲಿ ಸ್ತ್ರೀ ವಾರಸುದಾರಳು ಆಸ್ತಿಹಕ್ಕಿನಿಂದ ವಂಚಿತಳಾಗಬೇಕೆ? ೨೩ನೇ ಪ್ರಕರಣದಲ್ಲಿ "ಪುರುಷವಾರಸುದಾರರು ಆಸ್ತಿಯಲ್ಲಿ ತಮ್ಮ ತಮ್ಮ ಪಾಲನ್ನು ಭಾಗಮಾಡಿಕೊಳ್ಳಲು ನಿರ್ಧರಿಸುವವರೆಗೆ" ಎಂದಿರುವುದರಿಂದ, ಸ್ತ್ರೀವಾರಸುದಾರಳು ತನ್ನ ಪಾಲನ್ನು ಕ್ಲೇಮು ಮಾಡಲು ವಾಸ್ತವವಾಗಿ ಆಸ್ತಿ ಪಾಲಾಗುವವರೆಗೆ ಕಾಯಬೇಕಿಲ್ಲ.. ಆದ್ದರಿಂದ ಪುರುಷವಾರಸುದಾರರು ವಾಸದ ಮನೆಯೂ ಸೇರಿದಂತೆ ಕುಟುಂಬದ ಆಸ್ತಿಯನ್ನು ಪಾಲುಮಾಡಿಕೊಳ್ಳಲು ಒಪ್ಪಿಗೆಕೊಟ್ಟಲ್ಲಿ ಅಥವಾ ಈಗಾಗಲೇ ಭಾಗವಾಗಿಬಿಟ್ಟಿದೆಯೆಂದು ಕ್ಲೇಮು ಮಾಡಿದಲ್ಲಿ ಸಹ, ಸ್ತ್ರೀ ವಾರಸುದಾರಳು ವಾಸದಮನೆಯಲ್ಲಿ ತನ್ನ ಪಾಲನ್ನು ಪಡೆಯಲು ಹಕ್ಕು ಹೊಂದಿರುತ್ತಾಳೆ.

ವಾಸದ ಮನೆಯಲ್ಲಿ ಸ್ತ್ರೀವಾರಸುದಾರಳು ಹಕ್ಕನ್ನು ಕೇಳುವುದನ್ನು ನಿರ್ದಿಷ್ಟ ಸಂದರ್ಭ ಉಂಟಾಗುವರೆಗೆ ಮಾತ್ರ ನಿರ್ಬಂಧಗೊಳಿಸಲಾಗಿದೆ. ಇದರ ಹಿಂದಿನ ಉದ್ದೇಶ ಮೇಲಿನ ಪ್ರಕರಣದಲ್ಲಿ ತೀರ್ಪು ನೀಡುತ್ತಾ ನ್ಯಾಯಾಧೀಶರು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಆ ಬಗ್ಗೆ ಯಾವುದೇ ಅನುಮಾನ ಸಂದೇಹ, ಇತರ ರೀತಿಯ ವ್ಯಾಖ್ಯಾನ ಇಲ್ಲ.

ನರಸಿಂಹಮೂರ್ತಿ-ವಿ- ಶ್ರೀಮತಿ ಸುಶೀಲಬಾಯಿ ಮತ್ತು ಇತರರು((೧೯೯೬)೩ ಸುಪ್ರೀಂ ಟುಡೇ ೬೧೧) ಪ್ರಕರಣದಲ್ಲಿ ೨೩ನೇ ಪ್ರಕರಣದ ಅರ್ಥವ್ಯಾಪ್ತಿಯಲ್ಲಿ ವಾಸದಮನೆ ಎಂದರೇನು ಎಂಬುದನ್ನು ಹಾಗೂ ಪುರುಷವಾರಸುದಾರ ಒಬ್ಬನೇ ಇದ್ದು ಅವನು ಆಸ್ತಿ ಭಾಗಮಾಡಿಕೊಳ್ಳಲು ನಿರ್ಧರಿಸದಿದ್ದಲ್ಲಿ ಅಂಥ

ಕುಟುಂಬದ ಸ್ತ್ರೀವಾರಸುದಾರರು ವಾಸದ ಮನೆಯಲ್ಲಿ ತಾವು ಭಾಗ ಪಡೆಯುವ ಹಕ್ಕನ್ನು ಚಲಾಯಿಸು ವಂತೆಯೇ ಇಲ್ಲವೆ ಎಂಬ ಎರಡು ಮೂಲಭೂತ ಪ್ರಶ್ನೆಗಳನ್ನು ಉತ್ತರಿಸಲಾಗಿದೆ. ಹಾಗೆಯೇ ಈ ಕಾನೂನಿನ ಆಶಯಕ್ಕೆ ಪೂರಕವಲ್ಲದ ವ್ಯಾಖ್ಯಾನ ಮಾಡುವ ಮೂಲಕ ಕಾನುನು ರಚನೆಯ ಹಿಂದಿರುವ ಉದ್ದೇಶವನ್ನು ವಿಫಲಗೊಳಿಸುವಂತಿಲ್ಲ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಈ ಪ್ರಕರಣದಲ್ಲಿ ನರಸೋಜಿರಾವ್ ಅವರ ಯಾರೇ ವಾರಸುದಾರರೂ ಕುಟುಂಬದ ವಾಸದ ಮನೆಯಲ್ಲಿ ಇಲ್ಲ. ಅದು ಸದ್ಯದಲ್ಲಿ ಬಾಡಿಗೆದಾರನ ವಶದಲ್ಲಿದೆ. ಸ್ತ್ರೀವಾರಸುದಾರಳು ಕುಟುಂಬದ ವಾಸದ ಮನೆಯಲ್ಲಿ ಪಾಲುಕೇಳುವ ಹಕ್ಕನ್ನು ಚಲಾಯಿಸಿದ್ದಾಳೆ. ಅದನ್ನು ಏಕೈಕ ಪುರುಷ ವಾರಸುದಾರ ನರಸಿಂಹಮೂರ್ತಿ ೨೩ನೇ ಪ್ರಕರಣದ ಮೇರೆಗೆ ನಿರ್ಬಂಧಿಸಿದ್ದಾನೆ. ಈ ಪ್ರಕರಣದಲ್ಲಿ ರಾಮನಗರ ಸಿವಿಲ್ ನ್ಯಾಯಾಧೀಶರ ತೀರ್ಪನ್ನು ಉಚ್ಚನ್ಯಾಯಾಲಯ ಎತ್ತಿಹಿಡಿದಿದೆ.

ಈ ಪ್ರಕರಣದ ಇತ್ಯರ್ಥಕ್ಕೆ 'ಕುಟುಂಬದ ಮನೆ' ಎಂಬುದನ್ನು ಪರಿಭಾಷಿಸುವುದು ಮುಖ್ಯ. ಕುಟುಂಬದ 'ವಾಸದ ಮನೆ' ಎಂಬುದನ್ನು ಅಧಿನಿಯಮದಲ್ಲಿ ಎಲ್ಲಿಯೂ ಪರಿಭಾಷಿಸಿಲ್ಲ. ಈ ಕಾರಣದಿಂದಲೇ ನ್ಯಾಯಾಲಯಗಳು ಅದನ್ನು ಪರಿಭಾಷಿಸುವಲ್ಲಿ ತೊಂದರೆಯನ್ನೆದುರಿಸುವ ಸಾಧ್ಯತೆಯಿದೆಯೆಂದು ಟೀಕಾಕಾರರು ಈ ಕಾನೂನಿನ ಬಗ್ಗೆ ವಿಮರ್ಶಿಸುವಾಗ ಅಭಿಪ್ರಾಯಪಟ್ಟಿದ್ದಾರೆ.

ಇಲ್ಲಿ ನ್ಯಾಯಾಧೀಶರು 'ವಾಸದ ಮನೆ' ಎಂಬುದಕ್ಕೆ ಸ್ಪಷ್ಟವಾದ ವ್ಯಾಖ್ಯಾನವನ್ನು ನೀಡಿದ್ದಾರೆ. ೨೩ನೇ ಪ್ರಕರಣದ ಸಂದರ್ಭದಲ್ಲಿ 'ವಾಸದ ಮನೆ' ಎಂದರೆ, ಮರಣಶಾಸನ ಬರೆಯದೆ ಮರಣಹೊಂದಿದ ಹಿಂದೂ ಪುರುಷ ಅಥವಾ ಹಿಂದೂ ಸ್ತ್ರೀ ತನ್ನ ಮರಣಕ್ಕೆ ಮುನ್ನ ತನ್ನ ಕುಟುಂಬದವರ(ಇಲ್ಲಿನ ಸಂದರ್ಭದಲ್ಲಿ ಕುಟುಂಬದವರು ಎಂದರೆ ಅನುಸೂಚಿಯ Iನೇ ವರ್ಗದ ವಾರಸುದಾರರು) ಜೊತೆಯಲ್ಲಿ ಹಂಚಿಕೊಂಡು ಬಾಳಿದ ಮತ್ತು ಸ್ತ್ರೀವಾರಸುದಾರಳ ಕೋರಿಕೆ ಮೇರೆಗೆ ಪುರುಷವಾರಸುದಾರರು ನಿರ್ಧರಿಸುವರೆಗೆ ಭಾಗವಾಗದ 'ಮನೆ' ಎಂದು. ಅನುಸೂಚಿಯಲ್ಲಿ ೧೨ ಮಂದಿ Iನೇ ವರ್ಗದ ವಾರಸುದಾರರಿದ್ದಾರೆ. ಅದನ್ನು ಹೀಗೆ ಪಟ್ಟಿಮಾಡಲಾಗಿದೆ.

ಪುರುಷರು, ಹೆಣ್ಣು ಮಕ್ಕಳನ್ನು ಹೊರತುಪಡಿಸಿ ಸ್ತ್ರೀವಾರಸುದಾರರು ಹೆಣ್ಣು ಮಕ್ಕಳಾದ ಸ್ತ್ರೀವಾರಸು ದಾರರು.

೧. ಮಗ ೧. ತಾಯಿ ೧. ಮಗಳು

೨. ಮೃತಮಗನ ಮಗ ೨. ವಿಧವೆ ೨. ಮೃತ ಮಗನ ಮಗಳು

೩. ಮೃತ ಮಗನ ಮೃತಮಗನ ಮಗ ೩. ಮೃತಮಗನ ವಿಧವೆ ೩. ಮೃತ ಮಗನ ಮೃತ ಮಗನ ಮಗಳು

೪. ಮೃತ ಮಗಳ ಮಗ ೪. ಮೃತ ಮಗನ ಮೃತ ಮಗನ ಮಗಳು ೪. ಮೃತ ಮಗಳ ಮಗಳು

ಮೇಲೆ ಪಟ್ಟಿಮಾಡಲಾದ ೧೨ ಮಂದಿ Iನೇ ವರ್ಗದ ವಾರಸುದಾರರು ಮಾತ್ರವೇ 'ವಾಸದ ಮನೆ' ವಿಭಾಗವಾಗುವುದನ್ನು ಮುಂದೂಡಲು ಅಥವಾ ಅದರಲ್ಲಿ ವಾಸಮಾಡಲು ಹಕ್ಕನ್ನು ಪಡೆಯುವುದು ಸಾಧ್ಯ. ಆದ್ದರಿಂದ ವಾಸದ ಮನೆಯ ವಿಭಾಗವಾಗುವವರೆಗೆ ಮೇಲಿನ ಪಟ್ಟಿಯಲ್ಲಿರುವ ಸ್ತ್ರೀವಾರಸುದಾರರು ವಾಸದ ಮನೆಯಲ್ಲಿ ವಾಸಮಾಡುವ ಹಕ್ಕನ್ನು ಹೊಂದಿರುತ್ತಾರೆ. ಈಗಾಗಲೇ ಅಲ್ಲಿಯೇ ವಾಸಿಸುತ್ತಿರುವ Iನೇ ವರ್ಗದ ಸ್ತ್ರೀವಾರಸುದಾರರು ಅಲ್ಲಿ ವಾಸಿಸುವುದನ್ನು ಮುಂದುವರಿಸಲು ಹಕ್ಕು ಹೊಂದಿರುತ್ತಾರೆ. ಹಾಗೆ ಈಗಾಗಲೇ ವಾಸಿಸುತ್ತಿಲ್ಲದಿದ್ದರೆ ನ್ಯಾಯಾಲಯದ ಮೂಲಕ ಅವಳ ಹಕ್ಕನ್ನು ಚಲಾಯಿಸಬಹುದು. ೨೩ನೇ ಪ್ರಕರಣಕ್ಕಿರುವ ಪರಂತುಕದಲ್ಲಿ ಸ್ತ್ರೀವಾರಸುದಾರಳು ಮಗಳಾಗಿದ್ದಲ್ಲಿ ಅವಳು ಈ ಹಕ್ಕನ್ನು ಪಡೆಯಬೇಕಾದಲ್ಲಿ ಅವಿವಾಹಿತಳಾಗಿರಬೇಕು, ಪತಿಯಿಂದ ಪರಿತ್ಯಜಿಸಲ್ಪಟ್ಟವಳಾಗಿರಬೇಕು, ಪತಿಯಿಂದ ಪ್ರತ್ಯೇಕಗೊಂಡವಳಾಗಿರಬೇಕು ಇಲ್ಲವೇ ವಿಧವೆಯಾಗಿರಬೇಕು ಎಂದಿದೆ. ಈ ಪರಂತುಕಕ್ಕೆ- 'ಈ ಷರತ್ತುಗಳು ಕೇವಲ ಮಗಳಿಗೆ ಅನ್ವಯಿಸುತ್ತದೆ. ಆದ್ದರಿಂದ ಅದೇ ವರ್ಗದ ಅದೇ ಗುಂಪಿಗೆ ಸೇರಿದ ಇವರ ಸ್ತ್ರೀವಾರಸುದಾರರಿಗೆ ಅನ್ವಯಿಸುವುದಿಲ್ಲ ಎಂಬ ವ್ಯಾಖ್ಯಾನವನ್ನೂ ನೀಡಲಾಗಿದೆ. ಹಾಗಾದಲ್ಲಿ, ಈ ಯಾವುವೇ ಷರತ್ತುಗಳನ್ನು ಪೂರೈಸದಿದ್ದರೆ, ಮಗಳನ್ನು ಹೊರತುಪಡಿಸಿ ಅದೇ ಗುಂಪಿನ ಇತರ ಸ್ತ್ರೀವಾರಸುದಾರರಿಗೆ ವಾಸದ ಮನೆಯಲ್ಲಿ ವಾಸಿಸುವ ಹಕ್ಕು ಇದೆ ಎಂದಾಗಿಬಿಟ್ಟು ವಿವಾಹಿತ ಮೊಮ್ಮಗಳಿಗೆ ವಾಸದ ಹಕ್ಕು ಬರುತ್ತದೆ. ಆದರೆ ವಿವಾಹಿತ ಮಗಳಿಗೆ ವಾಸದ ಹಕ್ಕು ಇರುವುದಿಲ್ಲ. ಇಂಥ ಅನುಚಿತ ಪರಿಣಾಮಗಳಿಗೆ ಎಡೆಮಾಡಿಕೊಡುವುದಂತೂ ಶಾಸನರಚನಕಾರರ ಉದ್ದೇಶವಾಗಿರುವುದಿಲ್ಲ. ಆದ್ದರಿಂದ ಇಲ್ಲಿ ಮಗಳು ಎಂಬುದು ಆ ಗುಂಪಿಗೆ ಸೇರಿದ ಎಲ್ಲ ಸ್ತ್ರೀವಾರಸುದಾರರನ್ನು ಎಂದರೆ ಮೃತ ಮಗನ ಮಗಳು, ಮೃತಮಗನ ಮೃತ ಮಗನ ಮಗಳು ಹಾಗೂ ಮೃತಮಗಳ ಮಗಳು ಇವರನ್ನು ಒಳಗೊಳ್ಳುತ್ತದೆ. ಹಾಗೆಯೇ ವಾಸದ ಮನೆ ಎಂಬುದು Iನೇವರ್ಗದ ವಾರಸುದಾರರು ಬಾಳುತ್ತಿರುವ ಮನೆ ಯಾವುದೇ ಕಾರಣಕ್ಕೂ ಅದನ್ನು ಬಾಡಿಗೆಗೆ ಕೊಡುವ ಮೂಲಕ ಅಥವಾ ಮೂರನೇ ವ್ಯಕ್ತಿಯ ಪರವಾಗಿ ಹಕ್ಕು ಸೃಜಿಸುವ ಮೂಲಕ ಸ್ತ್ರೀವಾರಸುದಾರರನ್ನು ಅವರ ಹಕ್ಕುಗಳಿಂದ ವಂಚಿತರನ್ನಾಗಿಸುವಂತಿಲ್ಲ. ಮೇಲೆ ಹೇಳಿದ ನಾಲ್ಕು ಸಂದರ್ಭಗಳಲ್ಲಿಯೂ ಸ್ತ್ರೀವಾರಸುದಾರಳು ಕೂಡಲೇ ಯಾವುದೇ ಅಡ್ಡಿ ಅಡಚಣೆಯಿಲ್ಲದೆ ವಾಸದ ಮನೆಯನ್ನು ಪ್ರವೇಶಿಸುವಂತಿರಬೇಕು. ಈ ಉಪಬಂಧ ವಾಸದ ಮನೆಯನ್ನು ಭಾಗಮಾಡುವಂತೆ ಕೇಳುವ ಅವಳ ಹಕ್ಕನ್ನು ಮುಂದೂಡುತ್ತದೆಯೇ ವಿನಃ ಅದರ ಭಾಗದ ಮೇಲೆ ಅವಳಿಗಿರುವ ಮಾಲಿಕತ್ವದ ಹಕ್ಕನ್ನು ಕಸಿದುಕೊಳ್ಳುವುದಿಲ್ಲ. ವಿವಾಹ ಮಗಳನ್ನು ತನ್ನ ತಂದೆ ತಾಯಿಯರ ಮನೆಯಿಂದ ಸ್ಥಳಾಂತರ ಮಾಡುತ್ತದೆ ಎಂದ ಮಾತ್ರಕ್ಕೆ ಅವಳ ವೈವಾಹಿಕ ಸ್ಥಾನಮಾನದ ಕಾರಣದಿಂದ ಅವಳ ಹಿತಾಸಕ್ತಿಯನ್ನು ಶಾಶ್ವತವಾಗಿ ಬಲಿಕೊಡುವುದು ಸರಿಯಲ್ಲ. ಆದ್ದರಿಂದ ವಾಸದ ಮನೆಯನ್ನು

ಭಾಗಮಾಡದಿರಲು ಪುರುಷ ವಾರಸುದಾರರಿಗೆ ಇರುವ ರಕ್ಷಣೆಯ ಜೊತೆಗೆ ಅವಳ ತೊಂದರೆಯ ಸ್ಥಿತಿಗೂ ಅಷ್ಟೇ ಮಹತ್ವವನ್ನು ಇಲ್ಲಿ ಕೊಡಲಾಗಿದೆ ಎಂಬುದನ್ನು ಮನಗಾಣಬೇಕು.

ಈ ಪ್ರಕರಣದಲ್ಲಿ ಎತ್ತಲಾದ ಮತ್ತೊಂದು ಮುಖ್ಯ ಪ್ರಶ್ನೆ ಎಂದರೆ, ಮೃತ ಹಿಂದೂ ಪುರುಷನಿಗೆ ಒಬ್ಬನೇ ಒಬ್ಬ ಪುರುಷವಾರಸುದಾರನಿದ್ದು ಒಬ್ಬರು ಅಥವಾ ಹೆಚ್ಚು ಸ್ತ್ರೀವಾರಸುದಾರರಿದ್ದಲ್ಲಿ ೨೩ನೇ ಪ್ರಕರಣ ಅನ್ವಯಿಸುತ್ತದೆಯೇ ಎಂಬುದು ಸ್ತ್ರೀ ಪುರುಷ ಸಮಾನತೆಯನ್ನು ಸಾಧಿಸುವಲ್ಲಿ ಮತ್ತು ಮಹಿಳೆಗೆ ಆರ್ಥಿಕ ಸ್ವಾವಲಂಬನೆಗೆ ಪೂರಕವಾಗಿ ಮಹಿಳೆಯ ಸಬಲೀಕರಣಕ್ಕೆ ಕಾರಣವಾಗುತ್ತದೆಂಬ ಹಿನ್ನೆಲೆಯಲ್ಲಿ ಈ ಪ್ರಶ್ನೆ ತುಂಬ ಮಹತ್ವವುಳ್ಳದ್ದಾಗುತ್ತದೆ. ಈ ಪ್ರಕರಣದಲ್ಲಿ ನ್ಯಾಯಾಧೀಶರು, 'ಏಕೈಕ ಪುರುಷ ವಾರಸುದಾರನಿದ್ದಾಗಲೂ ಸಹ, ಅವನು ವಾಸದ ಮನೆಯಲ್ಲಿ ತನ್ನ ಭಾಗವನ್ನು ಪಡೆಯಲು ಇಚ್ಛಿಸುವ ವರೆಗೆ ಸ್ತ್ರೀವಾರಸುದಾರರು ವಾಸದ ಮನೆಯನ್ನು ಭಾಗಮಾಡುವಂತೆ ಕೇಳುವಂತಿಲ್ಲ. ಹಿಂದೂ ಸಮಾಜ ಪುರುಷ ಪ್ರಧಾನವಾದದ್ದು ಮತ್ತು ಮಗನನ್ನು ಪಡೆಯುವುದು ಧಾರ್ಮಿಕವಾಗಿ ಎಷ್ಟು ಮಹತ್ವದ್ದಾಗಿತ್ತೆಂದರೆ, ಗಂಡಮಕ್ಕಳಿಲ್ಲದವರು ದತ್ತಕದ ಮೂಲಕವಾಗಿಯಾದರೂ ಗಂಡುಮಗುವನ್ನು ಪಡೆಯಲಿಚ್ಛಿಸುತ್ತಿದ್ದರು. ಇಂಥ ಹಿನ್ನೆಲೆಯಲ್ಲಿ ಏಕೈಕ ಪುರುಷವಾರಸುದಾರನಿಗೆ ಅವನು ಒಬ್ಬನೇ ಎಂಬ ಕಾರಣಕ್ಕಾಗಿ ವಾಸದ ಮನೆ ಭಾಗವಾಗದಂತೆ ತಡೆಯುವ ಹಕ್ಕಿನಿಂದ ವಂಚಿತನನ್ನಾಗಿಸುವುದು ನ್ಯಾಯಸಮ್ಮತವಲ್ಲ. ಈ ಉಪಬಂಧವನ್ನು ಕಾನೂನಿನ ಆಶಯವನ್ನು ಎತ್ತಿಹಿಡಿಯುವ ರೀತಿಯಲ್ಲಿ ವ್ಯಾಖ್ಯಾನಿಸಬೇಕು. ಆದ್ದರಿಂದ ಪುರುಷವಾರಸುದಾರನೊಬ್ಬನೇ ಇದ್ದ ಸಂದರ್ಭದಲ್ಲಿಯೂ ಸಹ, ಅವನು ತಾನೇ ಅದರಲ್ಲಿ ತನ್ನ ಭಾಗವನ್ನು ಪ್ರತ್ಯೇಕವಾಗಿ ಪಡೆಯಲು ಇಚ್ಛಿಸುವವರೆಗೆ ವಾಸದ ಮನೆ ವಿಭಾಗವಾಗುವುದಿಲ್ಲ. ಹಾಗೂ ಅಲ್ಲಿಯವರೆಗೂ ಸ್ತ್ರೀ ವಾರಸುದಾರರು ಅದರಲ್ಲಿ ವಾಸದ ಹಕ್ಕನ್ನು ಹೊಂದಿರುತ್ತಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಮುಂಬಯಿ ಉಚ್ಚನ್ಯಾಯಾಲಯ ಇಂಥದ್ದೇ ಒಂದು ಪ್ರಕರಣದಲ್ಲಿ ಮೇಲಿನ ಅಭಿಪ್ರಾಯಕ್ಕೆ ವಿರುದ್ಧವಾದ ನಿಲುವನ್ನು ತಳೆದಿದೆ.

ಆನಂದ ಗೋಪಾಲರಾವ್ ಶಿಂದೆ-ವಿ-ಜಾನಕಿಬಾಯಿ ಗೋಪಾಲರಾವ್ ಶಿಂದೆ(ಎಐಆರ್ ೮೪ ಮುಂಬಯಿ ೩೧೯) ಪ್ರಕರಣದಲ್ಲಿ ಮರಣಶಾಸನ ಬರೆಯದೆ ಮರಣಹೊಂದಿದ ಹಿಂದೂ ಪುರುಷನಿಗೆ ಒಬ್ಬನೇ ಪುರುಷ ವಾರಸುದಾರನಿದ್ದಾಗ ೨೩ನೇ ಪ್ರಕರಣ ಅನ್ವಯಿಸುತ್ತದೆಯೇ ಎಂಬ ಪ್ರಶ್ನೆಯನ್ನು ಎತ್ತಲಾಯಿತು.

ಈ ಪ್ರಕರಣದಲ್ಲಿ ಗೋಪಾಲರಾವ್ ಶಿಂದೆ ಎಂಬಾತ ೨-೬-೧೯೬೭ರಂದು ಮರಣಹೊಂದಿದ. ಆತನ ನಂತರ ಆತನ ವಾರಸುದಾರರಾಗಿ ಬದುಕುಳಿದವರು ಆತನ ವಿಧವಾ ಪತ್ನಿ ಜಾನಕಿಬಾಯಿ, ಮಗ ಆನಂದ ಮತ್ತು ನಾಲ್ವರು ವಿವಾಹಿತ ಹೆಣ್ಣುಮಕ್ಕಳು. ರಜನೀಬಾಯಿ, ಪುಷ್ಪಾಬಾಯಿ, ತಾರಾಬಾಯಿ ಮತ್ತು ವಿಜಯಾಬಾಯಿ. ಹಾಗೂ ಅವಿವಾಹಿತ ಮಗಳು ಮಾಲಿನಿ. ಇದ್ದ ಆಸ್ತಿ ಎರಡು ಅಂತಸ್ತಿನ ವಾಸದ

ಮನೆ. ಗೋಪಾಲರಾವ್ ಅವರ ಸ್ವಯಾರ್ಜಿತ ಆಸ್ತಿ. ಕೆಳ ಅಂತಸ್ತಿನಲ್ಲಿ ಗೋಪಾಲರಾವ್ ಮತ್ತು ಜಾನಕಿಬಾಯಿ ವಾಸಿಸುತ್ತಿದ್ದರು. ಮೇಲ್ಮಹಡಿಯಲ್ಲಿ ಮಗ ಆನಂದ ವಾಸಿಸುತ್ತಿದ್ದ. ವಿವಾಹಿತ ಹೆಣ್ಣುಮಕ್ಕಳು ಅವರವರ ಗಂಡಂದಿರ ಮನೆಯಲ್ಲಿ ವಾಸಿಸುತ್ತಿದ್ದರು. ಇಲ್ಲಿ ಪ್ರತಿವಾದಿ ಹಾಗೂ ವಾದಿಗಳಿಬ್ಬರೂ ಮನೆಯಲ್ಲಿ ಏಳನೇ ಒಂದು ಭಾಗಕ್ಕೆ ಹಕ್ಕುದಾರರು. ಮನೆಯನ್ನು ಭಾಗಮಾಡಬೇಕೆಂಬ ಜಾನಕೀಬಾಯಿಯ ಹಕ್ಕು ಚಲಾವಣೆಗೆ ಮಗ ಆನಂದ, ಅಧಿನಿಯಮದ ೨೩ನೇ ಪ್ರಕರಣದ ಹಿನ್ನೆಲೆಯಲ್ಲಿ ತಾನು Iನೇ ವರ್ಗದ ಏಕೈಕ ಪುರುಷ ವಾಸದ ಮನೆಯಲ್ಲಿ ವಾರಸುದಾರನಾಗಿರುವುದರಿಂದ ಮತ್ತು ಅವನಿಗೆ ವಾಸದ ಮನೆಯನ್ನು ವಿಭಾಗಮಾಡುವುದು ಬೇಕಿಲ್ಲದಿರುವುದರಿಂದ ವಾಸದ ಮನೆಯಲ್ಲಿ ಭಾಗ ಕೇಳಲು ಜಾನಕೀಬಾಯಿಗೆ ಕಾನೂನು ರೀತ್ಯಾ ಹಕ್ಕಿಲ್ಲವೆಂದು ಪ್ರತಿರೋಧ ಒಡ್ಡಿದ. ವಿಚಾರಣಾ ನ್ಯಾಯಾಲಯದ ನ್ಯಾಯಾಧೀಶರು ಈ ವಾದವನ್ನು ಒಪ್ಪಿ ಜಾನಕಿಬಾಯಿಯ ದಾವೆಯನ್ನು ವಜಾಮಾಡಿದರು. ಇದಕ್ಕೆ ಅವರು ಕಲ್ಕತ್ತಾ ಉಚ್ಚನ್ಯಾಯಾಲಯು ಅರುಣ್ ಕುಮಾರ್ ಸನ್ಯಾಲ್ -ವಿ-ಜ್ಞಾನೇಂದ್ರ ನಾಥಸನ್ಯಾಲ್ (ಎಐಆರ್ ೧೯೭೫ ಕಲ್ಕತ್ತ ೨೩೨) ಪ್ರಕರಣದಲ್ಲಿ ನೀಡಿದ ತೀರ್ಪನ್ನು ಆಧರಿಸಿದ್ದರು. ಕಲ್ಕತ್ತ ಉಚ್ಚನ್ಯಾಯಾಲಯ ಈ ಪ್ರಕರಣದಲ್ಲಿ ಹೀಗೆ ಅಭಿಪ್ರಾಯ ಪಟ್ಟಿತ್ತು.

"ಸ್ತ್ರೀ ವಾರಸುದಾರಳ ಇಚ್ಛೆಯ ಮೇರೆಗೆ ಮತ್ತು ಪುರುಷವಾರಸುದಾರನ ಇಚ್ಛೆಗೆ ವಿರುದ್ಧವಾಗಿ ವಾಸದ ಮನೆಯನ್ನು ಭಾಗಮಾಡಲು ಶಾಸಕಾಂಗ ಒಪ್ಪುವುದಿಲ್ಲವೆಂಬುದು ಈ ಪ್ರಕರಣದಿಂದ ಸ್ಪಷ್ಟವಾಗುತ್ತದೆ. ೨೩ನೇ ಪ್ರಕರಣದ ಮೂಲಕ ವಿಧಿಸಲಾದ ಈ ನಿರ್ಬಂಧ ಸ್ತ್ರೀವಾರಸುದಾರರ ಇಚ್ಛೆಯ ಮೇರೆಗೆ ಕುಟುಂಬದ ವಾಸದ ಮನೆ ಛಿದ್ರವಾಗುವುದನ್ನು ಅಥವಾ ಭಾಗವಾಗುವುದನ್ನು ಮತ್ತು ಆ ಮೂಲಕ ಪುರುಷವಾರಸುದಾರರಿಗೆ ಉಂಟಾಗುವ ತೊಂದರೆ ಹಾಗೂ ಕಷ್ಟಗಳನ್ನು ತಪ್ಪಿಸುತ್ತದೆ. ಸ್ತ್ರೀವಾರಸುದಾರರು ಪುರುಷವಾರಸುದಾರರ ಇಚ್ಛೆಗೆ ವಿರುದ್ಧವಾಗಿ ವಾಸದ ಮನೆಯನ್ನು ಭಾಗಮಾಡಲು ಅವರಿಗೆ ಅವಕಾಶ ಕೊಡಬಾರದು ಎಂಬುದು ಶಾಸನ ರಚನಾಕಾರರ ಉದ್ದೇಶ ಎಂಬುದು ೨೩ನೇ ಪ್ರಕರಣದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಪುರುಷವಾರಸುದಾರನು ಒಬ್ಬನೇ ಆದ ಪಕ್ಷದಲ್ಲಿಯೂ ಶಾಸನದ ಉದ್ದೇಶ ಇದೇ ಎಂಬುದು ತಮ್ಮ ಅಭಿಪ್ರಾಯ" ಎಂದು ನ್ಯಾಯಾಧೀಶರು ಅಭಿಪ್ರಾಯಪಟ್ಟಿದ್ದಾರೆ.

ಅಧೀನ ಅಪೀಲು ನ್ಯಾಯಾಲಯ ಈ ತೀರ್ಪನ್ನು ವಿಪರ್ಯಯಗೊಳಿಸಿ ಸ್ತ್ರೀವಾರಸುದಾರಳ ಕೋರಿಕೆಯನ್ನು ಎತ್ತಿಹಿಡಿದಿತ್ತು. ಇದಕ್ಕೆ ಅಪೀಲು ನ್ಯಾಯಾಲಯ ಅವಲಂಬಿಸಿದ್ದುದು ಒರಿಸ್ಸಾ ಉಚ್ಚನ್ಯಾಯಾಲಯ ಹೇಮಲತಾದೇವಿ-ವಿ-ಉಮಾಶಂಕರಿ(ಎಐಆರ್ ೧೯೭೫ ಒರಿಸ್ಸಾ ೨೦೮) ಪ್ರಕರಣದಲ್ಲಿ ನೀಡಿದ್ದ ತೀರ್ಪನ್ನು. ಈ ನ್ಯಾಯಾಲಯ ಒಬ್ಬರಿಗಿಂತ ಹೆಚ್ಚು ಪುರುಷವಾರಸುದಾರರಿದ್ದಾಗ ಯಾರಾದರೊಬ್ಬರು ಭಾಗಮಾಡುವಂತೆ ಕೇಳುವ ಸಾಧ್ಯತೆ ಇರುತ್ತದೆ. ಆದರೆ ಏಕೈಕ ಪುರುಷ ವಾರಸುದಾರನಿದ್ದಾಗ ಆ ಸಂಭವ ಇರುವುದೇ

ಇಲ್ಲ. ಆದ್ದರಿಂದ ಪುರುಷವಾರಸುದಾರ ಒಬ್ಬನೇ ಆದಲ್ಲಿ ಇತರ ಸ್ತ್ರೀವಾರಸುದಾರರು ವಾಸದ ಮನೆಯಲ್ಲಿ ಭಾಗಕೇಳಬಹುದು. ೨೩ನೇ ಪ್ರಕರಣ ಅವರಿಗೆ ಪ್ರತಿಬಂಧಕವಾಗುವುದಿಲ್ಲ ಎಂದು ಅಭಿಪ್ರಾಯಪಟ್ಟಿದೆ.

ಆದರೆ ಮದರಾಸು ಉಚ್ಚನ್ಯಾಯಾಲಯ ಜನಾಬಾಯಿ -ವಿ- ಟಿಎಎಸ್ ಪಳನಿ(ಎಐಆರ್ ೧೯೮೧ ಮದ್ರಾಸು ೬೨) ಪ್ರಕರಣದಲ್ಲಿ ಮೇಲಿನ ಒರಿಸ್ಸಾ ಉಚ್ಚನ್ಯಾಯಾಲಯದ ತೀರ್ಪಿನಿಂದ ಭಿನ್ನವಾಗಿ, ಕಲ್ಕತ್ತ ಉಚ್ಚನ್ಯಾಯಾಲಯದ ಈ ಬಗೆಗಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಈ ನ್ಯಾಯಾಲಯ ಕಲ್ಕತ್ತ ಉಚ್ಚನ್ಯಾಯಾಲಯದ ಅಭಿಪ್ರಾಯವನ್ನು ಒಪ್ಪಿ "ವಾಸದ ಮನೆಯಲ್ಲಿ ಭಾಗ ಕೇಳಲು ಅಸಮರ್ಥರಾಗುವ ಕಾರಣಕ್ಕಾಗಿ ಸ್ತ್ರೀವಾರಸುದಾರರಿಗೆ ಉಂಟಾಗುವ ಕಷ್ಟ ಏಕೈಕ ಪುರುಷವಾರಸುದಾರನೆಂಬ ಕಾರಣಕ್ಕೆ ಉಂಟಾಗುವ ಅನ್ಯಾಯಕ್ಕಿಂತ ಕಡಿಮೆಯದು" ಎಂದು ಅಭಿಪ್ರಾಯಪಟ್ಟಿದೆ.

ಪ್ರಸ್ತುತ ಪ್ರಕರಣದಲ್ಲಿ ತೀರ್ಪುನೀಡುತ್ತಾ, ಮುಂಬಯಿ ಉಚ್ಚನ್ಯಾಯಾಲಯ, ಕಲ್ಕತ್ತ ಹಾಗೂ ಮದ್ರಾಸು ಉಚ್ಚನ್ಯಾಯಾಲಯಗಳ ಅಭಿಪ್ರಾಯ ಹಾಗೂ ವಾದವನ್ನು ಒಪ್ಪದೆ ಏಕೈಕ ಪುರುಷ ವಾರಸುದಾರನಿದ್ದ ಸಂದರ್ಭದಲ್ಲಿ ೨೩ನೇ ಪ್ರಕರಣ ಅನ್ವಯವಾಗುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ.

"ಸಾಮಾನ್ಯ ಖಂಡಗಳ ಅಧಿನಿಯಮದ ೧೩(೨)ನೇ ಪ್ರಕರಣದಲ್ಲಿ ಏಕವಚನದಲ್ಲಿರುವ ಪದಗಳು ಬಹುವಚನವನ್ನು ಹಾಗೂ ಬಹುವಚನದಲ್ಲಿರುವ ಪದಗಳು ಅವುಗಳ ಏಕವಚನವನ್ನು ಒಳಗೊಳ್ಳುತ್ತದೆ ಎಂದಿದ್ದರೂ ಅದನ್ನು ೨೩ನೇ ಪ್ರಕರಣದಲ್ಲಿ 'ಪುರುಷ ವಾರಸುದಾರರು' ಎಂದಿರುವಲ್ಲಿಗೆ ಅನ್ವಯಿಸಲಾಗದು. ಏಕೆಂದರೆ ೧೩ನೇ ಪ್ರಕರಣ 'ವಿಷಯ ಅಥವಾ ಸಂದರ್ಭದಲ್ಲಿ ವಿರುದ್ಧವಾದುದು ಏನಾದರೂ ಇಲ್ಲದಿದ್ದರೆ ಎಂದೇ ಪ್ರಾರಂಭವಾಗುತ್ತದೆ. ಅಲ್ಲದೆ ೨೩ನೇ ಪ್ರಕರಣದಲ್ಲಿ, "ಪುರುಷವಾರಸುದಾರರು ಅದರಲ್ಲಿನ ತಮ್ಮ ತಮ್ಮ ಭಾಗವನ್ನು ವಿಭಾಗಮಾಡಿಕೊಳ್ಳಲು ನಿರ್ಧರಿಸಿದಲ್ಲಿ" ಎಂದು ಇರುವುದರಿಂದ 'ಪುರುಷ ವಾರಸುದಾರರು' ಎಂಬ ಬಹುವಚನ ಸೂಚಿಸುವ ಪದ 'ಪುರುಷ ವಾರಸುದಾರ' ಎಂಬ ಏಕವಚನದ ಪದವನ್ನು ಒಳಗೊಳ್ಳುವುದಿಲ್ಲ. ಮತ್ತು 'ಶಾಸನದ ಪದವನ್ನು ಬದಲಾಯಿಸಬಾರದು' ಎಂಬುದು ಶಾಸನ ವ್ಯಾಖ್ಯಾನದ ಸಾಮಾನ್ಯ ನಿಯಮ. ಆದ್ದರಿಂದ ಶಾಸನದ ಉದ್ದೇಶವನ್ನು ಅರ್ಥಮಾಡಿಕೊಳ್ಳುವುದು ಮುಖ್ಯ" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮರಣಶಾಸನ ಬರೆಯದೇ ಮೃತನಾಗುವ ಹಿಂದೂ ಪುರುಷನ ಆಸ್ತಿ ಅಧಿನಿಯಮದ ೮ನೇ ಪ್ರಕರಣದ ಮೇರೆಗೆ, ಅನುಸೂಚಿಯ Iನೇ ವರ್ಗದಲ್ಲಿ ನಿರ್ದಿಷ್ಟಪಡಿಸಲಾದ ಅವನ ಬಂಧುಗಳಾದ ವಾರಸುದಾರರಿಗೆ ಪ್ರಾಪ್ತವಾಗುತ್ತದೆ. ಆದರೆ, ೨೩ನೇ ಪ್ರಕರಣ ವಾಸದ ಮನೆಯಲ್ಲಿ ಸ್ತ್ರೀವಾರಸುದಾರರಿಗೆ ಇರುವ ಹಕ್ಕು

ಚಲಾವಣೆಯನ್ನು ಪುರುಷವಾರಸುದಾರರು ಆ ವಾಸದ ಮನೆಯ ಭಾಗ ಮಾಡಿಕೊಳ್ಳಲು ಇಚ್ಛಿಸುವವರೆಗೆ ಮುಂದೂಡುತ್ತದೆ. ಇದು ಅನ್ವಯವಾಗುವುದು ಅವಿಭಕ್ತ ಕುಟುಂಬದ ಪುರುಷವಾರಸುದಾರರು ಕುಟುಂಬದ ವಾಸದ ಮನೆಯಲ್ಲಿ ವಾಸಮಾಡುತ್ತಿರುವ ಸಂದರ್ಭದಲ್ಲಿ ಮಾತ್ರ. ಆದರೆ ಪುರುಷವಾರಸುದಾರ ಒಬ್ಬನೇ ಆದ ಸಂದರ್ಭದಲ್ಲಿ, ಅವನು ಭಾಗಮಾಡಿಕೊಳ್ಳಲು ಇಚ್ಛಿಸದೇ ಹೋದಲ್ಲಿ(ಅಂಥ ಸಂದರ್ಭಗಳೇ ಹೆಚ್ಚು) ಸ್ತ್ರೀವಾರಸುದಾರಳು ವಾಸದ ಮನೆಯಲ್ಲಿ ಭಾಗಪಡೆಯುವ ಹಕ್ಕಿನಿಂದ ಶಾಶ್ವತವಾಗಿ ವಂಚಿತಳಾಗುತ್ತಾಳೆ. ಆದ್ದರಿಂದ, ಏಕೈಕ ಪುರುಷವಾರಸುದಾರನಿದ್ದು, ಸ್ತ್ರೀವಾರಸುದಾರರು ವಾಸದ ಮನೆಯಲ್ಲಿ ತಮ್ಮ ಹಕ್ಕನ್ನು ಚಲಾಯಿಸಿದ ಪಕ್ಷದಲ್ಲಿ ಪುರುಷ ವಾರಸುದಾರನು ತೊಂದರೆಗೆ ಹಾಗೂ ಕಷ್ಟಗಳಿಗೆ ಸಿಲುಕುತ್ತಾನೆ ಎಂಬುದು ಸರಿಯಾದ ವಾದವಲ್ಲ. ಏಕೆಂದರೆ, ಇಬ್ಬರು ಪುರುಷ ವಾರಸುದಾರರಿದ್ದು, ಅವರಿಬ್ಬರೂ ಭಾಗವಾಗಬೇಕೆಂದು ನಿರ್ಧರಿಸಿದಾಗಲೂ ಇದೇ ರೀತಿಯ ತೊಂದರೆ ಹಾಗು ಕಷ್ಟಗಳು ಉಂಟಾಗಬಹುದು. ಆದ್ದರಿಂದ ಈ ಕಾರಣ ಸರಿಯಾದ ಕಾರಣವಾಗಲಾರದು ಆದ್ದರಿಂದ ೨೩ನೇ ಪ್ರಕರಣಕ್ಕೆ ಅದು ಕೊಡುವ ಅರ್ಥಕ್ಕಿಂತ ಹೆಚ್ಚಿನ ಅರ್ಥವನ್ನು ಆರೋಪಿಸುವುದು ಸರಿಯಲ್ಲ ಎಂದೂ ನ್ಯಾಯಧೀಶರು ಅಭಿಪ್ರಾಯಪಟ್ಟರು.

ಸಾಮಾನ್ಯಖಂಡಗಳ ಅಧಿನಿಯಮದ ೧೩(೨)ನೇ ಪ್ರಕರಣವನ್ನು ಅಕ್ಷರಶಃ ಹಿಂದೂ ಉತ್ತರಾಧಿಕಾರದ ಅಧಿನಿಯಮ, ೧೯೫೬ರ ೨೩ನೇ ಪ್ರಕರಣಕ್ಕೆ ಅನ್ವಯಿಸಿದಲ್ಲಿ ಏಕೈಕ ಹಿಂದೂ ಪುರುಷವಾರಸುದಾರನಿರುವ ಮನೆಯ ಹೆಣ್ಣು ಮಕ್ಕಳು ಕುಟುಂಬದ ಮನೆಯಲ್ಲಿ ಪಾಲುಪಡೆಯುವ ಹಕ್ಕಿನಿಂದ ಶಾಶ್ವಾತವಾಗಿ ವಂಚಿತರಾಗುವ ಸಂಭವವಿರುತ್ತದೆ. ಇದು ಸಂವಿಧಾನ ತರಲಿಚ್ಛಿಸುವ ಸ್ತ್ರೀಪುರುಷ ಸಮಾನತೆಯ ತತ್ವಕ್ಕೆ ಎರವಾಗುತ್ತದೆ. ಮೇಲೆ ಮುಂಬಯಿ ಉಚ್ಚನ್ಯಾಯಾಲಯದ ನ್ಯಾಯಾಧೀಶರು ವಿಶ್ಲೇಷಿಸಿದಂತೆ ಸಾಮಾನ್ಯ ಖಂಡಗಳ ಅಧಿನಿಯಮದ ಪ್ರಕರಣವನ್ನೆ ಪ್ರಕರಣಕ್ಕೆ ಅನ್ವಯಿಸದಿದ್ದರೆ, ಸ್ತ್ರೀವಾರಸುದಾರರು ಆಸ್ತಿ ಹಕ್ಕಿನಿಂದ ವಂಚಿತರಾಗುವುದಿಲ್ಲ. ಆದರೆ, ಕಾನೂನನ್ನು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುವಂತೆ ಎರಡೂ ಬಗೆಯಲ್ಲಿ ವ್ಯಾಖ್ಯಾನಿಸುವ ಸಾಧ್ಯತೆ ಉಳಿದುಬಿಡುತ್ತದೆ. ಆದ್ದರಿಂದ ಈ ಬಗೆಯ ಗೊಂದಲಕ್ಕೆ ಎಡೆ ಮಾಡಿಕೊಡದಂತೆ ಕಾನೂನನ್ನು ಪ್ರಾರೂಪಿಸುವುದು ಅಗತ್ಯವಾಗುತ್ತದೆ.

**ಅಡಿಟಿಪ್ಪಣಿ**

೧. (೨೧) ೧೯೦೮ರ ೫ನೇ ಅಧಿನಿಯಮದ ಅನ್ವಯ- ಈ ಅಧಿನಿಯಮದಲ್ಲಿರುವ ಇತರ ಉಪಬಂಧಗಳು ಮತ್ತು ಈ ಸಂಬಂಧವಾಗಿ ಉಚ್ಚನ್ಯಾಯಾಲಯವು ಮಾಡಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಈ ಅಧಿನಿಯಮದ ಅಡಿಯಲ್ಲಿನ ಎಲ್ಲ ವ್ಯವಹರಣೆಗಳೂ, ಸಾಧ್ಯವಾದ ಮಟ್ಟಿಗೆ ಸಿವಿಲ್ ಪ್ರಕ್ರಿಯಾ ಸಂಹಿತೆ, ೧೯೦೮(೧೯೦೮ರ ೫)ರಿಂದ ವಿನಿಯಮಿತವಾಗತಕ್ಕದ್ದು."

೨. (೨೮) ಡಿಕ್ರಿ ಮತ್ತು ಆದೇಶಗಳ ಮೇಲೆ ಅಪೀಲುಗಳು- (೧) ಅಧಿನಿಯಮದ ಅಡಿಯಲ್ಲಿನ ಯಾವುದೇ ವ್ಯವಹರಣೆಯಲ್ಲಿ ನ್ಯಾಯಾಲಯವು ಮಾಡಿದ ಎಲ್ಲ ಡಿಕ್ರಿಗಳ ಮೇಲೆ, ನ್ಯಾಯಾಲಯವು ತನ್ನ ಮೂಲ ಸಿವಿಲ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಿ ಮಾಡಿದ ಡಿಕ್ರಿಗಳು ಎಂಬಂತೆ ಅಪೀಲು ಮಾಡಬಹುದಾದಂತವಾಗಿರುತ್ತವೆ..

೩. ಸುಶೀಲಬಾಯಿ-ವಿ-ರಾಮ್ ಚರಣ್, ೧೯೭೬ ಮಹಾರಾಷ್ಟ್ರ ಎಲ್ ಜೆ ೮೨

೪. ಗೋವಿಂದರಾವ್ -ವಿ-ಆನಂದಿಬಾಯಿ, ೧೯೭೭ ಮಹಾರಾಷ್ಟ್ರ ಲಾಜ ೧೪೪

೫. (ಬಿ) 'ಜೀವನಾಂಶ' ಎಂಬುದು

ಅ. ...

ಆ. ಅವಿವಾಹಿತ ಮಗಳ ಸಂದರ್ಭದಲ್ಲಿ, ಅವಳ ವಿವಾಹದ ನ್ಯಾಯಯುತವಾದ ಮತ್ತು ಅದಕ್ಕೆ ಆನುಷಂಗಿಕವಾದ ವೆಚ್ಚಗಳನ್ನು ಒಳಗೊಳ್ಳುತ್ತದೆ.

೬. ೨೭ ಪೋಷಿತನ ಜೀವನಾಂಶದ ಕ್ಲೇಮಿಗಾಗಿ, ಮೃತನ ಉಯಿಲಿನ ಮೂಲಕ, ನ್ಯಾಯಾಲಯದ ಡಿಕ್ರಿಯ ಮೂಲಕ, ಪೋಷಿತ ಮತ್ತು ಸ್ಥಿರಾಸ್ತಿಯ ಅಥವಾ ಅದರ ಭಾಗದ ಮಾಲೀಕನ ನಡುವಿನ ಒಪ್ಪಂದದ ಮೂಲಕ ಅಥವಾ ಅನ್ಯಥಾ ಮೃತನ ಸ್ಥಿರಾಸ್ತಿಯ ಅಥವಾ ಅದರ ಯಾವುದೇ ಒಂದು ಭಾಗದ ಮೇಲೆ ಹೊರೆಯನ್ನು ಸೃಜಿಸಿದ್ದ ಹೊರತು ಜೀವನಾಂಶದ ಅಂಥ ಕ್ಲೇಮು ಅದರ ಮೇಲೆ ಹೊರೆಯಾಗಿರತಕ್ಕದ್ದಲ್ಲ.

೭. ಸಂಜ್ಞೇಯ ಅಪರಾಧಗಳನ್ನು ಮ್ಯಾಜಿಸ್ಟ್ರೇಟನ ಆದೇಶವಿಲ್ಲದೆಯೇ ಪೊಲೀಸರು ತನಿಖೆ ಮಾಡಬಹುದು. ಮತ್ತು ಪೊಲೀಸು ಅಧಿಕಾರಿಯು ಆರೋಪಿಯನ್ನು ವಾರೆಂಟಿಲ್ಲದೆ ದಸ್ತಗಿರಿ ಮಾಡಬಹುದು. ಯಾವ ಅಪರಾಧಗಳು ಸಂಜ್ಞೇಯ ಅಪರಾಧಗಳು ಎಂಬ ಪಟ್ಟಿಯನ್ನು ದಂಡ ಪ್ರಕ್ರಿಯಾ ಸಂಹಿತೆಯ ಮೊದಲನೇ ಅನುಸೂಚಿಯಲ್ಲಿ ಕೊಡಲಾಗಿದೆ.

೮. ವರದಕ್ಷಿಣೆ ನಿಷೇಧ ಅಧಿನಿಯಮದ ೪ನೇ ಪ್ರಕರಣ ವರದಕ್ಷಿಣೆ ಪಡೆಯುವುದನ್ನು ದಂಡನೀಯ ಅಪರಾಧವನ್ನಾಗಿಸುತ್ತದೆ.

೯. ಭಾರತ ದಂಡಸಂಹಿತೆಯ ೩೦೬ನೇ ಪ್ರಕರಣ ಆತ್ಮಹತ್ಯೆಗೆ ದುಷ್ಪ್ರೇರಣೆ ನೀಡುವುದನ್ನು ಅಪರಾಧವನ್ನಾಗಿಸುತ್ತದೆ.

೧೦. ದಂಡಪ್ರಕ್ರಿಯಾ ಸಂಹಿತೆಯ ೪೮೨ನೇ ಪ್ರಕರಣ ಯಾವುದೇ ನ್ಯಾಯಾಲಯದ ಕ್ರಮದ ದುರುಪಯೋಗವನ್ನು ಪಡೆಯಲು ಅಥವಾ ಅನ್ಯರ್ಥಾ ನ್ಯಾಯೋದ್ದೇಶವನ್ನು ಈಡೇರಿಸಲು ಅವಶ್ಯಕವಾಗಬಹುದಾದ ಆದೇಶಗಳನ್ನು ಮಾಡಲು ಉಚ್ಚನ್ಯಾಯಾಲಯಕ್ಕೆ ಅಬಾಧಿತ ಅಧಿಕಾರ ನೀಡುತ್ತದೆ.

೧೧. ಹಿಂದೂ ಮಹಿಳೆಯ ಮರಣಶಾಸನ ರಹಿತ ಆಸ್ತಿಗೆ, ಅವಳ ಮರಣಾನಂತರ, ಅವಳ ಸ್ವಂತ ಮಗ ಜೀವಂತವಿರುವಾಗಲೇ ಮಲಮಗನಿಗೂ ಆಸ್ತಿಯಲ್ಲಿ ಹಕ್ಕಿದೆ ಎಂಬ ಪಂಜಾಬ್ ಮತ್ತು ಹರ್ಯಾಣ ಉಚ್ಚನ್ಯಾಯಾಲಯದ ತೀರ್ಪಿನ ವಿರುದ್ಧ ಸರ್ವೋಚ್ಚನ್ಯಾಯಾಲಯದಲ್ಲಿ ಸಲ್ಲಿಸಿದ ಮೇಲ್ಮನವಿ.

೧೨. ಇಂಥದೇ ಒಂದು ಪ್ರಕರಣದಲ್ಲಿ ಅಲಹಾಬಾದ್ ಉಚ್ಚನ್ಯಾಯಾಲಯ ನೀಡಿರುವ ತೀರ್ಪು ಹಾಗೂ ಅದಕ್ಕೆ ನೀಡಿರುವ ಕಾರಣಗಳನ್ನು ಒಪ್ಪುವುದಿಲ್ಲವೆಂದು ಸರ್ವೋಚ್ಚನ್ಯಾಯಾಲಯ ಅಭಿಪ್ರಾಯಪಟ್ಟಿತು.

# ಉಪಸಂಹಾರ

## ಮಹಿಳಾ ವಾದಗಳು ಮತ್ತು ಅವುಗಳ ಕಾಳಜಿ

ಸಮಾಜದಲ್ಲಿ ಇಂದಿಗೂ ಮಹಿಳೆಗೆ ಇರುವ ಅಧೀನ ಸ್ಥಾನಮಾನಕ್ಕೆ ಸಮಾನತೆಯನ್ನು ತಂದುಕೊಡಬೇಕೆಂದು ನಿರೀಕ್ಷಿಸಲಾಗುವ ಕಾನೂನುಗಳಲ್ಲಿ ಅಂತರ್ಗತವಾಗಿರುವ ತಾರತಮ್ಯಕ್ಕೆ, ಕಾನೂನುಗಳ ನಿಗದಿತ ಚೌಕಟ್ಟನ್ನು ಮೀರಿ ವಾಸ್ತವಿಕ ಸಮಾನತೆಯನ್ನು ನೀಡಬೇಕೆಂದು ಆಶಿಸುವ ತೀರ್ಪುಗಳ ವೈಫಲ್ಯಕ್ಕೆ ಮೂಲ ಕಾರಣ ಸಾಮಾಜಿಕ ಸಂರಚನೆಯಲ್ಲಿ ಸೇರಿ ಹೋಗಿರುವ ಪುರುಷ ಪ್ರಧಾನ ಚಿಂತನೆ ಹಾಗೂ ನೆಲೆಗೊಂಡಿರುವ ಪಿತೃಪ್ರಧಾನ ಕುಟುಂಬ ವ್ಯವಸ್ಥೆ.

ಹಿಂಸೆ(ಬಲ ಅಥವಾ ಪ್ರಾಧಾನ್ಯತೆ), ಉತ್ಪಾದನೆ ಹಾಗೂ ಶೋಷಣೆ ಮತ್ತು ಲೈಂಗಿಕತೆ ಇವು ಮೂರೂ ಸಾಮಾಜಿಕ ಸಂರಚನೆಗೆ ಕಾರಣವಾಗುವ ಹಾಗೂ ಸಾಮಾಜಿಕ-ಚಾರಿತ್ರಿಕ ಬದಲಾವಣೆಗಳನ್ನುಂಟು ಮಾಡುವ ಮೂಲಭೂತ ಸಾಮಾಜಿಕ ಮುಖ್ಯ ಶಕ್ತಿಗಳಾದರೆ, ಅದರ ವೈಶಿಷ್ಟ್ಯತೆ ಹಾಗೂ ಸಾಂಸ್ಕೃತಿಕ ಸಂಪ್ರದಾಯಗಳು ಸಮಾಜದ ಸಾಮಾಜಿಕ ಪ್ರಜ್ಞೆ ವ್ಯಕ್ತಗೊಳ್ಳುವ ವಾಹಕಗಳಾಗುತ್ತವೆ. ೧೯೬೦ರ ಕೊನೆಯ ಭಾಗದಲ್ಲಿ ಆಧುನಿಕ ಬಂಡವಾಳಶಾಹೀ ಸಮಾಜಗಳಲ್ಲಿ ತಲೆಯೆತ್ತಿದ ಹೊಸ "ಮಹಿಳಾ ವಿಮೋಚನಾ ಚಳವಳಿ"ಗಳೊಂದಿಗೆ ಅವುಗಳ ನಿರ್ವಚನಾ ಸಿದ್ಧಾಂತಗಳೂ ವಿಭಿನ್ನ ನೆಲೆಗಳಲ್ಲಿ ನಿರ್ದಿಷ್ಟ ಸಾಮಾಜಿಕ ಸಂರಚನೆಯ ಹಾಗೂ ಶೋಷಣೆಯ ಕಾರಣಗಳ ಅನ್ವೇಷಣೆಯಲ್ಲಿ ತೊಡಗಿದವು. ಸಾಂಪ್ರದಾಯಿಕ (ಮಹಿಳಾವಾದಿ) ಮಾರ್ಕ್ಸ್ ಸಿದ್ಧಾಂತ ಮಹಿಳಾ ವಿಮೋಚನೆಯ ಹೋರಾಟ ಎಂದರೆ ಪುರುಷರ ವಿರುದ್ಧ ಮಹಿಳೆಯರು ನಡೆಸುವ ಹೋರಾಟವಲ್ಲ, ಅದು ಇಡೀ ಶೋಷಣೆಯ ವ್ಯವಸ್ಥೆಯ ವಿರುದ್ಧ ಮಹಿಳೆಯರು ನಡೆಸುವ ಹೋರಾಟ ಎಂಬುದನ್ನು ಒತ್ತಿಹೇಳಿತು.

ವೈಚಾರಿಕ ಮಹಿಳಾವಾದ ಸಿದ್ಧಾಂತದಂತೆ - ಸಾಮಾಜಿಕ ಶೋಷಣೆಯ ಮೊದಲ ಕಾರಣ ಪಿತೃಪ್ರಧಾನ ಕುಟುಂಬ ವ್ಯವಸ್ಥೆ. ಹಿಂಸೆ ಹಾಗೂ ದಬ್ಬಾಳಿಕೆ. ಅದರಲ್ಲಿ ಮುಖ್ಯ ಪಾತ್ರವಹಿಸುತ್ತದೆ ಎಂಬುದನ್ನು ಒತ್ತಿಹೇಳಿತು.

ಏಂಗಲ್ಸ್‌ನ 'ಆರಿಜಿನ್ ಆಫ್ ದ ಫ್ಯಾಮಿಲಿ, ಪ್ರೈವೇಟ್ ಪ್ರಾಪರ್ಟಿ ಅಂಡ್ ದ ಸ್ಟೇಟ್' ಪುಸ್ತಕ 'ಮಹಿಳಾ ಸಮಸ್ಯೆ'ಗಳ ಬಗೆಗಿನ, ವೈಚಾರಿಕ ಪುಸ್ತಕವೆಂದು ಪ್ರಪಂಚದಾದ್ಯಂತ ಮನ್ನಣೆ ಪಡೆದಿದೆ. ಇಲ್ಲಿ

ಇವನು ಹೇಳುವ ಅನೇಕ ಅಂಶಗಳು ಸರಿಯಿಲ್ಲವೆಂದು ಆನಂತರದಲ್ಲಿ ಸಾಬೀತಾಗಿದ್ದರೂ, ಸದ್ಯದಲ್ಲಿ ಲಭ್ಯವಿರುವ ಆಧುನಿಕ ಮಾನವಶಾಸ್ತ್ರ ಸಿದ್ಧಾಂತವಾಗಿದೆ.

ಏಂಗಲ್ಸ್, ಕೃಷಿಯ ಪರಿಕಲ್ಪನೆ ಬರುವುದಕ್ಕೆ ಮುಂಚಿನ ಸಮಾಜಗಳಲ್ಲಿ ಸ್ತ್ರೀ ಪುರುಷರ ನಡುವೆ ಮೂಲಭೂತ ಸಮಾನತೆ ಇತ್ತು ಎಂಬುದನ್ನು ಒತ್ತಿ ಹೇಳುತ್ತಾನೆ. ಸ್ತ್ರೀ ಪುರುಷರ ನಡುವೆ ಶ್ರಮ ವಿಭಜನೆ ಇದ್ದರೂ, ಪುರುಷರು ಬೇಟೆಗಾರರಾಗಿ, ಕೃಷಿಕರಾಗಿ ಮತ್ತು ಜಾನುವಾರು ಮೇಯಿಸುವವರಾಗಿದ್ದು, 'ಉತ್ಪಾದನಾ' ಕಾರ್ಯದಲ್ಲಿ ತೊಡಗಿದ್ದರು. ಮಹಿಳೆಯರು ಮನೆಯಲ್ಲಿ ಪ್ರಜನನ ಕಾರ್ಯದಲ್ಲಿ ತೊಡಗಿದವರಾಗಿದ್ದರು. ಉತ್ಪಾದನೆ ಕಡಿಮೆಯಿದ್ದು, ಪ್ರಜನನ ಕಾರ್ಯ ಪ್ರಾಮುಖ್ಯತೆಯನ್ನು ಪಡೆದದ್ದರಿಂದ ಮಹಿಳೆಯ ಸ್ಥಾನಮಾನ ಉನ್ನತವಾದುದಾಗಿತ್ತು ಮತ್ತು ಮಗುವಿನ ತಂದೆ ಯಾರೆಂಬುದು ಸಾಮಾನ್ಯವಾಗಿ ಗೊತ್ತಿರುತ್ತಿರಲಿಲ್ಲವಾದ್ದರಿಂದ ತಾಯಿಯ ಹಕ್ಕು ಚಾಲ್ತಿಯಲ್ಲಿರುತ್ತಿತ್ತು. ಇದರಿಂದ ಸಹಜವಾಗಿ ಮಹಿಳೆಗೆ ಕುಟುಂಬದಲ್ಲಿ ಪ್ರಾಧಾನ್ಯತೆಯಿತ್ತು. ಕೃಷಿ ಮತ್ತು ಸಾಕಣೆ ಅಭಿವೃದ್ಧಿ ಹೊಂದಿದಂತೆ ಉತ್ಪಾದನೆ ಹೆಚ್ಚಿತು, ಪುರುಷರು ಈ ಉತ್ಪಾದನೆಯ ಹಾಗೂ ಉತ್ಪಾದನೆಯ ಸಾಧನಗಳ ಮೇಲೆ ನಿಯಂತ್ರಣ ಹೊಂದಿದ್ದರು. ಇದರಿಂದಾಗಿ ಕುಟುಂಬದ ಮಹಿಳೆಯರ ಮೇಲೂ ನಿಯಂತ್ರಣ ಸಾಧಿಸಿದರು. ಇದರೊಂದಿಗೆ ಅವರೊಡನೆ ಸ್ಪರ್ಧಿಸುವ ವರ್ಗವೂ ತಲೆ ಎತ್ತಿತು. (ಎಂದರೆ ಉತ್ಪಾದನಾ ಸಾಧನಗಳ ಒಡೆತನ ಪಡೆದ ವರ್ಗ ಹಾಗೂ ಅಂಥ ಒಡೆತನದಿಂದ ವಂಚಿತವಾದ ವರ್ಗ) ಇದನ್ನು ಹತ್ತಿಕ್ಕಲು 'ರಾಜ್ಯ'ದ ಪರಿಕಲ್ಪನೆ ಅಭಿವೃದ್ಧಿಗೊಂಡಿತು. ಹೀಗೆ ವರ್ಗಗಳು, ಪಿತೃಪ್ರಧಾನ ಕುಟುಂಬ ಹಾಗೂ ರಾಜ್ಯಗಳು ಕ್ರಮವಾಗಿ ಒಂದೇ ಪ್ರಕ್ರಿಯೆಯಲ್ಲಿ ಅಸ್ತಿತ್ವಕ್ಕೆ ಬಂದವು. ಪುರುಷರ ದಬ್ಬಾಳಿಕೆ ಆರ್ಥಿಕ ಶೋಷಣೆಯ ಫಲ ಹಾಗೂ ಆರ್ಥಿಕ ಶೋಷಣೆಗೆ ವರ್ಗ ವಿಭಜನೆ ಅಸ್ತಿತ್ವಕ್ಕೆ ಬಂದುದು ಕಾರಣ. ಖಾಸಗಿ ಆಸ್ತಿಯ ಮೇಲೆ ಹೊಂದಿರುವ ನಿಯಂತ್ರಣವನ್ನನುಸರಿಸಿ ಈ ವರ್ಗಗಳು ನಿರ್ಧರಿತವಾಗುತ್ತಿದ್ದವು ಎಂದು ಎಂಗಲ್ಸ್ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಬೆಳೆದು ಬಂದ ಬಗೆಯನ್ನು ಗುರುತಿಸುತ್ತಾನೆ. ಮಹಿಳಾ ಶೋಷಣೆಯ ಬಗ್ಗೆ ದನಿಯೆತ್ತಿದ ಭಾರತ ಹಾಗೂ ಬಹುಪಾಲು ತೃತೀಯ ರಾಷ್ಟ್ರಗಳು ಸಮಾಜ ಬೆಳೆದು ಬಂದ ಹಂತಗಳನ್ನು ಗುರುತಿಸಲು ಎಂಗಲ್ಸ್‌ನ ಚಿಂತನೆಯನ್ನೇ ಆಧರಿಸುತ್ತಾರೆ.

ಭಾರತೀಯ ಸಂದರ್ಭದಲ್ಲಿ ವೈಚಾರಿಕ ಮಹಿಳಾವಾದ ಸಿದ್ಧಾಂತಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಪಾಶ್ಚಾತ್ಯರಲ್ಲಿಯಂತೆ ಇಲ್ಲಿ ಲೈಂಗಿಕತೆಯ ಮುಕ್ತ ಚರ್ಚೆಯನ್ನು ಸಂಪ್ರದಾಯವಾದಿಗಳ ವಿರೋಧಕ್ಕೆ ಹೆದರಿ ತಪ್ಪಿಸಲಾಯಿತು. ಇತ್ತೀಚಿನವರೆಗೂ, ಮಹಿಳೆಯನ್ನು ಪುರುಷರ ದಬ್ಬಾಳಿಕೆ ಹಾಗೂ ದೌರ್ಜನ್ಯಕ್ಕೆ ಒಳಗಾದ ಅಸಹಾಯಕಳಂತೆ ಚಿತ್ರಿಸಲಾಗುತ್ತಿತ್ತೇ ವಿನಃ ಒಟ್ಟಾರೆಯಾಗಿ ಅವಳಿಗಿರುವ ಶಕ್ತಿಯ ಬಗ್ಗೆ ಉಲ್ಲೇಖವಿರುತ್ತಿರಲಿಲ್ಲ.

ದೀರ್ಘಕಾಲದವರೆಗೂ ಮಹಿಳೆಯರ ಶೋಷಣೆಯನ್ನು ಕುರಿತ ಚರ್ಚೆ ಪಾಶ್ಚಾತ್ಯರಲ್ಲಿ ಹಾಗೂ ಭಾರತೀಯರಲ್ಲಿ ಈ ಎರಡು ಸಿದ್ಧಾಂತಗಳ ದ್ವಂದ್ವದಲ್ಲಿ ಇಲ್ಲವೇ ಘರ್ಷಣೆಯಲ್ಲಿಯೇ ಸಿಲುಕಿಕೊಂಡಿತ್ತು. ಮಾರ್ಕ್ಸ್‌ವಾದ ಉತ್ಪಾದನೆ ಮತ್ತು ಖಾಸಗಿ ಆಸ್ತಿಗಳ ಪರಿಕಲ್ಪನೆಗಳಿಗೆ ಒತ್ತುಕೊಟ್ಟರೆ, ವಿಚಾರವಾದಿ ಮಹಿಳಾವಾದದ ಸಿದ್ಧಾಂತ ಲೈಂಗಿಕತೆ ಮತ್ತು ಅದರಲ್ಲಿ ಅಂತರ್ಗತವಾಗಿರುವ ಹಿಂಸೆಯ ಪರಿಕಲ್ಪನೆಗೆ ಒತ್ತುಕೊಟ್ಟಿತು. 'ಸಮಾಜವಾದೀ ಮಹಿಳಾವಾದ' ಈ ಎರಡೂ ಪರಿಕಲ್ಪನೆಗಳ ನಡುವೆ ಇರುವ ದ್ವಂದ್ವವನ್ನು ಎರಡನ್ನೂ ಒಳಗೊಳ್ಳುವುದರ ಮೂಲಕ ನಿವಾರಿಸಲು ಯತ್ನಿಸಿತು. ಎಂದರೆ ಇದರ ಪ್ರತಿಪಾದಕರು ವರ್ಗ ಮತ್ತು ಲಿಂಗವ್ಯವಸ್ಥೆ(gender) ಅಥವಾ "ಬಂಡವಾಳಶಾಹಿತ್ವ" ಮತ್ತು "ಪಿತೃಪ್ರಧಾನತೆ"ಗಳನ್ನು ಸೈದ್ಧಾಂತಿಕವಾಗಿ ಒಟ್ಟುಗೂಡಿಸುವ ಪ್ರಯತ್ನದಲ್ಲಿ ಆರ್ಥಿಕ ನೆಲಗಟ್ಟಿನೊಂದಿಗೆ ವರ್ಗ/ಬಂಡವಾಳಶಾಹಿತ್ವ ಮತ್ತು ಸಾಂಸ್ಕೃತಿಕ-ಭಾವನಾತ್ಮಕತೆಯ ಮೇಲ್‌ಕಟ್ಟಡದೊಂದಿಗೆ ಲಿಂಗವ್ಯವಸ್ಥೆ/ಪಿತೃಪ್ರಧಾನತೆಯ ಅಂತರ್ಗತ ಪೂರ್ವ ಭಾವನೆಗಳನ್ನು ಅಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡರು.[9]

ನಂತರದ ಮಹಿಳಾ ವಾದಗಳು ಹಾಗೂ ಮಹಿಳಾ ವಾದಿಗಳು ಪೂರ್ಣವಾಗಿ ಮೇಲಿನ ವಾದಗಳನ್ನು ಒಪ್ಪಿಕೊಳ್ಳದಿದ್ದರೂ ಪೂರ್ಣವಾಗಿ ನಿರಾಕರಿಸಲೂ ಇಲ್ಲ. ಸೈದ್ಧಾಂತಿಕವಾಗಿ ಈ ವಾದಗಳು ಮಹಿಳೆಯ ಮೇಲಿನ ದೌರ್ಜನ್ಯಕ್ಕೆ ಮಹಿಳೆಯ ಇಂದಿನ ಸ್ಥಾನಮಾನಕ್ಕೆ ಕಾರಣವಾಗುವ ಹಿನ್ನೆಲೆಯನ್ನು ಮಂಡಿಸುವಲ್ಲಿ ಭಿನ್ನವಾದರೂ ಈ ಎಲ್ಲ ವಾದಗಳ ಕಾಳಜಿಯೂ ಮಹಿಳೆಯ ಮೇಲೆ ನಡೆಯುತ್ತಿದ್ದ ಹಿಂಸೆ ಹಾಗೂ ದೌರ್ಜನ್ಯಗಳೇ ಆಗಿದ್ದವು ಎಂಬುದು ಮುಖ್ಯವಾಗುತ್ತದೆ.

## ಕಾನೂನುಗಳಲ್ಲಿ ಅಂತರ್ಗತವಾಗಿರುವ ತಾರತಮ್ಯಗಳು

ಮಹಿಳಾವಾದಿಗಳು ಪ್ರತಿಪಾದಿಸುವಂತೆ ಚಾರಿತ್ರಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರಣಗಳಿಗಾಗಿ ಸ್ತ್ರೀಪುರುಷರ ನಡುವೆ ಬೆಳೆದು ಬಂದ ಈ ತಾರತಮ್ಯವನ್ನು ಅಲಿಖಿತ ಕಾನೂನಿನಂತೆ ಪುರುಷ ಸಮುದಾಯದಿಂದ ಸ್ತ್ರೀ ಸಮುದಾಯದ ಮೇಲೆ ಹೇರಲಾಯಿತು. ಈ ತಾರತಮ್ಯ ಪ್ರತ್ಯಕ್ಷವಾದುದಾಗಿರಬಹುದು, ಪರೋಕ್ಷವಾದುದಾಗಿರಬಹುದು. ಬುದ್ಧಿಪೂರ್ವಕವಾಗಿ ಅಥವಾ ಅರಿವಿಲ್ಲದೇ ಉಂಟಾದುದಾಗಿರಬಹುದು. ಇಂಥ ತಾರತಮ್ಯಕ್ಕೆ ಮೊದಲಿನಿಂದಲೂ ಒಳಗಾಗುತ್ತ ಬಂದವಳು ಮಹಿಳೆಯೇ. ತಾರತಮ್ಯಕ್ಕೆ ಒಳಗಾದವರಿಗೆ ಉಂಟಾಗುವ 'ತೊಂದರೆ'ಯಿಂದಷ್ಟೇ ಅಲ್ಲದೆ ಅದರಿಂದಾಗಿ ಎದುರಿಸಬೇಕಾಗಿ ಬರುವ ಅಪಮಾನದಿಂದಾಗಿ ಅದು ಕೇವಲ 'ತಪ್ಪು' ಎನಿಸಿಕೊಳ್ಳುವುದಿಲ್ಲ, ಒಂದು ಬಗೆಯ 'ಅನ್ಯಾಯ' ಎನಿಸಿಕೊಳ್ಳುತ್ತದೆ. ಆದ್ದರಿಂದ ತಾರತಮ್ಯದ ಬಗೆಗಿನ ಅಧ್ಯಯನ 'ನ್ಯಾಯ'ದ ಬಗ್ಗೆ ಮಾಡುವ ಅಧ್ಯಯನದ ಅವಿಭಾಜ್ಯ ಅಂಗವಾಗುತ್ತದೆ.

ನಮ್ಮ ವಿವಾಹ ಕಾನೂನುಗಳಾಗಲೀ, ಆಸ್ತಿ ಹಕ್ಕುಗಳ ಬಗೆಗಿನ ಕಾನೂನುಗಳಾಗಲೀ ಸ್ತ್ರೀಪುರುಷ ತಾರತಮ್ಯದಿಂದ ಮುಕ್ತವಾಗಿಲ್ಲ. ಈ ಕಾನೂನುಗಳು ವೈಯಕ್ತಿಕ ಕಾನೂನುಗಳಾಗಿದ್ದು, ಆಯಾ ಧರ್ಮದವರಿಗೆ ವಿಶಿಷ್ಟವಾಗಿದೆ. ವೈಯಕ್ತಿಕ ಕಾನೂನುಗಳಿಗೆ ಅವರವರ ಧರ್ಮದಲ್ಲಿ ಸಾಂಪ್ರದಾಯಿಕವಾಗಿ ಆಚರಣೆಯಲ್ಲಿದ್ದ ಕಾನೂನುಗಳು ಮುಖ್ಯವಾಗಿ ಆಧಾರವಾಗಿರುವುದರಿಂದ, ಧಾರ್ಮಿಕ ಆಚರಣೆಗಳಲ್ಲಿ ಹಾಗೂ ಸಮಾಜದಲ್ಲಿ ಇದ್ದಂಥ ಸ್ತ್ರೀಪುರುಷ ತಾರತಮ್ಯ ಕಾನೂನುಗಳಲ್ಲಿಯೂ ಪ್ರತಿಬಿಂಬಿತವಾದವು. ವರದಕ್ಷಿಣೆ ಹಾಗೂ ಅತ್ಯಾಚಾರಕ್ಕೆ ಸಂಬಂಧಿಸಿದಂತೆ ಜಾರಿಯಲ್ಲಿ ಬಂದ ಕ್ರಿಮಿನಲ್ ಕಾನೂನುಗಳಲ್ಲಿ ಸಮಾಜದ ಚಿಂತನಾ ಕ್ರಮದಲ್ಲಿ ಸೇರಿಹೋಗಿದ್ದ ಪುರುಷ ಪ್ರಧಾನ ಚಿಂತನೆ ಸ್ಥಾನವನ್ನು ಪಡೆಯಿತು. ಸಮಾಜ ಮಹಿಳೆಗೆ ಆರೋಪಿಸಿದ್ದ ವಿಶಿಷ್ಟ ಗುಣಗಳು ಕಾನೂನುಗಳಲ್ಲಿಯೂ ಸ್ಥಾನಪಡೆದದ್ದು ಮಾತ್ರ ವಿಪರ್ಯಾಸ. ವಿಚ್ಛೇದನೆ ಪಡೆದ ನಂತರ ಮಹಿಳೆ ಜೀವನಾಂಶಕ್ಕೆ ಅರ್ಹಳಾಗಬೇಕಾದರೆ ಅವಳು ತನ್ನ ಶೀಲವನ್ನು ಕಾಪಾಡಿಕೊಂಡಿರಬೇಕು. ಇದೊಂದು ಪೂರ್ವಷರತ್ತು. ಹಿಂದು ವಿವಾಹ ಅಧಿನಿಯಮವನ್ನು ಪ್ರಗತಿ ಪರ ಕಾನೂನೆಂದು ಪರಿಗಣಿಸಲಾಗಿದೆ. ಇದಕ್ಕೆ ಮುಖ್ಯಕಾರಣ ಸ್ತ್ರೀಪುರುಷರಿಬ್ಬರನ್ನೂ ಸಮಾನವಾಗಿ ಕಾಣಲಾಗಿದೆ, ಸಮಾನ ಹಕ್ಕುಗಳನ್ನು ನೀಡಲಾಗಿದೆ ಎಂಬುದು. ಆದರೆ ಮಹಿಳೆಗೆ ವಿಧಿಸಿರುವ ಈ ಷರತ್ತು ಪುರುಷನಿಗೆ ಅನ್ವಯಿಸುವುದಿಲ್ಲ.

ಈ ಅಧಿನಿಯಮದ ಅಡಿಯಲ್ಲಿ ಪತಿ ಪತ್ನಿಯನ್ನು ಅಥವಾ ಪತ್ನಿ ಪತಿಯನ್ನು ಕ್ರೌರ್ಯದಿಂದ ನಡೆಸಿಕೊಂಡರೆ ಆ ಕಾರಣದ ಮೇಲೆ ವಿಚ್ಛೇದನೆ ಪಡೆಯಬಹುದಾಗಿದೆ. ಆದರೆ ಅಧಿನಿಯಮದಲ್ಲಿ ಕ್ರೌರ್ಯವನ್ನು ಪರಿಭಾಷಿಸಿಲ್ಲವಾದ ಕಾರಣ ಕ್ರೌರ್ಯದ ಪರಿಭಾಷೆ ನ್ಯಾಯಾಧೀಶರ ವಿವೇಚನೆಯನ್ನು ಅವಲಂಬಿಸುತ್ತದೆ. ಸಂವಿಧಾನದ ಪ್ರಕಾರ ಪ್ರತಿಯೊಬ್ಬ ಪ್ರಜೆಗೂ ಜೀವಿಸುವ ಹಕ್ಕು ಹಾಗೂ ಖಾಸಗೀ ಜೀವನದ ಹಕ್ಕು ಇದ್ದರೂ, ನ್ಯಾಯಾಧೀಶರ ಪುರುಷ ಪ್ರಧಾನ ಚಿಂತನೆಯಿಂದಾಗಿ ಪತ್ನಿಯರ ಕೆಲವು ವರ್ತನೆ ಅಥವಾ ಹಕ್ಕು ಚಲಾವಣೆ ಕ್ರೌರ್ಯವಾಗಿ ತೋರುತ್ತದೆ. ಗಂಡನ ವರ್ತನೆಯಿಂದ ರೋಸಿಹೋದ ಪತ್ನಿ ವಿವಾಹ ಬಂಧನದಲ್ಲಿ ಯಾವ ಅರ್ಥವನ್ನು ಕಾಣದೆ ಮಾಂಗಲ್ಯವನ್ನು ಕಿತ್ತು ಬಿಸಾಡಿದರೆ, ಸಾಂಪ್ರದಾಯಿಕ ಪುರುಷ ಪ್ರಧಾನ ಚಿಂತನೆಯ ನ್ಯಾಯಾಧೀಶರಿಗೆ ಹಿಂದೂ ಮೌಲ್ಯಗಳಲ್ಲಿ ನಂಬಿಕೆಯಿರುವ ಗಂಡನ ಬಗ್ಗೆ ತೋರಿದ ಈ ವರ್ತನೆ ಕ್ರೌರ್ಯವಾಗಿ ಕಾಣುತ್ತದೆ.

ಹಿಂದೂ ವಿವಾಹ ಕಾನೂನಿನಲ್ಲಿ ಪತಿ ಅಥವಾ ಪತ್ನಿ ಕಾರಣವಿಲ್ಲದೆ ಪರಸ್ಪರ ದೂರ ಉಳಿದರೆ ಹಾಗೆ ದೂರವುಳಿದ ಪತಿಯನ್ನು ಅಥವಾ ಪತ್ನಿಯನ್ನು ತನ್ನ ದಾಂಪತ್ಯ ಹಕ್ಕುಗಳನ್ನು ನಿರ್ವಹಿಸುವಂತೆ ನಿರ್ದೇಶಿಸುವ ಆದೇಶವನ್ನು ಎಂದರೆ ದಾಂಪತ್ಯ ಹಕ್ಕುಗಳ ಪೂರ್ವಸ್ಥಿತಿ ಸ್ಥಾಪನೆಗಾಗಿ ಆದೇಶವನ್ನು ನ್ಯಾಯಾಲಯದಿಂದ ಪಡೆಯಬಹುದು. ಎಂದರೆ ನ್ಯಾಯಾಲಯ, ಕಾರಣವಿಲ್ಲದೆ ದೂರವುಳಿದ ಪತಿ

ಅಥವಾ ಪತ್ನಿಗೆ ತನ್ನ ಪತ್ನಿ ಅಥವಾ ಪತಿಯೊಂದಿಗೆ ಒಟ್ಟಿಗೆ ಬಾಳುವಂತೆ ಆದೇಶಿಸುತ್ತದೆ. ಒಟ್ಟಿಗೆ ಬಾಳುವುದು ಎಂದ ಕೂಡಲೇ ವೈವಾಹಿಕ ಅತ್ಯಾಚಾರ ಭಾರತೀಯ ಸಂದರ್ಭದಲ್ಲಿ ಅಪರಾಧವೆನಿಸುವುದಿಲ್ಲ ವಾದ್ದರಿಂದ, ಪತಿಗೆ ಲೈಂಗಿಕ ಸಂಭೋಗ ನಡೆಸು ಹಕ್ಕು ನೀಡಿದಂತೆ. ಆದರೆ ಪತಿಗೆ ದೊರೆಯುವ ಈ ಹಕ್ಕು ಪತ್ನಿಗೆ ಇರುವ ಸಂವಿಧಾನ ದತ್ತವಾದ ಖಾಸಗಿ ಜೀವನಕ್ಕಿರುವ ಹಕ್ಕನ್ನು ಉಲ್ಲಂಘಿಸುತ್ತದೆ. ಎಂದರೆ ಸಂವಿಧಾನದತ್ತ ಹಕ್ಕು ಮತ್ತು ವೈಯಕ್ತಿಕ ಕಾನೂನಿನ ಅಡಿಯಲ್ಲಿ ಇರುವ ಹಕ್ಕುಗಳ ನಡುವೆ ಸಂಘರ್ಷ ಉಂಟಾಗುತ್ತದೆ. ಇಂಥ ಒಂದು ಪ್ರಕರಣ[೨]ದಲ್ಲಿ ದೆಹಲಿ ನ್ಯಾಯಾಲಯ ವೈಯಕ್ತಿಕ ಕಾನೂನಿನ ಅಡಿಯಲ್ಲಿ ದೊರೆಯುವ ಹಕ್ಕನ್ನೇ ಎತ್ತಿ ಹಿಡಿದಿದೆ. ಕುಟುಂಬದ ವ್ಯವಹಾರಗಳಲ್ಲಿ ಸಂವಿಧಾನ ಹಸ್ತಕ್ಷೇಪ ಮಾಡುವುದು ಸೂಕ್ತವಲ್ಲ. ಹಾಗೆ ಮಾಡಿದರೆ ಪಿಂಗಾಣಿ ಸಾಮಾನುಗಳಿರುವ ಅಂಗಡಿಯೊಳಗೆ ಗೂಳಿಯನ್ನು ನುಗ್ಗಿಸಿದಂತೆ. ಅದು ವಿವಾಹ ಸಂಸ್ಥೆಯನ್ನು ಹಾಗೂ ಅದರ ಮೌಲ್ಯಗಳನ್ನು ನಿರ್ದಯೆಯಿಂದ ನಾಶಮಾಡಿಬಿಡುತ್ತದೆ. ಮನೆ ಹಾಗೂ ವಿವಾಹ ಜೀವನದಂಥ ಖಾಸಗಿ ಕ್ಷೇತ್ರದಲ್ಲಿ ಸಂವಿಧಾನದ ೨೧ನೇ ಅನುಚ್ಛೇದ[೩]ಕ್ಕಾಗಲೀ ಅಥವಾ ೧೪ನೇ ಅನುಚ್ಛೇದ[೪]ಕ್ಕಾಗಲೀ ಯಾವುದೇ ಸ್ಥಾನವಿಲ್ಲ. ಆತ್ಮೀಯವಾದ ಹಾಗೂ ಸೂಕ್ಷ್ಮವಾದ ಕ್ಷೇತ್ರದಲ್ಲಿ ಸಂವಿಧಾನದ ನಿರ್ಭಾವ ತತ್ತ್ವಗಳು ವಿವಾಹ ಬಂಧನವನ್ನು ದುರ್ಬಲಗೊಳಿಸುತ್ತದೆ ಎಂದು ಹರವಿಂದರ್ ಕೌರ್ -ವಿ-ಹರಮಂದರ್ ಸಿಂಗ್ ಪ್ರಕರಣದಲ್ಲಿ ನ್ಯಾಯಾಧೀಶ ರೋಹಟಗಿ ಅವರು ವ್ಯಕ್ತಪಡಿಸದ ಅಭಿಪ್ರಾಯವನ್ನೇ ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದಿದೆ.[೫] ಹಿಂದೂ ವಿವಾಹ ಅಧಿನಿಯಮದಲ್ಲಿರುವ ಈ ಉಪಬಂಧ ವ್ಯಕ್ತಿಯ ವೈಯಕ್ತಿಕ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುವುದರಿಂದ ಈ ಉಪಬಂಧವನ್ನು ತೆಗೆದುಹಾಕಬೇಕೆಂಬ ಬೇಡಿಕೆಯನ್ನು ಮಹಿಳಾವಾದಗಳು ಮಂಡಿಸಿದೆ. ೧೯೭೪ರಷ್ಟು ಹಿಂದೆಯೇ ಮಹಿಳೆಯ ಸ್ಥಾನಮಾನ ಅಧ್ಯಯನ ಸಮಿತಿ ಸಲ್ಲಿಸಿದ ತನ್ನ "ಸಮಾನತೆಯತ್ತ" ವರದಿಯಲ್ಲಿಯೂ ಈ ಉಪಬಂಧವನ್ನು ತೆಗೆದು ಹಾಕಲೆಂದು ಶಿಫಾರಸ್ಸು ಮಾಡಿದೆ. ಆದರೆ ಇಲ್ಲಿಯವರೆಗೆ ಈ ಬಗ್ಗೆ ಯಾವುದೇ ಕ್ರಮಕೈಗೊಂಡಿಲ್ಲ.

೧೯೫೬ರಷ್ಟು ಹಿಂದೆಯೇ ಜಾರಿಗೊಂಡ ಆಸ್ತಿಹಕ್ಕುಗಳಿಗೆ ಸಂಬಂಧಪಟ್ಟ ಹಿಂದೂ ಉತ್ತರಾಧಿಕಾರ ಅಧಿನಿಯಮ ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಾನ ಹಕ್ಕು ನೀಡುವ ಮೂಲಕ ಮತ್ತು ಮಹಿಳೆಯರಿಗೆ ಆಸ್ತಿಯಲ್ಲಿ ಇದ್ದ ಸೀಮಿತ ಹಕ್ಕುಗಳಿಗೆ(ಕೆಲವು ಅಪವಾದಗಳನ್ನು ಹೊರತುಪಡಿಸಿ) ನಿರುಪಾಧಿಕ ಹಕ್ಕು ನೀಡುವ ಮೂಲಕ ಪ್ರಗತಿ ಪರ ಕಾನೂನು ಎನಿಸಿಕೊಂಡಿತು. ಆದರೆ, ಪರಂಪರಾಗತ ಕಾನೂನಿನಲ್ಲಿ ಪಿತ್ರಾರ್ಜಿತ ಆಸ್ತಿಯ ಹಕ್ಕುಗಳಲ್ಲಿ ಇದ್ದ ಸ್ತ್ರೀಪುರುಷ ಅಸಮಾನತೆಯನ್ನು ಹಾಗೆಯೇ ಉಳಿಸಿಕೊಂಡಿತು. ದೇಶದ ಆರ್ಥಿಕತೆಯ ಬೆನ್ನೆಲುಬು ಕೃಷಿ ಮತ್ತು ಅಸಂಘಟಿತ ವಲಯದಲ್ಲಿನ ಮಹಿಳಾ ಕಾರ್ಮಿಕರಲ್ಲಿ ಅತಿಹೆಚ್ಚಿನ ಸಂಖ್ಯೆಯ ಮಹಿಳೆಯರು ಕೆಲಸಮಾಡುವುದು ಕೃಷಿಕ್ಷೇತ್ರದಲ್ಲಿ. ಆದರೆ

ಮಹಿಳೆಯರನ್ನು ಕೃಷಿ ಭೂಮಿಯ ಒಡೆತನದಿಂದ ವಂಚಿತರನ್ನಾಗಿಸಲಾಗಿದೆ. ಕುಟುಂಬಗಳು ಪ್ರಮುಖವಾಗಿ ಪಿತೃಪ್ರಧಾನ ಕುಟುಂಬಗಳಾಗಿದ್ದುದರಿಂದ ಪುರುಷ ವಾರಸುದಾರರ ಮೂಲಕ ಆಸ್ತಿ ಮುಂದುವರಿಕೆಯಿಂದ ಆಸ್ತಿ ಕುಟುಂಬದಲ್ಲಿಯೇ ಉಳಿಯುತ್ತದೆ ಮತ್ತು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ ಬಲಗೊಳ್ಳುತ್ತದೆ.

ಹಿಂದೂಗಳಲ್ಲಿ ಮರಣಶಾಸನ(ಉಯಿಲು) ಬರೆಯುವ ಮೂಲಕ ಇಡೀ ಸ್ವಯಾರ್ಜಿತ ಆಸ್ತಿಯನ್ನು ವಿಲೇ ಮಾಡುವ ಅವಕಾಶವಿರುವುದರಿಂದ, ಹಿಂದೂ ಕುಟುಂಬಗಳು ಮೂಲತಃ ಪಿತೃಪ್ರಧಾನ ಕುಟುಂಬ ಗಳಾಗಿರುವುದರಿಂದ ಮತ್ತು ಆಸ್ತಿ ಹಿಂದೂಪುರುಷನ ಹೆಸರಿನಲ್ಲಿರುತ್ತದಾದ್ದರಿಂದ, ಹಿಂದೂ ಪುರುಷ ತನ್ನೆಲ್ಲ ಆಸ್ತಿಯನ್ನು ತನ್ನ ಗಂಡುಮಕ್ಕಳಿಗೆ ಬರೆಯುವ ಮೂಲಕ ಹೆಣ್ಣುಮಕ್ಕಳನ್ನು ಸ್ವಯಾರ್ಜಿತ ಆಸ್ತಿಯಿಂದಲೂ ವಂಚಿತರನ್ನಾಗಿಸಬಹುದು. ಪಿತ್ರಾರ್ಜಿತ ಆಸ್ತಿಯಲ್ಲಿ ಈಗ ಕೆಲವು ರಾಜ್ಯಗಳಲ್ಲಿ ಹೆಣ್ಣು ಮಕ್ಕಳಿಗೂ ಪಾಲಿದೆ. ಅದರಲ್ಲಿ ಕರ್ನಾಟಕ ರಾಜ್ಯವೂ ಒಂದು.

ವಿವಾಹಿತ ಮಹಿಳೆಯ ಕುಟುಂಬದಲ್ಲಿನ ದುಡಿಮೆಯನ್ನು ಇಂದಿಗೂ ಅನುತ್ಪಾದಕ ದುಡಿಮೆ ಎಂದೇ ಪರಿಗಣಿಸಲಾಗುತ್ತದೆ. ಮನೆಗೆಲಸಗಳ ನಿರ್ವಹಣೆ, ಮಕ್ಕಳನ್ನು ಹೆರುವುದು, ಅವುಗಳ ಲಾಲನೆ ಪೋಷಣೆಯ ಸಮಸ್ತ ಕೆಲಸಗಳ ಜವಾಬ್ದಾರಿಯನ್ನು ಹೊತ್ತು ಪುರುಷನ ಉತ್ಪಾದಕ ಕೆಲಸಗಳ ನಿರ್ವಹಣೆಗೆ ನೆರವಾಗುವುದು ಮಹಿಳೆ. ಪತ್ನಿ ದುಡಿಯುವ ಮಹಿಳೆಯಾದರಂತೂ ಉತ್ಪಾದಕ ಹಾಗೂ ಅನುತ್ಪಾದಕ ಕೆಲಸಗಳೆರಡನ್ನೂ ನಿಭಾಯಿಸಬೇಕಾಗುತ್ತದೆ. ಆದರೆ ಯಾವುದೇ ಕಾರಣಕ್ಕಾಗಿ ಮಹಿಳೆ ಗಂಡನಿಂದ ವಿಚ್ಛೇದನೆ ಪಡೆದರೆ ಇಲ್ಲವೇ ಪ್ರತ್ಯೇಕವಾಗಿ ಉಳಿದರೆ, ಅವಳು ಗಂಡನಿಂದ ಜೀವನಾಂಶವನ್ನು ಮಾತ್ರ ಪಡೆಯುತ್ತಾಳೆ. ಅಲ್ಲಿಯವರೆಗೂ ಕುಟುಂಬದ ಆಸ್ತಿಯ ಗಳಿಕೆಗಾಗಿ ಹಾಕಿದ ಅವಳ ಶ್ರಮ ಪರಿಗಣನೆಗೇ ಬರುವುದಿಲ್ಲ. ವಿವಾಹಿತ ಮಹಿಳೆ ತನ್ನ ಗಂಡನ ಆಸ್ತಿಗೆ ಹಕ್ಕುದಾರಳಾಗುವುದು ಅವನ ಮರಣಾನಂತರ ಮಾತ್ರವೇ. ಆದ್ದರಿಂದ, ವಿವಾಹಾನಂತರ ಏನೇ ಆಸ್ತಿ ಗಳಿಸಿದರೂ ಆ ಆಸ್ತಿಯ ಮೇಲೆ, ಮಹಿಳೆ ಉತ್ಪಾದಕ ಕೆಲಸದಲ್ಲಿ ತೊಡಗಿರಲಿ ಅಥವಾ ತೊಡಗಿಲ್ಲದಿರಲಿ, ಒಡೆತನವನ್ನು ಇಬ್ಬರೂ ಹೊಂದಿರಬೇಕು ಮತ್ತು ಅದರ ಮೇಲೆ ಇಬ್ಬರೂ ಸಮಾನ ಹಕ್ಕನ್ನು ಹೊಂದಿರಬೇಕು ಎಂಬ ಬೇಡಿಕೆಯನ್ನು ಮಹಿಳಾವಾದಿಗಳು ಮುಂದಿಡುತ್ತಿದ್ದಾರೆ.

## ಮಹಿಳಾಪರ ಕಾನೂನುಗಳ ಸಾಫಲ್ಯ ವೈಫಲ್ಯಗಳು

ಮಹಿಳೆಯರಿಗೆ ನ್ಯಾಯ ಒದಗಿಸುವಲ್ಲಿ ತೀರ ವಿಫಲವಾಗಿರುವ ಕಾನೂನುಗಳೆಂದರೆ ವರದಕ್ಷಿಣೆ ನಿಷೇಧ ಅಧಿನಿಯಮ ಮತ್ತು ಅತ್ಯಾಚಾರ ಸಂಬಂಧೀ ಕಾನೂನುಗಳು. ಮಹಿಳೆಯರು ಅತ್ಯಧಿಕವಾಗಿ ಶೋಷಣೆಗೆ ಒಳಗಾಗುತ್ತಿರುವುದೂ ಇದಕ್ಕೆ ಸಂಬಂಧಪಟ್ಟಂತೆಯೇ. ಮಹಿಳಾ ಸಂಘಟನೆಗಳು ಹಾಗೂ

ಮಹಿಳಾ ಚಳವಳಿಗಳ ಪ್ರಯತ್ನದಿಂದಾಗಿ ಈ ಕಾನೂನುಗಳಿಗೆ ತಿದ್ದುಪಡಿಗಳಾಗಿದ್ದರೂ ಅಪರಾಧ ನಿರ್ಣಯವಾದ ಸಂಖ್ಯೆಯೇನೂ ಹೆಚ್ಚಾಗಿಲ್ಲ. ಈ ಕಾನೂನುಗಳಾಗಲೀ ಇವಕ್ಕೆ ಆನಂತರ ತಂದತಿದ್ದುಪಡಿಗಳಾಗಲೀ ಅಪರಾಧಿಗಳನ್ನು ಶಿಕ್ಷಿಸುವಲ್ಲಿ ವಿಫಲರಾಗಿರುವುದಕ್ಕೆ ಅನೇಕ ಕಾರಣಗಳುಂಟು.

೧. ಕಾನೂನುಗಳಲ್ಲಿರುವ ಅನೇಕ ಲೋಪದೋಷಗಳು : ಬದಲಾಗುತ್ತಿರುವ ಮಹಿಳೆಯ ಸ್ಥಾನಮಾನವನ್ನು ಗಮನದಲ್ಲಿರಿಸಿಕೊಂಡು, ನಿಜವಾದ ಕಳಕಳಿಯಿಂದ ಅನುಷ್ಠಾನ ಸಮಯದಲ್ಲಿ ಎದುರಾಗಬಹುದಾದ ಸಮಸ್ಯೆಗಳನ್ನು ಮನಗಂಡು ರಚಿಸದಿರುವುದು.

೨. ಸರ್ಕಾರ ಮಹಿಳಾಪರ ಹಾಗೂ ಪ್ರಗತಿಪರ ಎಂದು ತೋರಿಸಿಕೊಳ್ಳಲು ಶಾಸಕಾಂಗ ಮಹಿಳಾ ವಾದಿಗಳ ಬೇಡಿಕೆಗಳನ್ನು ಪರಿಶೀಲಿಸಿ ಕೆಲವನ್ನಾದರೂ ಜಾರಿಗೊಳಿಸಿವೆ. ಆದರೆ ಸರ್ಕಾರದ ಕಾರ್ಯಾಂಗ ಹಾಗೂ ನ್ಯಾಯಾಂಗಗಳು ಈ ಬಗೆಯ ಕಾಳಜಿಯನ್ನು ವ್ಯಕ್ತಪಡಿಸಿಲ್ಲ. ಅಲ್ಲದೆ ಕಾನೂನಿನ ಆಶಯಕ್ಕೆ ಬೆಲೆಕೊಡದೆ ಕಾನೂನಿನ ಅಕ್ಷರಶಃ ವ್ಯಾಖ್ಯಾನಕ್ಕೆ ಜೋತುಬಿದ್ದು ಉದ್ದೇಶವನ್ನೇ ವಿಫಲಗೊಳಿಸಿದ ತೀರ್ಪುಗಳು ಇದಕ್ಕೆ ಸಾಕ್ಷಿ.

೩. ಮಹಿಳಾ ವಾದಿಗಳ ಬೇಡಿಕೆಗಳನ್ನು ಹಾಗೂ ಕಾನೂನು ಆಯೋಗದ ಶಿಫಾರಸುಗಳನ್ನು ಪರಿಪೂರ್ಣವಾಗಿ ಅಳವಡಿಸಿಕೊಳ್ಳದೆ ಭಾಗಶಃ ಅಳವಡಿಸಿಕೊಂಡಿರುವುದು

೪. ತನಿಖಾಧಿಕಾರಿಗಳ ಸಂವೇದನಾ ರಾಹಿತ್ಯತೆ

೫. ಜನಜಾಗೃತಿಯ ಕೊರತೆ.

ಆದರೂ ಮಹಿಳಾ ಚಳವಳಿಗಳು ಈ ತಿದ್ದುಪಡಿಗಳನ್ನು ಯಶಸ್ಸಿನ ಮೊದಲ ಮೆಟ್ಟಿಲು ಎಂದು ಭಾವಿಸಿ ಸ್ವಾಗತಿಸಿದವು. ಏಕೆಂದರೆ ಮಹಿಳೆಯರ ದೌರ್ಜನ್ಯವನ್ನು ಮತ್ತು ಸ್ತ್ರೀಪುರುಷರ ನಡುವಿನ ತಾರತಮ್ಯದಿಂದ ಮತ್ತು ಮಹಿಳೆಯ ಅಧೀನ ಸ್ಥಾನಮಾನದಿಂದ ಉಂಟಾದ ಅಸಮಾನತೆಯನ್ನು ಕಾನೂನಿನ ನೆಲೆಯಲ್ಲಿ ಎದುರಿಸುವುದು ಅನಿವಾರ್ಯವಾಗಿತ್ತು. ಮಹಿಳಾವಾದಿ ಸಂಘಟನೆಗಳ ಚಳವಳಿಗಳ ಫಲವಾಗಿ ಈ ಕಾನೂನುಗಳಿಗೆ ತಂದ ತಿದ್ದುಪಡಿಗಳು ಇಷ್ಟೆಲ್ಲ ನ್ಯೂನತೆಗಳ ನಡುವೆಯೂ, ಮಹಿಳಾವಾದಿಗಳಿಗೆ ಸ್ವಾಗತಾರ್ಹವಾಗಿ ಕಂಡವು. ಆದರೆ ಯಾವುದೇ ಕಾನೂನು ಎಷ್ಟು ಯಶಸ್ವಿಯಾಗಿದೆ ಎನ್ನುವುದು ನಿರ್ಧಾರವಾಗುವುದು ತಾರತಮ್ಯಕ್ಕೆ ಅಥವಾ ಅಪರಾಧಕ್ಕೆ ಒಳಗಾದವಳಿಗೆ ಎಷ್ಟರಮಟ್ಟಿಗೆ ನ್ಯಾಯ ದೊರಕಿದೆ ಎಂಬುದರ ಮೇಲೆ. ಒಂದು ಮಹಿಳಾ ಚಳವಳಿ ತಿದ್ದುಪಡಿಯನ್ನು ತರುವ ಮಟ್ಟಿಗೆ ಮಾತ್ರ ಯಶಸ್ವಿಯಾದರೆ ಅದನ್ನು ಅದರ ವೈಫಲ್ಯವೆಂದೇ ಹೇಳಬೇಕಾಗುತ್ತದೆ. ಇದು ಮಗುವಿನ ಅಳುವಿಗೆ ಕಾರಣವಾದ ಹಸಿವನ್ನು ನಿವಾರಿಸುವುದನ್ನು ಬಿಟ್ಟು ಅದರ ಕೈಗೆ ಪೆಪ್ಪರಮೆಂಟನ್ನು ಕೊಟ್ಟು, ಗಮನವನ್ನು

ಬೇರೆಡೆಗೆ ತಿರುಗಿಸಿ ಅಳುವನ್ನು ನಿಲ್ಲಿಸಿದಂತೆ. ತಿದ್ದುಪಡಿಗಳನ್ನು ಬೇಡಿ ನಡೆಸಿದ ಎಲ್ಲ ಮಹಿಳಾ ಚಳವಳಿಗಳಿಗೂ ಸರ್ಕಾರದಿಂದ ದೊರೆತ ಉತ್ತರ ಈ ಬಗೆಯದು. ಉದಾಹರಣೆಗೆ ಮಥುರಾ ಅತ್ಯಾಚಾರ ಪ್ರಕರಣದಲ್ಲಿ ಉಚ್ಚನ್ಯಾಯಾಲಯದಿಂದ ಅಪರಾಧಿಗಳೆಂದು ನಿರ್ಣೀತರಾದ ಅಪರಾಧಿಗಳನ್ನು ಸರ್ವೋಚ್ಚ ನ್ಯಾಯಾಲಯ ನಿರ್ದೋಷಿಗಳೆಂದು ತೀರ್ಪುನೀಡಿ ಬಿಡುಗಡೆ ಮಾಡಿದಾಗ, ಈ ರೀತಿ ಅನ್ಯಾಯವಾಗದಂತೆ ಅತ್ಯಾಚಾರ ಕಾನೂನಿಗೆ ತಿದ್ದುಪಡಿ ತರುವಂತೆ ಮಹಿಳಾ ಸಂಘಟನೆಗಳಿಂದ, ಕಾನೂನುವೇತ್ತರಿಂದ ದೇಶದ ಎಲ್ಲೆಡೆಯಿಂದ ಒತ್ತಡ ತರಲಾಯಿತು. ಚಳವಳಿ ತೀವ್ರವಾದಂತೆ ಸರ್ಕಾರ ಗಮನ ನೀಡಿ ಕಾನೂನು ಆಯೋಗಕ್ಕೆ ಇದನ್ನು ಪರಿಶೀಲಿಸುವಂತೆ ತಿಳಿಸಿತು. ಆಯೋಗ ಮಹಿಳಾವಾದಿಗಳ ಬೇಡಿಕೆಗಳನ್ನು ಒಳಗೊಂಡಂತೆ ಇನ್ನೂ ಕೆಲವು ಮೌಲಿಕ ತಿದ್ದುಪಡಿಗಳನ್ನು ಸೂಚಿಸಿ ಶಿಫಾರಸುಗಳನ್ನು ಸಲ್ಲಿಸಿತು. ಆದರೆ ಅದರ ಫಲವಾಗಿ ಜಾರಿಯಾದ ತಿದ್ದುಪಡಿ ಕಾನೂನಿನಲ್ಲಿ ಶಿಫಾರಸಿನ ಮುಖ್ಯಾಂಶಗಳನ್ನು ಕೈಬಿಡಲಾಗಿತ್ತು.

ಅಪರಾಧಿಕ ಕಾನೂನುಗಳು ನ್ಯಾಯಪ್ರದಾನದಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತವೆ ಎಂಬುದು, ಕಾರ್ಯವಿಧಾನವನ್ನು ನಿರ್ಧರಿಸುವ ಹಾಗೂ ನಿಯಂತ್ರಿಸುವ ಕಾನೂನುಗಳು(procedural laws) ಎಷ್ಟರಮಟ್ಟಿಗೆ ಕಟ್ಟುನಿಟ್ಟಾದ ನಿಯಮಗಳನ್ನು ವಿಧಿಸುತ್ತವೆ ಮತ್ತು ಅವನ್ನು ಎಷ್ಟರಮಟ್ಟಿಗೆ ಪಾಲಿಸಲಾಗುತ್ತದೆ ಎಂಬುದನ್ನು ಅವಲಂಬಿಸುತ್ತದೆ. ಆದರೆ ಮಹಿಳಾ ಚಳವಳಿಗಳು ಇವುಗಳಲ್ಲಿರುವ ಲೋಪದೋಷಗಳ ಬಗ್ಗೆ ಗಮನ ಹರಿಸಿಲ್ಲ.

ಮೊದಲನೆಯದಾಗಿ ಮಹಿಳಾ ಚಳವಳಿಗಳು ಕೊಟ್ಟದ್ದನ್ನೇ ಹಸಾದವೆಂದು ಸ್ವೀಕರಿಸಿ, ಅದನ್ನೇ ಯಶಸ್ಸಿನ ಮೊದಲ ಮೆಟ್ಟಿಲೆಂದು ಭಾವಿಸಿದ್ದು, ಎರಡನೆಯದಾಗಿ ಚಳವಳಿಯ ಫಲವಾಗಿ ತಿದ್ದುಪಡಿ ಕಾನೂನುಗಳನ್ನು ತಂದನಂತರ, ವಾಸ್ತವದಲ್ಲಿ ಅದು ತಮ್ಮ ಬೇಡಿಕೆಗಳನ್ನು ಕೇವಲ ಭಾಗಶಃ ಈಡೇರಿಸಿದ್ದರೂ, ಮತ್ತದೇ ಕಾರಣಗಳಿಗಾಗಿ ಒತ್ತಾಯ ತರುವ ತೀವ್ರತೆಯನ್ನು ಕಳೆದುಕೊಂಡದ್ದು ಮತ್ತು ಅವುಗಳ ಅನುಷ್ಠಾನ ಪ್ರಕ್ರಿಯೆಯಲ್ಲಿ ಅಷ್ಟೇ ತೀವ್ರತೆಯಿಂದ ತೊಡಗಿಕೊಳ್ಳದೇ ಇದ್ದುದು ಮಹಿಳಾ ಚಳವಳಿಗಳ ಸಾಫಲ್ಯದ ಮರೆಯಲ್ಲಿರುವ ವೈಫಲ್ಯಗಳೆಂದು ಗುರುತಿಸಬಹುದಾಗಿದೆ.

ಸಮಾಜವನ್ನು ನಿರಂತರವಾಗಿ ಕಾಡುತ್ತಿರುವ ಮತ್ತು ಮಹಿಳೆಯರ ಶೋಷಣೆಗೆ ಅತ್ಯಧಿಕ ಮಟ್ಟದಲ್ಲಿ ಕಾರಣವಾಗುತ್ತಿರುವ ಪಿಡುಗೆಂದರೆ ವರದಕ್ಷಿಣೆ. ವರದಕ್ಷಿಣೆಗಾಗಿ ಕೊಡುವ ಕಿರುಕುಳ, ವಧೂ ದಹನ ಹಾಗೂ ಆತ್ಮಹತ್ಯೆಯ ಸಂಖ್ಯೆಗಳು ಎಂಥವರನ್ನೂ ಧೃತಿಗೆಡಿಸುವಂಥವು. ವಧೂ ದಹನದ ಪ್ರಕರಣಗಳಲ್ಲಿ ಮಹಿಳೆ ಸಾಯುವ ಮುನ್ನ ಕೊಡುವ ಮರಣಕಾಲದ ಹೇಳಿಕೆ ಅಪರಾಧಿಯ ಅಪರಾಧವನ್ನು ಸಾಬೀತುಪಡಿಸಲು ಮುಖ್ಯ ಸಾಕ್ಷ್ಯ. ಅನೇಕ ಪ್ರಕರಣಗಳಲ್ಲಿ ಈ ಹೇಳಿಕೆಯನ್ನು ದಾಖಲು ಮಾಡಿಕೊಳ್ಳುವಲ್ಲಿ ತನಿಖಾಧಿಕಾರಿಗಳು ತೋರುವ ನಿರ್ಲಕ್ಷ್ಯವನ್ನು ತೀರ್ಪು ನೀಡುವ ನ್ಯಾಯಾಧೀಶರು ಖಂಡಿಸಿದ್ದಾರೆ. ವರದಕ್ಷಿಣೆ ಸಾವಿನ

ಶ್ರೀಮತಿ ಲಿಚ್ಚಮದೇವಿ-ವಿ-ರಾಜಾಸ್ಥಾನ ರಾಜ್ಯಪ್ರಕರಣ'ದಲ್ಲಿ ತನಿಖೆಯನ್ನು ನಡೆಸಬೇಕಾದ ರೀತಿಯಲ್ಲಿ ನಡೆದಿಲ್ಲ. ಇಡೀ ಪ್ರಕರಣವನ್ನು ಲಘುವಾಗಿ ನೋಡಲಾಗಿದೆ. ಮೇಲ್ನೋಟಕ್ಕೆ ಅಪರಾಧಿಯೆನಿಸುವ ಮೃತಳ ಗಂಡನನ್ನು ಕಾನೂನು ವ್ಯವಹರಣೆಗೇ ಗುರಿಪಡಿಸಿಲ್ಲ. ಅವನ ಮೇಲೆ ದೋಷಾರೋಪಣೆ ಮಾಡಿಲ್ಲ. ತನಿಖಾಧಿಕಾರಿಯ ಈ ಧೋರಣೆ ಖಂಡನೀಯ ಎಂದಿದ್ದಾರೆ.

ಇನ್ನೊಂದು ಪ್ರಕರಣದಲ್ಲಿ(ಅಶೋಕ್ ಕುಮಾರ್ -ವಿ-ರಾಜಾಸ್ಥಾನ ರಾಜ್ಯ)[8] ಸ್ಥಳೀಯ ಪೋಲಿಸರು ತನಿಖೆಯನ್ನು ಸರಿಯಾದ ರೀತಿಯಲ್ಲಿ ಜರುಗಿಸಿಲ್ಲ, ಮುಖ್ಯ ವಿಷಯಗಳ ಬಗ್ಗೆ ಸಾಕ್ಷ್ಯವನ್ನು ಸಂಗ್ರಹಿಸಲು ಯಾವುದೇ ಪ್ರಾಮಾಣಿಕ ಪ್ರಯತ್ನವನ್ನೂ ಮಾಡಿದಂತೆ ತೋರುವುದಿಲ್ಲ ಎಂದು ನ್ಯಾಯಾಧೀಶರು ತನಿಖಾ ಕ್ರಮದ ಬಗ್ಗೆ ಖೇದ ವ್ಯಕ್ತಪಡಿಸಿದ್ದಾರೆ.

ಇನ್ನೊಂದು ಪ್ರಕರಣದಲ್ಲಿ "ವೈದ್ಯರು ಮಹಿಳೆ ಎಂಬ ಒಂದೇ ಕಾರಣಕ್ಕೆ ಅವರ ಸಾಕ್ಷ್ಯದ ಪ್ರಾಮಾಣಿಕತೆಯನ್ನು ಅನುಮಾನಿಸುವುದು ಸರಿಯಲ್ಲ" ಎಂದು ಅಧೀನ ನ್ಯಾಯಾಲಯದ ನ್ಯಾಯಾಧೀಶರ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ.

'ವಿಮೋಚನಾ' ಎಂಬ ಮಹಿಳಾ ಸಮಸ್ಯೆಗಳ ನಿವಾರಣೆಗಾಗಿ ದುಡಿಯುತ್ತಿರುವ ಸರ್ಕಾರೇತರ ಸಂಸ್ಥೆ ನ್ಯಾಯಾಂಗ ಹಾಗೂ ಪೋಲೀಸು ಇಲಾಖೆಗಳನ್ನು ಒಂದೇ ವೇದಿಕೆಗೆ ತಂದು ಮಹಿಳೆಯರ ಸಮಸೆ ಗಳ ಬಗ್ಗೆ, ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಇರುವ ಪ್ರಕರಣಗಳ ಬಗ್ಗೆ ಸಾರ್ವಜನಿಕ ಆಲಿನಾವಣೆಯನ್ನು ನಡೆಸುತ್ತದೆ. ೨೦೦೧ರ ಸೆಪ್ಟೆಂಬರ್ ೭ ರಂದು ವರದಕ್ಷಿಣೆ ಕಿರುಕುಳ ಹಾಗೂ ವರದಕ್ಷಿಣೆ ಸಾವುಗಳ ಬಗ್ಗೆ ಸಾರ್ವಜನಿಕ ಆಲಿನಾವಣೆಯನ್ನು ನಡೆಸಿತು. ಅದರಲ್ಲಿ ಬೆಳಕಿಗೆ ಬಂದ ಪೋಲೀಸರ ಉದಾಸೀನ ನಿರುತ್ಸಾಹ, ಸಂವೇದನಾರಾಹಿತ್ಯತೆ, ಪ್ರತಿಯೊಂದು ಹಂತದಲ್ಲಿಯೂ ಆಗುವ ವಿಳಂಬ ನ್ಯಾಯಾಂಗ ವ್ಯವಸ್ಥೆಯಲ್ಲಿಯೇ ನಂಬಿಕೆಯನ್ನು ಕಳೆದುಕೊಳ್ಳುವಂತೆ ಮಾಡುತ್ತದೆ. ವರದಕ್ಷಿಣೆ ಸಾವಿನ ಒಂದು ಪ್ರಕರಣದಲ್ಲಿ ಮೃತಳ ತಾಯಿ ಮಾರ್ಚ್‌ನಲ್ಲಿ ದೂರು ಕೊಟ್ಟರೆ ಪೋಲೀಸರು ಅಸಹಜ ಸಾವೆಂದು ಅದನ್ನು ದಾಖಲು ಮಾಡಿಕೊಂಡಿದ್ದು ಏಪ್ರಿಲ್‌ನಲ್ಲಿ, ಮೃತದೇಹವನ್ನು ಪರೀಕ್ಷೆಗಾಗಿ ಹೊರತೆಗೆದದ್ದು ಮೇ ೨೧ರಂದು ಮತ್ತು ಅಂತಿಮವಾಗಿ ಪ್ರಕರಣವನ್ನು ದಾಖಲು ಮಾಡಿಕೊಂಡದ್ದು, ಮೂರು ತಿಂಗಳ ನಂತರ ಆಗಸ್ಟ್ ೨೧ರಂದು. ಪ್ರಕರಣವನ್ನು ಕೇವಲ ದಾಖಲು ಮಾಡುವುದಕ್ಕೆ ಮೃತಳ ಮನೆಯವರು ಕಚೇರಿಯಿಂದ ಕಚೇರಿಗೆ ಅಲೆದಾಡಬೇಕಾಯಿತು. ಇದು ತನಿಖೆಗೆ ಸಂಬಂಧಪಟ್ಟಂತೆ ಇರುವ ಔದಾಸೀನ್ಯ.

ಕುಂದುಲ ಬಾಲಸುಬ್ರಹ್ಮಣ್ಯಂ ಮತ್ತು ಇನ್ನೊಬ್ಬರು -ವಿ- ಆಂಧ್ರಪ್ರದೇಶ ರಾಜ್ಯ[9] ಪ್ರಕರಣದಲ್ಲಿ ತೀರ್ಪು ನೀಡುತ್ತಾ ನ್ಯಾಯಾಧೀಶರು, "ಒಂದು ಪಿಡುಗನ್ನು ಹೋಗಲಾಡಿಸಲು ಕಾನೂನೊಂದೇ ಸಾಲದು.

ಈ ಪಿಡುಗನ್ನು ಹೋಗಲಾಡಿಸಿಲು ಮಹಿಳೆಯರಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವು ಮೂಡಿಸುವಂಥ ಸಾಮಾಜಿಕ ಚಳವಳಿಯ ಅಗತ್ಯವಿದೆ. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಅನಕ್ಷರಸ್ಥರಾಗಿದ್ದು ಅವರಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳಿದೇ ಇರುವುದಿಲ್ಲ. ಹೀಗಾಗಿ ಅವರು ಇನ್ನೂ ಸುಲಭವಾಗಿ ಶೋಷಣೆಗೆ ಒಳಗಾಗುತ್ತಾರೆ. ಅಂಥಲ್ಲಿ ಇಂಥ ಸಾಮಾಜಿಕ ಚಳವಳಿಯ ಅಗತ್ಯ ಇನ್ನೂ ಹೆಚ್ಚಾಗಿದೆ. ಈ ಸಂದರ್ಭದಲ್ಲಿ ನ್ಯಾಯಾಲಯಗಳ ಪಾತ್ರ ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ. ತಾಂತ್ರಿಕ ಅಂಶಗಳ ಕಾರಣದಿಂದಾಗಿ ಅಥವಾ ಸಾಕ್ಷ್ಯಗಳಲ್ಲಿನ ನಿರ್ಲಕ್ಷ್ಯ ಮಾಡಬಹುದಾದ ಸಣ್ಣ ದೋಷಗಳ ಕಾರಣಗಳಿಗಾಗಿ ಅಪರಾಧಿಗಳು ತಪ್ಪಿಸಿಕೊಳ್ಳಲು ನ್ಯಾಯಾಲಯಗಳು ಅವಕಾಶ ಕೊಡಬಾರದು. ಇಲ್ಲದಿದ್ದಲ್ಲಿ ಅಪರಾಧಿಗಳಿಗೆ ಉತ್ತೇಜನ ನೀಡಿದಂತಾಗಿಬಿಡುತ್ತದೆ. ಅಪರಾಧಿಗಳಿಗೆ ಶಿಕ್ಷೆಯಾಗದಿದ್ದಲ್ಲಿ ಅಪರಾಧಕ್ಕೊಳಗಾದವರು ತೀರ ಧೃತಿಗೆಡುತ್ತಾರೆ. ಮಹಿಳೆಯ ವಿರುದ್ಧ ನಡೆದ ಅಪರಾಧಗಳ ವಿಚಾರಣೆ ನಡೆಸುವಾಗಲಂತೂ ನ್ಯಾಯಾಲಯಗಳು ಇನ್ನೂ ಹೆಚ್ಚಿನ ಸೂಕ್ಷ್ಮಜ್ಞತೆಯನ್ನು ತೋರಿಸಬೇಕು'' ಎಂಬ ಮಾತುಗಳು ಮೌಲಿಕವಾದವು.

ಕೌಟುಂಬಿಕ ಕ್ರೌರ್ಯದ ಒಂದು ಪ್ರಕರಣದಲ್ಲಿ[೧೦] ''ಕಾನೂನನ್ನು ಕಟ್ಟುನಿಟ್ಟಾಗಿ ಪಾಲಿಸುವುದಕ್ಕಿಂತ ತೀರ್ಪು ನೀಡುವಾಗ ಕಾನೂನಿನ ಆಶಯಕ್ಕೆ ಬೆಲೆ ಕೊಡಬೇಕು. ಇಲ್ಲದಿದ್ದಲ್ಲಿ ಶೋಷಿತ ಅಪೀಲುದಾರಳು ನ್ಯಾಯವಂಚಿತಳಾಗುವ ಸಂಭವವಿರುತ್ತದೆ. ನ್ಯಾಯ ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ವಿವೇಚನೆಯನ್ನು ಬಳಸಬೇಕಾಗುತ್ತದೆ'' ಎಂಬುದನ್ನು ನ್ಯಾಯಾಧೀಶರು ಒತ್ತಿ ಹೇಳಿದ್ದಾರೆ.

ಮಹಿಳೆಗೆ ನ್ಯಾಯ ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ರಚನೆಯಾದ ಬಹುಪಾಲು ಕಾನೂನುಗಳು ವಿಫಲವಾಗುವುದು ಕಾನೂನು ರಚನೆಯಲ್ಲಿಯೇ ಇರುವ ದೋಷಗಳು, ತನಿಖೆಯ ಹಂತದಲ್ಲಿನ ದೋಷಗಳು ಹಾಗೂ ನ್ಯಾಯ ನೀಡಿಕೆಯ ಹಂತದಲ್ಲಿ ಕಾನೂನಿನ ಆಶಯಕ್ಕೆ ಬೆಲೆಕೊಡದೆ ಕಾನೂನಿನ ಅಕ್ಷರಶಃ ವ್ಯಾಖ್ಯಾನಕ್ಕೆ ಮಹತ್ವ ಕೊಡುವುದು ಈ ಕಾರಣಗಳಿಗಾಗಿ. ಮಹಿಳಾ ಪರ ಕಾನೂನುಗಳ ಸಾಫಲ್ಯ ವೈಫಲ್ಯಗಳ ವಿಶ್ಲೇಷಣೆಯಲ್ಲಿ ಮಹಿಳಾ ಚಳವಳಿಗಳ ಸಾಫಲ್ಯ ವೈಫಲ್ಯಗಳ ಚರ್ಚೆಯೂ ಅನಿವಾರ್ಯವಾಗುತ್ತದೆ. ನಮ್ಮ ಕಾನೂನುಗಳಲ್ಲಿ ಮಹಿಳೆಯರ ವಿರುದ್ಧ ತಾರತಮ್ಯವೆಸಗುವ ಯಾವುದೇ ಉಪಬಂಧವನ್ನಾಗಲೀ, ಮಹಿಳೆಯರಿಗೆ ಅನ್ಯಾಯವಾಗಬಹುದಾದ ಅಥವಾ ಮತ್ತಷ್ಟು ಅವಮಾನಕ್ಕೆ ಗುರಿಪಡಿಸುವ ಕ್ರಿಮಿನಲ್ ಕಾನೂನುಗಳ ಯಾವುದೇ ಉಪಬಂಧವನ್ನಾಗಲೀ ಹೋರಾಟವಿಲ್ಲದೆ, ಮಹಿಳಾವಾದಿಗಳ ನಿರಂತರ ಚಳವಳಿಯಿಂದಲ್ಲದೆ ತಿದ್ದುಪಡಿ ಮಾಡಿಲ್ಲ.

೧೯೮೮ರ ಫೆಬ್ರವರಿಯಲ್ಲಿ ಪಾಟ್ನಾದಲ್ಲಿ ಒಂದು ನಾರೀ ಮುಕ್ತಿ ಸಂಘರ್ಷ ಸಮ್ಮೇಳನ ಎಂಬ ಬೃಹತ್ ಮಹಿಳಾ ಸಮಾವೇಶವನ್ನು ಸಂಘಟಿಸಲಾಗಿತ್ತು. ಅದರಲ್ಲಿ ಅನೇಕ ಮಹಿಳಾ ಸಂಘಟನೆಗಳು, ಸ್ವತಂತ್ರ ಮಹಿಳಾವಾದಿಗಳೆನಿಸಿಕೊಂಡವರು ಸುಮಾರು ೭೦೦ ಮಹಿಳೆಯರು ಸಮಾವೇಶಗೊಂಡಿದ್ದರು. ಇದರಲ್ಲಿ,

ಅದು ಕೈಗೊಂಡ ಗೊತ್ತುವಳಿಯಲ್ಲಿ ಮುಖ್ಯವಾದುದು "ಕುಟುಂಬ, ಸಮಾಜ ಮತ್ತು ರಾಜ್ಯದಲ್ಲಿ ಹಿಂಸೆಯ ವಿರುದ್ಧ ಮುಂದುವರಿಯುತ್ತಿರುವ ಹೋರಾಟಗಳಲ್ಲಿ, ಕುಟುಂಬ, ಕೆಲಸದ ಸ್ಥಳ ಮತ್ತು ಸುತ್ತಮುತ್ತಲ ಸ್ಥಳಗಳಲ್ಲಿ ಮಹಿಳೆಯರ ಮೇಲೆ ಪುರುಷರು ನಡೆಸುತ್ತಿರುವ ದೌರ್ಜನ್ಯದ ಮೂಲ ಮತ್ತು ಅದಕ್ಕೆ ಬೆಂಬಲವಾಗಿರುವುದು ರಾಜ್ಯ ಎಂದು ನಾವು ಗುರುತಿಸುತ್ತೇವೆ..." ಎಂಬುದು. ಮಹಿಳಾ ಪರ ಕಾನೂನುಗಳಿಗೆ ತಿದ್ದುಪಡಿ ತರುವಲ್ಲಿ ರಾಜ್ಯ ತೋರುವ ಔದಾಸೀನ್ಯ ಈ ಮಾತಿಗೆ ಪುರಾವೆಯಾಗುತ್ತದೆ. ೧೯೭೪ರ ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಅಧ್ಯಯನ ಸಮಿತಿಯು ಸಲ್ಲಿಸಿದ "ಸಮಾನತೆಯತ್ತ" ವರದಿಯಲ್ಲಿ ಕಾನೂನುಗಳಿಗೆ ಸೂಚಿಸಲಾಗಿದ್ದ ಕೆಲವು ರಚನಾತ್ಮಕ ತಿದ್ದುಪಡಿಗಳನ್ನು, ಮಥುರಾ ಪ್ರಕರಣದ ನಂತರ ಕಾನೂನು ಆಯೋಗದ ಶಿಫಾರಸುಗಳನ್ನು ಅಳವಡಿಸುವಲ್ಲಿ ರಾಜ್ಯ(ರಾಷ್ಟ್ರ) ತೋರಿದ ಔದಾಸೀನ್ಯ ಮಹಿಳೆಯರ ವಿರುದ್ಧ ದೌರ್ಜನ್ಯವನ್ನು ಹತ್ತಿಕ್ಕುವಲ್ಲಿ ರಾಜ್ಯದ ವೈಫಲ್ಯಗಳು ಇದಕ್ಕೆ ಸಾಕ್ಷಿಯಾಗುತ್ತದೆ. ರಾಜ್ಯದ ಈ ಧೋರಣೆಯಿಂದಾಗಿ, ಈ ಸಂದರ್ಭದಲ್ಲಿ, ಮಹಿಳಾ ಚಳವಳಿಗಳ ಪಾತ್ರ ಮಹತ್ವದ್ದಾಗುತ್ತದೆ. ಆದರೆ ಈ ಎಲ್ಲ ಮಹಿಳಾ ಚಳವಳಿಗಳ ಬೇಡಿಕೆಗಳೂ ಸೀಮಿತವಾಗಿದ್ದವು.

ಸ್ವಾತಂತ್ರಪೂರ್ವದಲ್ಲಿ ಮಹಿಳಾ ಹಕ್ಕುಗಳಿಗಾಗಿ ನಡೆದ ಹೋರಾಟ, ಮಹಿಳಾ ಹಕ್ಕುಗಳಿಗಾಗಿ ನಡೆಯುವ ಯಾವುದೇ ಹೋರಾಟ ಅಥವಾ ಚಳವಳಿಯ ಸಂದರ್ಭದಲ್ಲಿ ಪ್ರಸ್ತುತವೆನಿಸುತ್ತದೆ. ಆದರೆ ಆಗ "ಓಟಿನ ಹಕ್ಕು ಮತ್ತು ಕಾನೂನುಗಳಲ್ಲಿ ಬದಲಾವಣೆಗಳನ್ನು ತರುವಂತಹ ನಾಗರಿಕ ಹಕ್ಕುಗಳನ್ನು ಮಹಿಳೆಯರಿಗೆ ದಕ್ಕಿಸಲು ಪ್ರಯತ್ನಗಳನ್ನು ನಡೆಸಿದ ಮಹಿಳೆಯರು ಬ್ರಿಟಿಷ್ ಪ್ರಭುಗಳಿಗೆ ನಿರಂತರ ಅಹವಾಲುದಾರರೇ ಆಗಿಬಿಟ್ಟರು.. ಆಂಗ್ಲ ಮಹಿಳೆಯರು ತಮ್ಮದೇ ಸ್ತ್ರೀವಾದ ಕಾರ್ಯಕ್ರಮಗಳ ಅಂಗವಾಗಿಯಷ್ಟೇ ಭಾರತೀಯ ಮಹಿಳೆಯರ ಕೆಲಸವನ್ನು ಕೈಗೆತ್ತಿಕೊಂಡದ್ದು. ...ಭಾರತದ ಮಹಿಳೆಯರ ಪರವಾಗಿ ಅವರೂ ಕೂಡ ಅಹವಾಲುದಾರರಷ್ಟೇ ಆಗಿದ್ದರು."[೨೦] ಹಕ್ಕುಗಳಿಗಾಗಿ ಮಹಿಳೆಯರು ನಡೆಸಿದ ಹೋರಾಟವೇನೂ ಸುಗಮವಾಗಿರಲಿಲ್ಲ. ಅವರ ಬೇಡಿಕೆಗಳು ಸಂಪೂರ್ಣವಾಗಿ ಪೂರೈಕೆಯಾಗದಿದ್ದರೂ ಕಾಲಕಾಲಕ್ಕೆ ಅವರ ಹೋರಾಟ ನಡೆದೇ ಇತ್ತು. ಆದರೆ ದಕ್ಕಿದಷ್ಟೇ ನ್ಯಾಯವನ್ನು ಒಪ್ಪಿಕೊಳ್ಳುವುದು ಆ ಸಂದರ್ಭದಲ್ಲಿ ಅನಿವಾರ್ಯವಾಗಿತ್ತು.

ಮಹಿಳಾ ಹಕ್ಕುಗಳ ಹೋರಾಟಕ್ಕೆ ಸಂಬಂಧಿಸಿದಂತೆ, ಸ್ವಾತಂತ್ರ್ಯ ಬಂದು ಐವತ್ತೈದು ವರ್ಷಗಳೇ ಸಂದಿದ್ದರೂ, ಪರಿಸ್ಥಿತಿ ಏನೂ ಬದಲಾಗಿಲ್ಲ. ಈಗಿನ ಮಹಿಳಾ ಚಳವಳಿಗಳೂ ಈ 'ಅಹವಾಲು' ಸಂಸ್ಕೃತಿಯಿಂದ ಹೊರಬರದಿರುವುದೂ ಸಮಸ್ಯೆಗಳನ್ನು ನಿವಾರಿಸುವಲ್ಲಿ ಉಂಟಾಗುವ ವೈಫಲ್ಯಗಳಿಗೆ ಕಾರಣವಾಗುತ್ತವೆ. ಕಾನೂನುಗಳ ಉಪಬಂಧಗಳಲ್ಲಿರುವ ಮೇಲ್ನೋಟದ ದೋಷಗಳ ನಿವಾರಣೆಗಷ್ಟೇ ಈಗಿನ ಮಹಿಳಾ ಚಳವಳಿಗಳು ಪ್ರಯತ್ನಿಸುತ್ತಿವೆ. ಮಹಿಳೆಯರ ವಿರುದ್ಧ ಹಿಂಸೆಯ ವಿಷಯ ೧೯೭೪-

೭೫ರಿಂದಲೂ ಭಾರತದಲ್ಲಿನ ಮಹಿಳಾ ವಿಮೋಚನಾ ಚಳಿಗಳಿಗಳನ್ನು ವ್ಯಾಪಿಸಿರುವ ವಿಷಯವಾಗಿದೆ. ವರದಕ್ಷಿಣೆಯ ಸಾವು, ವಧೂದಹನಗಳ ಸಂಖ್ಯೆ ತಾರಕಕ್ಕೇರಿದಾಗ, ವರದಕ್ಷಿಣೆಯ ವಿರುದ್ಧ, ೧೯೮೦ರಲ್ಲಿ ಮಥುರಾ, ಮಾಯಾ ತ್ಯಾಗಿ, ರಮೀಜಾ ಬೀ ಅತ್ಯಾಚಾರ ಪ್ರಕರಣಗಳ ನಂತರ ಅತ್ಯಾಚಾರ ಕಾನೂನುಗಳಲ್ಲಿರುವ ಲೋಪ ದೋಷಗಳ ವಿರುದ್ಧ ಮತ್ತು ಕಳೆದ ಕೆಲವು ವರ್ಷಗಳಿಂದ 'ಸತಿ' ಪದ್ಧತಿ, ಹೆಣ್ಣು ಭ್ರೂಣಹತ್ಯೆ, ಜನನಪೂರ್ವ ಲಿಂಗ ಪತ್ತೆ ತಂತ್ರಜ್ಞಾನದ ವಿರುದ್ಧ ಚಳವಳಿಗಳನ್ನು ನಡೆಸುತ್ತಾ ಬಂದಿದ್ದಾರೆ. ಆದರೆ ಈ ಸಮಸ್ಯೆಗಳಿಗೆ ಕಾರಣವಾದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿನ ಮಹಿಳೆಯ ಆರ್ಥಿಕ ಅವಲಂಬನೆ, ಅನಕ್ಷರತೆ, ರಾಜಕೀಯದಲ್ಲಿನ ಕಡಿಮೆ ಪ್ರಾತಿನಿಧ್ಯ ಇವುಗಳ ಬಗ್ಗೆ ಗಮನಹರಿಸುತ್ತಿಲ್ಲ. ಸಮಸ್ಯೆಯೊಂದು ಎದ್ದಾಗ ಅದನ್ನು ಪರಿಹರಿಸಲೆಂದು ಚುರುಕುಗೊಳ್ಳುವ ಮಹಿಳಾ ಚಳವಳಿಗಳು ಅದಕ್ಕೆ ಪರಿಹಾರವೆಂಬಂತೆ ಕಾನೂನಿನಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿದ ನಂತರ, ನಿಜವಾಗಿಯೂ ಪರಿಹಾರ ಸಿಕ್ಕೇಬಿಟ್ಟಿತೆಂಬ ಭ್ರಮೆಯಲ್ಲಿ ಶಾಂತವಾಗುತ್ತವೆ. ಆದರೆ ಈ ಸಮಸ್ಯೆಗಳನ್ನು ಸ್ವತಂತ್ರ ಸಮಸ್ಯೆಗಳನ್ನಾಗಿ ಗುರುತಿಸಬೇಕಾದರೆ ಕಾನೂನುಗಳಲ್ಲಿ ಮಹಿಳೆಯರಿಗೆ ನೀಡಿರುವ ಹಕ್ಕುಗಳ, ನೀಡಿಲ್ಲದ ಹಕ್ಕುಗಳ ಸ್ಪಷ್ಟ ಚಿತ್ರ ಇರಬೇಕಾಗಿರುವುದು ಅಗತ್ಯವಾಗುತ್ತದೆ. ಹಾಗೆಯೇ ಆ ಹಕ್ಕುಗಳ ಚಲಾವಣೆಯಲ್ಲಿ ಮತ್ತು ಅವನ್ನು ದಕ್ಕಿಸಿಕೊಳ್ಳುವಲ್ಲಿ ಒದಗುವ ಸಮಸ್ಯೆಗಳು ಮತ್ತು ಅಡ್ಡಿಗಳ ಅರಿವು ಇದ್ದಾಗ, ಬೇಡಿಕೆಯೊಡ್ಡುವ ಹಕ್ಕುಗಳ ಪರಿಣಾಮ ಏನಾಗಬಹುದು ಎಂಬುದರ ಸ್ಪಷ್ಟ ಚಿತ್ರ ದೊರೆಯುತ್ತದೆ.[೧೨]

ಮಹಿಳಾ ಚಳವಳಿಗಾರರು ತಮ್ಮ ಎಲ್ಲ ಅಹವಾಲುಗಳನ್ನು ಅಸ್ತಿತ್ವದಲ್ಲಿರುವ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಚೌಕಟ್ಟಿನೊಳಗೇ ಮಂಡಿಸಿದರು. ಹಾಗಾಗಿ ಸಾಂಪ್ರದಾಯಿಕ ಹಿಂದೂ ಕುಟುಂಬದಲ್ಲಿ ಮಹಿಳೆಯರಿಗೆ ಆರೋಪಿಸಲಾಗುತ್ತಿದ್ದ ಪಾತಿವ್ರತ್ಯ, ಕನ್ಯತ್ವ, ದಾಸ್ಯ ಮನೋಭಾವ ಹಾಗೂ ಒಳ್ಳೆಯ ಮತ್ತು ಕೆಟ್ಟ ಮಹಿಳೆಯ ಪರಿಕಲ್ಪನೆಗಳಿಂದ ಈಚೆ ಬರಲಾಗಲಿಲ್ಲವೆಂದೇ ಹೇಳಬೇಕು. ಇದರ ಪರಿಣಾಮವಾಗಿ, ಸ್ತ್ರೀಪುರುಷರ ನಡುವೆ ಇರುವ ಅಧಿಕಾರ ತಾರತಮ್ಯ, ಕುಟುಂಬದೊಳಗೆ ಮಹಿಳೆಯ ಆರ್ಥಿಕ ಹಕ್ಕು ಹಾಗೂ ಸಮಾಜದಲ್ಲಿನ ಸ್ಥಾನಮಾನಗಳ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನ ನಡೆದಿಲ್ಲವೆಂದೇ ಹೇಳಬಹುದು.

ಯಾವುದೇ ಕಾನೂನು ಅಥವಾ ಕಾನೂನಿಗೆ ಮಾಡುವ ತಿದ್ದುಪಡಿ ಮಹಿಳೆಯ ಸಬಲೀಕರಣಕ್ಕೆ ಸಹಾಯಕವಾಗುವುದು, ಸಾಂಪ್ರದಾಯಿಕ ಪಿತೃಪ್ರಧಾನ ಕುಟುಂಬಗಳು ಮಹಿಳೆಗೆ ಆರೋಪಿಸಿರುವ ಮೇಲೆ ಹೇಳಿದ 'ಉನ್ನತ' ಗುಣಗಳ ಪರಿಕಲ್ಪನೆಯಿಂದ ಹೊರಬಂದು ಮಹಿಳೆಯನ್ನು ಒಬ್ಬ ಸ್ವತಂತ್ರ್ಯ ವ್ಯಕ್ತಿಯನ್ನಾಗಿ ಪರಿಗಣಿಸಿದಾಗ ಮಾತ್ರ. ಆದರೆ ಕಾನೂನು ರಚನೆ, ಅನ್ವಯ ಅನುಷ್ಠಾನಗಳ ನಿಯಂತ್ರಣ ಹಾಗೂ ಮುಖ್ಯವಾಗಿ ಶಾಸನ ರಚನೆಯ ನಿಯಂತ್ರಣ ಪೂರ್ಣವಾಗಿ ಪುರುಷರ ಕೈಯಲ್ಲಿರುವವರೆಗೆ ನಿಜವಾದ ಮಹಿಳಾ ಪರ ಅಭಿವೃದ್ಧಿಗಳಾಗಲೀ ಕಾನೂನು ರಚನೆಯಾಗಲೀ ಸಾಧ್ಯವಿಲ್ಲ.

"ಮಹಿಳೆಯರ ಅಭಿವೃದ್ಧಿಯೆನ್ನುವುದು ಭಾರತದಲ್ಲಿನ ಅಭಿವೃದ್ಧಿ ಕಾರ್ಯಕ್ರಮ ಯೋಜನೆಗಳಲ್ಲಿ ಆನುಷಂಗಿಕ ಸಂಗತಿಯಾಗಿದೆಯೇ ವಿನಾ, ಅದು ಆದ್ಯತೆಯ ಸಂಗತಿಯಾಗಿಲ್ಲ"[೧೩] ಹಾಗಾಗಿ ಸರ್ಕಾರ ಮಹಿಳಾ ಅಭಿವೃದ್ಧಿಯ ಹೆಸರಲ್ಲಿ ಕೈಗೊಂಡ ಕಾರ್ಯಕ್ರಮಗಳೆಲ್ಲ ಕಲ್ಯಾಣವಾದಿ ಕಾರ್ಯಕ್ರಮಗಳಾಗಿವೆಯೇ ಹೊರತು ಅಭಿವೃದ್ಧಿಯ ಉದ್ದೇಶಹೊಂದಿಲ್ಲ. ಇದಕ್ಕೆ ಕಾರಣ ಈ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳೂ ರೂಪುಗೊಂಡಿರುವುದು ಮಧ್ಯಮವರ್ಗದ ಜನರನ್ನು ಮತ್ತು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯನ್ನು ಕೇವಲ ಗೃಹಿಣಿಯಾಗಿ ಪರಿಭಾವಿಸಿರುವಂತೆ ರಾಷ್ಟ್ರಮಟ್ಟದಲ್ಲಿ, ರಾಷ್ಟ್ರೀಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆಯೂ ಹಾಗೆಯೇ ಪರಿಭಾವಿಸಿದೆ. ಇದಕ್ಕೆ ಕಾರಣ ಮೊದಲನೆಯದಾಗಿ, ಪುರುಷಶಾಹಿಯನ್ನು ಎದುರುಹಾಕಿಕೊಳ್ಳಬಾರದು ಎಂಬುದಾದರೆ ಎರಡನೆಯದು ಅವು ಕೇವಲ ಸುಧಾರಣಾವಾದಿ ಕಾರ್ಯಕ್ರಮಗಳಾಗಿರುವುದು.

ಭಾರತದಲ್ಲಿ ಈ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ಬದುಕಿನ ಸ್ಥಿತಿಗತಿಗಳನ್ನು ಉತ್ತಮಪಡಿಸುವುದಕ್ಕೆ ಬದಲಾಗಿ ಹಾನಿಯುಂಟು ಮಾಡುತ್ತಿದೆ ಎಂಬುದು ಜನಸಂಖ್ಯೆಯಲ್ಲಿ ಕಡಿಮೆಯಾಗುತ್ತಿರುವ ಮಹಿಳೆಯರ ಅನುಪಾತವನ್ನು ನೋಡಿದರೆ ತಿಳಿಯುತ್ತದೆ. ಆದ್ದರಿಂದ ನಮ್ಮ ಅಭಿವೃದ್ಧಿ ಯೋಜನೆಗಳು 'ಕಲ್ಯಾಣವಾದಿ' ನೆಲೆಯಿಂದ 'ಆದ್ಯತೆ'ಯ ನೆಲೆಯನ್ನು ತಲುಪಿ ಆರ್ಥಿಕ ಪಾಲಿಸಿಗಳಲ್ಲಿ ಮಹಿಳೆಯರ ಅಭಿವೃದ್ಧಿ ಯೋಜನೆಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಹೀಗೆ ಆಗಬೇಕಾದರೆ, ಮಹಿಳೆಯರನ್ನು ಕೇವಲ 'ಪಾಪದವರು' ಎಂದು ನೋಡುವ ಧೋರಣೆ ಬದಲಾಗಬೇಕಾಗುತ್ತದೆ. ರಾಷ್ಟ್ರದ ರಾಜಕಾರಣದಲ್ಲಿ ಮಹಿಳೆ ಸ್ಥಾನ ಪಡೆದು ನಿರ್ಧಾರ ಕೈಗೊಳ್ಳುವ ಹಂತದಲ್ಲಿ ಅವಳು ಕ್ರಿಯಾಶೀಲವಾಗಿ ಪಾಲ್ಗೊಂಡಾಗ ಮಾತ್ರ ಮಹಿಳೆಯ ಸ್ಥಾನಮಾನದಲ್ಲಿ ಮೂಲಭೂತ ಬದಲಾವಣೆಗಳು ಬರಲು ಸಾಧ್ಯ. ಹಾಗಿಲ್ಲದಿದ್ದಾಗ ಸ್ತ್ರೀಪರವೆಂದು ಮೇಲ್ನೋಟಕ್ಕೆ ಕಾಣುವ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಶಾಸನಗಳನ್ನು ಮಾತ್ರವೇ ಪುರುಷಶಾಹೀ ಸರ್ಕಾರದಿಂದ ನಿರೀಕ್ಷಿಸಲು ಸಾಧ್ಯ. ಕಾನೂನಿಗೆ ಸಂಬಂಧಿಸಿದಂತೆ ಇಲ್ಲಿ ಒಂದು ಉದಾಹರಣೆಯನ್ನು ಕೊಡಬಹುದು. ಇತ್ತೀಚೆಗೆ ತೀರ ಚರ್ಚೆಗೆ ಗುರಿಯಾಗಿರುವ ಜನನ ಪೂರ್ವ ಲಿಂಗ ಪತ್ತೆ ಕಾನೂನನ್ನು ಮಹಾರಾಷ್ಟ್ರ ಸರ್ಕಾರ ರೂಪಿಸುವಾಗ ಮಹಿಳಾ ಕಾರ್ಯಕರ್ತೆಯರನ್ನು ಹಾಗೂ ಮಹಿಳಾವಾದಿಗಳನ್ನು ತೊಡಗಿಸಿಕೊಂಡಿತು. ಆದರೆ ಅನುಷ್ಠಾನದ ಹಂತಕ್ಕೆ ಬಂದಾಗ, ಮಹಿಳೆಯರನ್ನು ತೊಡಗಿಸಿಕೊಳ್ಳದೆ ಇದ್ದುದರಿಂದ, ಅದು ವಿಫಲವಾಯಿತು. ಸತಿ ನಿಷೇಧ ಅಧಿನಿಯಮ ವಿಫಲವಾದ ಕಾನೂನುಗಳಲ್ಲೊಂದು ರೂಪ ಕನ್ವರ್ ಎಂಬ ೨೦ ವರ್ಷದ ಹುಡುಗಿಯನ್ನು ಸತಿಯ ಹೆಸರಿನಲ್ಲಿ ಆಹುತಿ ಕೊಟ್ಟಾಗ ರಾಜ್ಯವಾಗಲೀ, ಆ ಬಗೆಗಿನ ಪ್ರಕರಣದಲ್ಲಿ ಸರ್ವೋಚ್ಚನ್ಯಾಯಾಲಯವಾಗಲೀ ತಳೆದ ಪುರುಷಶಾಹೀ ಧೋರಣೆಯನ್ನು ಮರೆಯಲಾಗದು.

ಮಹಿಳೆಯರಿಗೆ ನೇರವಾಗಿ ಸಂಬಂಧಿಸಿದ ಆದರೆ ಅವರ ಸ್ಥಿತಿಗತಿ ಉತ್ತಮಗೊಳಿಸಲು ಯಾವ ರೀತಿಯಲ್ಲಿಯೂ ನೆರವಾಗದ ಮತ್ತೊಂದು ಕಾನೂನು ಎಂದರೆ, ಮಹಿಳೆಯ ಅನೈತಿಕ ವ್ಯವಹಾರ(ನಿಷೇಧ) ಅಧಿನಿಯಮ. ೧೯೫೬ರ ಅಧಿನಿಯಮವನ್ನು ೧೯೮೬ರಲ್ಲಿ ಸರ್ಕಾರ ತಾನೇ ಸ್ವತಃ, ಯಾವದೇ ಬೇಡಿಕೆಯಿಲ್ಲದಿದ್ದರೂ ತಿದ್ದುಪಡಿ ಮಾಡಿತು. ಈ ಅಧಿನಿಯಮದ ಪ್ರಕಾರ ರಾತ್ರಿಯಲ್ಲಿ ಸಂಚಾರಮಾಡುವ ಯಾರೇ ಮಹಿಳೆಯನ್ನು ಪೋಲೀಸರು ಹಿಡಿದೊಯ್ಯಬಹುದು. ಇದರ ಉದ್ದೇಶ ಕಾನೂನನ್ನು ಹೆಚ್ಚು ಕಠಿಣಗೊಳಿಸುವುದು.

ಮೇಲಿನ ಮೂರೂ ಕಾನೂನುಗಳೂ ಮಹಿಳೆಯರ ಸಬಲೀಕರಣಕ್ಕೆ ಕಾರಣವಾಗುತ್ತದೆ ಎಂದು ಕಂಡರೂ ವಾಸ್ತವದಲ್ಲಿ ಅದು ಮಹಿಳೆಯರಿಗೆ ಪ್ರತಿಕೂಲವಾಗಿ ಪರಿಣಮಿಸಿ ರಾಜ್ಯದ ಕೈಗಳನ್ನು ಬಲಗೊಳಿಸುತ್ತದೆ. ರಾಜ್ಯ ಪ್ರಬಲವಾಗಿದೆ ಎಂದರೆ ನಾಗರಿಕರು ದುರ್ಬಲರೆಂದೇ ಅರ್ಥ. ನಾಗರಿಕರಲ್ಲಿ ದುರ್ಬಲರಾಗುವುದು ಪ್ರಮುಖವಾಗಿ ಮಹಿಳೆಯರೇ. ದುರ್ಬಲ ಮಹಿಳೆ ಮತ್ತಷ್ಟು ದೌರ್ಜನ್ಯಕ್ಕೆ ತುತ್ತಾಗುತ್ತಾಳೆ. ಇದೊಂದು ವಿಷವರ್ತುಲ. ಸರ್ಕಾರದ ಯಾವುದೇ ನೀತಿ ನಿರ್ಧಾರಗಳು ವಾಸ್ತವದಲ್ಲಿ ಮಹಿಳೆಗೆ ಅನುಕೂಲಕರವಾಗಿ ಪರಿಣಮಿಸಬೇಕಾದರೆ, ರಾಜಕಾರಣದಲ್ಲಿ ಮಹಿಳೆಗೆ ಸಾಕಷ್ಟು ಪ್ರಾತಿನಿಧ್ಯ ಅತ್ಯಂತ ಅಗತ್ಯವಾಗಿ ಇರಬೇಕಾಗುತ್ತದೆ.

ತೃಣಮೂಲ ಆಡಳಿತ ಘಟಕಗಳಾದ ಗ್ರಾಮಪಂಚಾಯಿತಿಗಳಿಂದ ಸಂಸತ್ತಿನವರೆಗೆ ರಾಜಕಾರಣದಲ್ಲಿ ಮಹಿಳೆಯರು ಅಧಿಕಾರ ಸ್ಥಾನಗಳನ್ನು ಹೊಂದಿದಾಗ ಮಾತ್ರವೇ ಮಹಿಳಾ ಸಬಲೀಕರಣ ವಾಸ್ತವವಾಗಿ ನಿಜವಾದ ಅರ್ಥದಲ್ಲಿ ಆಗುವುದು ಸಾಧ್ಯ. ಹಾಗೂ ರಾಷ್ಟ್ರ ಕೈಗೊಳ್ಳುವ ಆರ್ಥಿಕ ನೀತಿಗಳಾಗಲೀ ಅಭಿವೃದ್ಧಿ ಯೋಜನೆಗಳಾಗಲೀ ಮಹಿಳಾ ಫಲಾನುಭವಿಗಳನ್ನು ತಲುಪಲು ಸಾಧ್ಯ.

ಈ ಆಶಯ ಕೈಗೂಡಬೇಕಾದರೆ ಕಾನೂನುಗಳ ಆಳವಾದ ಅಧ್ಯಯನ ಅತ್ಯಗತ್ಯ. ಕಾನೂನುಗಳು ನೀಡಿರುವ ಹಕ್ಕುಗಳ ಸಂಪೂರ್ಣ ಅರಿವಿದ್ದಾಗ ಮಾತ್ರವೇ ನಾವು ಯಾವುದರಿಂದ ವಂಚಿತರಾಗಿದ್ದೇವೆ ಎಂಬುದನ್ನು ತಿಳಿಯಲು ಸಾಧ್ಯ. ವಿವಾಹ, ವರದಕ್ಷಿಣೆ, ಆಸ್ತಿ, ಅತ್ಯಾಚಾರ ಮುಂತಾದ ಕಾನೂನುಗಳನ್ನು ಪಿತೃಪ್ರಧಾನ ನೆಲೆಯಿಂದ ಹೊರಬಂದು ನಿರ್ವಚಿಸುವುದು ಸಾಧ್ಯವಾಗುತ್ತದೆ. ಆಗ ಕಾನೂನು ಮತ್ತು ನ್ಯಾಯಗಳ ನಡುವಿನ ಕಂದಕವನ್ನು ಹೋಗಲಾಡಿಸುವ ದಿಕ್ಕಿನಲ್ಲಿ ಪ್ರಯತ್ನಗಳು ಪ್ರಾರಂಭವಾಗುತ್ತದೆ. ನಿಜವಾದ ಸಮಸ್ಯೆಗಳನ್ನು ಪರಿಹರಿಸುವತ್ತ ಮಹಿಳಾ ಚಳವಳಿಗೆ ಈ ದೃಷ್ಟಿಯಿಂದ ಇಂಥ ಅಧ್ಯಯನಗಳು ದಿಕ್ಸೂಚಿಯಾಗುತ್ತವೆ. ಕಾನೂನಿನ ಸ್ಪಷ್ಟ ತಿಳಿವಿದ್ದಾಗ ಸಮಸ್ಯೆಗಳನ್ನು ಮೇಲ್ಮಟ್ಟದಲ್ಲಿ ಮಾತ್ರ ಪರಿಹರಿಸುವ ಪ್ರಯತ್ನಗಳನ್ನು ಕೈಬಿಟ್ಟು ಸಮಸ್ಯೆಗಳಿಗೆ ಮೂಲವಾದ ಕಾರಣಗಳನ್ನು ಪರಿಹರಿಸಲೆತ್ನಿಸುವ ಮತ್ತು ಪುರುಷ ಪ್ರಧಾನ ಚಿಂತನೆಯಿಂದ ಹೊರತಾದ ವಾಸ್ತವಿಕ ಸಂದರ್ಭಗಳ ಚಿಂತನೆಯಿಂದ ಪ್ರೇರಿತವಾ

ವಂಥ ದೃಷ್ಟಿಕೋನವನ್ನು ತಳೆಯುವುದು ಸಾಧ್ಯವಾಗುತ್ತದೆ. ಹೀಗಾದಾಗ ಮಹಿಳಾ ಚಳವಳಿಗಳು ಕೇವಲ ಅಹವಾಲು ಚಳವಳಿಗಳಾಗದೆ, ಹಕ್ಕೊತ್ತಾಯದ ಚಳವಳಿಗಳಾಗಿ ಪುರುಷರಿಗಿರುವ ಹಕ್ಕುಗಳೊಂದಿಗೆ ಹೋಲಿಸಿ `ಅವರಿಗಿರುವ ಹಕ್ಕುಗಳನ್ನು ನಮಗೂ ಕೊಡಿ' ಎನ್ನುವ ಬದಲು `ನಮಗೇನು ಬೇಕು' ಎಂಬುದನ್ನು ಸ್ವತಂತ್ರವಾಗಿ ನಿರ್ಧರಿಸಬಹುದಾದ ಅರ್ಥಪೂರ್ಣ ಹೋರಾಟಗಳಾಗುತ್ತವೆ. ಹೀಗೆ ಅಹವಾಲು ಚಳವಳಿ ಹಕ್ಕೊತ್ತಾಯದ ಚಳವಳಿಯಾದಾಗ ಕಾನೂನುಗಳನ್ನು ವಿಶ್ಲೇಷಿಸುವ ರೀತಿ ಹಾಗೂ ವಿವರಗಳನ್ನು ಸಂಗ್ರಹಿಸುವ ರೀತಿಯೂ ಬದಲಾಗುತ್ತದೆ. ಆತ್ಮವಿಶ್ವಾಸದೊಂದಿಗೆ, ಬೇಡಿಕೆಯ ಹಂತದಿಂದ ಹಕ್ಕೊತ್ತಾಯದ ಹಂತಕ್ಕೆ ಮಹಿಳಾಚಳವಳಿಗಳನ್ನು ಕೊಂಡೊಯ್ಯುವಲ್ಲಿ ಇಂಥ ಅಧ್ಯಯನ ನೆರವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಲೇ : ಗೆಯಿಲ್ ಓಮ್ ವೆಟ್, ವಯಲೆನ್ಸ್ ಎಗೆಯಿನ್‌ಸ್ಟ್ ವಿಮೆನ್, ನ್ಯೂ ಮೂವ್‌ಮೆಂಟ್ಸ್ ಅಂಡ್ ನ್ಯೂ ಥಿಯರೀಸ್ ಇನ್ ಇಂಡಿಯಾ, ಕಾಲಿ ಫಾರ್ ವಿಮೆನ್, ನ್ಯೂಡೆಲ್ಲಿ

೨. ಎಐಆರ್ ೧೯೮೮ ದೆಹಲಿ ೬೬

೩. ೨೧ನೇ ಅನುಚ್ಛೇದ : ಜೀವಸಂರಕ್ಷಣೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ರಕ್ಷಣೆ

೪. ೧೪ನೇ ಅನುಚ್ಛೇದ : ಕಾನೂನಿನ ಮುಂದೆ ಸಮಾನತೆ

೫. ಸರಿತಾ.ಟಿ -ವಿ- ವೆಂಕಟಸುಬ್ಬಯ್ಯ, ಎಐಆರ್ ೧೯೮೩ ಎಪಿ ೩೫೬

೬. ಲೇ : ಪ್ರತಿಭಾ ಮುಖರ್ಜಿ, ಹಿಂದೂ ವಿಮೆನ್-ನಾರ್ಮೆಟೀವ್ ಮಾಡೆಲ್ಸ್, ಪ್ರ: ಓರಿಯೆಂಟ್ ಲಾಂಗ್ ಮನ್ ಲಿಮಿಟೆಡ್, ೧೭, ಚಿತ್ತರಂಜನ್ ಅವಿನ್ಯೂ, ಕಲ್ಕತ್ತಾ ೭೦೦ ೦೭೨ ಪು.೧೦೮

೭. (೧೯೮೮) ೪ ಎಸ್‌ಸಿಸಿ ೪೫೬

೮. (೧೯೯೧) ೧ ಎಸ್‌ಸಿಸಿ ೧೬೬

೯. (೧೯೯೩) ೨ ಎಸ್‌ಸಿಸಿ ೬೮೪

೧೦. ಶ್ರೀಮತಿ ವಂಕರಾಧಾಮನೋಹರಿ -ವಿ- ವಂಕವೆಂಕಟರೆಡ್ಡಿ ಮತ್ತು ಇತರರು(೧೯೯೩)೩ ಎಸ್‌ಸಿಸಿ ೪

೧೧. ಆಧುನಿಕ ಭಾರತದಲ್ಲಿ ಮಹಿಳೆ, ಮೂಲ ಇಂಗ್ಲಿಷ್, ಜೆರಾಲ್ಡಿನ್ ಫೋರ್ಬ್ಸ್, ಕನ್ನಡಕ್ಕೆ ಡಾ.ಎಚ್.ಎಸ್.ಶ್ರೀಮತಿ, ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಪು.೧೭೧

೧೨. ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣುಮಗಳಿಗೆ ನೀಡಿದ ಆಸ್ತಿ ಹಕ್ಕಿನಿಂದ ವಿಧವೆ ತಾಯಿಯ ಪಾಲಿಗೆ ಬರುವ ಆಸ್ತಿಯ ಪ್ರಮಾಣ ಕಡಿಮೆಯಾಗುತ್ತದೆ. ನೋಡಿ : ಈ ಮಹಾಪ್ರಬಂಧದ ಅಧ್ಯಾಯ ೪ "ಆಸ್ತಿಹಕ್ಕು"

೧೩. ಲೇ : ಟಿ.ಆರ್.ಚಂದ್ರಶೇಖರ್, ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರ.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

# ಆಕರ ಗ್ರಂಥಗಳು

೧. ಗೀತಾಕೃಷ್ಣಮೂರ್ತಿ, ಮಹಿಳೆ : ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಚಂದ್ರಶೇಖರ್ ಟಿ.ಆರ್., ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. **ಭಾರತದ ಸಂವಿಧಾನ,** ಭಾರತ ಸರ್ಕಾರದ ಪರವಾಗಿ ಕರ್ನಾಟಕ ಸರ್ಕಾರದ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಿಂದ ಪ್ರಕಟಿತ

೪. ಶ್ರೀಮತಿ ಎಚ್.ಎಸ್.(ಅನು), ಆಧುನಿಕ ಭಾರತದಲ್ಲಿ ಮಹಿಳೆ, ಮೂಲ : ಜೆರಾಲ್ಡಿನ್ ಫೋಬ್ಸ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಶ್ರೀಮತಿ ಎಚ್.ಎಸ್.(ಸಂ), ಮಹಿಳಾ ಅಧ್ಯಯನ, 'ಕಾನೂನು ಮತ್ತು ನ್ಯಾಯ', ಗೀತಾಕೃಷ್ಣಮೂರ್ತಿ ಅರ್ಧವಾರ್ಷಿಕ ಪತ್ರಿಕೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

6. Aggarwal S.N., **Commentary on the law of Maintainace,** Orient Publishing Company, New Delhi, Allahabad

7. Bhatnagar, **Dowry Prohibition,** Ashok Law House, Allahabad

8. Bina Agarwal, **Gender and legal Rights in Landed Property in India,** Kali for Women, Hauz khas, New Delhi

9. Gail Omvedt, **Violence against women: New Movements and New Theories in India,** Kali for women, Hauz khas, New Delhi

10. Ghosh S.K., **Indian Women through Ages**

11. Inamur Rahman, **Law, Justice and Social Change,** Saxena D.R.(Ed), Search of Justics: Problems and Prospects

12. Jain M.P., **Out lines of Indian Legal History(5th Edition),** S.M.Thripathi(Prin) Ltd., Mumbai

13. Janaki Nayar, **Women and Law in Colonial India**

14. Krishna Iyer V.R., **Law Versus Justice**

15. Lina Gansalts, **Women and the Law,** Lancer Paper Back, New Delhi

16. Lothika Sarkar & D.Shivaramaiah, **Women and Law Contemporary Problems,** Vikas Publishing House(P) Ltd., New Delhi

17. Lucas J.R, **On Justice,** Clarendon Press, Oxford University Press, Walton Street, Oxford

18. Mahesh K., and Biswajit Bhattacharya, **Judging the Judges,** Gyan Publishing House, Ansari Road, New Delhi

19. National Law School Journal, **Faminism and Law,** Special Issue, 1993

20. Nivedita Menon(Ed)., **Gender and Politics in India,** On Women, Equality and the Consitution: through the looking glass of faminism, Ratna Kapwr & Brinda Cossman, Oxford University Press, Jaisingh Road, New Delhi

21. Prabhati Mukherjee, **Hindu Women, Normative Models,** Orient Langman Limited, Chittaranjan Auenue, Calcutta

22. Rama Mehtha, **Socio Legal Status of Women in India**

23. Ramajois M., **Legal and Constitutional History of India,** Vol.I, S.M.Thripathi (Prin) Ltd., Mumbai

24. Rathna Kapur and Brinda Cossman, **Subversive Sites-Faminist Engagements with law**

25. Reddy G.B., **Women and the law,** Gobia law(Agency) Publication, Hyderbad

26. Report of the Committee on the Status of Women in India, **Towards Equality**

27. Shamsuddin Shams(Ed), **Women, Law and Social Change,** Ashis Publishing House, Punjabi bagh, New Delhi

28. Sirdar D.K.Sen., **A Comparitive Study of the Indian Constitution,** Vol.I, Orient Langmans Pvt. Ltd.

29. Subhash C.Kashyap, **Our Constitution, an Introduction to India's Constitution and Consitutional Law,** National Book Trust of India, Green Park, New Delhi, 1995

